ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

ಶ್ರೀ

## ನಾಗರಖಂಡ

## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ

(ಭಾಗ ೨) - 2

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೨

# ಶ್ರೀ ಸ್ಕಾಂದಮಹಾಪುರಾಣಂ

೬

## ನಾಗರಖಂಡ

ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ (ಭಾಗ ೨)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

೬

## ನಾಗರಖಂಡ

## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ

(ಭಾಗ ೨)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ




ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೨

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಸ ಧೂರ್ಜಟಿಜಟಾಜೂಟೋ ಜಾಯತಾಂ ವಿಜಯಾಯ ವಃ ।
ಯತ್ರೈಕಪಲಿತಭ್ರಾಂತಿಂ ಕರೋತ್ಯದ್ಯಾಽಪಿ ಜಾಹ್ನವೀ ॥

ತಾತ್ಪರ್ಯ

ಗಂಗಾದೇವಿ (ನದಿ)ಯು,
ಯಾವ ಜಟಾಜೂಟದಲ್ಲಿ ನೆಲಸಿ ಅದರಲ್ಲಿ ಒಂದೇ ಒಂದು
ನೆರೆಗೂದಲಿರುವುದೆಂಬ ಭ್ರಾಂತಿಯನ್ನು ಇಂದಿಗೂ ಉಂಟುಮಾಡುತ್ತಿರುವಳೋ
ಆ ಧೂರ್ಜಟಿಯ ಜಟಾಜೂಟವು ಭಕ್ತರಾದ ನಮ್ಮ
ವಿಜಯಕ್ಕಾಗಿ ನೆರವಾಗಲಿ

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಷಷ್ಠೇ ನಾಗರಖಂಡೇ
## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
### ದ್ವಿತೀಯೋ ಭಾಗಃ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ಷಟ್‌ಸಪ್ತತಿತಮೋಽಧ್ಯಾಯಃ

ಮುಂಡೀರ ಕಾಲಪ್ರಿಯ ಮೂಲಸ್ಥಾನ ಪ್ರತಿಷ್ಠಾವರ್ಣನಂ

ಸೂತ ಉವಾಚ :—

ತಥಾಽನ್ಯದಪಿ ತತ್ರಾಽಸ್ತಿ ಭಾಸ್ಕರತ್ರಿತಯಂ ಶುಭಂ ।
ಯೈಸ್ತುಷ್ಟೈಸ್ತ್ರಿಷು ಲೋಕೇಷು ಮಾನವೋ ಮುಕ್ತಿಮಾಪ್ನುಯಾತ್ ॥೧॥
ಮುಂಡೀರಂ ಪ್ರಥಮಂ ತತ್ರ ಕಾಲಪ್ರಿಯಂ ತಥಾ ಪರಂ ।
ಮೂಲಸ್ಥಾನಂ ತೃತೀಯಂ ಚ ಸರ್ವವ್ಯಾಧಿವಿನಾಶನಂ ॥ ೨ ॥

---

### ಕನ್ನಡದ ಅನುವಾದ

ಮುಂಡೀರ ಕಾಲಪ್ರಿಯ ಮೂಲಸ್ಥಾನ ಪ್ರತಿಷ್ಠಾವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ಅಲ್ಲಿ ಮೂರು ಮಂದಿ ಭಾಸ್ಕರರು ವಿರಾಜಿಸುತ್ತಿರುವರು. ಮಾನವನು ಸಂತುಷ್ಟರಾದ ಅವರಿಂದ ಮುಕ್ತಿಯನ್ನು ಹೊಂದುವನು.

೨. ಮೊದಲನೆಯದು ಮುಂಡೀರ, ಎರಡನೆಯದು ಕಾಲಪ್ರಿಯ, ಮೂರನೆಯದು ಸಕಲ ವ್ಯಾಧಿಯನ್ನು ಪರಿಹರಿಸುವ ಮೂಲಸ್ಥಾನ.

ತತ್ರ ಸಂಕ್ರಮತೇ ಸೂರ್ಯೋ ಮುಂಡೀರೇ ರಜನೀಕ್ಷಯೇ ।
ಕಾಲಪ್ರಿಯೇ ಚ ಮಧ್ಯಾಹ್ನೇ ಮೂಲಸ್ಥಾನೇ ಕ್ಷಪಾಗಮೇ ॥ ೩ ॥
ತಸ್ಮಿನ್ ಕಾಲೇ ನರೋ ಭಕ್ತ್ಯಾ ಪಶ್ಯೇದಪ್ಯೇಕಮೇವ ಚ ।
ಕೃತಕ್ಷಣೋ ನರೋ ಮೋಕ್ಷಂ ಸತ್ಯಂ ಯಾತಿ ನ ಸಂಶಯಃ ॥ ೪ ॥

ಋಷಯ ಊಚುಃ:—

ಮುಂಡೀರಃ ಪೂರ್ವದಿಗ್ಭಾಗೇ ಧರಿತ್ರ್ಯಾಃ ಶ್ರೂಯತೇ ಕಿಲ ।
ಮಧ್ಯೇ ಕಾಲಪ್ರಿಯೋ ದೇವೋ ಮೂಲಸ್ಥಾನಂ ತದಂತರೇ ॥ ೫ ॥
ತತ್ಕಥಂ ತೇ ತ್ರಯಸ್ತತ್ರ ಸಂಜಾತಾಃ ಸೂತ ಭಾಸ್ಕರಾಃ ।
ಹಾಟಕೇಶ್ವರಜೇ ಕ್ಷೇತ್ರೇ ಸರ್ವಂ ನೋ ಬ್ರೂಹಿವಿಸ್ತರಾತ್ ॥ ೬ ॥

ಸೂತ ಉವಾಚ:—

ಅಸ್ತಿ ಸಾಗರಪರ್ಯಂತೇ ವಿಟಂಕಪುರಮುತ್ತಮಂ ।
ಸಮುದ್ರವೀಚಿಸಂಸಕ್ತ ಪ್ರೋಚ್ಚ ಪ್ರಾಕಾರಮಂಡನಂ ॥ ೭ ॥
ತತ್ರಾಽಭೂದ್ಬ್ರಾಹ್ಮಣಃ ಕಶ್ಚಿತ್ಕುಷ್ಠವ್ಯಾಧಿಸಮನ್ವಿತಃ ।
ಪೂರ್ವಕರ್ಮವಿಪಾಕೇನ ಯೌವನೇ ಸಮುಪಸ್ಥಿತೇ ॥ ೮ ॥
ತಸ್ಯ ಭಾರ್ಯಾಽಭವತ್ಸಾಧ್ವೀ ಕುಲೀನಾ ಶೀಲಮಂಡನಾ ।
ತಥಾಭೂತಮಪಿ ಪ್ರಾಯಃ ಸಾ ಪಶ್ಯತಿ ಯಥಾ ಸ್ಮರಂ ॥ ೯ ॥

---

೩. ಸೂರ್ಯನು ಮುಂಡೀರದಲ್ಲಿ ಪ್ರಾತಃಕಾಲದಲ್ಲಿಯೂ, ಕಾಲಪ್ರಿಯದಲ್ಲಿ ಮಧ್ಯಾಹ್ನದಲ್ಲಿಯೂ, ಮೂಲಸ್ಥಾನದಲ್ಲಿ ಸಾಯಂಕಾಲವೂ ಸೇರುತ್ತಾನೆ.

೪. ಆ ಕಾಲದಲ್ಲಿ ಮಾನವನು ಭಕ್ತಿಯಿಂದ ಒಂದು ಕ್ಷಣಕಾಲ ಒಬ್ಬ ಸೂರ್ಯನನ್ನು ನೋಡಿದರೂ ನಿಶ್ಚಯವಾಗಿಯೂ ಮೋಕ್ಷವನ್ನು ಹೊಂದುವನು.

೫. ಋಷಿಗಳು ಹೇಳುತ್ತಾರೆ:—ಮುಂಡೀರವು ಭೂಮಿಯ ಪೂರ್ವಭಾಗದಲ್ಲಿಯೂ, ಕಾಲಪ್ರಿಯವು ನಡುವೆಯೂ, ಮೂಲಸ್ಥಾನವು ಅವುಗಳ ಮಧ್ಯದಲ್ಲಿಯೂ ಇರುವುದೆಂದು ಕೇಳಿದ್ದೇವೆ.

೬. ಸೂತ! ಅವು ಮೂರೂ ಹಾಟಕೇಶ್ವರಜಕ್ಷೇತ್ರದಲ್ಲಿ ಹೇಗೆ ಉಂಟಾದವು? ಇದೆಲ್ಲವನ್ನೂ ನಮಗೆ ವಿಸ್ತಾರವಾಗಿ ಹೇಳು.

೭. ಸೂತನು ಹೇಳುತ್ತಾನೆ:—ಸಮುದ್ರದ ಎಲ್ಲೆಯಲ್ಲಿ ಸಾಗರದ ಅಲೆಗಳಿಂದ ಸಂಬದ್ಧವಾದುದೂ ಉನ್ನತ ಪ್ರಾಕಾರಭೂಷಿತವಾದುದೂ ಆದ ವಿಟಂಕವೆಂಬ ಪಟ್ಟಣವಿದೆ.

೮–೯. ಅಲ್ಲಿ ಹಿಂದಿನ ಕರ್ಮಪ್ರಭಾವದಿಂದ ಯೌವನದಲ್ಲಿಯೆ ಕುಷ್ಠವ್ಯಾಧಿಪೀಡಿತನಾದ ಓರ್ವ ದ್ವಿಜನಿದ್ದನು. ಅವನಿಗೆ ಪತಿವ್ರತೆಯೂ, ಸತ್ಕುಲಜಾತಳೂ, ಸುಶೀಲಳೂ ಆದ ಪತ್ನಿಯಿದ್ದಳು. ಅವಳು ಪತಿಯು ಹಾಗೆ ವ್ಯಾಧಿಗ್ರಸ್ತನಾಗಿದ್ದರೂ ಅವನನ್ನು ಮನ್ಮಥನೆಂದೇ ತಿಳಿಯುತ್ತಿದ್ದಳು.

ಔಷಧಾನಿ ವಿಚಿತ್ರಾಣಿ ಮಹಾರ್ಘಾಣ್ಯಪಿ ಚಾದದೇ ।
ತದರ್ಥಮುಪಲೇಪಾಂಶ್ಚ ಪಥ್ಯಾನಿ ವಿವಿಧಾನಿ ಚ ॥ ೧೦ ॥
ತಥಾ ಭಿಷಗ್ವರಾನ್ನಿತ್ಯಮಾನಿನಾಯ ಚ ಸಾದರಂ ।
ತದರ್ಥೇ ನ ಗುಣಸ್ತಸ್ಯ ತಥಾಽಪಿ ಸ್ಯಾಚ್ಛರೀರಜಃ ॥ ೧೧ ॥
ಯಥಾ ಯಥಾ ಸ ಗೃಹ್ಣಾತಿ ಭೇಷಜಾನಿ ದ್ವಿಜೋತ್ತಮಾಃ ।
ಕುಷ್ಠೇನ ಸರ್ವಗಾತ್ರೇಷು ವ್ಯಾಪ್ಯತೇ ಚ ತಥಾ ತಥಾ ॥ ೧೨ ॥
ಅಥೈವಂ ವರ್ತಮಾನಸ್ಯ ತಸ್ಯ ವಿಪ್ರವರಸ್ಯಚ ।
ಗೃಹೇಽತಿಥಿಃ ಸಮಾಯಾತಃ ಕಶ್ಚಿತ್ಪಾಂಥಃ ಶ್ರಮಾನ್ವಿತಃ ॥ ೧೩ ॥
ಅಥ ವಿಪ್ರಂ ಗೃಹಂ ಪ್ರಾಪ್ತಂ ದೃಷ್ಟ್ವಾ ತಸ್ಯ ಸತೀ ಪ್ರಿಯಾ ।
ಅಜ್ಞಾತಮಪಿ ಸದ್ಭಕ್ತ್ಯಾ ಸೂಪಚಾರೈರತೋಷಯತ್ ॥ ೧೪ ॥
ಅಥ ತಂ ಸ್ನಾತಮಾಚಾಂತಂ ಕೃತಾಹಾರಂ ದ್ವಿಜೋತ್ತಮಂ ।
ವಿಶ್ರಾಂತಂ ಶಯನೇ ವಿಪ್ರಃ ಪ್ರೋವಾಚ ಸ ಗೃಹಾಧಿಪಃ ॥ ೧೫ ॥
ತೇಜೋನ್ವಿತಂ ಯಥಾ ಭಾನುಂ ರೂಪೌದಾರ್ಯಗುಣಾನ್ವಿತಂ ।
ಯೌವನೇ ವರ್ತಮಾನಂ ಚ ಮೂರ್ತಂ ಕಾಮಮಿವಾಽಪರಂ ॥ ೧೬ ॥

---

೧೦. ಅವನು ಆ ರೋಗನಿವಾರಣೆಗಾಗಿ ನಾನಾಬಗೆಯ ಅಮೂಲ್ಯವಾದ ಔಷಧಗಳನ್ನೂ, ಉಪಲೇಪಗಳನ್ನೂ, ನಾನಾವಿಧ ಪಥ್ಯಗಳನ್ನೂ ಮಾಡಿದನು.

೧೧. ಹಾಗೆಯೇ ಅದಕ್ಕಾಗಿ ನಿತ್ಯವೂ ಶ್ರೇಷ್ಠರಾದ ವೈದ್ಯರನ್ನು ಕರೆಯಿಸಿ ದನು. ಆದರೂ ಅವನ ವ್ಯಾಧಿಯು ಪರಿಹಾರವಾಗಲಿಲ್ಲ.

೧೨. ದ್ವಿಜವರ್ಯರೆ! ಅವನು ಔಷಧಗಳನ್ನು ತೆಗೆದುಕೊಂಡ ಹಾಗೆಲ್ಲ ಆ ಕುಷ್ಠವು ದೇಹದಲ್ಲೆಲ್ಲ ವ್ಯಾಪಿಸಿತು.

೧೩. ಹೀಗಿರಲು ಅವನ ಮನೆಗೆ ಬಳಲಿದ ಪ್ರಯಾಣಿಕನೊಬ್ಬನು ಅತಿಥಿ ಯಾಗಿ ಬಂದನು.

೧೪. ಪತಿವ್ರತೆಯಾದ ಅವನ ಪತ್ನಿಯು ಮನೆಗೆಬಂದ ಆ ಬ್ರಾಹ್ಮಣನನ್ನು ಕಂಡು ಪರಿಚಯವಿಲ್ಲದವನಾದರೂ ಅವನನ್ನು ಭಕ್ತಿಯಿಂದ ಉಪಚರಿಸಿ ಸಂತೋಷ ಗೊಳಿಸಿದಳು.

೧೫–೧೬. ತರುವಾಯ ಮನೆಯ ಯಜಮಾನನಾದ ಆ ಕುಷ್ಠಿಯು ಸ್ನಾನ, ಆಚಮನ, ಭೋಜನಗಳನ್ನುಮಾಡಿ ಹಾಸಿಗೆಯಲ್ಲಿ ವಿಶ್ರಾಂತಿಗೊಂಡವನೂ, ಸೂರ್ಯನಂತೆ ತೇಜಸ್ವಿಯೂ, ರೂಪೌದಾರ್ಯಗುಣಗಳಿಂದ ಕೂಡಿದವನೂ, ಯುವಕನೂ, ದೇಹವನ್ನು ಧರಿಸಿದ ಮತ್ತೊಬ್ಬ ಮನ್ಮಥನಂತಿರುವವನೂ ಆದ ಆ ಬ್ರಾಹ್ಮಣನನ್ನು ಹೀಗೆ ಪ್ರಶ್ನೆಮಾಡಿದನು.

ಕುಷ್ಠ್ಯುವಾಚ:—
ಕುತ ಆಗಮ್ಯತೇ ವಿಪ್ರ ಕ್ವ ಯಾಸ್ಯಸಿ ವದಾಧುನಾ ।
ಏವಂ ಲಾವಣ್ಯಯುಕ್ತೋಽಪಿ ಕಿಮೇಕಾಕೀ ಯಥಾರ್ಥಿಭಾಕ್ ॥ ೧೭ ॥
ಪಥಿಕ ಉವಾಚ:—
ಅಸ್ತಿ ಕಾಂತೀಪುರೀನಾಮ ಪುರಂದರಪುರೀ ಯಥಾ ।
ಸುಸ್ಥಿತೈಃ ಸೇವಿತಾ ನಿತ್ಯಂ ಜನೈರ್ಧರ್ಮವ್ರತಾನ್ವಿತೈಃ ॥ ೧೮ ॥
ತಸ್ಯಾಮಹಂ ಕೃತಾವಾಸೋ ಗೃಹಸ್ಥಾಶ್ರಮಮಾವಹನ್ ।
ಗ್ರಸ್ತಃ ಕುಷ್ಠೇನ ರೌದ್ರೇಣ ಯಥಾ ತ್ವಂ ದ್ವಿಜಸತ್ತಮ ॥ ೧೯ ॥
ತತಃ ಶ್ರುತಂ ಮಯಾ ತಾವತ್ಪುರಾಣೇ ಸ್ಕಾಂದಸಂಜ್ಞಿತೇ ।
ಭಾಸ್ಕರತ್ರಿತಯಂ ಭೂಮೌ ಸರ್ವವ್ಯಾಧಿವಿನಾಶನಂ ॥ ೨೦ ॥
ತತೋ ನಿರ್ವೇದಮಾಪನ್ನೋ ಭೇಷಜೈಃ ಕ್ಲೇಶಿತಶ್ಚಿರಂ ।
ಕ್ಷಾರೈಶ್ಚಾಮ್ಲೈಃ ಕಷಾಯೈಶ್ಚ ಕಟುಕೈರಥ ತಿಕ್ತಕೈಃ ॥ ೨೧ ॥
ತತೋ ವಿನಿಶ್ಚಯಂ ಚಿತ್ತೇ ಕೃತ್ವಾ ಗೃಹ್ಯ ಧನಂ ಮಹತ್ ।
ಮುಂಡೀರಸ್ವಾಮಿನಂ ಗತ್ವಾ ಸ್ಥಿತಸ್ತಸ್ಯೈವ ಸನ್ನಿಧೌ ॥ ೨೨ ॥
ತತಃ ಪ್ರಾತಃ ಸಮುತ್ಥಾಯ ನಿತ್ಯಂ ಪಶ್ಯಾಮಿ ತಂ ವಿಭುಂ ।
ಪೂಜಯಾಮಿ ಸ್ವಶಕ್ತ್ಯಾ ಚ ಪ್ರಣಮಾಮಿ ತತಃ ಪರಂ ॥ ೨೩ ॥

---

೧೭. ಕುಷ್ಠಿಯು ಹೇಳುತ್ತಾನೆ:—ಎಲೈ ಬ್ರಾಹ್ಮಣನೆ! ನೀನು ಈಗ ಎಲ್ಲಿಂದ ಬಂದಿರುವೆ? ಎಲ್ಲಿಗೆ ಹೋಗುವೆ? ಇಷ್ಟು ಸುಂದರನಾಗಿದ್ದರೂ ಒಬ್ಬಂಟಿಗನಾಗಿ ಹೀಗೇಕೆ ದುಃಖಪಡುತ್ತಿರುವೆ? ಹೇಳು.

೧೮. ಪಥಿಕನು ಹೇಳುತ್ತಾನೆ:—ಧರ್ಮಿಷ್ಠರಾದ ಜನರು ಸೇವಿಸುತ್ತಿರುವ ಅಮರಾವತಿಯಂತೆ ಪ್ರಕಾಶಿಸುವ ಕಾಂತೀಪುರಿಯೆಂಬ ಪಟ್ಟಣವೊಂದಿರುವುದು.

೧೯. ಅಲ್ಲಿ ಗೃಹಸ್ಥಾಶ್ರಮಿಯಾಗಿ ವಾಸಿಸುತ್ತಿರುವ ನಾನು ಭಯಂಕರವಾದ ಕುಷ್ಠರೋಗದಿಂದ ನರಳುತ್ತಿದ್ದೆನು.

೨೦. ಅನಂತರ ನಾನು ಸ್ಕಾಂದ ಪುರಾಣದಲ್ಲಿ ಭೂಮಿಯಲ್ಲಿರುವ ಸಕಲ ವ್ಯಾಧಿಗಳನ್ನೂ ನಾಶಗೊಳಿಸುವ ಭಾಸ್ಕರತ್ರಯವನ್ನು ಕೇಳಿದೆನು.

೨೧–೨೨. ಒಗರು, ಹುಳಿ, ಕಷಾಯ, ಕಾರ, ಕಹಿಗಳಾದ ಔಷಧಗಳಿಂದ ಬಹುಕಾಲದವರೆಗೆ ದುಃಖಗೊಂಡವನಾಗಿ ವೈರಾಗ್ಯದಿಂದ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಬಹಳ ಹಣವನ್ನು ತೆಗೆದುಕೊಂಡು ಮುಂಡೀರಸ್ವಾಮಿಯ ಸನ್ನಿಧಿಗೆ ಹೋಗಿ ಅಲ್ಲಿಯೇ ನೆಲಸಿದ್ದೆನು.

೨೩. ಬೆಳಗ್ಗೆ ಎದ್ದು ನಿತ್ಯವೂ ಆ ಮುಂಡೀರಸ್ವಾಮಿಯನ್ನು ದರ್ಶನಮಾಡಿ ನನ್ನ ಶಕ್ತ್ಯನುಸಾರ ಪೂಜಿಸಿ ನಮಸ್ಕಾರಮಾಡಿದೆನು.

ಸೂರ್ಯವಾರೇ ವಿಶೇಷೇಣ ನಿರಾಹಾರೋ ಯತೇಂದ್ರಿಯಃ ।
ಕರೋಮಿ ಜಾಗರಂ ರಾತ್ರೌ ಗೀತವಾದಿತ್ರ ನಿಃಸ್ವನೈಃ ॥ ೨೪ ॥
ತತಃ ಸಂವತ್ಸರಸ್ಯಾಂತೇ ತಂ ಪ್ರಣಮ್ಯ ದಿನಾಧಿಪಂ ।
ಕಾಲಪ್ರಿಯಂ ತತಃ ಪಶ್ಚಾಚ್ಛ್ರದ್ಧಯಾ ಪರಯಾ ಯುತಃ ॥ ೨೫ ॥
ತೇನೈವ ವಿಧಿನಾ ವಿಪ್ರ ತಸ್ಯಾಽಪಿ ದಿವಸೇಶಿತುಃ ।
ಪೂಜಾಂ ಕರೋಮಿ ಮಧ್ಯಾಹ್ನೇ ಶ್ರದ್ಧಾಪೂತೇನ ಚೇತಸಾ ॥ ೨೬ ॥
ತತೋಽಪಿ ವತ್ಸರಸ್ಯಾಂತೇ ತಂ ಪ್ರಣಮ್ಯಾಽಥ ಶಕ್ತಿತಃ ।
ಮೂಲಸ್ಥಾನಂ ಗತೋ ದೇವಮಪರಸ್ಯಾಂ ದಿಶಿ ಸ್ಥಿತಂ ॥ ೨೭ ॥
ತೇನೈವ ವಿಧಿನಾ ಪೂಜಾ ತಸ್ಯಾಽಪಿ ವಿಹಿತಾ ಮಯಾ ।
ಸಂಧ್ಯಾಕಾಲೇ ದ್ವಿಜಶ್ರೇಷ್ಠ ಯಾವತ್ಸಂವತ್ಸರಂ ಸ್ಥಿತಃ ॥ ೨೮ ॥
ತತಃ ಸಂವತ್ಸರಸ್ಯಾಂತೇ ಸ್ವಪ್ನೇ ಮಾಂ ಭಾಸ್ಕರೋಽಬ್ರವೀತ್ ।
ಸಮೇತ್ಯ ಪ್ರಹಸನ್ವಿಪ್ರಃ ಸಂಪ್ರಹೃಷ್ಟೇನ ಚೇತಸಾ ॥ ೨೯ ॥
ಪರಿತುಷ್ಟೋಽಸ್ಮಿ ತೇ ವಿಪ್ರ ಕರ್ಮಣಾಽನೇನ ಭಕ್ತಿತಃ ।
ಮಮಾರಾಧನಜೇನೈವ ತಸ್ಮಾತ್ಕುಷ್ಠಂ ಪ್ರಯಾತು ತೇ ॥ ೩೦ ॥
ಗಚ್ಛ ಶೀಘ್ರಂ ದ್ವಿಜಶ್ರೇಷ್ಠ ಶ್ರಾಂತೋಽಸಿ ನಿಜಮಂದಿರಂ ।
ಪಶ್ಯ ಬಂಧುಜನಂ ಸರ್ವಂ ಸೋತ್ಕಂಠಂ ತವತ್ಕೃತೇ ಸ್ಥಿತಂ ॥ ೩೧ ॥

---

೨೪. ಭಾನುವಾರದ ದಿನ ಉಪವಾಸಮಾಡಿ ಜಿತೇಂದ್ರಿಯನಾಗಿ ರಾತ್ರಿಯ ವೇಳೆ ಗೀತವಾದ್ಯಗಳಧ್ವನಿಗಳಿಂದ ಜಾಗರಣೆಮಾಡಿದೆನು.

೨೫-೨೬. ತರುವಾಯ ಒಂದು ವರ್ಷದ ಕೊನೆಯಲ್ಲಿ ಆ ಸೂರ್ಯನನ್ನೂ ಕಾಲಪ್ರಿಯನನ್ನೂ ಅತಿಶಯಶ್ರದ್ಧೆಯಿಂದ ನಮಸ್ಕರಿಸಿ ಅದೇ ವಿಧಿಯಿಂದ ಮಧ್ಯಾಹ್ನದಲ್ಲಿ ಆ ಸೂರ್ಯಪರಮಾತ್ಮನ ಪೂಜೆಯನ್ನು ಮಾಡಿದೆನು.

೨೭-೨೮. ಬಳಿಕ ವರ್ಷದ ಅಂತ್ಯದಲ್ಲಿ ಆ ಸೂರ್ಯನನ್ನು ವಂದಿಸಿ ಪಶ್ಚಿಮ ದಿಕ್ಕಿನಲ್ಲಿರುವ ಮೂಲಸ್ಥಾನಕ್ಕೆ ಹೋಗಿ ಒಂದುವರ್ಷದವರೆಗೆ ಸಂಧ್ಯಾಕಾಲದಲ್ಲಿ ಅದೇ ವಿಧಿಯಿಂದ ಆ ಸೂರ್ಯನನ್ನು ಪೂಜಿಸಿದೆನು.

೨೯. ತರುವಾಯ ಆ ವರ್ಷದ ಕೊನೆಯಲ್ಲಿ ಸೂರ್ಯನು ಸ್ವಪ್ನದಲ್ಲಿ ಬಂದು ನಗುತ್ತ ಸಂತೋಷಗೊಂಡ ಮನಸ್ಸಿನಿಂದ ನನ್ನನ್ನು ಕುರಿತು ಇಂತೆಂದನು.

೩೦. ಎಲೈ ಬ್ರಾಹ್ಮಣನೆ! ಈ ನಿನ್ನ ಪೂಜಾ ಕಾರ್ಯದಿಂದಲೂ, ಭಕ್ತಿಯಿಂದಲೂ ಮೆಚ್ಚಿರುವೆನು. ಅದರಿಂದ ನಿನ್ನ ಕುಷ್ಠರೋಗವು ನಿವಾರಣೆಯಾಗಲಿ.

೩೧. ಬೇಗನೆ ನಿನ್ನ ಮನೆಗೆ ಹೋಗು. ಬಳಲಿದ್ದೀಯೆ. ನಿನಗಾಗಿ ಔತ್ಸುಕ್ಯದಿಂದ ಕಾದಿರುವ ಬಂಧುಜನರನ್ನು ನೋಡು.

ತ್ವಯಾ ಹೃತಂ ಪುರಾ ರುಕ್ಮಂ ಬ್ರಾಹ್ಮಣಸ್ಯ ಮಹಾತ್ಮನಃ ।
ತೇನ ಕರ್ಮವಿಪಾಕೇನ ಕುಷ್ಠವ್ಯಾಧಿರುಪಸ್ಥಿತಃ ॥ ೩೨ ॥
ಸ ಮಯಾ ನಾಶಿತಸ್ತುಭ್ಯಂ ಪ್ರಹೃಷ್ಟೇನಾಽಧುನಾ ದ್ವಿಜ ।
ಏತಜ್ಜ್ಞಾತ್ವಾ ನ ಕರ್ತವ್ಯಂ ಸುವರ್ಣಹರಣಂ ಪುನಃ ॥ ೩೩ ॥
ದೃಶ್ಯಂತೇ ಯೇ ನರಾ ಲೋಕೇ ಕುಷ್ಠವ್ಯಾಧಿಸಮಾಕುಲಾಃ ।
ಸುವರ್ಣಹರಣಂ ಸರ್ವೈಸ್ತೈಃ ಕೃತಂ ಪಾಪಕರ್ಮಭಿಃ ॥ ೩೪ ॥
ತಸ್ಮಾದ್ದೇಯಂ ಯಥಾ ಶಕ್ತ್ಯಾ ನ ಸ್ತೇಯಂ ಕನಕಂ ಬುಧೈಃ ।
ಇಚ್ಛದ್ಭಿಃ ಪರಮಂ ಸೌಖ್ಯಂ ಸ್ವಶರೀರಸ್ಯ ಶಾಶ್ವತಂ ॥ ೩೫ ॥
ಏವಮುಕ್ತ್ವಾ ಸಹಸ್ರಾಂಶುಸ್ತತಶ್ಚಾದರ್ಶನಂ ಗತಃ ।
ಅಹಂ ಚ ವಿಸ್ಮಯಾವಿಷ್ಟಃ ಪ್ರೋತ್ಥಿತಃ ಶಯನಾದ್ದ್ರುತಂ ॥ ೩೬ ॥
ಯಾವತ್ಪಶ್ಯಾಮಿ ದೇಹಂ ಸ್ವಂ ಕುಷ್ಠವ್ಯಾಧಿ ಪರಿಚ್ಯುತಂ ।
ದ್ವಾದಶಾರ್ಕಪ್ರಭಂ ದಿವ್ಯಂ ಯಥಾ ತ್ವಂ ಪಶ್ಯಸೇ ದ್ವಿಜ ॥ ೩೭ ॥
ತಸ್ಮಾತ್ತ್ವಮಪಿ ವಿಪ್ರೇಂದ್ರ ಭಕ್ತ್ಯಾ ತದ್ಭಾಸ್ಕರತ್ರಯಂ ।
ಅನೇನ ವಿಧಿನಾ ಪಶ್ಯ ತೇನ ಕುಷ್ಠಂ ಪ್ರಶಾಮ್ಯತಿ ॥ ೩೮ ॥

---

೩೨. ನೀನು ಹಿಂದೆ ಮಹಾತ್ಮನಾದ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಚಿನ್ನವನ್ನು ಕದ್ದಿರುವೆ. ಆ ಕರ್ಮದ ಪರಿಣಾಮದಿಂದ ನಿನಗೆ ಕುಷ್ಠವ್ಯಾಧಿಯು ಸಂಭವಿಸಿತು.

೩೩. ಈಗ ನಾನು ಸಂತುಷ್ಟನಾಗಿ ನಿನ್ನ ಆ ವ್ಯಾಧಿಯನ್ನು ನಿವಾರಿಸಿದ್ದೇನೆ. ಇದನ್ನರಿತು ನೀನು ಮರಳಿ ಸುವರ್ಣವನ್ನು ಕದಿಯಬೇಡ.

೩೪–೩೫. ಲೋಕದಲ್ಲಿ ಕಾಣುವ ಪಾಪಿಗಳಾದ ಕುಷ್ಠರೋಗಿಗಳೆಲ್ಲ ಸುವರ್ಣವನ್ನು ಕದ್ದಿರುವರು. ಆದ್ದರಿಂದ ತಮ್ಮ ಶರೀರಕ್ಕೆ ಶಾಶ್ವತಸುಖವು ಲಭಿಸಬೇಕೆಂದು ಬಯಸುವ ಪ್ರಾಜ್ಞರು ಸುವರ್ಣವನ್ನು ದಾನಮಾಡಬೇಕು. ಕದಿಯಬಾರದು.

೩೬. ಸೂರ್ಯನು ಹೀಗೆ ಹೇಳಿ ಅದೃಶ್ಯನಾದನು. ನಾನೂ ಆಶ್ಚರ್ಯಗೊಂಡವನಾಗಿ ಬೇಗನೆ ಹಾಸಿಗೆಯಿಂದ ಎದ್ದೆನು.

೩೭. ಅಷ್ಟರಲ್ಲಿ ನನ್ನ ದೇಹವು ಈಗ ನೀನು ನೋಡುತ್ತಿರುವಂತೆ ಕುಷ್ಠವ್ಯಾಧಿಯಿಲ್ಲದಿರುವುದೂ, ದ್ವಾದಶಾದಿತ್ಯರಂತೆ ಕಾಂತಿಯುಳ್ಳುದೂ ಆಗಿರುವುದನ್ನು ಕಂಡೆನು.

೩೮. ಬ್ರಾಹ್ಮಣವರ್ಯನೆ! ಆದ್ದರಿಂದ ನೀನು ಈ ವಿಧಿಯಿಂದ ಆ ಮೂವರು ಸೂರ್ಯರನ್ನು ಭಕ್ತಿಯಿಂದ ದರ್ಶನಮಾಡು. ಅದರಿಂದ ನಿನ್ನ ವ್ಯಾಧಿಯು ಪರಿಹಾರವಾಗುವುದು.

ಕಿಮೌಷಧ್ಯೈಃ ಕಿಮಾಹಾರ್ಯೈಃ ಕಟುಕೈರಪಿ ಯೋಜಿತೈಃ ।
ಸರ್ವವ್ಯಾಧಿಪ್ರಣಾಶೇಶೇ ಸ್ಥಿತೇಽಸ್ಮಿನ್ ಭಾಸ್ಕರತ್ರಯೇ ॥ ೩೯ ॥
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸಾಂಪ್ರತಂ ತಾಂ ಪುರೀಂ ಪ್ರತಿ ।
ಗೃಹೇಽದ್ಯ ತವ ವಿಶ್ರಾಂತೋ ಯಥಾ ವಿಪ್ರ ನಿಜೇ ಗೃಹೇ ॥ ೪೦ ॥
ಏವಮುಕ್ತಃ ಸ ಪಾಂಥೇನ ತೇನ ವಿಪ್ರಃ ಸ ಕುಷ್ಠಭಾಕ್ ।
ವೀಕ್ಷಾಂಚಕ್ರೇ ತತೋ ವಕ್ತ್ರಂ ಸ್ವಪತ್ನ್ಯಾ ದುಃಖಸಂಯುತಃ ॥ ೪೧ ॥
ಸಾಬ್ರವೀದ್ಯುಕ್ತಮುಕ್ತಂ ತೇ ಪಾಂಥೇನಾಽನೇನ ವಲ್ಲಭ ।
ತಸ್ಮಾತ್ತತ್ರ ದ್ರುತಂ ಗಚ್ಛ ಯತ್ರ ತದ್ಭಾಸ್ಕರತ್ರಯಂ ॥ ೪೨ ॥
ಅಹಂ ತ್ವಯಾ ಸಮಂ ತತ್ರ ಶುಶ್ರೂಷಾನಿರತಾ ಸತೀ ।
ಗಮಿಷ್ಯಾಮಿ ನ ಸಂದೇಹಸ್ತಸ್ಮಾದ್ಗಚ್ಛ ದ್ರುತಂ ವಿಭೋ ॥ ೪೩ ॥
ಏವಮುಕ್ತಸ್ತಯಾ ಸೋಽಥ ವಿತ್ತಮಾದಾಯ ಭೂರಿಶಃ ।
ಪ್ರಸ್ಥಿತಃ ಕಾಂತಯಾ ಸಾರ್ಧಂ ಮುಂಡೀರಸ್ವಾಮಿನಂ ಪ್ರತಿ ॥ ೪೪ ॥
ಪ್ರತಿಜ್ಞಯಾ ಗಮಿಷ್ಯಾಮಿ ದ್ರಷ್ಟುಂ ತದ್ದೇವತಾತ್ರಯಂ ।
ಮುಂಡೀರಂ ಕಾಲನಾಥಂ ಚ ಮೂಲಸ್ಥಾನಂ ಚ ಭಾಸ್ಕರಂ ॥ ೪೫ ॥
ತತಃ ಕೃಚ್ಛ್ರೇಣ ಮಹತಾ ಕುಷ್ಠವ್ಯಾಧಿಸಮಾಕುಲಃ ।
ಹಾಟಕೇಶ್ವರಜೇ ಕ್ಷೇತ್ರೇ ಸಂಪ್ರಾಪ್ತಃ ಸ ದ್ವಿಜೋತ್ತಮಾಃ ॥ ೪೬ ॥

---

೩೯. ಸಕಲ ವ್ಯಾಧಿಗಳನ್ನೂ ನಿವಾರಿಸುವ ಈ ಮೂವರು ಸೂರ್ಯರಿರಲು ಔಷಧಗಳಿಂದಲೂ, ಕಹಿಯಾದ ಔಷಧಗಳಿಂದಲೂ ಏನು ಪ್ರಯೋಜನ?

೪೦. ನಾನು ಈಗ ನನ್ನ ಮನೆಯಂತಿರುವ ನಿನ್ನ ಮನೆಯಲ್ಲಿ ವಿಶ್ರಾಂತಿಗೊಂಡು ಆ ಪಟ್ಟಣಕ್ಕೆ ಹೋಗುವೆನು. ನಿನಗೆ ಮಂಗಳವಾಗಲಿ.

೪೧. ಆ ಪ್ರಯಾಣಿಕನು ಹೀಗೆ ಹೇಳಲು ಆ ಕುಷ್ಠಿಯು ದುಃಖದಿಂದ ತನ್ನ ಪತ್ನಿಯ ಮುಖವನ್ನು ಕಂಡನು.

೪೨. ಆ ಪತ್ನಿಯು "ಈ ಪ್ರಯಾಣಿಕನು ಯುಕ್ತವಾದುದನ್ನೇ ಹೇಳಿದ್ದಾನೆ. ಆದ್ದರಿಂದ ಆ ಸೂರ್ಯತ್ರಯವಿರುವ ಸ್ಥಳಕ್ಕೆ ಬೇಗನೆ ಹೋಗು.

೪೩. ನಾನು ಸಹ ನಿನ್ನ ಸೇವೆಮಾಡಲು ಅಲ್ಲಿಗೆ ಬರುವೆನು. ಆದ್ದರಿಂದ ಬೇಗನೆ ಹೋಗು" ಎಂದಳು.

೪೪–೪೫. ಆ ಪತ್ನಿಯು ಹೀಗೆ ಹೇಳಲು ಆ ಬ್ರಾಹ್ಮಣನು ಬಹಳ ದ್ರವ್ಯಗಳನ್ನು ತೆಗೆದುಕೊಂಡು ಮುಂಡೀರ, ಕಾಲನಾಥ, ಮೂಲಸ್ಥಾನ ಎಂಬ ಮೂರು ಮಂದಿ ಸೂರ್ಯರನ್ನು ನೋಡಲು ಹೋಗುವೆನೆಂದು ಪ್ರತಿಜ್ಞೆಮಾಡಿ ಮುಂಡೀರಸ್ವಾಮಿಯೆಡೆಗೆ ಹೊರಟನು.

೪೬. ಎಲೈ ದ್ವಿಜವರ್ಯರೆ! ಕುಷ್ಠಪೀಡಿತನಾದ ಆ ಬ್ರಾಹ್ಮಣನು ಬಹಳ ಕಷ್ಟದಿಂದ ಹಾಟಕೇಶ್ವರಜಕ್ಷೇತ್ರವನ್ನು ಸೇರಿದನು.

ತದ್ದೃಷ್ಟ್ವಾ ಸುಮಹತ್ಕ್ಷೇತ್ರಂ ತಾಪಸೌಘನಿಷೇವಿತಂ ।
ನಿರ್ವಿಣ್ಣಃ ಕುಷ್ಠರೋಗೇಣ ಪಥಿ ಶ್ರಾಂತೋಽಬ್ರವೀತ್ಪ್ರಿಯಾಂ ॥ ೪೭ ॥
ಅಹಂ ನಿರ್ವೇದಮಾಪನ್ನೋ ರೋಗೇಣಾಽಥ ಬುಭುಕ್ಷಯಾ ।
ಮುಂಡೀರಸ್ವಾಮಿನಂ ಯಾವನ್ನ ಶಕ್ನೋಮಿ ಪ್ರಸರ್ಪಿತುಂ ॥ ೪೮ ॥
ತಸ್ಮಾದತ್ರೈವ ದೇಹಂ ಸ್ವಂ ವಿಹಾಸ್ಯಾಮಿ ನ ಸಂಶಯಃ ।
ತ್ವಂ ಗಚ್ಛ ಸ್ವಗೃಹಂ ಕಾಂತೇ ಸಾರ್ಥಮಾಸಾದ್ಯ ಶೋಭನಂ ॥ ೪೯ ॥

ಪತ್ನ್ಯುವಾಚ :—

ಅಭುಕ್ತೇ ತ್ವಯಿ ನೋ ಭುಕ್ತಂ ಕದಾಚಿತ್ಕಾಂತ ವೈ ಮಯಾ ।
ಏಕಾಂತೇಽಪಿ ಮಹಾಭಾಗ ನ ಸುಪ್ತಂ ಜಾಗ್ರತಿ ತ್ವಯಿ ॥ ೫೦ ॥
ತಸ್ಮಾದೇತನ್ಮಹಾಕ್ಷೇತ್ರಂ ಸಂಪ್ರಾಪ್ಯ ತ್ವಾಂ ವ್ಯವಸ್ಥಿತಂ ।
ಪರಲೋಕಾಯ ಸಂತ್ಯಜ್ಯ ಕಥಂ ಗಚ್ಛಾಮ್ಯಹಂ ಗೃಹಂ ॥ ೫೧ ॥
ದರ್ಶಯಿಷ್ಯೇ ಮುಖಂ ತೇಷಾಂ ತ್ವಯಾ ಹೀನಾ ಅಹಂ ಕಥಂ ।
ಬಾಂಧವಾನಾಂ ಗುರೂಣಾಂಚ ಅನ್ಯೇಷಾಂ ಸುಹೃದಾಮಪಿ ॥ ೫೨ ॥
ತಸ್ಮಾತ್ತ್ವಯಾ ಸಮಂ ನಾಥ ಪ್ರವೇಕ್ಷ್ಯಾಮಿ ಹುತಾಶನಂ ।
ಸ್ನೇಹಪಾಶವಿನಿರ್ಬದ್ಧಾ ಸತ್ಯೇನಾತ್ಮಾನಮಾಲಭೇ ॥ ೫೩ ॥

---

೪೭. ಅವನು ಮುನಿಗಳ ಸಮೂಹದಿಂದ ಸೇವಿಸಲ್ಪಟ್ಟಿರುವ ಆ ಮಹಾಕ್ಷೇತ್ರವನ್ನು ನೋಡಿ ಕುಷ್ಠರೋಗದಿಂದ ಆಯಾಸಗೊಂಡು ತನ್ನ ಪ್ರೇಯಸಿಯನ್ನು ಕುರಿತು ಹೀಗೆಂದನು.

೪೮. ನಾನು ರೋಗದಿಂದಲೂ, ಹಸಿವಿನಿಂದಲೂ ನಿರ್ವಿಣ್ಣನಾಗಿದ್ದೇನೆ. ಆದುದರಿಂದ ಮುಂಡೀರಸ್ವಾಮಿಯೆಡೆಗೆ ಹೋಗಲು ಶಕ್ತನಲ್ಲ.

೪೯. ಆದುದರಿಂದ ನಾನು ಇಲ್ಲಿಯೇ ನನ್ನ ಶರೀರವನ್ನು ನಿಶ್ಚಯವಾಗಿಯೂ ತ್ಯಜಿಸುವೆನು. ನೀನು ಬಂಧುಗಳೊಡನೆ ಮಂಗಳಕರವಾದ ನಿನ್ನ ಮನೆಗೆ ಹೋಗು.

೫೦. ಹೆಂಡತಿಯು ಹೇಳುತ್ತಾಳೆ:—ನಾಥ! ನೀನು ಭುಜಿಸದಿರಲು ನಾನು ಯಾವಾಗಲೂ ಭೋಜನಮಾಡಲಿಲ್ಲ. ನೀನು ಎಚ್ಚರವಾಗಿರುವಾಗ ರಹಸ್ಯದಲ್ಲಿಯೂ ನಾನು ನಿದ್ರಿಸಲಿಲ್ಲ.

೫೧. ಆದ್ದರಿಂದ ಈ ಮಹಾಕ್ಷೇತ್ರವನ್ನು ಹೊಂದಿ ಪರಲೋಕಕ್ಕೆ ತೆರಳಲು ಉದ್ಯುಕ್ತನಾದ ನಿನ್ನನ್ನು ತ್ಯಜಿಸಿ ನಾನು ಹೇಗೆ ತಾನೆ ಮನೆಗೆ ಹೋಗಲಿ.

೫೨. ನಾನು ನಿನ್ನನ್ನು ಅಗಲಿ ಬಂಧುಗಳಿಗೂ, ಗುರುಗಳಿಗೂ, ಇತರ ಮಿತ್ರರಿಗೂ ಮುಖವನ್ನು ಹೇಗೆ ತೋರಿಸಲಿ.

೫೩. ಆದ್ದರಿಂದ ನಿನ್ನಲ್ಲಿರುವ ಪ್ರೀತಿಯಿಂದ ಬದ್ಧಳಾದ ನಾನು ನಿನ್ನೊಡನೆ ಅಗ್ನಿಯನ್ನು ಪ್ರವೇಶಿಸುವೆನು. ನನ್ನಾಣೆಯಾಗಿ ಇದು ನಿಜ.

ಯಾವಂತಸ್ತ್ವಪ ಸಂಜಾತಾ ಉಪವಾಸಾ ಮಹಾಮತೇ ।
ತಾವಂತಶ್ಚ ತಥಾಽಸ್ಮಾಕಂ ಕಥಂ ಗಚ್ಛಾಮಿ ತದ್ಗೃಹಂ ॥ ೫೪ ॥
ಏವಂ ತಸ್ಯಾ ವಿದಿತ್ವಾ ಸ ನಿಶ್ಚಯಂ ಬ್ರಾಹ್ಮಣಸ್ತದಾ ।
ಚಿತಿಂ ಕೃತ್ವಾತು ದಾಹಾರ್ಥಂ ತಯಾ ಸಾರ್ಧಂ ತತೋಽವಿಶತ್ ॥ ೫೫ ॥
ಭಾಸ್ಕರಂ ಮನಸಿ ಧ್ಯಾತ್ವಾ ಯಾವದಗ್ನಿಂ ಸಮಾದದೇ ।
ತಾವತ್ಪಶ್ಯತಿ ಚಾಗ್ರಸ್ಥಂ ಸುದೀಪ್ತಂ ಪುರುಷತ್ರಯಂ ॥ ೫೬ ॥
ತದ್ದೃಷ್ಟ್ವಾ ವಿಸ್ಮಯಾವಿಷ್ಟಃ ಕ ಏತೇ ಪುರುಷಾಸ್ತ್ರಯಃ ।
ನ ಕದಾಚಿನ್ಮಯಾ ದೃಷ್ಟಾ ಈದೃಕ್ತೇಜಃಸಮನ್ವಿತಾಃ ॥ ೫೭ ॥

ಪುರುಷಾ ಊಚುಃ:—

ಮಾತ್ವಂ ಮೃತ್ಯುಪಥಂ ಗಚ್ಛ ಕೃತ್ವಾ ವೈರಾಗ್ಯಮಾಕುಲಃ ।
ವ್ಯಾವೃತ್ಯ ಸ್ವಗೃಹಂ ಗಚ್ಛ ಸ್ವಭಾರ್ಯಾಸಹಿತೋ ದ್ವಿಜ ॥ ೫೮ ॥

ಬ್ರಾಹ್ಮಣ ಉವಾಚ:—

ಪ್ರತಿಜ್ಞಾಯ ಮಯಾ ಪೂರ್ವಂ ಗೃಹಂ ಮುಕ್ತಂ ನಿಜಂ ಯತಃ ।
ಮುಂಡೀರಸ್ವಾಮಿನಂ ದೃಷ್ಟ್ವಾ ತಥಾಽನ್ಯಂ ಕಾಲವಲ್ಲಭಂ ॥ ೫೯ ॥
ಮೂಲಸ್ಥಾನಂ ಚ ಕರ್ತವ್ಯಂ ತತಃ ಸಸ್ಯಪ್ರಭಕ್ಷಣಂ ।
ಸೋಽಹಂ ತಾನವಿಲೋಕ್ಯಾಽಥ ಕಥಂ ಗಚ್ಛಾಮಿ ಮಂದಿರಂ ।
ಭಕ್ಷಯಾಮಿ ತಥಾ ಸಸ್ಯಂ ತೇನ ತ್ಯಕ್ಷ್ಯಾಮಿ ಜೀವಿತಂ ॥ ೬೦ ॥

---

೫೪. ಪ್ರಾಜ್ಞನೆ! ನೀನು ಎಷ್ಟುದಿನ ಉಪವಾಸಮಾಡಿರುವೆಯೊ ನನಗೂ ಅಷ್ಟೇ ಉಪವಾಸಗಳಾಗಿವೆ. ಆದ್ದರಿಂದ ಹೇಗೆತಾನೆ ಮನೆಗೆ ಹೋಗಲಿ.

೫೫. ಆಗ ಆ ಬ್ರಾಹ್ಮಣನು ಅವಳ ನಿರ್ಣಯವನ್ನರಿತು ಅಗ್ನಿಪ್ರವೇಶ ಮಾಡಲು ಚಿತಿಯನ್ನು ರಚಿಸಿ ಅವಳೊಡನೆ ಪ್ರವೇಶಿಸತೊಡಗಿದನು.

೫೬. ಅವನು ಮನಸ್ಸಿನಲ್ಲಿ ಸೂರ್ಯದೇವನನ್ನು ಚಿಂತಿಸಿ ಅಗ್ನಿಯನ್ನು ಪ್ರವೇಶಿಸುವಷ್ಟರಲ್ಲಿ ಮುಂದೆ ಪ್ರಜ್ವಲಿಸುತ್ತಿರುವ ಮೂರು ಜನರನ್ನು ಕಂಡನು.

೫೭. ಅವನು ಅವರನ್ನು ಕಂಡು ಆಶ್ಚರ್ಯಗೊಂಡು ಈ ಮೂವರು ಯಾರು? ಇಂತಹ ತೇಜಸ್ವಿಗಳನ್ನು ನಾನು ಯಾವಾಗಲೂ ನೋಡಲಿಲ್ಲ ಎಂದುಕೊಂಡನು.

೫೮. ಪುರುಷರು ಹೇಳುತ್ತಾರೆ:—ಬ್ರಾಹ್ಮಣ! ನೀನು ವೈರಾಗ್ಯಗೊಂಡು ಮಡಿಯಬೇಡ. ನಿನ್ನ ಪತ್ನಿಯೊಡನೆ ಮನೆಗೆ ಹಿಂದಿರುಗು.

೫೯–೬೦. ಬ್ರಾಹ್ಮಣನು ಹೇಳುತ್ತಾನೆ:—ನಾನು ಹಿಂದೆ ಮುಂಡೀರಸ್ವಾಮಿ, ಕಾಲವಲ್ಲಭ, ಮೂಲಸ್ಥಾನ ಎಂಬ ಭಾಸ್ಕರತ್ರಿತಯವನ್ನು ನೋಡದೆ ಭುಜಿಸುವುದಿಲ್ಲವೆಂದು ಪ್ರತಿಜ್ಞೆಮಾಡಿ ಮನೆಯನ್ನು ತ್ಯಜಿಸಿರುವೆನು. ಅಂಥ ನಾನು ಅವರನ್ನು ಕಾಣದೆ ಹೇಗೆ ಮನೆಗೆ ಹೋಗುವೆನು? ಹೇಗೆ ಭುಜಿಸುವೆನು? ಆದ್ದರಿಂದ ಪ್ರಾಣವನ್ನು ತ್ಯಜಿಸುವೆನು.

ಪುರುಷಾ ಊಚುಃ :—

ವಯಂ ತೇ ಭಾಸ್ಕರಾ ಬ್ರಹ್ಮಂಸ್ತ್ರಯೋಽತ್ರೈವ ಸಮಾಗತಾಃ ।
ತ್ವದ್ಭಕ್ತ್ಯಾಕೃಷ್ಟಮನಸೋ ಬ್ರೂಹಿ ಕಿಂ ಕರವಾಮಹೇ ॥ ೬೧ ॥

ಬ್ರಾಹ್ಮಣ ಉವಾಚ :—

ಯದಿ ಯೂಯಂ ಸಮಾಯಾತಾಃ ಸ್ವಯಮೇವ ಮಮಾಂತಿಕಂ ।
ತ್ರಯೋಽಪಿ ಭಾಸ್ಕರಾ ನಾಶಮೇಷ ಕುಷ್ಠಃ ಪ್ರಗಚ್ಛತು ॥ ೬೨ ॥
ತಥಾಽತ್ರೈವ ಸದಾ ಸ್ಥೇಯಂ ಕ್ಷೇತ್ರೇ ಯುಷ್ಮಾಭಿರೇವಹಿ ।
ಸಾನ್ನಿಧ್ಯಂ ತ್ರಿಷುಲೋಕೇಷು ಗಂತವ್ಯಂ ಚ ಯಥಾ ಪುರಾ ॥ ೬೩ ॥

ಭಾಸ್ಕರಾ ಊಚುಃ :—

ಏವಂ ವಿಪ್ರಕರಿಷ್ಯಾಮಃ ಸ್ಥಾಸ್ಯಾಮೋಽತ್ರ ಸದಾ ವಯಂ ।
ತ್ವಂ ಚಾಽಪಿ ರೋಗನಿರ್ಮುಕ್ತಃ ಸುಖಂ ಪ್ರಾಪ್ಸ್ಯಸ್ಯನುತ್ತಮಂ ॥ ೬೪ ॥
ಪ್ರಾಸಾದತ್ರಿತಯಂ ತಸ್ಮಾದಸ್ಮದರ್ಥಂ ನಿರೂಪಯ ।
ಯೇನ ತ್ರಿಕಾಲಮಾಸಾದ್ಯ ಗಚ್ಛಾಮಃ ಸನ್ನಿಧಿಂ ದ್ವಿಜ ॥ ೬೫ ॥
ಏವಮುಕ್ತ್ವಾ ತು ತೇ ಸರ್ವೇ ಗತಾಶ್ಚಾಽದರ್ಶನಂ ತತಃ ।
ಸೋಽಪಿ ಪಶ್ಯತಿ ಕಾಯಂ ಸ್ವಂ ಯಾವದ್ರೋಗವಿವರ್ಜಿತಂ ॥ ೬೬ ॥
ದ್ವಾದಶಾರ್ಕಪ್ರತೀಕಾಶಂ ಸರ್ವಲಕ್ಷಣಲಕ್ಷಿತಂ ।
ತತಃ ಪ್ರೋವಾಚ ತಾಂ ಭಾರ್ಯಾಂ ವಿನಯಾಽವನತಾಂ ಸ್ಥಿತಾಂ ॥ ೬೭ ॥

---

೬೧. ಪುರುಷರು ಹೇಳುತ್ತಾರೆ:—ಎಲೈ ಬ್ರಾಹ್ಮಣನೆ! ನಾವೇ ಆ ಮೂರು ಮಂದಿ ಭಾಸ್ಕರರು. ನಿನ್ನ ಭಕ್ತಿಗೆ ಪರವಶರಾಗಿ ಇಲ್ಲಿಗೆ ಬಂದಿದ್ದೇವೆ. ನಾವು ನಿನಗೆ ಏನನ್ನು ಮಾಡಬೇಕೆಂಬುದನ್ನು ಹೇಳು.

೬೨-೬೩. ಬ್ರಾಹ್ಮಣನು ಹೇಳುತ್ತಾನೆ:— ಸೂರ್ಯರೆ! ನೀವೇ ನನ್ನ ಬಳಿಗೆ ಬಂದಿದ್ದರೆ ಈ ನನ್ನ ಕುಷ್ಠರೋಗವು ಶಾಂತವಾಗಲಿ. ಹಾಗೆಯೇ ನೀವು ಈ ಕ್ಷೇತ್ರದಲ್ಲಿ ಯಾವಾಗಲೂ ವಾಸಮಾಡಿರಿ. ಮೊದಲಿನಂತೆಯೇ ಮೂರು ಲೋಕಗಳಲ್ಲಿಯೂ ಸಂಚರಿಸಿರಿ.

೬೪-೬೫. ಭಾಸ್ಕರರು ಹೇಳುತ್ತಾರೆ:—ಬ್ರಾಹ್ಮಣನೆ! ನಾವು ಹೀಗೆಯೇ ಮಾಡುವೆವು. ಇಲ್ಲಿ ಯಾವಾಗಲೂ ನೆಲೆಸಿರುವೆವು. ನೀನೂ ರೋಗರಹಿತನಾಗಿ ಉತ್ತಮವಾದ ಸುಖವನ್ನು ಪಡೆಯುವೆ. ನಮಗಾಗಿ ಮೂರುದೇವಾಲಯಗಳನ್ನು ನಿರ್ಮಿಸು. ನಾವು ತ್ರಿಕಾಲಗಳಲ್ಲಿಯೂ ಅಲ್ಲಿ ಸನ್ನಿಹಿತರಾಗಿರುವೆವು.

೬೬-೬೭. ಆ ಸೂರ್ಯರು ಹೀಗೆ ಹೇಳಿ ಅದೃಶ್ಯರಾದರು. ಆ ಬ್ರಾಹ್ಮಣನೂ ಅಷ್ಟರಲ್ಲಿ ತನ್ನ ಶರೀರವು ರೋಗಮುಕ್ತವಾಗಿ ದ್ವಾದಶಾದಿತ್ಯರಂತೆ ವಿರಾಜಿಸುವುದೂ, ಸಕಲ ಲಕ್ಷಣಗಳಿಂದ ಕೂಡಿರುವುದೂ ಆಗಿದ್ದುದನ್ನು ನೋಡಿದನು. ಅನಂತರ ವಿನಯದಿಂದ ಬಗ್ಗಿ ನಿಂತಿರುವ ತನ್ನ ಪತ್ನಿಯನ್ನು ಕುರಿತು ಇಂತೆಂದನು.

ಪಶ್ಯ ತ್ವಂ ಸುಭ್ರೂರ್ಮೇಗಾತ್ರಂ ಯಾದೃಗ್ರೂಪಂ ಪುನಃ ಸ್ಥಿತಂ ।
ಪ್ರಸಾದಾದ್ದೇವದೇವಸ್ಯ ಭಾಸ್ಕರಸ್ಯಾಂಶುಮಾಲಿನಃ ॥ ೬೮ ॥
ಸೋಽಹಮತ್ರ ಸ್ಥಿತೋ ನಿತ್ಯಂ ಪೂಜಯಿಷ್ಯಾಮಿ ಭಾಸ್ಕರಂ ।
ನ ಯಾಸ್ಯಾಮಿ ಪುನಃ ಸದ್ಮ ಸತ್ಯಮೇತನ್ಮಯೋದಿತಂ ॥ ೬೯ ॥
ಏವಮುಕ್ತ್ವಾ ಸ ವಿಪ್ರೇಂದ್ರಸ್ತಸ್ಮಿನ್‌ಕ್ಷೇತ್ರೇ ಸುಶೋಭನೇ ।
ಪ್ರಾಸಾದತ್ರಿತಯಂ ರಮ್ಯಂ ನಿರ್ಮಮೇ ಭಕ್ತಿಸಂಯುತಃ ॥ ೭೦ ॥
ಮುಂಡೀರಸ್ವಾಮಿನಶ್ಚೈಕಮನ್ಯತ್ಕಾಲಪ್ರಿಯಸ್ಯ ಚ ।
ಮೂಲಸ್ಥಾನಸ್ಯ ಚಾಽನ್ಯತ್ತು ಸತ್ಪತಾಕಾವಿಭೂಷಿತಂ ॥ ೭೧ ॥
ತ್ರಯಾಣಾಮಪಿ ತೇಷಾಂ ತು ಸಾರ್ಧ್ವರ್ಚಾಃ ಶಾಸ್ತ್ರಸೂಚಿತಾಃ ।
ಸ್ಥಾಪಯಾಮಾಸ ಸೂರ್ಯಾಣಾಂ ಹಸ್ತಾರ್ಕೇ ಸೂರ್ಯವಾಸರೇ॥ ೭೨ ॥
ತತಸ್ತಾಃ ಪುಷ್ಪಧೂಪಾದ್ಯೈಃ ಸಮಭ್ಯರ್ಚ್ಯ ಚಿರಂ ದ್ವಿಜಃ ।
ತ್ರಿಸಂಧ್ಯಂ ಕ್ರಮಶಃ ಪ್ರಾಪ್ತೋ ದೇಹಾಂತೇ ಭಾಸ್ಕರಾಲಯಂ ॥ ೭೩ ॥

ಸೂತ ಉವಾಚ:—

ಏವಂ ತೇ ತತ್ರ ಸಂಜಾತಾಸ್ತ್ರಯೋಽಪಿ ದ್ವಿಜಸತ್ತಮಾಃ ।
ಭಾಸ್ಕರಾ ಭಕ್ತಲೋಕಸ್ಯ ಸರ್ವವ್ಯಾಧಿವಿನಾಶಕಾಃ ॥ ೭೪ ॥

---

೬೮. ಎಲೆ ಸುಂದರಿ! ನೀನು ದೇವದೇವನಾದ ಸೂರ್ಯನ ಅನುಗ್ರಹದಿಂದ ನನ್ನ ಶರೀರವು ಮರಳಿ ಎಂತಹ ಸೌಂದರ್ಯವನ್ನು ಪಡೆದಿರುವುದೆಂಬುದನ್ನು ನೋಡು.

೬೯. ನಾನು ಇಲ್ಲಿಯೇ ವಾಸಿಸುತ್ತ ನಿತ್ಯವೂ ಸೂರ್ಯನನ್ನು ಪೂಜಿಸುವೆನು. ಮರಳಿ ಮನೆಗೆ ಹೋಗುವುದಿಲ್ಲ. ನಾನು ಹೇಳಿರುವುದು ನಿಜ.

೭೦–೭೧. ಆ ಬ್ರಾಹ್ಮಣೋತ್ತಮನು ಹೀಗೆ ಹೇಳಿ ಮಂಗಳಕರವಾದ ಆ ಕ್ಷೇತ್ರದಲ್ಲಿ ಭಕ್ತಿಯಿಂದ ಮುಂಡೀರಸ್ವಾಮಿ, ಕಾಲಪ್ರಿಯ, ಮೂಲಸ್ಥಾನ ಇವರಿಗೆ ಪತಾಕೆಗಳಿಂದ ಅಲಂಕಾರಗೊಂಡ ಮೂರು ದೇವಾಲಯಗಳನ್ನು ನಿರ್ಮಿಸಿದನು.

೭೨. ಹಸ್ತಾನಕ್ಷತ್ರದಿಂದ ಕೂಡಿದ ಭಾನುವಾರದ ದಿನ ಶಾಸ್ತ್ರದಲ್ಲಿ ಹೇಳಿರುವಂತೆ ಮೂರು ಮಂದಿ ಸೂರ್ಯರ ಪ್ರತಿಮೆಗಳನ್ನು ಸ್ಥಾಪಿಸಿದನು.

೭೩. ಬಳಿಕ ಆ ಬ್ರಾಹ್ಮಣನು ಆ ಪ್ರತಿಮೆಗಳನ್ನು ಬಹುಕಾಲದವರೆಗೆ ಕ್ರಮವಾಗಿ ಸಂಧ್ಯಾಕಾಲಗಳಲ್ಲಿ ಅರ್ಚಿಸಿ ಮರಣಾನಂತರ ಸೂರ್ಯಲೋಕವನ್ನು ಸೇರಿದನು.

೭೪. ಸೂತನು ಹೇಳುತ್ತಾನೆ:—ಎಲೈ ಭೂಸುರೋತ್ತಮರೆ! ಹೀಗೆ ಭಕ್ತರ ಸಕಲ ವ್ಯಾಧಿಗಳನ್ನು ನೀಗಿಸುವ ಮೂರು ಮಂದಿ ಭಾಸ್ಕರರು ಅಲ್ಲಿ ಉಂಟಾದರು.

ಯಸ್ತಾನ್ಪಶ್ಯತಿ ಕಾಲೇ ಸ್ವೇ ಯಥೋಕ್ತೇ ಸೂರ್ಯವಾಸರೇ ।
ಸ ವಾಂಛಿತಾಂಲ್ಲಭೇತ್ಕಾಮಾನ್ದುರ್ಲಭಾನಪಿ ಮಾನವೈಃ ॥ ೭೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮುಂಡೀರ ಕಾಲಪ್ರಿಯ ಮೂಲಸ್ಥಾನ ಪ್ರತಿಷ್ಠಾವರ್ಣನಂ"
ನಾಮ ಷಟ್‌ಸಪ್ತತಿತಮೋಽಧ್ಯಾಯಃ

---

೭೫. ಅವರನ್ನು ಭಾನುವಾರದ ದಿನ ಉಕ್ತಕಾಲದಲ್ಲಿ ದರ್ಶನಮಾಡುವ ಮಾನವನು ಮಾನವದುರ್ಲಭವಾದ ಇಷ್ಟಾರ್ಥಗಳನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮುಂಡೀರ ಕಾಲಪ್ರಿಯ ಮೂಲಸ್ಥಾನ ಪ್ರತಿಷ್ಠಾವರ್ಣನ"ವೆಂಬ
ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಸಪ್ತತಿತಮೋಽಧ್ಯಾಯಃ

### ಹರಾಶ್ರಯವೇದಿಕಾಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಯದೇತದ್ಭವತಾ ಪ್ರೋಕ್ತಂ ತತ್ರ ತೌ ಪರಮೇಶ್ವರೌ ।
ಉಮಾಮಹೇಶ್ವರೌ ಸೂತ ಹರಿಶ್ಚಂದ್ರೇಣ ಭೂಭುಜಾ ॥ ೧ ॥
ಕೃತೌ ಕಥಯಸೀತ್ಯೇವಂ ವೇದಿಮಧ್ಯಂ ಸಮಾಶ್ರಿತೌ ।
ಉತಾಽನ್ಯೌ ಸ್ಥಾಪಿತೌ ತತ್ರ ಚಮತ್ಕಾರಪುರಾಂತಿಕಂ ॥ ೨ ॥
ವೇದಿಮಧ್ಯಗತೌ ನಿತ್ಯಂ ಪಾರ್ವತೀಪರಮೇಶ್ವರೌ ।
ಏತತ್ಸಂಶ್ರೂಯತೇ ಸೂತ ವಿವಾಹಃ ಪ್ರಾಗಭೂತ್ತಯೋಃ ।
ಓಷಧಿಪ್ರಸ್ಥಮಾಸಾದ್ಯ ಪುರಂ ಹಿಮವತಃ ಪ್ರಿಯಂ ॥ ೩ ॥
ಅತ್ರ ನಃ ಸಂಶಯೋ ಜಾತಃ ಶ್ರದ್ಧೇಯಮಪಿ ತೇ ವಚಃ ।
ಶ್ರುತ್ವಾ ಕಿಂ ವಾ ಭ್ರಮಸ್ತೇಽಯಂ ಕಿಂವಾಽಸ್ಮಾಕಂ ಪ್ರಕೀರ್ತಯ ॥ ೪ ॥

ಸೂತ ಉವಾಚ :—

ನಾಽಸ್ಮಾಕಂ ವಿಭ್ರಮೋ ಜಾತೋ ಯುಷ್ಮಾಕಂ ತು ದ್ವಿಜೋತ್ತಮಾಃ ।
ಪರಂ ಯತ್ಕಾರಣಂ ಕೃತ್ಸ್ನಂ ತದ್ಬ್ರವೀಮಿ ನಿಬೋಧ್ಯತಾಂ ॥ ೫ ॥

---

### ಕನ್ನಡದ ಅನುವಾದ

### ಹರಾಶ್ರಯವೇದಿಕಾಮಾಹಾತ್ಮ್ಯವರ್ಣನ

೧–೩. ಋಷಿಗಳು ಹೇಳುತ್ತಾರೆ:—ಸೂತ! ನೀನು ಚಮತ್ಕಾರಪುರದ ಬಳಿಯಲ್ಲಿ ವೇದಿಯ ನಡುವೆ ಹರಿಶ್ಚಂದ್ರರಾಜನು ಉಮಾಮಹೇಶ್ವರರನ್ನು ಪ್ರತಿಷ್ಠೆ ಮಾಡಿರುವನೆಂದು ಹೇಳಿರುವೆಯಷ್ಟೆ. ಇವರು ಬೇರೆಯವರೊ? ಆ ಪಾರ್ವತೀ ಪರಮೇಶ್ವರರಿಗೆ ಹಿಂದೆ ಹಿಮಾಲಯನ ಪಟ್ಟಣವಾದ ಓಷಧಿಪ್ರಸ್ಥದಲ್ಲಿ ವಿವಾಹ ವಾಯಿತೆಂದು ನಾವು ಕೇಳಿದ್ದೇವೆ.

೪. ಸೂತ! ನಿನ್ನ ಮಾತು ನಂಬಲರ್ಹವಾಗಿದ್ದರೂ ಈ ವಿಷಯದಲ್ಲಿ ನಮಗೆ ಸಂದೇಹವುಂಟಾಗಿದೆ. ಇದನ್ನು ಹೇಳಿದ ನಿನಗೆ ಭ್ರಾಂತಿಯುಂಟಾಗಿ ದೆಯೊ? ಅಥವಾ ಕೇಳಿದ ನಮಗೆ ಭ್ರಾಂತಿಯೊ? ಇದನ್ನು ನಮಗೆ ತಿಳಿಸು.

೫. ಸೂತನು ಹೇಳುತ್ತಾನೆ:—ದ್ವಿಜರೆ! ನಿಮಗಾಗಲಿ, ನನಗಾಗಲಿ ಭ್ರಾಂತಿಯುಂಟಾಗಲಿಲ್ಲ. ಆದರೆ ಇದಕ್ಕೆ ಕಾರಣವೇನೆಂಬುದನ್ನು ಹೇಳುತ್ತೇನೆ. ಕೇಳಿರಿ.

ಯ ಏಷ ಓಷಧಿಪ್ರಸ್ಥೇ ವಿವಾಹಃ ಪ್ರಾಗಭೂತ್ತಯೋಃ ।
ಉಮಾತ್ರಿನೇತ್ರಯೋ ರಮ್ಯಃ ಸರ್ವದೇವಪ್ರಮೋದಕೃತ್ ॥ ೬ ॥
ವೈವಸ್ವತೇಂತರೇ ಪೂರ್ವಂ ಸಂಜಾತೋ ದ್ವಿಜಸತ್ತಮಾಃ ।
ಸಪ್ತಮಸ್ಯತು ವಿಖ್ಯಾತೋ ಯುಷ್ಮಾಕಂ ವಿದಿತೋಽತ್ರ ಯಃ ॥ ೭ ॥
ಹಾಟಕೇಶ್ವರಜೇ ಕ್ಷೇತ್ರೇ ಯಶ್ಚೋದ್ವಾಹಸ್ತಯೋರಭೂತ್ ।
ಸ್ವಾಯಂಭುವಮನೋರಾದ್ಯೇ ಸ ಸಂಜಾತಃ ಸುವಿಸ್ತರಃ ॥ ೮ ॥

ಋಷಯ ಊಚುಃ:—

ವಿವಾಹ ಓಷಧಿಪ್ರಸ್ಥೇ ಯಃ ಪುರಾ ಸಮಭೂತ್ತಯೋಃ ।
ಪಾರ್ವತೀಹರಯೋಃ ಸೂತ ಸೋಽಸ್ಮಾಭಿರ್ವಿಸ್ತರಾಚ್ಛ್ರುತಃ ॥ ೯ ॥
ಹಾಟಕೇಶ್ವರಜೇ ಕ್ಷೇತ್ರೇ ದಕ್ಷಯಜ್ಞೇ ಮನೋಹರೇ ।
ವಿವಾಹೋ ವೃಷಯಾನಸ್ಯ ಮನೌ ಸ್ವಾಯಂಭುವೇ ಪುರಾ ॥ ೧೦ ॥
ಸೋಽಸ್ಮಾಕಂ ಕೀರ್ತನೀಯಶ್ಚ ತ್ವಯಾ ಸೂತಕುಲೋದ್ವಹ ।
ವಿಸ್ತರೇಣ ಯಥಾ ವೃತ್ತ ಏತನ್ನಃ ಕೌತುಕಂ ಪರಂ ॥ ೧೧ ॥

ಸೂತ ಉವಾಚ:—

ಅತ್ರ ವಃ ಕೀರ್ತಯಿಷ್ಯಾಮಿ ಸರ್ವಪಾತಕನಾಶನಂ ।
ವಿವಾಹಸಮಯಂ ಸಮ್ಯಕ್ ದೇವದೇವಸ್ಯ ಶೂಲಿನಃ ॥ ೧೨ ॥
ಬ್ರಹ್ಮಣೋ ದಕ್ಷಿಣಾಂಗುಷ್ಠಾದ್ದಕ್ಷಃ ಪ್ರಾಚೇತಸೋಽಭವತ್ ।
ಶತಾನಿ ಪಂಚ ಕನ್ಯಾನಾಂ ತಸ್ಯ ಜಾತಾನಿ ಚ ದ್ವಿಜಾಃ ॥ ೧೩ ॥

---

೬—೮. ವೈವಸ್ವತ ಮನ್ವಂತರದಲ್ಲಿ ಪಾರ್ವತೀ ಪರಮೇಶ್ವರರಿಗೆ ಓಷಧಿಪ್ರಸ್ಥದಲ್ಲಿ ವಿವಾಹವಾಯಿತು. ಏಳನೆಯ ಸ್ವಾಯಂಭುವಮನ್ವಂತರದ ಆದಿಯಲ್ಲಿ ಆ ಪಾರ್ವತೀಪರಮೇಶ್ವರರಿಗೆ ಹಾಟಕೇಶ್ವರಜ ಕ್ಷೇತ್ರದಲ್ಲಿ ವಿವಾಹವಾಯಿತು. ನೀವು ಈ ವಿವಾಹವನ್ನು ಈಗ ತಿಳಿದಿರುವಿರಿ.

೯. ಋಷಿಗಳು ಹೇಳುತ್ತಾರೆ:— ಸೂತ! ಪಾರ್ವತೀಪರಮೇಶ್ವರರಿಗೆ ಓಷಧಿಪ್ರಸ್ಥದಲ್ಲಿ ಹಿಂದೆ ನಡೆದ ವಿವಾಹವನ್ನು ನಾವು ವಿಸ್ತಾರವಾಗಿ ಕೇಳಿದ್ದೇವೆ.

೧೦—೧೧. ಹಾಟಕೇಶ್ವರಜ ಕ್ಷೇತ್ರದಲ್ಲಿ ಸ್ವಾಯಂಭುವಮನ್ವಂತರದಲ್ಲಿ ಮನೋಹರವಾದ ದಕ್ಷಯಜ್ಞದಲ್ಲಿ ಆ ಪರಮೇಶ್ವರನಿಗೆ ನಡೆದ ವಿವಾಹವನ್ನು ಈಗ ನಮಗೆ ವಿಸ್ತಾರವಾಗಿ ಹೇಳು. ಕೇಳಲು ಅತ್ಯಂತ ಕುತೂಹಲವುಂಟಾಗಿದೆ.

೧೨. ಸೂತನು ಹೇಳುತ್ತಾನೆ:—ಇಲ್ಲಿ ನಿಮಗೆ ಸಕಲ ಪಾಪಗಳನ್ನೂ ನಾಶಗೊಳಿಸುವ ಮಹೇಶ್ವರನ ವಿವಾಹ ಸಮಯವನ್ನು ಹೇಳುವೆನು.

೧೩. ಬ್ರಹ್ಮನ ಬಲಗೈಯ ಹೆಬ್ಬೆರಳಿನಿಂದ ದಕ್ಷಪ್ರಜಾಪತಿಯು ಜನಿಸಿದನು. ಅವನಿಗೆ ಐನೂರು ಮಂದಿ ಕನ್ಯೆಯರು ಹುಟ್ಟಿದರು.

ತಾಸಾಂ ಜ್ಯೇಷ್ಠತಮಾ ಸಾಧ್ವೀ ಸತೀ ನಾಮ ಶುಚಿಸ್ಮಿತಾ ।
ಬಭೂವ ಕನ್ಯಕಾ ಸರ್ವೈರ್ಗುಣೈರ್ಯುಕ್ತಾಽಽಯತೇಕ್ಷಣಾ ॥ ೧೪ ॥
ನ ದೇವೀ ನ ಚ ಗಂಧರ್ವೀ ನಾಽಸುರೀ ನ ಚ ನಾಗಜಾ ।
ತಾದೃಗ್ರೂಪಾಽಭವಚ್ಚಾಽನ್ಯಾ ಯಾದೃಶೀ ಸಾ ಸುಮಧ್ಯಮಾ ॥ ೧೫ ॥
ಅಥ ತಾಂ ಪ್ರದದೌ ದಕ್ಷಃ ಪತ್ನ್ಯರ್ಥಂ ಶೂಲಪಾಣಯೇ ।
ಪ್ರಾರ್ಥಿತಾಂ ಬಹುಶೋ ಯತ್ನಾತ್ಸಸ್ಪೃಹಾಯ ಸ್ಪೃಹಾನ್ವಿತಾಂ ॥ ೧೬ ॥
ತತಃ ಪುಣ್ಯತಮಂ ಕ್ಷೇತ್ರಂ ಕನ್ಯಾದಾನಸ್ಯ ಸಕ್ಷಮಂ ।
ಸಂಧ್ಯಾಯ ಸಸುತಾಽಮಾತ್ಯಃ ಸಭೃತ್ಯಃ ಸಮುಪಸ್ಥಿತಃ ॥ ೧೭ ॥
ತತಶ್ಚೋದ್ವಾಹಯೋಗ್ಯಾನಿ ವಸ್ತೂನಿ ವಿವಿಧಾನ್ಯಪಿ ।
ಆನಯಾಮಾಸ ಭೂರೀಣಿ ಮಾಂಗಲ್ಯಾನಿ ವಿಶೇಷತಃ ॥ ೧೮ ॥
ಅಥ ಚೈತ್ರಸ್ಯ ಶುಕ್ಲಸ್ಯ ನಕ್ಷತ್ರೇ ಭಗದೈವತೇ ।
ತ್ರಯೋದಶ್ಯಾಂ ದಿನೇ ಭಾನೋಃ ಸಮಾಯಾತೋ ಮಹೇಶ್ವರಃ ॥ ೧೯ ॥
ಸರ್ವೈಃ ಸುರಗಣೈಃ ಸಾರ್ಧಂ ದೇವವಿಷ್ಣುಪುರಃಸರೈಃ ।
ಆದಿತ್ಯೈರ್ವಸುಭೀ ರುದ್ರೈರಶ್ವಿಭ್ಯಾಂ ಚ ತಥಾಽಪರೈಃ ॥ ೨೦ ॥
ಸಿದ್ಧೈಃ ಸಾಧ್ಯಗಣೈರ್ಭೂತೈಃ ಪ್ರೇತೈರ್ವಿನಾಯಕೈಸ್ತಥಾ ।
ಗಂಧರ್ವೈಶ್ಚಾರಣೌಘೈಶ್ಚ ಗುಹ್ಯಕೈರ್ಯಕ್ಷರಾಕ್ಷಸೈಃ ॥ ೨೧ ॥

---

೧೪. ಅವರಲ್ಲಿ ಹಿರಿಮಗಳಾದ ಸತಿಯು ಪತಿವ್ರತೆಯೂ, ಸಮಸ್ತ ಗುಣಾಢ್ಯಳೂ, ವಿಶಾಲಾಕ್ಷಿಯೂ ಆಗಿದ್ದಳು.

೧೫. ದೇವ, ಗಂಧರ್ವ, ಅಸುರ, ನಾಗರಲ್ಲಿ ಅವಳಂತಹ ಸುಂದರಿಯಾದ ಸ್ತ್ರೀಯು ಯಾವಳೂ ಇರಲಿಲ್ಲ.

೧೬. ಬಳಿಕ ದಕ್ಷನು ಆ ಕನ್ಯೆಯನ್ನು ಪ್ರಾರ್ಥಿಸಿದ ಶಂಕರನಿಗೆ ಅವಳನ್ನು ಕೊಡುವುದಾಗಿ ನಿಶ್ಚಯಿಸಿದನು.

೧೭. ಅವನು ಕನ್ಯಾ, ಅಮಾತ್ಯ, ಭೃತ್ಯರೊಡನೆ ಕನ್ಯಾದಾನಕ್ಕೆ ಉಚಿತವಾದ ಪುಣ್ಯಕ್ಷೇತ್ರವನ್ನು ಚಿಂತಿಸಿ ಅಲ್ಲಿಗೆ ಬಂದನು.

೧೮. ಬಳಿಕ ಆ ಮದುವೆಗಾಗಿ ಮಂಗಳಕರಗಳಾದ ನಾನಾವಿಧ ವಸ್ತುಗಳನ್ನು ಬಹುವಾಗಿ ತರಿಸಿದನು.

೧೯–೨೧. ಮಹೇಶ್ವರನು ಚೈತ್ರ ಶುಕ್ಲ ತ್ರಯೋದಶೀ ಭಾನುವಾರದದಿನ ದೇವತಾ ನಕ್ಷತ್ರದಲ್ಲಿ ವಿಷ್ಣುವೇ ಮೊದಲಾದ ಸಕಲ ದೇವತೆಗಳು, ಆದಿತ್ಯರು, ವಸುಗಳು, ರುದ್ರರು, ಅಶ್ವಿನೀ ದೇವತೆಗಳು, ಸಿದ್ಧರು, ಸಾಧ್ಯರು, ಭೂತಪ್ರೇತಗಳು, ವಿನಾಯಕರು, ಗಂಧರ್ವರು, ಚಾರಣರು, ಗುಹ್ಯಕರು, ಯಕ್ಷರಾಕ್ಷಸರು ಇವರೊಡನೆ ಅಲ್ಲಿಗೆ ಬಂದನು.

ಏತಸ್ಮಿನ್ನಂತರೇ ದಕ್ಷಃ ಸಂಪ್ರಹೃಷ್ಟತನೂರುಹಃ ।
ಪ್ರಯಯೌ ಸಂಮುಖಸ್ತಸ್ಯ ಯುಕ್ತಃ ಸರ್ವೈಃ ಸುಹೃದ್ಗಣೈಃ ॥ ೨೨ ॥
ವಾದ್ಯಮಾನೈರ್ಮಹಾವಾದ್ಯೈಃ ಸೂತಮಾಗಧಬಂದಿಭಿಃ ।
ಪಠದ್ಭಿಃ ಸರ್ವತೋಽನೇಕೈರ್ಗಾಯದ್ಭಿರ್ಗಾಯನೈಸ್ತಥಾ ॥ ೨೩ ॥
ತತಃ ಸರ್ವೇ ಸುರಾಸ್ತತ್ರ ಸ್ವಯಂ ದಕ್ಷೇಣ ಪೂಜಿತಾಃ ।
ಯಥಾ ಶ್ರೇಷ್ಠಂ ಯಥಾ ಜ್ಯೇಷ್ಠಮುಪವಿಷ್ಟಾ ಯಥಾಕ್ರಮಂ ।
ಪರಿವಾರ್ಯಾಽಖಿಲಾಂ ವೇದಿಂ ಮಂಡಪಾಂತರವರ್ತಿನೀಂ ॥ ೨೪ ॥
ತತಃ ಪಿತಾಮಹಂ ಪ್ರಾಹ ದಕ್ಷಃ ಪ್ರೀತಿಪುರಸ್ಸರಂ ।
ಪ್ರಣಿಪತ್ಯ ತ್ವಯಾ ಕರ್ಮ ಕಾರ್ಯಂ ವೈವಾಹಿಕಂ ವಿಭೋಃ ॥ ೨೫ ॥
ಸ್ವಯಮೇವ ಸುತಾಽಸ್ಮಾಕಂ ಯೇನ ಸ್ಯಾತ್ಸುಭಗಾ ಸತೀ ।
ಪುತ್ರಪೌತ್ರವತೀ ನಿತ್ಯಂ ಸುಶೀಲಾ ಪತಿವಲ್ಲಭಾ ॥ ೨೬ ॥
ಬಾಢಮಿತ್ಯೇವ ಸೋಽಪ್ಯುಕ್ತ್ವಾ ಪ್ರಹೃಷ್ಟೇನಾಂತರಾತ್ಮನಾ ।
ಸಮುತ್ಥಾಯ ತತಶ್ಚಕ್ರೇ ಕೃತ್ಯಮರ್ಹಣಪೂರ್ವಕಂ ॥ ೨೭ ॥
ಸಂಪ್ರದಾನಕ್ರಿಯಾಂ ಕೃತ್ವಾ ತತ್ರೈವ ವಿಧಿಪೂರ್ವಕಂ ।
ತತೋ ಹಸ್ತಗ್ರಹಂ ತಾಭ್ಯಾಂ ಮಿಥಶ್ಚಕ್ರೇ ಯಥಾಕ್ರಮಂ ।
ಮಾತೄಣಾಂ ಪುರತೋ ವೇಧಾಃ ಸತೀಶಾಭ್ಯಾಂ ಯಥೋಚಿತಂ ॥ ೨೮ ॥

---

೨೨–೨೩. ಇಷ್ಟರಲ್ಲಿ ದಕ್ಷನು ಹರ್ಷದಿಂದ ರೋಮಾಂಚಗೊಂಡು ಮಿತ್ರರು, ಘೋರ್ಗರೆಯುವ ವಾದ್ಯಗಳು, ಸ್ತುತಿಸುವ ಸೂತ, ಮಾಗಧ, ವಂದಿಗಳು, ಹಾಡುತ್ತಿರುವ ಗಾಯಕರು ಇವರೊಡನೆ ಮಹೇಶ್ವರನನ್ನು ಎದುರುಗೊಂಡನು.

೨೪. ತರುವಾಯ ದಕ್ಷನು ಜ್ಯೇಷ್ಠಶ್ರೇಷ್ಠರನ್ನನುಸರಿಸಿ ಪೂಜಿಸಲು ಸಮಸ್ತ ಸುರರು ಮಂಡಪದ ನಡುವೆ ಇರುವ ವೇದಿಯ ಸುತ್ತಲೂ ಕ್ರಮವಾಗಿ ಕುಳಿತು ಕೊಂಡರು.

೨೫. ಅನಂತರ ದಕ್ಷನು ಪಿತಾಮಹನನ್ನು ವಂದಿಸಿ ಹೀಗೆಂದನು. ನೀನು ವಿವಾಹಕಾರ್ಯವನ್ನು ನೆರವೇರಿಸು.

೨೬. ಅದರಿಂದ ನಮ್ಮ ಮಗಳು ಸೌಭಾಗ್ಯವತಿಯೂ, ಪುತ್ರಪೌತ್ರರುಳ್ಳವಳೂ, ಸುಶೀಲಳೂ, ಪತಿವಲ್ಲಭಳೂ ಆಗುವಳು.

೨೭. ಆ ಬ್ರಹ್ಮನು ಸಂತೋಷಗೊಂಡ ಮನಸ್ಸಿನಿಂದ ಆಗಲೆಂದು ಒಪ್ಪಿ ಎದ್ದು ವರಪೂಜೆ ಮೊದಲಾದ ಕಾರ್ಯವನ್ನು ಮಾಡಿದನು.

೨೮. ಅವನು ವಿಧಿಯಂತೆ ಕನ್ಯಾದಾನವನ್ನು ಮಾಡಿಸಿ ಮಾತೆಯರ ಮುಂದೆ ಮಹೇಶ್ವರ ಸತಿಯರಿಗೆ ಪರಸ್ಪರ ಪಾಣಿಗ್ರಹಣವನ್ನು ಮಾಡಿಸಿದನು.

ಅಥ ವೇದಿಂ ಸಮಾಸಾದ್ಯ ಗೃಹ್ಯೋಕ್ತವಿಧಿನಾಽಖಿಲಂ ।
ಅಗ್ನಿಕಾರ್ಯಂ ಯಥೋದ್ದಿಷ್ಟಂ ಚಕಾರಾಽಥ ಸುವಿಸ್ತರಂ ॥ ೨೯ ॥
ಯಥಾ ಯಥಾ ಸ ರಮ್ಯಾಣಿ ವೀಕ್ಷತೇಽಂಗಾನಿ ಕೌತುಕಾತ್ ।
ಸತ್ಯಾಃ ಪಿತಾಮಹೋ ಹೃಷ್ಟಃ ಕಾಮಾರ್ತೋಽಭೂತ್ತಥಾ ತಥಾ ॥ ೩೦ ॥
ತೇನೈಕಂ ವದನಂ ಮುಕ್ತ್ವಾ ತಸ್ಯಾ ವಸ್ತ್ರಾವಗುಂಠಿತಂ ।
ವೀಕ್ಷಿತಾಽತಿಸ್ಮರಾರ್ತೇನ ಯಥಾ ಕಶ್ಚಿನ್ನ ಬುಧ್ಯತೇ ॥ ೩೧ ॥
ಸ ಶಂಭೋರ್ಲಜ್ಜಯಾ ವಕ್ತ್ರಂ ಪ್ರತ್ಯಕ್ಷಂ ನವ್ಯಲೋಕಯತ್ ।
ನ ಚ ಸಾ ಲಜ್ಜಯಾವಿಷ್ಟಾ ಕರೋತಿ ಪ್ರಕಟಂ ಮುಖಂ ॥ ೩೨ ॥
ತತಸ್ತದ್ದರ್ಶನಾರ್ಥಾಯ ಸ ಉಪಾಯಂ ವ್ಯಲೋಕಯತ್ ।
ಧೂಮದ್ವಾರೇಣ ಕಾಮಾರ್ತಶ್ಚಕಾರ ಚ ತತಃ ಪರಂ ॥ ೩೩ ॥
ಆರ್ದ್ರೇಂಧನಾನಿ ಭೂರೀಣಿ ಕ್ಷಿಪ್ತ್ವಾ ಕ್ಷಿಪ್ತ್ವಾ ವಿಭಾವಸೌ ।
ಸ್ವಲ್ಪಾಜ್ಯಾಹುತಿ ವಿನ್ಯಾಸಾದಾರ್ದ್ರದ್ರವ್ಯೋದ್ಭವಸ್ತಥಾ ॥ ೩೪ ॥
ಏತಸ್ಮಿನ್ನಂತರೇ ಧೂಮಃ ಪ್ರಾದುರ್ಭೂತಃ ಸಮಂತತಃ ।
ತಾದೃಗ್ಯೇನ ತಮೋಭೂತಂ ವೇದಿಮೂಲಂ ವಿನಿರ್ಮಿತಂ ॥ ೩೫ ॥
ತತೋ ಧೂಮಾಕುಲೇ ನೇತ್ರೇ ಭಗವಾಂಸ್ತ್ರಿಪುರಾಂತಕಃ ।
ಹಸ್ತಾಭ್ಯಾಂ ಛಾದಯಾಮಾಸ ಯೇಽನ್ಯೇ ತತ್ರ ವ್ಯವಸ್ಥಿತಾಃ ॥ ೩೬ ॥

---

೨೯. ತರುವಾಯ ವೇದಿಯನ್ನು ಹೊಂದಿ ಗೃಹ್ಯೋಕ್ತವಿಧಿಯಿಂದ ವಿಸ್ತಾರವಾಗಿ ಅಗ್ನಿಕಾರ್ಯವನ್ನು ಮಾಡಿಸಿದನು.

೩೦. ಪಿತಾಮಹನು ಸತಿಯ ಸುಂದರವಾದ ಅಂಗಗಳನ್ನು ನೋಡಿದ ಹಾಗೆಲ್ಲ ಸಂತೋಷಗೊಂಡು ಕಾಮಪೀಡಿತನಾದನು.

೩೧. ಕಾಮಪೀಡಿತನಾದ ಅವನು ಯಾರೂ ಅರಿಯದಂತೆ ವಸ್ತ್ರದಿಂದ ಮುಚ್ಚಿದ ಆ ಸತಿಯ ಮುಖವನ್ನು ಬಿಟ್ಟು ಎಲ್ಲ ಅಂಗಗಳನ್ನೂ ಕಂಡನು.

೩೨. ಆ ಬ್ರಹ್ಮನು ನಾಚಿಕೆಯಿಂದ ಶಂಕರನ ಮುಖವನ್ನು ಪ್ರತ್ಯಕ್ಷವಾಗಿ ನೋಡಲಿಲ್ಲ. ಅವಳೂ ನಾಚಿಕೆಯಿಂದ ಮುಖವನ್ನು ತೋರಿಸಲಿಲ್ಲ.

೩೩. ಬಳಿಕ ಬ್ರಹ್ಮನು ಅವಳ ಮುಖವನ್ನು ನೋಡುವುದಕ್ಕೆ ಹೊಗೆಯ ಮೂಲಕ ಒಂದುಪಾಯವನ್ನು ನೋಡಿದನು.

೩೪–೩೫. ಅಗ್ನಿಗೆ ಹಸಿ ಕಟ್ಟಿಗೆಗಳನ್ನು ಹಾಕಿ ಸ್ವಲ್ಪ ಆಜ್ಯಾಹುತಿಗಳನ್ನೀಯಲು ಅದರಿಂದ ಹೊಗೆಯುಂಟಾಗಿ ವೇದಿಯ ಬುಡವೆಲ್ಲ ಕತ್ತಲೆಯಾಯಿತು.

೩೬. ಬಳಿಕ ಶಂಕರನೂ ಅಲ್ಲಿರುವ ಇತರರೂ ಹೊಗೆಯಿಂದ ವ್ಯಾಕುಲಗೊಂಡು ಕಣ್ಣನ್ನು ಕೈಯಿಗಳಿಂದ ಮುಚ್ಚಿಕೊಂಡರು.

ತತೋ ವಸ್ತ್ರಂ ಸಮುತ್ಕ್ಷಿಪ್ಯ ಸತೀವಕ್ತ್ರಂ ಪಿತಾಮಹಃ ।
ವೀಕ್ಷಯಾಮಾಸ ಕಾಮಾರ್ತಃ ಪ್ರಹೃಷ್ಟೇನಾಂತರಾತ್ಮನಾ ॥ ೩೭ ॥
ತಸ್ಯ ರೇತಃ ಪ್ರಚಸ್ಕಂದ ತತಸ್ತದ್ವೀಕ್ಷಣಾದ್ದ್ರುತಂ ।
ಪತಿತಂ ಚ ಧರಾಪೃಷ್ಠೇ ತುಷಾರಚಯಸನ್ನಿಭಂ ॥ ೩೮ ॥
ತತಶ್ಚ ಸಿಕತೌಘೇನ ತತ್ಕ್ಷಣಾತ್ಪದ್ಮಸಂಭವಃ ।
ಛಾದಯಾಮಾಸ ತದ್ರೇತೋ ಯಥಾ ಕಶ್ಚಿನ್ನ ಬುಧ್ಯತೇ ॥ ೩೯ ॥
ಅಥ ತದ್ಭಗವಾಂಛಂಭುರ್ಜ್ಞಾತ್ವಾ ದಿವ್ಯೇನ ಚಕ್ಷುಷಾ ।
ರೇತೋಽವಸ್ಕಂದನಾತ್ತಸ್ಯ ಕೋಪಾದೇತದುವಾಚ ಹ ॥ ೪೦ ॥
ಕಿಮೇತದ್ವಿಹಿತಂ ಪಾಪ ತ್ವಯಾ ಕರ್ಮ ವಿಗರ್ಹಿತಂ ।
ನೈವಾರ್ಹಾ ಮಮ ಕಾಂತಾಯಾ ವಕ್ತ್ರವೀಕ್ಷಾಽನುರಾಗತಃ ॥ ೪೧ ॥
ತ್ವಂ ವೇತ್ಸಿ ಶಂಕರೇಣೈತತ್ಕರ್ಮಜಾಲಂ ನ ವಿಂದಿತಂ ।
ತ್ರೈಲೋಕ್ಯೇಽಪಿ ಮಯಾಽಪ್ಯಸ್ತಿ ಗೂಢಂ ತತ್ಸ್ಯಾತ್ಕಥಂ ವಿಧೇ ॥ ೪೨ ॥
ಯತ್ಕಿಂಚಿತ್ರಿಷು ಲೋಕೇಷು ಜಂಗಮಂ ಸ್ಥಾವರಂ ತಥಾ ।
ತಸ್ಯಾಽಹಂ ಮಧ್ಯಗೋ ಮೂಢ ತೈಲಂ ತದ್ವತ್ತಿಲಾಂತಗಂ ॥ ೪೩ ॥

---

೩೭. ಅನಂತರ ಪಿತಾಮಹನು ಕಾಮಪೀಡಿತನಾಗಿ ಸಂತೋಷಗೊಂಡ ಮನಸ್ಸಿನಿಂದ ವಸ್ತ್ರವನ್ನು ಮೇಲಕ್ಕೆತ್ತಿ ಸತಿಯ ಮುಖವನ್ನು ನೋಡಿದನು.

೩೮. ಅದರಿಂದ ಕೂಡಲೆ ಅವನ ಹಿಮದಂತಿರುವ ರೇತಸ್ಸು ಸ್ಖಲಿತವಾಗಿ ನೆಲದಮೇಲೆ ಬೇಗನೆ ಬಿದ್ದಿತು.

೩೯. ತರುವಾಯ ಬ್ರಹ್ಮನು ಆ ರೇತಸ್ಸನ್ನು ಯಾರೂ ನೋಡದಂತೆ ಮರಳಿನ ಸಮೂಹದಿಂದ ಮುಚ್ಚಿದನು.

೪೦. ಪೂಜ್ಯನಾದ ಶಂಕರನು ದಿವ್ಯಚಕ್ಷುಸ್ಸಿನಿಂದ ಅದನ್ನರಿತು ರೇತಸ್ಸಿನ ಸ್ಖಾಲಿತ್ಯದಿಂದ ಕುಪಿತನಾಗಿ ಹೀಗೆಂದನು.

೪೧. ಪಾಪಿಯೆ! ನೀನು ಇಂತಹ ನಿಂದ್ಯವಾದ ಕರ್ಮವನ್ನು ಏಕೆ ಮಾಡಿದೆ? ನೀನು ನನ್ನ ಪತ್ನಿಯ ಮುಖವನ್ನು ನೋಡಿ ಅನುರಾಗಗೊಳ್ಳ ಬರ್ಹನಲ್ಲ.

೪೨. ನೀನು ಶಂಕರನು ಈ ಕಾರ್ಯವನ್ನು ತಿಳಿಯಲಿಲ್ಲವೆಂದು ಅರಿತಿರುವೆ. ಮೂರು ಲೋಕಗಳಲ್ಲಿ ನನಗೆ ತಿಳಿಯದೆ ರಹಸ್ಯವಾಗಿ ಯಾವ ಕಾರ್ಯವಿದ್ದೀತು.

೪೩. ಮೂಢನೆ! ಮೂರು ಲೋಕಗಳಲ್ಲಿರುವ ಸ್ಥಾವರ ಜಂಗಮ ವಸ್ತುಗಳಲ್ಲಿ ನಾನು ಎಳ್ಳಿನಲ್ಲಿ ಎಣ್ಣೆಯಿರುವಂತೆ ಇರುವೆನು.

ತಸ್ಮಾತ್ಸ್ಪೃಶ ನಿಜಂ ಶೀರ್ಷಂ ಬ್ರಹ್ಮನ್ನೇತದಸಂಶಯಂ ।
ಯಾವದೇವಂ ಗತೇ ಬ್ರಹ್ಮಾ ಶಿರಃ ಸ್ಪೃಶತಿ ಪಾಣಿನಾ ।
ತಾವತ್ತತ್ರ ಸ್ಥಿತಃ ಸಾಕ್ಷಾತ್ತದ್ರೂಪೋ ವೃಷವಾಹನಃ ॥ ೪೪ ॥
ತತೋ ಲಜ್ಜಾಪರೀತಾಂಗಃ ಸ್ಥಿತಶ್ಚಾಽಧೋಮುಖೋ ದ್ವಿಜಾಃ ।
ಇಂದ್ರಾದ್ಯೈರಮರೈಃ ಸರ್ವೈಃ ಸಹಿತಃ ಸರ್ವತಃ ಸ್ಥಿತೈಃ ॥ ೪೫ ॥
ಅಥಾಽಸೌ ಲಜ್ಜಯಾವಿಷ್ಟಃ ಪ್ರಣಿಪತ್ಯ ಮಹೇಶ್ವರಂ ।
ಪ್ರೋವಾಚ ಚ ಸ್ತುತಿಂ ಕೃತ್ವಾ ಕ್ಷಮ್ಯತಾಂ ಕ್ಷಮ್ಯತಾಮಿತಿ ॥ ೪೬ ॥
ಅಸ್ಯ ಪಾಪಸ್ಯ ಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ವದ ಪ್ರಭೋ ।
ನಿಗ್ರಹಂ ಚ ಯಥಾನ್ಯಾಯಂ ಯೇನ ಪಾಪಂ ಪ್ರಯಾತಿ ಮೇ ॥ ೪೭ ॥

ಶ್ರೀ ಭಗವಾನುವಾಚ :—

ಅನೇನೈವ ತು ರೂಪೇಣ ಮಸ್ತಕಸ್ಥೇನ ವೈ ತತಃ ।
ತಪಃ ಕುರು ಸಮಾಧಿಸ್ಥೋ ಮಮಾರಾಧನತತ್ಪರಃ ॥ ೪೮ ॥
ಖ್ಯಾತಿಂ ಯಾಸ್ಯತಿ ಸರ್ವತ್ರ ನಾಮ್ನಾ ರುದ್ರಶಿರಃ ಕ್ಷಿತೌ ।
ಸಾಧಕಃ ಸರ್ವಕೃತ್ಯಾನಾಂ ತೇಜೋಭಾಜಾಂ ದ್ವಿಜನ್ಮನಾಂ ॥ ೪೯ ॥
ಮಾನುಷಾಣಾಮಿದಂ ಕೃತ್ಯಂ ಯಸ್ಮಾಚ್ಚೀರ್ಣಂ ತ್ವಯಾಽಧುನಾ ।
ತಸ್ಮಾತ್ತ್ವಂ ಮಾನುಷೋ ಭೂತ್ವಾ ವಿಚರಿಷ್ಯಸಿ ಭೂತಲೇ ॥ ೫೦ ॥

---

೪೪. ಆದ್ದರಿಂದೆಲೈ ಬ್ರಹ್ಮನೆ! ನೀನು ನಿನ್ನ ತಲೆಯನ್ನು ಮುಟ್ಟು. ಹಾಗೆ ಬ್ರಹ್ಮನು ಕೈಯಿಂದ ತನ್ನ ತಲೆಯನ್ನು ಮುಟ್ಟುವಷ್ಟರಲ್ಲಿ ಶಿವನು ಆ ರೂಪದಲ್ಲಿಯೇ ಅಲ್ಲಿ ನಿಂತನು.

೪೫. ದ್ವಿಜರೆ! ಆದ್ದರಿಂದ ಬ್ರಹ್ಮನು ಲಜ್ಜಿತನಾಗಿ ಇಂದ್ರಾದಿ ದೇವತೆಗಳೊಡನೆ ತಲೆತಗ್ಗಿಸಿಕೊಂಡು ನಿಂತನು.

೪೬. ಹೀಗೆ ಲಜ್ಜಿತನಾದ ಬ್ರಹ್ಮನು ಶಿವನನ್ನು ವಂದಿಸಿ ಸ್ತುತಿಸಿ ಕ್ಷಮಿಸು-ಕ್ಷಮಿಸು ಎಂದನು.

೪೭. ಸ್ವಾಮಿ! ಈ ಪಾಪದ ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನೂ, ನ್ಯಾಯವಾದ ನಿಗ್ರಹವನ್ನೂ ಹೇಳು. ಅದರಿಂದ ನನ್ನ ಪಾಪವು ನೀಗುವುದು.

೪೮. ಶ್ರೀ ಭಗವಂತನು ಹೇಳುತ್ತಾನೆ:—ಎಲೈ ಬ್ರಹ್ಮನೆ! ನೀನು ತಲೆಯಲ್ಲಿರುವ ನನ್ನ ರೂಪದಿಂದ ಸಹಿತನಾಗಿ ನನ್ನನ್ನು ಆರಾಧಿಸುತ್ತ ತಪಸ್ಸನ್ನು ಮಾಡು.

೪೯. ಇದು ಭೂಮಿಯಲ್ಲಿ ತೇಜಸ್ವಿಗಳಾದ ಬ್ರಾಹ್ಮಣರ ಸಕಲ ಕಾರ್ಯಗಳನ್ನೂ ಸಾಧಿಸುವ ರುದ್ರಶಿರಸ್ಸೆಂಬ ಹೆಸರಿನಿಂದ ವಿಖ್ಯಾತವಾಗುವುದು.

೫೦. ನೀನು ಈಗ ಮನುಷ್ಯರಕಾರ್ಯವನ್ನು ಮಾಡಿದ್ದರಿಂದ ಮನುಷ್ಯನಾಗಿ ಜಗತ್ತಿನಲ್ಲಿ ಸಂಚರಿಸುವೆ.

ಯಸ್ತ್ವಾಂ ಚಾಽನೇನ ರೂಪೇಣ ದೃಷ್ಟ್ವಾ ಪೃಚ್ಛಾಂ ಕರಿಷ್ಯತಿ ।
ಕಿಮೇತದ್ಬ್ರಹ್ಮಣೋ ಮೂರ್ಧ್ನಿ ಭಗವಾಂಸ್ತ್ರಿಪುರಾಂತಕಃ ॥ ೫೧ ॥
ತತಸ್ತೇ ಚೇಷ್ಟಿತಂ ಸರ್ವಂ ಕೌತುಕಾಚ್ಚ ಶೃಣೋತಿ ಯಃ ।
ಪರದಾರಕೃತಾತ್ಪಾಪಾತ್ತತೋ ಮುಕ್ತಿಂ ಪ್ರಯಾಸ್ಯತಿ ॥ ೫೨ ॥
ಯಥಾ ಯಥಾ ಜನಸ್ತ್ವೇತತ್ಕೃತ್ಯಂ ತೇ ಕೀರ್ತಯಿಷ್ಯತಿ ।
ತಥಾ ತಥಾ ವಿಶುದ್ಧಿಸ್ತೇ ಪಾಪಸ್ಯಾಽಸ್ಯ ಭವಿಷ್ಯತಿ ॥ ೫೩ ॥
ಏತದೇವಹಿ ತೇ ಬ್ರಹ್ಮನ್ಪ್ರಾಯಶ್ಚಿತ್ತಂ ಪ್ರಕೀರ್ತಿತಂ ।
ಜನಹಾಸ್ಯಕರಂ ಲೋಕೇ ತವಗರ್ಹಾಕರಂ ಪರಂ ॥ ೫೪ ॥
ಏತಚ್ಚ ತವ ವೀರ್ಯಂ ತು ಪತಿತಂ ವೇದಿಮಧ್ಯಗಂ ।
ಕಾಮಾರ್ತಸ್ಯ ಮಯಾ ದೃಷ್ಟಂ ನೈತದ್ವ್ಯರ್ಥಂ ಭವಿಷ್ಯತಿ ॥ ೫೫ ॥
ಯಾವನ್ಮಾತ್ರೈಃ ಪರಿಸ್ಪೃಷ್ಟಮೇತತ್ಸೈಕತರೇಣುಭಿಃ ।
ತಾವನ್ಮಾತ್ರಾ ಭವಿಷ್ಯಂತಿ ಮುನಯಃ ಸಂಶಿತವ್ರತಾಃ ॥ ೫೬ ॥
ವಾಲಖಿಲ್ಯಾ ಇತಿಖ್ಯಾತಾಃ ಸರ್ವೇಽಂಗುಷ್ಠಪ್ರಮಾಣಕಾಃ ।
ತಪೋವೀರ್ಯ ಸಮೋಪೇತಾಃ ಶಾಪಾನುಗ್ರಹಕಾರಕಾಃ ॥ ೫೭ ॥

---

೫೧–೫೨. ಈ ರೂಪದಿಂದಿರುವ ನಿನ್ನನ್ನು ನೋಡಿ ಬ್ರಹ್ಮನ ತಲೆಯಮೇಲೆ ಶಿವನು ಇರುವನೇಕೆಂದು ಕೇಳುವವನೂ, ನಿನ್ನ ಕೆಲಸವನ್ನೆಲ್ಲ ಕುತೂಹಲ ದಿಂದ ಕೇಳುವವನೂ ಪರರ ಪತ್ನಿಯನ್ನು ಗಮನಮಾಡಿದ ಪಾಪದಿಂದ ಮುಕ್ತ ನಾಗುವನು.

೫೩. ಜನರು ನಿನ್ನ ಕಾರ್ಯವನ್ನು ಹೇಳಿದ ಹಾಗೆಲ್ಲ ನಿನ್ನ ಪಾಪವು ಪರಿ ಹಾರವಾಗುವುದು.

೫೪. ಜನರಿಗೆ ಹಾಸ್ಯವನ್ನುಂಟುಮಾಡುವುದೂ, ನಿನಗೆ ನಿಂದೆಯನ್ನೆಸಗು ವುದೂ ಆದ ಇದೇ ಪ್ರಾಯಶ್ಚಿತ್ತವೆನಿಸಿಕೊಳ್ಳುವುದು.

೫೫. ಕಾಮಪೀಡಿತನಾಥ ನಿನ್ನ ವೀರ್ಯವು ವೇದಿಮಧ್ಯದಲ್ಲಿ ಬಿದ್ದಿತಷ್ಟೆ. ಅದನ್ನು ನಾನೂ ನೋಡಿದೆನಷ್ಟೆ. ಅದು ವ್ಯರ್ಥವಾಗುವುದಿಲ್ಲ.

೫೬. ಎಷ್ಟು ಮರಳಿನ ಧೂಳು ನಿನ್ನ ರೇತಸನ್ನು ಮುಟ್ಟಿರುವುವೊ; ಅಷ್ಟು ಮಂದಿ ಶ್ಲಾಘ್ಯವ್ರತರಾದ ಮುನಿಗಳು ಜನಿಸುವರು.

೫೭. ಅಂಗುಷ್ಠಪ್ರಮಾಣವುಳ್ಳವರೂ, ತಪಸ್ಸಿನ ಸಾಮರ್ಥ್ಯದಿಂದ ಕೂಡಿ ದವರೂ ಶಾಪಾನುಗ್ರಹಗಳನ್ನು ಮಾಡುವವರೂ ಆದ ಅವರು ವಾಲಖಿಲ್ಯರೆಂದು ವಿಖ್ಯಾತರಾಗುವರು.

ಏತಸ್ಮಿನ್ನಂತರೇ ತಸ್ಮಾದ್ವೇದಿಮಧ್ಯಾಚ್ಚ ತತ್ಕ್ಷಣಾತ್ ।
ಅಷ್ಟಾಽಶೀತಿಸಹಸ್ರಾಣಿ ಮುನೀನಾಂ ಭಾವಿತಾತ್ಮನಾಂ ।
ಅಂಗುಷ್ಠಕಪ್ರಮಾಣಾನಿ ನಿಷ್ಕ್ರಾಂತಾನಿ ದ್ವಿಜೋತ್ತಮಾಃ ॥ ೫೮ ॥
ತತಸ್ತೇ ಪ್ರಣಿಪತ್ಯೋಚ್ಚೈಃ ಪ್ರೋಚುರ್ದೇವಂ ಪಿತಾಮಹಂ ।
ಸ್ಥಾನಂ ದರ್ಶಯ ನಸ್ತಾತ ತಪೋಽರ್ಥಂ ಕಲಿವರ್ಜಿತಂ ॥ ೫೯ ॥

ಪಿತಾಮಹ ಉವಾಚ :—

ಅಸ್ಮಿನ್‌ಕ್ಷೇತ್ರೇ ಮಯಾ ಸಾರ್ಧಂ ಕುರುಧ್ವಂ ಪುತ್ರಕಾಸ್ತಪಃ ।
ಗಮಿಷ್ಯಥ ಪರಾಂ ಸಿದ್ಧಿಂ ಯೂಯಂ ಲೋಕೇ ಸುದುರ್ಲಭಾಂ ॥ ೬೦ ॥
ತೇ ತಥೇತಿ ಪ್ರತಿಜ್ಞಾಯ ಕೃತ್ವಾ ತತ್ರಾಶ್ರಮಂ ಶುಭಂ ।
ವಾಲಖಿಲ್ಯಾಸ್ತಪಶ್ಚಕ್ರುಃ ಸಂಸಿದ್ಧಿಂ ಚ ಪರಾಂ ಗತಾಃ ॥ ೬೧ ॥
ಅಥ ಬ್ರಹ್ಮಾಽಪಿ ತತ್ಕಾರ್ಯಂ ಸರ್ವಂ ವೈವಾಹಿಕಂ ಕ್ರಮಾತ್ ।
ಸಮಾಪ್ತಿಮನಯತ್ಪ್ರೋಕ್ತಂ ಯಚ್ಛ್ರುತೌ ತೇನ ಚ ಸ್ವಯಂ ॥ ೬೨ ॥
ಪತತ್ಸು ಪುಷ್ಪವರ್ಷೇಷು ಸಮಂತಾದ್ಗಗನಾಂಗಣಾತ್ ।
ವಾದ್ಯಮಾನೇಷು ವಾದ್ಯೇಷು ಗೀಯಮಾನೈಶ್ಚ ಗೀತಕೈಃ ॥ ೬೩ ॥
ಪಠತ್ಸು ವಿಪ್ರಮುಖ್ಯೇಷು ನೃತ್ಯಮಾನಾಸು ರಾಗತಃ ।
ರಂಭಾದಿಷು ಪುರಂಧ್ರೀಷು ದೇವಾನಾಂ ದೃಙ್ಮನೋಹರಂ ॥ ೬೪ ॥

---

೫೮. ದ್ವಿಜವರ್ಯರೆ! ಇಷ್ಟರಲ್ಲಿ ಆ ವೇದಿಮಧ್ಯದಿಂದ ಅಂಗುಷ್ಠಪ್ರಮಾಣವುಳ್ಳ ಎಂಬತ್ತೆಂಟುಸಾವಿರ ಮಂದಿ ಜ್ಞಾನಿಗಳಾದ ಮುನಿಗಳು ಹೊರಟರು.

೫೯. ಬಳಿಕ ಅವರು ಬ್ರಹ್ಮನನ್ನು ವಂದಿಸಿ "ತಾತ! ನಮಗೆ ತಪಸ್ಸನ್ನು ಮಾಡಲು ಸ್ಥಳವನ್ನು ತೋರಿಸು" ಎಂದರು.

೬೦. ಪಿತಾಮಹನು ಹೇಳುತ್ತಾನೆ:—ಮಕ್ಕಳಿರಾ! ನೀವು ಈ ಕ್ಷೇತ್ರದಲ್ಲಿಯೆ ನನ್ನೊಡನೆ ತಪಸ್ಸನ್ನು ಮಾಡಿರಿ. ಅದರಿಂದ ಪ್ರಪಂಚದಲ್ಲಿ ದುರ್ಲಭವಾದ ಉತ್ತಮ ಸಿದ್ಧಿಯನ್ನು ಪಡೆಯುವಿರಿ.

೬೧. ಆ ವಾಲಖಿಲ್ಯರು ಅಂತೆಯೆ ಆಗಲೆಂದೊಪ್ಪಿ ಅಲ್ಲಿಯೆ ಮಂಗಳಕರವಾದ ಆಶ್ರಮವನ್ನು ರಚಿಸಿ ತಪಸ್ಸನ್ನುಮಾಡಿ ಉತ್ತಮಸಿದ್ಧಿಯನ್ನು ಹೊಂದಿದರು.

೬೨—೬೪. ಆಕಾಶದಿಂದ ಪುಷ್ಪವೃಷ್ಟಿಯಾಗುತ್ತಿರಲು ವಾದ್ಯಗಳು ಭೋರ್ಗರೆಯುತ್ತಿರಲು, ಗಾಯಕರು ಹಾಡುತ್ತಿರಲು, ಬ್ರಾಹ್ಮಣರು ವೇದೋಚ್ಚಾರಣೆಮಾಡುತ್ತಿರಲು, ರಂಭಾದಿ ಅಪ್ಸರೆಯರು ದೇವತೆಗಳ ದೃಷ್ಟಿಗೆ ಮನೋಹರವಾಗುವಂತೆ ಕುಣಿಯುತ್ತಿರಲು ಬ್ರಹ್ಮನೂ ಶ್ರುತ್ಯುಕ್ತಕ್ರಮದಿಂದ ವೈವಾಹಿಕ ವಿಧಿಯನ್ನು ಮುಗಿಸಿದನು.

ಏವಂ ಮಹೋತ್ಸವೋ ಜಜ್ಞೇ ತತಸ್ತುಂಬುರುಪೂರ್ವಕೈಃ
ಗೀಯಮಾನೇಷು ಗೀತೇಷು ಯಥಾಪೂರ್ವಂ ತ್ರಿವಿಷ್ಟಪೇ ॥ ೬೫ ॥
ಅಥ ಕರ್ಮಾವಸಾನೇ ಸ ಭಗವಾಂಸ್ತ್ರಿಪುರಾಂತಕಃ ।
ಪ್ರೋವಾಚ ಪದ್ಮಜಂ ಭಕ್ತ್ಯಾ ದಕ್ಷಿಣಾಂ ತೇ ದದಾಮಿ ಕಿಂ ॥ ೬೬ ॥
ವೈವಾಹಿಕೀಂ ಸುರಶ್ರೇಷ್ಠ ಯದ್ಯಪಿ ಸ್ಯಾತ್ಸುದುರ್ಲಭಾ ।
ಬ್ರೂಹಿ ಶೀಘ್ರಂ ಮಹಾಭಾಗ ನಾದೇಯಂ ವಿದ್ಯತೇ ಮಮ ॥ ೬೭ ॥

ಪಿತಾಮಹ ಉವಾಚ :—

ಅನೇನೈವ ತು ರೂಪೇಣ ವೇದ್ಯಾಮಸ್ಯಾಂ ಸುರೇಶ್ವರ ।
ತ್ವಯಾ ಸ್ಥೇಯಂ ಸದೈವಾತ್ರ ನೃಣಾಂ ಪಾಪವಿಶುದ್ಧಯೇ ॥ ೬೮ ॥
ಯೇನ ತೇ ಸನ್ನಿಧೌ ಕೃತ್ವಾ ಸ್ವಾಶ್ರಮಂ ಶಶಿಶೇಖರ ।
ತಪಃ ಕರೋಮಿ ನಾಶಾಯ ಪಾಪಸ್ಯಾಸ್ಯ ಮಹತ್ತಮಂ ॥ ೬೯ ॥
ಚೈತ್ರಶುಕ್ಲ ತ್ರಯೋದಶ್ಯಾಂ ನಕ್ಷತ್ರೇ ಭಗದೈವತೇ ।
ಸೂರ್ಯವಾರೇಣ ಯೋ ಭಕ್ತ್ಯಾ ವೀಕ್ಷಯಿಷ್ಯತಿ ಮಾನವಃ ।
ತದೈವ ತಸ್ಯ ಪಾಪಾನಿ ಪ್ರಯಾಸ್ಯಂತಿ ಚ ಸಂಕ್ಷಯಂ ॥ ೭೦ ॥
ಯಾ ನಾರೀ ದುರ್ಭಗಾ ವಂಧ್ಯಾ ಕಾಣಾ ರೂಪವಿವರ್ಜಿತಾ ।
ಸಾಽಪಿ ತ್ವದ್ದರ್ಶನಾದೇವ ಭವಿಷ್ಯತಿ ಸುರೂಪಧೃಕ್ ।
ಪ್ರಜಾವತೀ ಸುಭೋಗಾಢ್ಯಾ ಸುಭಗಾ ನಾಽತ್ರ ಸಂಶಯಃ ॥ ೭೧ ॥

---

೬೫—೬೭. ಸ್ವರ್ಗದಲ್ಲಿ ತುಂಬುರರು ಮೊದಲಾದವರು ಹಾಡನ್ನು ಹಾಡುತ್ತಿರಲು ಹೀಗೆ ಉತ್ಸವವು ನಡೆಯಿತು. ಬಳಿಕ ವೈವಾಹಿಕ ಕರ್ಮದ ಅವಸಾನದಲ್ಲಿ ಪೂಜ್ಯನಾದ ಶಂಕರನು ಬ್ರಹ್ಮನನ್ನು ಕುರಿತು ಭಕ್ತಿಯಿಂದ "ನಿನಗೆ ವಿವಾಹದ ದಕ್ಷಿಣೆಯನ್ನೇನು ಕೊಡಲಿ? ಅದು ದುರ್ಲಭವಾಗಿದ್ದರೂ ಕೊಡುವೆನು ಬೇಗನೆ ಹೇಳು. ನಿನಗೆ ಕೊಡಲನರ್ಹವಾದುದು ಯಾವುದೂ ಇಲ್ಲ" ಎಂದು ಹೇಳಿದನು.

೬೮. ಪಿತಾಮಹನು ಹೇಳುತ್ತಾನೆ:—ಶಂಕರ! ನೀನು ಇದೇ ರೂಪದಿಂದ ಈ ವೇದಿಯಲ್ಲಿ ಮಾನವರ ಪಾಪನಾಶಕ್ಕಾಗಿ ಯಾವಾಗಲೂ ನೆಲಸಿರು.

೬೯. ಶಂಕರ! ನಾನು ನಿನ್ನ ಸನ್ನಿಧಾನದಲ್ಲಿಯೇ ಆಶ್ರಮವನ್ನು ರಚಿಸಿಕೊಂಡು ಈ ಮಹಾಪಾಪದ ನಾಶಕ್ಕಾಗಿ ಉತ್ತಮವಾದ ತಪಸ್ಸನ್ನುಮಾಡುವೆನು.

೭೦. ಚೈತ್ರಶುಕ್ಲ ತ್ರಯೋದಶೀ ಭಾನುವಾರ ಸೂರ್ಯದೇವತಾನಕ್ಷತ್ರದಲ್ಲಿ ನಿನ್ನನ್ನು ದರ್ಶನಮಾಡುವ ಮಾನವನ ಪಾಪಗಳು ನಾಶನಾಗುವುವು.

೭೧. ದುರ್ಭಗಳೂ, ಬಂಜೆಯೂ, ಕುರುಡಳೂ, ಕುರೂಪಿಣಿಯೂ ಆದ ನಾರಿಯು ನಿನ್ನ ದರ್ಶನದಿಂದಲೇ ಸುಂದರಿಯೂ, ಸಂತತಿಯುಳ್ಳವಳೂ, ಭೋಗವುಳ್ಳವಳೂ, ಸುಭಗಳೂ ಆಗುವಳು. ಇದರಲ್ಲಿ ಸಂದೇಹವಿಲ್ಲ.

ಮಹೇಶ್ವರ ಉವಾಚ :—

ಹಿತಾಯ ಸರ್ವಲೋಕಾನಾಂ ವೇದ್ಯಾಮಸ್ಯಾಂ ವ್ಯವಸ್ಥಿತಃ ।
ಸ್ಥಾಸ್ಯಾಮಿ ಸಹಿತಃ ಪತ್ನ್ಯಾ ಸತ್ಯಾತ್ತ್ವದ್ವಚನಾನ್ನಿಧೇ ॥ ೭೨ ॥

ಸೂತ ಉವಾಚ :—

ಏವಂ ಸ ಭಗವಾಂಸ್ತತ್ರ ಸಭಾರ್ಯೋ ವೃಷಭಧ್ವಜಃ ।
ವಿದ್ಯತೇ ವೇದಿಮಧ್ಯಸ್ಥೋ ಲೋಕಾನಾಂ ಪಾಪನಾಶನಃ ॥ ೭೩ ॥
ಏತದ್ವಃ ಸರ್ವಮಾಖ್ಯಾತಂ ಯಥಾ ತಸ್ಯ ಪುರಾಽಭವತ್ ।
ವಿವಾಹೋ ವೃಷನಾಥಸ್ಯ ಮನೌ ಸ್ವಾಯಂಭುವೇ ದ್ವಿಜಾಃ ॥ ೭೪ ॥
ವಿವಾಹಸಮಯೇ ಪ್ರಾಪ್ತೇ ಪ್ರಾರಂಭೇ ವಾ ಶೃಣೋತಿ ಯಃ ।
ಏತದಾಖ್ಯಾನಮವ್ಯಗ್ರಂ ಸಂಪೂಜ್ಯ ವೃಷಭಧ್ವಜಂ ।
ತಸ್ಯಾಽವಿಘ್ನಂ ಭವೇತ್ಸರ್ವಂ ಕರ್ಮ ವೈವಾಹಿಕಂ ಚ ಯತ್ ॥ ೭೫ ॥
ಕನ್ಯಾ ಚ ಸುಖಸೌಭಾಗ್ಯಶೀಲಾಚಾರಗುಣಾನ್ವಿತಾ ।
ತಥಾ ಸ್ಯಾತ್ಪುತ್ರಿಣೀ ಸಾಧ್ವೀ ಪತಿವ್ರತಪರಾಯಣಾ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಹರಾಶ್ರಯವೇದಿಕಾಮಾಹಾತ್ಮ್ಯವರ್ಣನಂ"
ನಾಮ ಸಪ್ತಸಪ್ತತಿತಮೋಽಧ್ಯಾಯಃ

---

೭೨. ಮಹೇಶ್ವರನು ಹೇಳುತ್ತಾನೆ:—ಎಲೈ ಬ್ರಹ್ಮನೆ! ಸಕಲ ಜನರ ಹಿತಕ್ಕಾಗಿ ಈ ವೇದಿಯಲ್ಲಿ ನಿನ್ನ ಮಾತಿನಂತೆ ಪತ್ನಿಯಾದ ಸತಿಯೊಡನೆ ಇರುವೆನು.

೭೩. ಸೂತನು ಹೇಳುತ್ತಾನೆ:—ಹೀಗೆ ಪೂಜ್ಯನಾದ ಆ ಶಂಕರನು ವೇದಿಮಧ್ಯದಲ್ಲಿ ಜನರ ಪಾಪವನ್ನು ನೀಗಿಸುತ್ತ ಪತ್ನಿಯೊಡನೆ ನೆಲೆಸಿರುವನು.

೭೪. ಎಲೈ ದ್ವಿಜರೆ! ಸ್ವಾಯಂಭುವ ಮನ್ವಂತರದಲ್ಲಿ ಆ ಶಂಕರನಿಗೆ ಹೇಗೆ ವಿವಾಹವಾಯಿತೆಂಬುದನ್ನು ಸಂಪೂರ್ಣವಾಗಿ ನಿಮಗೆ ಹೇಳಿದ್ದೇನೆ.

೭೫. ವಿವಾಹ ಸಮಯದಲ್ಲಾಗಲಿ, ಅದರ ಪ್ರಾರಂಭದಲ್ಲಾಗಲಿ, ಶಂಕರನನ್ನು ಪೂಜಿಸಿ ಸಂಪೂರ್ಣವಾಗಿ ಈ ಆಖ್ಯಾನವನ್ನು ಕೇಳಿದವನ ವಿವಾಹಕಾರ್ಯವೆಲ್ಲ ನಿರ್ವಿಘ್ನವಾಗಿ ನೆರವೇರುವುದು.

೭೬. ಕನ್ಯೆಯೂ ಸುಖ, ಸೌಭಾಗ್ಯ, ಶೀಲ, ಆಚಾರ, ಗುಣಗಳಿಂದ ಕೂಡಿದವಳೂ, ಪುತ್ರವತಿಯೂ, ಪತಿವ್ರತೆಯೂ ಆಗುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಹರಾಶ್ರಯವೇದಿಕಾಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಸಪ್ತತಿತಮೋಽಧ್ಯಾಯಃ

## ರುದ್ರಶೀರ್ಷಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಬ್ರಹ್ಮಣಾ ಕತಮೇ ಸ್ಥಾನೇ ತತ್ರ ಸೂತ ಕೃತಂ ತಪಃ ।
ವಾಲಖಿಲ್ಯೈಶ್ಚ ತೈಃ ಸರ್ವೈರ್ಮುನಿಭಿಃ ಶಂಸಿತವ್ರತೈಃ ॥ ೧ ॥

ಸೂತ ಉವಾಚ:—

ತಸ್ಯಾ ವಾಯವ್ಯ ದಿಗ್ಭಾಗೇ ಹರವೇದ್ಯಾ ದ್ವಿಜೋತ್ತಮಾಃ ।
ಸಮ್ಯಕ್ ಶ್ರದ್ಧಾಪ್ರಯುಕ್ತೇನ ಬ್ರಹ್ಮಣಾ ವಿಹಿತಂ ತಪಃ ॥ ೨ ॥
ಪಶ್ಚಿಮೇ ವಾಲಖಿಲ್ಯೈಶ್ಚ ಜಪಸ್ನಾನಪರಾಯಣೈಃ ।
ತತ್ರಾಶ್ಚರ್ಯಮಭೂದ್ಯದ್ವೈ ಪೂರ್ವಂ ಬ್ರಾಹ್ಮಣಸತ್ತಮಾಃ ।
ಆಶ್ರಮೇ ಚತುರಾಸ್ಯಸ್ಯ ತದ್ವೋ ವಕ್ಷ್ಯಾಮಿ ಸಾಂಪ್ರತಂ ॥ ೩ ॥
ತತ್ರ ದುಶ್ಚಾರಿಣೀ ಕಾಚಿದ್ರಾತ್ರೌ ಬ್ರಾಹ್ಮಣವಂಶಜಾ ।
ದೇವದತ್ತಂ ಸಮಾಸಾದ್ಯ ವಲ್ಲಭಂ ರಮತೇ ಸದಾ ॥ ೪ ॥
ಅಜ್ಞಾತಾ ಪತಿನಾ ಮಾತ್ರಾ ತಥಾಽನ್ಯೈರಪಿ ಬಾಂಧವೈಃ ।
ಕೃಷ್ಣಪಕ್ಷಂ ಸಮಾಸಾದ್ಯ ವಿಜನೇ ಹೃಷ್ಟಮಾನಸಾ ॥ ೫ ॥

---

### ಕನ್ನಡದ ಅನುವಾದ

#### ರುದ್ರಶೀರ್ಷಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಎಲೈ ಸೂತ! ಬ್ರಹ್ಮನೂ, ಆ ಶ್ಲಾಘ್ಯವ್ರತರಾದ ವಾಲಖಿಲ್ಯಮುನಿಗಳೂ ಎಲ್ಲಿ ತಪಸ್ಸನ್ನು ಮಾಡಿದರು?

೨. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ಹರವೇದಿಯ ವಾಯವ್ಯ ದಿಕ್ಕಿನಲ್ಲಿ ಬ್ರಹ್ಮನು ಶ್ರದ್ಧೆಯಿಂದ ತಪವಂಗೈದನು.

೩. ಪಶ್ಚಿಮದಿಕ್ಕಿನಲ್ಲಿ ಜಪಸ್ನಾನನಿರತರಾದ ವಾಲಖಿಲ್ಯರು ತಪಸ್ಸನ್ನಾಚರಿಸಿದರು. ಹಿಂದೆ ಆ ಬ್ರಹ್ಮನ ಆಶ್ರಮದಲ್ಲಿ ನಡೆದ ಒಂದು ಆಶ್ಚರ್ಯಕರವಾದ ವಿಷಯವನ್ನೀಗ ನಾನು ನಿಮಗೆ ಹೇಳುವೆನು.

೪-೫. ಅಲ್ಲಿ ಬ್ರಾಹ್ಮಣವಂಶದಲ್ಲಿ ಜನಿಸಿದ ಒಬ್ಬ ವ್ಯಭಿಚಾರಿಣಿಯು ಕೃಷ್ಣಪಕ್ಷದ ರಾತ್ರಿಯ ವೇಳೆಯಲ್ಲಿ ಪತಿಗೂ, ತಾಯಿಗೂ, ಇತರ ಬಾಂಧವರಿಗೂ ತಿಳಿಯದಂತೆ ರಹಸ್ಯಸ್ಥಳದಲ್ಲಿ ಸಂತೋಷದಿಂದ ದೇವದತ್ತನೆಂಬ ಪ್ರಿಯನನ್ನು ಹೊಂದಿ ಯಾವಾಗಲೂ ಕ್ರೀಡಿಸುತ್ತಿದ್ದಳು.

ಕಸ್ಯಚಿತ್ತ್ವಥ ಕಾಲಸ್ಯ ದೃಷ್ಟ್ವಾ ಸಾ ಕೇನಚಿದ್ದ್ವಿಜಾಃ ।
ತತ್ರಸ್ಥಾ ಜಾರಸಂಯುಕ್ತಾ ಸ್ವಭರ್ತುಶ್ಚ ನಿವೇದಿತಾ ॥ ೬ ॥
ಅಥಾಽಸೌ ಕೋಪಸಂಯುಕ್ತಸ್ತಸ್ಯಾ ಭರ್ತಾ ಸುನಿಷ್ಠುರೈಃ ।
ವಾಕ್ಯೈಸ್ತಾಂ ಗರ್ಹಯಾಮಾಸ ಪ್ರಹಾರೈಶ್ಚಾಽಪ್ಯತಾಡಯತ್ ॥ ೭ ॥
ಅಥ ಸಾ ಧಾರ್ಷ್ಟ್ಯಮಾಸಾದ್ಯ ಸ್ತ್ರೀಸ್ವಭಾವಂ ಸಮಾಶ್ರಿತಾ ।
ಪ್ರೋವಾಚ ಭಾಷ್ಪಪೂರ್ಣಾಕ್ಷೀ ದೀನಾಂಜಲಿಪುಟಾ ಸ್ಥಿತಾ ॥ ೮ ॥
ಕಿಂ ಮಾಂ ದುರ್ಜನವಾಕ್ಯೇನ ತ್ವಂ ತಾಡಯಸಿ ನಿಷ್ಠುರೈಃ ।
ಪ್ರಹಾರೈರ್ದೋಷನಿರ್ಮುಕ್ತಾಂ ತ್ವತ್ಪಾದಪ್ರಣತಾಂ ವಿಭೋ ॥ ೯ ॥
ಅಹಂ ತ್ವಾಂ ಶಪಥಂ ಕೃತ್ವಾ ಭಕ್ಷಯಿತ್ವಾಽಥ ವಾ ವಿಷಂ ।
ಪ್ರವಿಶ್ಯೇ ಹವ್ಯವಾಹಂ ವಾ ಕರಿಷ್ಯೇ ಪ್ರತ್ಯಯಾನ್ವಿತಂ ॥ ೧೦ ॥
ಅಥ ತಾಂ ಬ್ರಾಹ್ಮಣಃ ಪ್ರಾಹ ಯದಿ ತ್ವಂ ಪಾಪವರ್ಜಿತಾ ।
ಪುರತೋ ದೇವವಿಪ್ರಾಣಾಂ ಕುರು ದಿವ್ಯಗ್ರಹಂ ಸ್ವಯಂ ॥ ೧೧ ॥
ಸಾ ತಥೇತಿ ಪ್ರತಿಜ್ಞಾಯ ಸಾಹಸೇನ ಸಮನ್ವಿತಾ ।
ದಿವ್ಯಗ್ರಹಂ ತತಶ್ಚಕ್ರೇ ಯಥೋಕ್ತವಿಧಿನಾ ಸತೀ ॥ ೧೨ ॥
ಶುದ್ಧಿಂ ಚ ಪ್ರಾಪ್ತಾ ಸರ್ವೇಷಾಂ ಬಂಧೂನಾಂ ಚ ದ್ವಿಜನ್ಮನಾಂ ।
ಪುರತಶ್ಚ ಗುರೂಣಾಂ ಚ ದೇವಾನಾಮಪಿ ಪಾಪಕೃತ್ ॥ ೧೩ ॥

---

೬. ಒಂದಾನೊಂದು ದಿನ ಜಾರನೊಡನೆ ಇರುವ ಅವಳನ್ನು ಒಬ್ಬ ಬ್ರಾಹ್ಮಣನು ನೋಡಿ ಅವಳ ಗಂಡನಿಗೆ ತಿಳಿಸಿದನು.

೭. ತರುವಾಯ ಅವಳ ಪತಿಯು ಕುಪಿತನಾಗಿ ಅವಳನ್ನು ಕಠಿನವಾದ ಮಾತುಗಳಿಂದ ನಿಂದಿಸಿ ಹೊಡೆದನು.

೮. ಆಗ ಅವಳು ಧಾರ್ಷ್ಟ್ಯವನ್ನು ಹೊಂದಿ ಸ್ತ್ರೀ ಸ್ವಭಾವವನ್ನು ಆಶ್ರಯಿಸಿ ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ಕೈಮುಗಿದುಕೊಂಡು ಇಂತೆಂದಳು.

೯. "ಸ್ವಾಮಿ! ದೋಷರಹಿತಳೂ ನಿನ್ನ ಪಾದವನ್ನು ನಮಸ್ಕರಿಸುವವಳೂ ಆದ ನನ್ನನ್ನು ದುಷ್ಟನ ಮಾತಿನಿಂದ ಏಕೆ ಕಠಿನವಾಗಿ ಹೊಡೆಯುತ್ತಿರುವೆ?

೧೦. ನಾನು ಆಣೆಯನ್ನಿಟ್ಟು ವಿಷವನ್ನು ಕುಡಿದಾಗಲಿ, ಅಗ್ನಿಯನ್ನು ಪ್ರವೇಶಿಸಿಯಾಗಲಿ ನಿನಗೆ ನಂಬಿಕೆಯನ್ನುಂಟುಮಾಡುವೆನು."

೧೧. ಬಳಿಕ ಬ್ರಾಹ್ಮಣನು ಆ ಪತ್ನಿಯನ್ನು ಕುರಿತು ನೀನು ಪಾಪವಿಲ್ಲದವಳಾದರೆ ದೇವಬ್ರಾಹ್ಮಣರ ಮುಂದೆ ಅಗ್ನಿಯನ್ನು ಪ್ರವೇಶಿಸು ಎಂದನು.

೧೨. ಅವಳು ಹಾಗೆಯೇ ಆಗಲೆಂದು ಒಪ್ಪಿ ಸಾಹಸದಿಂದ ಕೂಡಿ ವಿಧಿಯಂತೆ ಅಗ್ನಿಯನ್ನು ಪ್ರವೇಶಿಸಿದಳು.

೧೩. ಸಕಲ ಬಂಧುಗಳು, ಬ್ರಾಹ್ಮಣರು, ಗುರುಗಳು, ದೇವತೆಗಳು ಇವರೆಲ್ಲರ ಮುಂದೆ ಅವಳು ಶುದ್ಧಳಾದಳು.

ಏತಸ್ಮಿನ್ನಂತರೇ ತಸ್ಯಾಃ ಸಾಧುವಾದೋ ಮಹಾನಭೂತ್ ।
ಧಿಕ್ಫಬ್ದಶ್ಚ ತಥಾ ಪತ್ಯುಃ ಸರ್ವೈರ್ದತ್ತಃ ಸುಗರ್ಹಿತಃ ॥ ೧೪ ॥
ಅಹೋ ಪಾಪಸಮಾಚಾರೋ ದುಷ್ಟೋಽಯಂ ಬ್ರಾಹ್ಮಣಾಧಮಃ ।
ಅಪಾಪಾಂ ಧರ್ಮಪತ್ನೀಂ ಯೋ ಮಿಥ್ಯಾದೋಷೇಣ ಯೋಜಯೇತ್ ॥
ಏವಂ ಸ ನಿಂದ್ಯಮಾನಸ್ತು ಸರ್ವಲೋಕೈರ್ದ್ವಿಜೋತ್ತಮಾಃ ।
ಕೋಪಂ ಚಕ್ರೇ ತತೋ ವಹ್ನಿಂ ಸಮುದ್ದಿಶ್ಯ ಸ ದುಃಖಿತಃ ॥ ೧೬ ॥
ಶಾಪಂ ದಾತುಂ ಮತಿಂ ಚಕ್ರೇ ತತೋ ವಹ್ನೇಃ ಸುದುಃಖಿತಃ ।
ಅಬ್ರವೀತ್ಪರುಷಂ ವಾಕ್ಯಂ ನಿಂದ್ಯಮಾನಃ ಪುನಃ ಪುನಃ ॥ ೧೭ ॥
ಮಯಾ ಸ್ವಯಂ ಪ್ರದೃಷ್ಟೇಯಂ ಜಾರೇಣ ಸಹ ಸಂಗತಾ ।
ತ್ವಯಾ ವಹ್ನೇ ಸುಪಾಪೇಯಂ ನ ಕಸ್ಮಾದ್ಭಸ್ಮಸಾತ್ಕೃತಾ ॥ ೧೮ ॥
ತಸ್ಮಾತ್ತ್ವಾಂ ಪಾಪಕರ್ಮಾಣಮಸತ್ಯಪಕ್ಷಪಾತಿನಂ ।
ಅಸಂದಿಗ್ಧಂ ಶಪಿಷ್ಯಾಮಿ ರೌದ್ರಶಾಪೇನ ಸಾಂಪ್ರತಂ ॥ ೧೯ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಸಂಕ್ರುದ್ಧಸ್ಯ ದ್ವಿಜನ್ಮನಃ ।
ಸಪ್ತಾರ್ಚಿರ್ಭಯಸಂತ್ರಸ್ತಃ ಕೃತಾಂಜಲಿರುವಾಚ ತಂ ॥ ೨೦ ॥

---

೧೪. ಈ ಸಮಯದಲ್ಲಿ ಎಲ್ಲರೂ ಅವಳನ್ನು ಹೊಗಳಿದರು. ಅವಳ ಪತಿಯನ್ನು ಛೀ ಛೀ ಎಂದು ನಿಂದಿಸಿದರು.

೧೫. ಪಾಪಿಯಾದ ಈ ಅಧಮ ಬ್ರಾಹ್ಮಣನು ಪಾಪವಿಲ್ಲದ ಧರ್ಮಪತ್ನಿಯ ಮೇಲೆ ಸುಳ್ಳುದೋಷವನ್ನು ಹೊರಿಸಿದನು.

೧೬. ದ್ವಿಜವರ್ಯರೆ! ಹೀಗೆ ಸಮಸ್ತ ಜನರೂ ಅವನನ್ನು ನಿಂದಿಸಲು ಅವನು ದುಃಖಗೊಂಡು ಅಗ್ನಿಯಮೇಲೆ ಕುಪಿತನಾದನು.

೧೭. ದುಃಖಿತನಾದ ಅವನು ಅಗ್ನಿಗೆ ಶಾಪಕೊಡಬೇಕೆಂದಾಲೋಚಿಸಿ ಮತ್ತು ಮತ್ತು ನಿಂದಿಸುತ್ತ ಕಠಿನವಾಗಿ ಹೀಗೆಂದನು.

೧೮. "ಎಲೈ ಅಗ್ನಿಯೆ! ಜಾರನೊಡನೆ ಸೇರಿರುವ ಇವಳನ್ನು ನಾನು ಪ್ರತ್ಯಕ್ಷವಾಗಿ ನೋಡಿದ್ದೇನೆ. ಪಾಪಿಷ್ಠಳಾದ ಇವಳನ್ನು ನೀನು ಏಕೆ ಬೂದಿ ಮಾಡಲಿಲ್ಲ.

೧೯. ಆದ್ದರಿಂದ ಪಾಪಿಷ್ಠನೂ, ಅಸತ್ಯದಲ್ಲಿ ಪ್ರೀತಿಯುಳ್ಳವನೂ ಆದ ನಿನ್ನನ್ನು ನಿಶ್ಚಯವಾಗಿಯೂ ಭಯಂಕರವಾಗಿ ಈಗ ಶಪಿಸುವೆನು.

೨೦. ಸೂತನು ಹೇಳುತ್ತಾನೆ:—ಕುಪಿತನಾದ ಆ ಬ್ರಾಹ್ಮಣನ ಆ ಮಾತನ್ನು ಕೇಳಿ ಅಗ್ನಿಯು ಭಯಗೊಂಡು ಕೈಮುಗಿದುಕೊಂಡು ಇಂತೆಂದನು.

ಅಗ್ನಿರುವಾಚ :—

ನೈಷ ದೋಷೋ ಮಮ ಬ್ರಹ್ಮನ್ ಯನ್ನದಗ್ಧಾ ತವ ಪ್ರಿಯಾ ।
ಕೃತಾಗಸಾಽಪಿ ಮೇ ವಾಕ್ಯಂ ಶೃಣುಷ್ವಾತ್ರ ಸ್ಫುಟೇರಿತಂ ॥ ೨೧ ॥
ಅನಯಾ ಪರಕಾಂತೇನ ಕೃತಃ ಸಹ ಸಮಾಗತಃ ।
ಚಿರಂ ಕಾಲಂ ದ್ವಿಜಶ್ರೇಷ್ಠ ತ್ವಯಾ ಜ್ಞಾತಾಽದ್ಯ ವಾಸರೇ ॥ ೨೨ ॥
ಪರಂ ಯಸ್ಮಾದ್ವಿಶುದ್ಧೈಷಾ ಮಯಾ ದಗ್ಧಾ ನ ಸಾ ದ್ವಿಜ ।
ಕಾರಣಂ ತಚ್ಚ ತೇ ವಚ್ಮಿ ಶೃಣುಷ್ವೈಕಮನಾಃ ಸ್ಥಿತಃ ॥ ೨೩ ॥
ಯತ್ರಾಽನಯಾ ಕೃತಃ ಸಂಗಃ ಪರಕಾಂತೇನ ವೈ ದ್ವಿಜ ।
ತಸ್ಮಿನ್ನಾಯತನೇ ಬ್ರಹ್ಮಾ ರುದ್ರಶೀರ್ಷೋ ವ್ಯವಸ್ಥಿತಃ ॥ ೨೪ ॥
ತತ್ರ ಕೃತ್ವಾ ರತಂ ಚಿತ್ರಂ ಪರಕಾಂತಸಮಂ ತದಾ ।
ಪಶ್ಯತಿಸ್ಮ ತತೋ ರುದ್ರಂ ಬ್ರಹ್ಮಮಸ್ತಕ ಸಂಸ್ಥಿತಂ ॥ ೨೫ ॥
ತತಃ ಪ್ರಕ್ಷಾಲಯತ್ಯಂಗಂ ಕುಂಡೇ ತತ್ರಾಽಗ್ರತಃ ಸ್ಥಿತೇ ।
ಕೃತಪಾಪಾಽಪಿ ತೇನೈಷಾ ಶುದ್ಧಿಂ ಯಾತಿ ಶುಚಿಸ್ಮಿತಾ ॥ ೨೬ ॥
ಅತ್ರ ಪೂರ್ವಂ ವಿಪಾಪ್ಮಾಽಭೂದ್ಬ್ರಹ್ಮಾ ಲೋಕಪಿತಾಮಹಃ ।
ಸತೀವಕ್ತ್ರಂ ಸಮಾಲೋಕ್ಯ ಕಾಮಾರ್ತೋಽಪಿ ಸ ಪಾಪಕೃತ್ ॥ ೨೭ ॥

---

೨೧. ಅಗ್ನಿಯು ಹೇಳುತ್ತಾನೆ:—ಬ್ರಾಹ್ಮಣನೆ! ನಿನ್ನ ಪತ್ನಿಯು ತಪ್ಪನ್ನು ಮಾಡಿದ್ದರೂ ಬೂದಿಯಾಗದಿರುವುದು ನನ್ನ ತಪ್ಪಿನಿಂದಲ್ಲ. ಈ ವಿಷಯದಲ್ಲಿ ಸ್ಪಷ್ಟವಾದ ನನ್ನ ಮಾತನ್ನು ಲಾಲಿಸು.

೨೨. ಇವಳು ಬಹುಕಾಲದಿಂದಲೂ ಪರಪುರುಷನ ಸಂಗವನ್ನು ಮಾಡುತ್ತಿರುವಳು. ನೀನು ಅದನ್ನು ಈದಿನ ತಿಳಿದೆ.

೨೩. ಆದರೆ ಇವಳು ಶುದ್ಧಳಾಗಿರುವುದರಿಂದ ನಾನು ಸುಡಲಿಲ್ಲ. ಇದಕ್ಕೆ ಕಾರಣವನ್ನು ಹೇಳುತ್ತೇನೆ. ಒಮ್ಮನಸ್ಸಿನಿಂದ ಕೇಳು.

೨೪. ಇವಳು ಪರಕಾಂತನ ಸಂಗ ಮಾಡಿದಸ್ಥಳದಲ್ಲಿ ಬ್ರಹ್ಮನು ರುದ್ರಶೀರ್ಷನಾಗಿ ನೆಲೆಸಿರುವನು.

೨೫. ಇವಳು ಅಲ್ಲಿ ಪರಪುರುಷನೊಡನೆ ರತಿಸುಖವನ್ನನುಭವಿಸಿ ಬ್ರಹ್ಮನ ತಲೆಯಮೇಲಿರುವ ರುದ್ರನನ್ನು ಸಂದರ್ಶಿಸುತ್ತಿದ್ದಳು.

೨೬. ಅನಂತರ ಅಲ್ಲಿ ಮುಂದಿರುವ ಕುಂಡದಲ್ಲಿ ಸ್ನಾನಮಾಡುತ್ತಿದ್ದಳು. ಆದ್ದರಿಂದ ಇವಳು ಪಾಪವನ್ನು ಮಾಡಿದ್ದರೂ ಶುದ್ಧಳಾದಳು.

೨೭. ಹಿಂದೆ ಪಿತಾಮಹನಾದ ಬ್ರಹ್ಮನು ಕಾಮಾರ್ತನಾಗಿ ಸತೀಮುಖವನ್ನು ನೋಡಿದುದರಿಂದ ಪಾಪಿಷ್ಠನಾಗಿ ಇಲ್ಲಿ ಪಾಪರಹಿತನಾಗಿರುವನು.

ತಸ್ಮಾನ್ನಾಽಸ್ತ್ಯತ್ರ ಮೇ ದೋಷಃ ಸ್ವಲ್ಪೋಽಪಿ ದ್ವಿಜಸತ್ತಮ ।
ರುದ್ರಶೀರ್ಷಪ್ರಭಾವೋಽಯಂ ತಸ್ಯ ಕುಂಡೋದಕಸ್ಯ ಚ ॥ ೨೮ ॥
ತಸ್ಮಾದೇನಾಂ ಸಮಾದಾಯ ಸಂಶುದ್ಧಾಂ ಪಾಪವರ್ಜಿತಾಂ ।
ಗೃಹಂ ಗಚ್ಛ ದ್ವಿಜಶ್ರೇಷ್ಠ ಸತ್ಯಮೇತನ್ಮಯೋದಿತಂ ॥ ೨೯ ॥

ಬ್ರಾಹ್ಮಣ ಉವಾಚ :—

ಯಾ ಮಯಾ ಸಹಸಾ ದೃಷ್ಟ್ವಾ ಸ್ವಯಮೇವ ಹುತಾಶನ ।
ಪರಕಾಂತೇನ ತಾಂ ನಾಽದ್ಯ ಶುದ್ಧಾಮಪಿ ಗೃಹಂ ನಯೇ ॥ ೩೦ ॥
ಇತ್ಯುಕ್ತ್ವಾ ಚ ದ್ವಿಜಶ್ರೇಷ್ಠಸ್ತಾಂ ತ್ಯಕ್ತ್ವಾಽಪಿ ಶುಚಿವ್ರತಃ ।
ಜಗಾಮ ಸ್ವಗೃಹಂ ಪಶ್ಚಾತ್ತಥಾ ಜಗ್ಮುರ್ಜನಾ ಗೃಹಾನ್ ॥ ೩೧ ॥
ಸಾಽಪಿ ತೇನ ಪರಿತ್ಯಕ್ತಾ ಪತಿನಾ ಹೃಷ್ಟಮಾನಸಾ ।
ಜ್ಞಾತ್ವಾ ತತ್ತೀರ್ಥಮಾಹಾತ್ಮ್ಯಂ ವೈಶ್ವಾನರಮುಖೇರಿತಂ ॥ ೩೨ ॥
ತೇನೈವ ಪರಕಾಂತೇನ ವಿಶೇಷೇಣ ರತಿಕ್ರಿಯಾಂ ।
ತಸ್ಮಿನ್ನಾಯತನೇ ಚಕ್ರೇ ಕುಂಡೇ ತೋಯಾಽವಗಾಹನಂ ॥ ೩೩ ॥
ಅಥಾಽನ್ಯೇ ಪರಲೋಕಸ್ಯ ಭೀತ್ಯಾಽತೀವ ವ್ಯವಸ್ಥಿತಾಃ ।
ವಿಮುಖಾಃ ಪರದಾರೇಷು ನಾರ್ಯಶ್ಚಾಽಪಿ ಪತಿವ್ರತಾಃ ॥ ೩೪ ॥
ದೂರತೋಽಪಿ ಸಮಭ್ಯೇತ್ಯ ತೇ ಸರ್ವೇ ತತ್ರ ಮಂದಿರೇ ।
ರುದ್ರಶೀರ್ಷಾಽಭಿಧಾನೇ ಚ ಪ್ರಚಕ್ರುಃ ಸುರತೋತ್ಸವಂ ॥ ೩೫ ॥

---

೨೮—೨೯. ದ್ವಿಜೋತ್ತಮನೆ! ಆದ್ದರಿಂದ ಈ ವಿಷಯದಲ್ಲಿ ನನ್ನ ದೋಷವು ಸ್ವಲ್ಪವೂ ಇಲ್ಲ. ಇದು ರುದ್ರಶೀರ್ಷದ ಮತ್ತು ಕುಂಡೋದಕದ ಪ್ರಭಾವವಾಗಿರುವುದು. ಆದ್ದರಿಂದ ಪಾಪರಹಿತಳಾಗಿ ಶುದ್ಧಳಾದ ಇವಳನ್ನು ಕರೆದುಕೊಂಡು ಮನೆಗೆ ಹೋಗು. ನಾನು ಹೇಳಿರುವುದು ನಿಜ.

೩೦. ಬ್ರಾಹ್ಮಣನು ಹೇಳುತ್ತಾನೆ:—ಎಲೈ ಅಗ್ನಿಯೆ! ಪರಕಾಂತನ ಸಂಗವನ್ನು ಮಾಡಿರುವುದನ್ನು ನಾನೇ ಸಾಕ್ಷಾತ್ತಾಗಿ ನೋಡಿರುವುದರಿಂದ ಶುದ್ಧಳಾಗಿದ್ದರೂ ಇವಳನ್ನು ಮನೆಗೆ ಕರೆದುಕೊಂಡುಹೋಗಲಾರೆ.

೩೧. ಶುದ್ಧನಾದ ಆ ಬ್ರಾಹ್ಮಣನು ಹೀಗೆನುಡಿದು ಆ ಪತ್ನಿಯನ್ನು ತ್ಯಜಿಸಿ ತನ್ನ ಮನೆಗೆ ತೆರಳಿದನು. ನೆರೆದ ಜನರೂ ಮನೆಗೆ ಹೋದರು.

೩೨—೩೩. ಪತಿಯು ತ್ಯಜಿಸಲು ಅವಳು ಸಂತೋಷಗೊಂಡು ಅಗ್ನಿಯು ಹೇಳಿದ ಆ ತೀರ್ಥದ ಮಾಹಾತ್ಮ್ಯೆಯನ್ನರಿತು ಆ ಪುರಷರುಷನೊಡನೆ ಅತಿಶಯವಾಗಿ ಕ್ರೀಡಿಸುತ್ತ ಆ ದೇವಾಲಯದಲ್ಲಿರುವ ಆ ಕುಂಡದಲ್ಲಿ ಮಿಂದಳು.

೩೪—೩೫. ಅನಂತರ ಪರಲೋಕದ ಭೀತಿಯುಳ್ಳವರೂ, ಪರಪತ್ನಿಯರಲ್ಲಿ ವಿಮುಖರೂ ಆದ ಪುರುಷರೂ ಪತಿವ್ರತೆಯರಾದ ಹೆಂಗಸರೂ ದೂರದಿಂದ ಅಲ್ಲಿಗೆ ಬಂದು ರುದ್ರಶೀರ್ಷವೆಂಬ ಆ ದೇವಾಲಯದಲ್ಲಿ ರತಿಕ್ರೀಡೆಯನ್ನುಮಾಡಿದರು.

ನಿಮಜ್ಜಂತಿ ತತಃ ಕುಂಡೇ ತಸ್ಮಿನ್ ಪಾತಕನಾಶನೇ ।
ಭವಂತಿ ಪಾಪನಿರ್ಮುಕ್ತಾ ರುದ್ರಶೀರ್ಷಾವಲೋಕನಾತ್ ॥ ೩೬ ॥
ಏತಸ್ಮಿನ್ನಂತರೇ ನಷ್ಟೋ ಧರ್ಮಃ ಪತ್ನೀಸಮುದ್ಭವಃ ।
ಪುರುಷಾಣಾಂ ತತಃ ಸ್ತ್ರೀಣಾಂ ನಿಜಕಾಂತಾಸಮುದ್ಭವಃ ॥ ೩೭ ॥
ಯೋ ಯಾಂ ಪಶ್ಯತಿ ರೂಪಾಢ್ಯಾಂ ನಾರೀಮಪಿ ಕುಲೋದ್ಭವಾಂ ।
ಸ ತತ್ರಾಽಽನೀಯ ಸಂಹೃಷ್ಟೋ ಭಜತೇ ದ್ವಿಜಸತ್ತಮಾಃ ॥ ೩೮ ॥
ತಥಾ ನಾರೀ ಸುರೂಪಾಢ್ಯಂ ಯಂ ಪಶ್ಯತಿ ನರಂ ಕ್ವಚಿತ್ ।
ಸಾಽಪಿ ತತ್ರ ಸಮಾನೀಯ ಕುರುತೇ ಸುರತೋತ್ಸವಂ ॥ ೩೯ ॥
ಲಿಪ್ಯತೇ ನ ಚ ಪಾಪೇನ ಕಥಂ ಚಿತ್ತತ್ಕೃತೇನ ಚ ।
ನರೋ ವಾ ಯದಿ ವಾ ನಾರೀ ತತ್ತೀರ್ಥಸ್ಯ ಪ್ರಭಾವತಃ ॥ ೪೦ ॥
ಕಸ್ಯಚಿತ್ತ್ವಥಕಾಲಸ್ಯ ತತ್ರ ರಾಜಾ ವಿದೂರಥಃ ।
ಆನರ್ತವಿಷಯೇ ಜಜ್ಞೇ ವಾರ್ಧಕ್ಯಂ ಚ ಕ್ರಮಾದ್ಯಯೌ ॥ ೪೧ ॥
ತಸ್ಯ ಭಾರ್ಯಾಽಭವತ್ತನ್ವೀ ತರುಣೀ ವರರೂಪಧೃಕ್ ।
ಪಶ್ಚಿಮೇ ವಯಸಿ ಪ್ರಾಪ್ತೇ ಪ್ರಾಣೇಭ್ಯೋಽಪಿ ಗರೀಯಸೀ ॥ ೪೨ ॥
ನ ತಸ್ಯಾಃ ಸ ಜರಾಗ್ರಸ್ತಶ್ಚಿತ್ತೇ ವಸತಿ ಪಾರ್ಥಿವಃ ।
ತಸ್ಮಿಂಸ್ತೀರ್ಥೇ ಸಮಾಗತ್ಯ ವಾಂಛಿತಂ ರಮತೇ ನರಂ ॥ ೪೩ ॥

---

೩೬. ಪಾಪವನ್ನು ನಿವಾರಿಸುವ ಆ ಕುಂಡದಲ್ಲಿ ಮಿಂದು ರುದ್ರಶೀರ್ಷವನ್ನು ನೋಡುವುದರಿಂದ ಪಾಪರಹಿತರಾದರು.

೩೭–೩೮. ಈ ಸಮಯದಲ್ಲಿ ಸ್ತ್ರೀ ಪುರುಷರ ಪತಿಪತ್ನೀಧರ್ಮವು ನಷ್ಟವಾಯಿತು. ದ್ವಿಜವರ್ಯರೆ! ಯಾವನು ಸುಂದರಿಯಾದ ಯಾವ ಕುಲೀನ ಸ್ತ್ರೀಯನ್ನು ನೋಡುವನೊ; ಅವನು ಅವಳನ್ನು ಅಲ್ಲಿಗೆ ಕರೆತಂದು ಉಪಭೋಗಿಸುತ್ತಿದ್ದನು.

೩೯. ಹಾಗೆಯೇ ಯಾವ ಹೆಂಗಸು ಸುಂದರನಾದ ಯಾವ ಪುರುಷನನ್ನು ನೋಡುವಳೊ, ಅವಳೂ ಆ ಪುರುಷನನ್ನು ಅಲ್ಲಿಗೆ ಕರೆತಂದು ರತಿಸುಖವನ್ನು ಅನುಭವಿಸುವಳು.

೪೦. ಅಂತಹ ಪುರುಷನಾಗಲಿ, ಹೆಂಗಸಾಗಲಿ ಆ ತೀರ್ಥದ ಪ್ರಭಾವದಿಂದ ಪಾಪಲಿಪ್ತರಾಗಲಿಲ್ಲ.

೪೧. ಕೆಲವು ಕಾಲದ ಮೇಲೆ ಅನರ್ತದೇಶದಲ್ಲಿ ವಿದೂರಥನೆಂಬ ರಾಜನು ಹುಟ್ಟಿ ಕ್ರಮವಾಗಿ ಮುದುಕನಾದನು.

೪೨. ಅವನಿಗೆ ವಾರ್ಧಕ್ಯದಲ್ಲಿ ತರುಣಿಯೂ, ಉತ್ತಮ ರೂಪವನ್ನು ಧರಿಸಿದವಳೂ ಪ್ರಾಣಕ್ಕಿಂತ ಶ್ರೇಷ್ಠಳೂ ಆದ ಪತ್ನಿಯಿದ್ದಳು.

೪೩. ಅವಳು ಮುದುಕನಾದ ರಾಜನನ್ನು ಚಿಂತಿಸದೆ ಆ ತೀರ್ಥಕ್ಕೆ ಬಂದು ಇಷ್ಟನಾದ ಮನುಷ್ಯನನ್ನು ಸೇರಿ ಕ್ರೀಡಿಸುತ್ತಿದ್ದಳು.

ಪಾರ್ಥಿವೋಽಪಿ ಪರಿಜ್ಞಾಯ ತಸ್ಯಾಸ್ತಚ್ಚ ವಿಚೇಷ್ಟಿತಂ ।
ಕೋಪಾವಿಷ್ಟಸ್ತತೋ ಗತ್ವಾ ತಸ್ಮಿನ್ ಕ್ಷೇತ್ರೇ ಸುಶೋಭನೇ ॥ ೪೪ ॥
ತತ್ಕುಂಡಂ ಪೂರಯಾಮಾಸ ತತಃ ಪಾಂಶೂತ್ಕರೈರ್ದ್ರುತಂ ।
ಬಭಂಜ ತಂ ಚ ಪ್ರಾಸಾದಂ ತತಃ ಪ್ರೋವಾಚ ದಾರುಣಂ ॥ ೪೫ ॥
ಯಶ್ಚೈತತ್ಪೂರಿತಂ ಕುಡಂ ಪಾಂಶುನಾ ನಿಖನಿಷ್ಯತಿ ।
ಪ್ರಾಸಾದಂ ಚ ಪುನಶ್ಚೈನಂ ಕರಿಷ್ಯತಿ ಪುನರ್ನವಂ ॥ ೪೬ ॥
ಪರದಾರಕೃತಂ ಪಾಪಂ ತಸ್ಯ ಸಂಪತ್ಸ್ಯತೇಽಖಿಲಂ ।
ಯದತ್ರ ಪ್ರಕರಿಷ್ಯಂತಿ ಮಾನವಾಃ ಕಾಮಮೋಹಿತಾಃ ॥ ೪೭ ॥

ಸೂತ ಉವಾಚ :—

ಏವಂ ಸ ಪಾರ್ಥಿವಃ ಪ್ರೋಚ್ಯ ತಾಮಾದಾಯ ತತಃ ಪ್ರಿಯಾಂ ।
ಜಗಾಮ ಸ್ವಗೃಹಂ ಪಶ್ಚಾತ್ಪ್ರಹೃಷ್ಟೇನಾಂತರಾತ್ಮನಾ ॥ ೪೮ ॥
ಅಥ ತಾಂ ವಿರತಾಂ ಜ್ಞಾತ್ವಾ ಸೋಽನ್ಯಚಿತ್ತಾಂ ಪ್ರಿಯಾಂ ನೃಪಃ ।
ಯತ್ನೇನ ರಕ್ಷಯಾಮಾಸ ವಿಶ್ವಾಸಂ ನೈವ ಗಚ್ಛತಿ ॥ ೪೯ ॥
ಅನ್ಯಸ್ಮಿನ್ ದಿವಸೇ ಶಸ್ತ್ರಂ ಸೂಕ್ಷ್ಮಂ ವೇಣ್ಯಾಂ ನಿಧಾಯ ಸಾ ।
ಜಗಾಮ ಶಯನಂ ತಸ್ಯ ವಧಾರ್ಥಂ ವರವರ್ಣಿನೀ ॥ ೫೦ ॥

---

೪೪—೪೫. ರಾಜನೂ ಅವಳ ಆ ಕಾರ್ಯವನ್ನು ತಿಳಿದು ಕುಪಿತನಾಗಿ ಆ ಕ್ಷೇತ್ರಕ್ಕೆ ಹೋಗಿ ಆ ಕುಂಡವನ್ನು ಧೂಳಿನಿಂದ ಬೇಗನೆ ತುಂಬಿದನು. ಆ ದೇವಾಲಯವನ್ನು ಒಡೆದು ಹೀಗೆ ಕಠಿನವಾಗಿ ನುಡಿದನು.

೪೬—೪೭. "ಧೂಳಿನಿಂದ ತುಂಬಿರುವ ಈ ಕುಂಡವನ್ನು ಅಗೆಯುವವನೂ, ದೇವಾಲಯವನ್ನು ಹೊಸದಾಗಿ ಕಟ್ಟಿಸುವವನೂ ಕಾಮಮೋಹಿತರಾಗಿ ಪರರ ಪತ್ನಿಯರ ಸಂಗವನ್ನು ಮಾಡುವ ಮಾನವರಿಗುಂಟಾಗುವ ಪಾಪವನ್ನು ಹೊಂದುವನು."

೪೮. ಸೂತನು ಹೇಳುತ್ತಾನೆ:—ಆ ರಾಜನು ಹೀಗೆ ಹೇಳಿ ಪ್ರಿಯಳಾದ ಆ ಪತ್ನಿಯನ್ನು ಕರೆದುಕೊಂಡು ಸಂತೋಷದಿಂದ ತನ್ನ ಮನೆಗೆ ಹೋದನು.

೪೯. ಆ ರಾಜನು ತನ್ನ ಆ ಪತ್ನಿಯು ಪ್ರೀತಿಯಿಲ್ಲದವಳಾಗಿರುವುದನ್ನೂ, ಇತರ ಪುರುಷನನ್ನು ಚಿಂತಿಸುತ್ತಿರುವುದನ್ನೂ ಅರಿತು ಅವಳನ್ನು ಪ್ರಯತ್ನದಿಂದ ರಕ್ಷಿಸಿದನು. ಅವಳನ್ನು ಎಷ್ಟು ಮಾತ್ರವೂ ನಂಬಲಿಲ್ಲ.

೫೦. ಇನ್ನೊಂದು ದಿನ ಆ ಹೆಂಡತಿಯು ತನ್ನ ಜಡೆಯಲ್ಲಿ ಸಣ್ಣ ಶಸ್ತ್ರವನ್ನು ಇಟ್ಟುಕೊಂಡು ತನ್ನ ಪತಿಯನ್ನು ಕೊಲ್ಲುವುದಕ್ಕಾಗಿ ಆತನ ಶಯನಕ್ಕೆ ಹೋದಳು.

ತತಸ್ತೇನ ಸಮಂ ಹಾಸ್ಯಂ ಕೃತ್ವಾ ಕ್ಷತ್ರಿಯಭಾವಜಂ ।
ಸುರತಂ ರುಚಿರೈರ್ಭಾವೈರ್ಹಾವೈರ್ಭೂರಿಭಿರೇವಚ ॥ ೫೧ ॥
ತತೋ ನಿದ್ರಾವಶಂ ಪ್ರಾಪ್ತಂ ತಂ ನೃಪಂ ಸಾ ನೃಪಪ್ರಿಯಾ ।
ಸ್ವವೇಣ್ಯಾಃ ಶಸ್ತ್ರಮಾದಾಯ ನಿಜಘಾನ ಸುನಿರ್ದಯಾ ॥ ೫೨ ॥
ಏವಂ ತಸ್ಯ ಫಲಂ ಜಾತಂ ಸದ್ಯಸ್ತೀರ್ಥಸ್ಯ ಭಂಗಜಂ ।
ಆನರ್ತಾಧಿಪತೇ ರೌದ್ರಂ ಸರ್ವಲೋಕವಿಗರ್ಹಿತಂ ॥ ೫೩ ॥
ಅದ್ಯಾಽಪಿ ತತ್ರ ದೇವೇಶೋ ರುದ್ರಶೀರ್ಷಃ ಸ ತಿಷ್ಠತಿ ।
ಲಿಂಗಭೇದಭಯಾತ್ತೇನ ನ ಸಭಗ್ನೋ ದ್ವಿಜೋತ್ತಮಾಃ ॥ ೫೪ ॥
ಯಸ್ತಸ್ಯ ಪುರತಃ ಸ್ಥಿತ್ವಾ ಜಪೇದ್ರುದ್ರಶಿರಃ ಶುಚಿಃ ।
ಮಾಘಶುಕ್ಲಚತುರ್ದಶ್ಯಾಂ ಪೂಜಯಿತ್ವಾ ಸ್ರಗಾದಿಭಿಃ ॥ ೫೫ ॥
ವಾಂಛಿತಂ ಲಭತೇ ಚಾಽಽಶು ತಸ್ಯೈಕಸ್ಯ ಪ್ರಭಾವತಃ ।
ಅಷ್ಟೋತ್ತರಶತಂ ಯಾವದ್ಯೋಜಪೇತ್ಪುರತಃ ಸ್ಥಿತಃ ॥ ೫೬ ॥
ರುದ್ರಶೀರ್ಷಂ ನ ಸಂದೇಹಃ ಸಯಾತಿ ಪರಮಾಂ ಗತಿಂ ।
ಏಕವಾರಂ ನರೋ ಯೋ ವಾ ತತ್ಪುರಃ ಪಠತಿ ದ್ವಿಜಃ ॥ ೫೭ ॥
ನಿತ್ಯಂ ದಿನಕೃತಾತ್ಪಾಪಾನ್ಮುಚ್ಯತೇ ದ್ವಿಜಸತ್ತಮಾಃ ।
ಏತದ್ವಃ ಸರ್ವಮಾಖ್ಯಾತಂ ರುದ್ರಶೀರ್ಷಸಮುದ್ಭವಂ ॥ ೫೮ ॥

---

೫೧–೫೨. ಬಳಿಕ ಅವಳು ಆ ಪ್ರಿಯನೊಡನೆ ಕ್ಷತ್ರಿಯೋಚಿತ ಹಾಸ್ಯವನ್ನೂ-ಮನೋಹರವಾದ ಹಾವಭಾವಗಳಿಂದ ಸುರತವನ್ನೂ ಮಾಡಿ ಪತಿಯು ನಿದ್ರೆ ಮಾಡಲು ಅವನನ್ನು ದಯೆಯಿಲ್ಲದೆ ಜಡೆಯಿಂದ ಶಸ್ತ್ರವನ್ನು ತೆಗೆದು ಅದರಿಂದ ಕೊಂದಳು.

೫೩. ಹೀಗೆ ಆನರ್ತರಾಜನಿಗೆ ಭಯಂಕರವೂ, ಲೋಕನಿಂದ್ಯವೂ ಆದ ತೀರ್ಥನಾಶದ ಫಲವು ಕೂಡಲೆ ಸಂಭವಿಸಿತು.

೫೪. ದ್ವಿಜೋತ್ತಮರೆ! ಈಗಲೂ ಅಲ್ಲಿ ರುದ್ರಶೀರ್ಷನಾದ ಬ್ರಹ್ಮನಿರುವನು-ರಾಜನು ಲಿಂಗಭೇದದ ಭಯದಿಂದ ಅವನನ್ನು ಭಂಜಿಸಲಿಲ್ಲ.

೫೫–೫೮. ಆ ರುದ್ರಶೀರ್ಷನ ಮುಂದೆ ನಿಂತು ಮಾಘ ಶುಕ್ಲ ಚತುರ್ದಶೀ ದಿನ ರುದ್ರಾಥರ್ವಶೀರ್ಷ ಮಂತ್ರವನ್ನು ಜಪಿಸಿ ಅವನನ್ನು ಹೂವಿನಮಾಲೆ ಮೊದಲಾದುವುಗಳಿಂದ ಪೂಜಿಸಿದವನು ಆ ಈಶ್ವರ ಪ್ರಭಾವದಿಂದ ಇಷ್ಟಾರ್ಥವನ್ನು ಪಡೆಯುವನು. ಅವನ ಮುಂದೆ ನಿಂತು ನೂರೆಂಟು ಸಾರಿ ರುದ್ರಾಥರ್ವಶೀರ್ಷ ಮಂತ್ರವನ್ನು ಜಪಿಸುವವನು ಉತ್ತಮಗತಿಯನ್ನು ಹೊಂದುವನು. ಅವನ ಮುಂದೆ ಆ ಮಂತ್ರವನ್ನು ಒಂದು ಸಾರಿ ನಿತ್ಯವೂ ಪಠಿಸುವವನು ಒಂದು ದಿನ ಮಾಡಿದ ಪಾಪದಿಂದ ಮುಕ್ತನಾಗುವನು. ನಿಮಗೆ ಈ ರುದ್ರಶೀರ್ಷದ ಉತ್ಪತ್ತಿಯ ಕ್ರಮವನ್ನೆಲ್ಲ ಹೇಳಿದ್ದೇನೆ.

ಮಾಹಾತ್ಮ್ಯಂ ಸರ್ವಪಾಪಾನಾಂ ಸದ್ಯೋ ನಾಶನಕಾರಕಂ ।
ಮಂಗಲಂ ಪರಮಂ ಹ್ಯೇತದಾಯುಷ್ಯಂ ಕೀರ್ತಿವರ್ಧನಂ ।
ರುದ್ರಶೀರ್ಷಸ್ಯಮಾಹಾತ್ಮ್ಯಂ ತಸ್ಮಾಚ್ಛ್ರೋತವ್ಯಮಾದರಾತ್ ॥ ೫೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರುದ್ರಶೀರ್ಷ ಮಾಹಾತ್ಮ್ಯವರ್ಣನಂ"
ನಾಮಾಷ್ಟಸಪ್ತತಿತಮೋಽಧ್ಯಾಯಃ

---

೫೯. ಈ ರುದ್ರಶೀರ್ಷ ಮಾಹಾತ್ಮ್ಯವು ಕೂಡಲೆ ಸಕಲ ಪಾಪಗಳನು ನಾಶಗೊಳಿಸುವುದೂ, ಮಂಗಳಕರವೂ, ಆಯುಃಕೀರ್ತಿಗಳನ್ನು ಹೆಚ್ಚಿಸುವುದೂ ಆಗಿರುವುದರಿಂದ ಇದನ್ನು ಭಕ್ತಿಯಿಂದ ಕೇಳಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರುದ್ರಶೀರ್ಷಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಾಽಶೀತಿತಮೋಽಧ್ಯಾಯಃ

### ವಾಲಖಿಲ್ಯಾಶ್ರಮಮಾಹಾತ್ಮ್ಯಕಥನಂ

ಸೂತ ಉವಾಚ:—

ತಸ್ಯೈವ ದಕ್ಷಿಣೇ ಭಾಗೇ ವಾಲಖಿಲ್ಯೈಃ ಪ್ರತಿಷ್ಠಿತಂ ।
ಲಿಂಗಮಸ್ತಿ ಸುವಿಖ್ಯಾತಂ ಸರ್ವಪಾತಕನಾಶನಂ ॥ ೧ ॥
ಯಮಾರಾಧ್ಯ ಚ ತೈಃ ಪೂರ್ವಂ ಶಕ್ರಾಮರ್ಷಸಮನ್ವಿತೈಃ ।
ಗರುಡೋ ಜನಿತಃ ಪಕ್ಷೀ ಖ್ಯಾತೋ ವಿಷ್ಣುರಥೋಽತ್ರ ಯಃ ॥ ೨ ॥

ಋಷಯ ಊಚುಃ:—

ಕಥಂ ತೇಷಾಂ ಸಮುತ್ಪನ್ನಃ ಶಕ್ರಸ್ಯೋಽಪರಿ ಸೂತಜ ।
ಪ್ರಕೋಪೋ ವಾಲಖಿಲ್ಯಾನಾಂ ಸಂಜಜ್ಞೇ ಗರುಡಃ ಕಥಂ ॥ ೩ ॥

ಸೂತ ಉವಾಚ:—

ಪುರಾ ಪ್ರಜಾಪತಿರ್ದಕ್ಷಸ್ತಸ್ಮಿನ್ ಕ್ಷೇತ್ರೇ ಸುಶೋಭನೇ ।
ಚಕಾರ ವಿಧಿವದ್ಯಜ್ಞಂ ಸಂಪೂರ್ಣವರದಕ್ಷಿಣಂ ॥ ೪ ॥
ತತಃ ಶಕ್ರಾದಯೋ ದೇವಾಃ ಸಹಾಯಾರ್ಥಂ ನಿಮಂತ್ರಿತಾಃ ।
ದಕ್ಷೇಣ ಮುನಯಶ್ಚೈವ ತಥಾ ರಾಜರ್ಷಯೋಽಮಲಾಃ ॥ ೫ ॥

---

## ಕನ್ನಡದ ಅನುವಾದ

### ವಾಲಖಿಲ್ಯಾಶ್ರಮಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಆ ರುದ್ರಶೀರ್ಷದ ದಕ್ಷಿಣದಿಕ್ಕಿನಲ್ಲಿ ವಾಲಖಿಲ್ಯರು ಪ್ರತಿಷ್ಠೆಮಾಡಿರುವ ಸಕಲ ಪಾಪಗಳನ್ನು ನಿವಾರಿಸುವ ಪ್ರಸಿದ್ಧವಾದ ಲಿಂಗವಿರುವುದು.

೨. ಹಿಂದೆ ಇಂದ್ರನಲ್ಲಿ ಕುಪಿತರಾದ ವಾಲಖಿಲ್ಯರು ಈ ಲಿಂಗವನ್ನು ಆರಾಧಿಸಿ ವಿಷ್ಣುರಥನಾದ ಗರುಡನನ್ನು ಉಂಟುಮಾಡಿದರು.

೩. ಋಷಿಗಳು ಹೇಳುತ್ತಾರೆ:—ಸೂತಪುತ್ರ! ಆ ವಾಲಖಿಲ್ಯರಿಗೆ ಇಂದ್ರನ ಮೇಲೆ ಹೇಗೆ ಕೋಪವುಂಟಾಯಿತು? ಗರುಡನು ಹೇಗೆ ಜನಿಸಿದನು?

೪. ಸೂತನು ಹೇಳುತ್ತಾನೆ:—ಹಿಂದೆ ದಕ್ಷಪ್ರಜಾಪತಿಯು ಆ ಕ್ಷೇತ್ರದಲ್ಲಿ ಉತ್ತಮ-ದಕ್ಷಿಣೆಯುಳ್ಳ ಯಜ್ಞವನ್ನು ವಿಧಿಯಂತೆ ಮಾಡಿದನು.

೫–೬. ಆ ದಕ್ಷನು ಯಜ್ಞದ ಸಹಾಯಕ್ಕಾಗಿ ಇಂದ್ರಾದಿ ದಿವಿಜರು, ಮುನಿಗಳು, ಶುದ್ಧರಾದ ರಾಜರ್ಷಿಗಳು, ಯಜ್ಞಕರ್ಮಕುಶಲರಾದ ವೇದ

ತಥಾ ವೇದವಿದೋ ವಿಪ್ರಾ ಯಜ್ಞಕರ್ಮವಿಚಕ್ಷಣಾಃ ।
ಗೃಹಸ್ಥಾಶ್ರಮಿಣೋ ಯೇ ಚ ಯೇ ಚಾಽರಣ್ಯನಿವಾಸಿನಃ ॥ ೬ ॥
ಅಥ ತೇ ವಾಲಖಿಲ್ಯಾಖ್ಯಾ ಮುನಯಃ ಸಂಶಿತವ್ರತಾಃ ।
ಏಕಾಂ ಸಮಿಧಮಾದಾಯ ಸಾಹಾಯ್ಯಾರ್ಥಂ ಪ್ರಜಾಪತೇಃ ।
ಪ್ರಸ್ಥಿತಾ ಯಜ್ಞವಾಟಂ ತಂ ಭಾರಾರ್ತಾಃ ಕ್ಲೇಶಸಂಯುತಾಃ ॥ ೭ ॥
ಅಥ ತೇಷಾಂ ಸಮಸ್ತಾನಾಂ ಮಾರ್ಗೇ ಗೋಷ್ಪದಮಾಗತಂ ।
ಜಲಪೂರ್ಣಂ ಸಮಾಯಾತಮಕಾಲಜಲದಾಗಮೇ ॥ ೮ ॥
ತತಸ್ತರೀತುಕಾಮಾಸ್ತೇ ಕ್ಲಿಶ್ಯಮಾನಾ ಇತಸ್ತತಃ ।
ಸಮಿದ್ಭಿರಾಶ್ರಮೋಪೇತಾ ದೇವರಾಜೇನ ವೀಕ್ಷಿತಾಃ ॥ ೯ ॥
ಗಚ್ಛತಾ ತೇನ ಮಾರ್ಗೇಣ ಮಖೇ ದಕ್ಷಪ್ರಜಾಪತೇಃ ।
ತತಶ್ಚಿರಂ ಸಮಾಲೋಕ್ಯ ಸ್ಮಿತಂ ಕೃತ್ವಾ ಸ ಕೌತುಕಾತ್ ।
ಜಗಾಮಾಽಥ ಸಮುಲ್ಲಂಘ್ಯ ಐಶ್ವರ್ಯಮದಗರ್ವಿತಃ ॥ ೧೦ ॥
ತತಸ್ತೇ ಕೋಪಸಂಯುಕ್ತಾಃ ಶಕ್ರಾದ್ದೃಷ್ಟ್ವಾ ಪರಾಭವಂ ।
ನಿವೃತ್ಯ ಸ್ವಾಶ್ರಮಂ ಗತ್ವಾ ಚಕ್ರುರ್ಮಂತ್ರಂ ಸನಿಶ್ಚಯಂ ॥ ೧೧ ॥
ಶಾಕ್ರಂ ಪದಂ ಸಮಾಸಾದ್ಯ ಯಸ್ಮಾದೇತೇನ ಪಾಪ್ಮನಾ ।
ಅತಿಕ್ರಾಂತಾ ವಯಂ ಸರ್ವೇ ತಸ್ಮಾತ್ತಾಪ್ಸ್ಯತಿ ಸ ತತ್ಪದಾತ್ ॥ ೧೨ ॥

---

ಬ್ರಾಹ್ಮಣರು, ಗೃಹಸ್ಥಾಶ್ರಮಿಗಳು, ವಾನಪ್ರಸ್ಥರು ಇವರನ್ನು ಆಮಂತ್ರಣ ಮಾಡಿದನು.

೭. ಶ್ಲಾಘ್ಯವ್ರತರಾದ ವಾಲಖಿಲ್ಯಮುನಿಗಳು ದಕ್ಷಪ್ರಜಾಪತಿಯ ಸಹಾಯಕ್ಕಾಗಿ ಒಂದು ಸಮಿತ್ತನ್ನು ತೆಗೆದುಕೊಂಡು ಭಾರದಿಂದ ದುಃಖಗೊಂಡವರಾಗಿ ಯಜ್ಞಶಾಲೆಯನ್ನು ಕುರಿತು ಹೊರಟರು.

೮. ಅವರು ಹೋಗುತ್ತಿರಲು ದಾರಿಯಲ್ಲಿ ಅಕಾಲವೃಷ್ಟಿಯಿಂದ ನೀರು ತುಂಬಿದ ಒಂದು ಗೋವಿನ ಪಾದ ಚಿಹ್ನೆಯು ಸಂಭವಿಸಿತು.

೯–೧೦. ಅನಂತರ ಅವರು ಸಮಿತ್ತುಗಳಿಂದ ದಾಟಬಯಸಿ ಇಲ್ಲಿ ಅಲ್ಲಿ ವ್ಯಥೆಗೊಳ್ಳುತ್ತಿರಲು ದಕ್ಷಪ್ರಜಾಪತಿಯ ಯಜ್ಞಕ್ಕೆ ಹೋಗುತ್ತಿರುವ ಇಂದ್ರನು ಅವರನ್ನು ಬಹಳ ಹೊತ್ತು ನೋಡಿ ಕುತೂಹಲದಿಂದ ನಕ್ಕು ಐಶ್ವರ್ಯಮದದಿಂದ ದಾಟ ಹೊರಟುಹೋದನು.

೧೧. ಆದರಿಂದ ಕುಪಿತರಾದ ಅವರು ಇಂದ್ರನಿಂದ ತಮಗುಂಟಾದ ಪರಾಭವವನ್ನು ನೋಡಿ ಹಿಂದಿರುಗಿ ತಮ್ಮ ಆಶ್ರಮಕ್ಕೆ ಹೋಗಿ ಆಲೋಚಿಸಿ ಹೀಗೆ ನಿಶ್ಚಯಿಸಿದರು.

೧೨. ಪಾಪಿಯಾದ ಈ ಇಂದ್ರನು ಇಂದ್ರಪದವಿಯನ್ನು ಹೊಂದಿ ನಮ್ಮನ್ನು ದಾಟಿರುವುದರಿಂದ ಇವನನ್ನು ಪದಚ್ಯುತನನ್ನಾಗಿ ಮಾಡಬೇಕು.

ಅನ್ಯಃ ಶಕ್ರಃ ಪ್ರಕರ್ತವ್ಯೋ ಮಂತ್ರವೀರ್ಯಸಮುದ್ಭವಃ ।
ಆಥರ್ವಣೈರ್ಮಹಾಸೂಕ್ತೈರಾಭಿಚಾರಿಕಸಂಭವೈಃ ॥ ೧೩ ॥
ಯೇನ ವ್ಯಾಪಾದ್ಯತೇ ತೇನ ಶಕ್ರೋಽಯಂ ಮದಗರ್ವಿತಃ ।
ಮಖಮಾಹಾತ್ಮ್ಯಸಂಪನ್ನಃ ಸ್ವಲ್ಪಬುದ್ಧಿ ಪರಾಕ್ರಮಃ ॥ ೧೪ ॥
ತತಸ್ತೇ ಶುಚಯೋ ಭೂತ್ವಾ ಸ್ಕಂದಸೂಕ್ತೇನ ಪಾವಕಂ ।
ಜುಹುವುಶ್ಚ ದಿವಾರಾತ್ರೌ ಕ್ಷುರಿಕೋಕ್ತೇನ ಸೋದ್ಯಮಾಃ ॥ ೧೫ ॥
ಗರ್ಭೋಪನಿಷದೇನೈವ ನೀಲರುದ್ರೈರ್ದ್ವಿಜೋತ್ತಮಾಃ ।
ರುದ್ರಶೀರ್ಷೇಣ ಕಾಮ್ಯೇನ ವಿಷ್ಣುಸೂಕ್ತಯುತೇನ ಚ ॥ ೧೬ ॥
ನಿಧಾಯ ಕಲಶಂ ಮಧ್ಯೇ ಮಂಡಲಸ್ಯೋದಕಾವೃತಂ ।
ಹೋಮಾಂತೇ ತತ್ರ ಸಂಸ್ಪರ್ಶಂ ಚಕ್ರುಸ್ತಸ್ಯ ಜಲೈಃ ಶುಭೈಃ ॥ ೧೭ ॥
ಏತಸ್ಮಿನ್ನಂತರೇ ಶಕ್ರಃ ಪ್ರಪಶ್ಯತಿ ಸುದಾರುಣಾನ್ ।
ಉತ್ಪಾತಾನಾತ್ಮನಾಶಾಯ ಜಾಯಮಾನಾನ್ ಸಮಂತತಃ ॥ ೧೮ ॥
ವಾಮೋ ಬಾಹುಶ್ಚ ನೇತ್ರಂಚ ಮುಹುಃ ಸ್ಫುರತಿ ಚಾಽಸ್ಯ ವೈ ।
ನ ಚ ಪಶ್ಯತಿ ನಾಸಾಗ್ರಂ ಜಿಹ್ವಾಗ್ರಂ ಚ ತಥಾ ಹನುಂ ॥ ೧೯ ॥
ಶಿರೋಹೀನಾಂ ತಥಾ ಛಾಯಾಂ ಗಗನೇ ಭಾಸ್ಕರದ್ವಯಂ ।
ಅರುಂಧತೀಂ ಧ್ರುವಂ ಚೈವ ನ ಚ ವಿಷ್ಣುಪದಾನಿ ಸಃ ॥ ೨೦ ॥

---

೧೩. ಆಭಿಚಾರಕ ಸಂಬಂಧವಾದ ಅಥರ್ವಣ ಮಹಾಸೂಕ್ತಗಳಿಂದ ಬೇರೆ ಇಂದ್ರನನ್ನು ಸೃಜಿಸಬೇಕು.

೧೪. ಅದರಿಂದ ಆ ಇಂದ್ರನು ಮದಗರ್ವಿತನೂ, ಯಜ್ಞಮಾಹಾತ್ಮ್ಯಗಳಿಂದ ಕೂಡಿದವನೂ, ಸ್ವಲ್ಪಬುದ್ಧಿ ಪರಾಕ್ರಮವುಳ್ಳವನೂ ಆದ ಈ ಇಂದ್ರನನ್ನು ಕೊಲ್ಲುವನು.

೧೫–೧೭. ಬಳಿಕ ಆ ವಾಲಖಿಲ್ಯರು ಶುದ್ಧರಾಗಿ ಮಂಡಲದ ನಡುವೆ ನೀರಿನ ಕಲಶವನ್ನಿಟ್ಟು ಹಗಲುರಾತ್ರಿ ಕ್ಷುರಿಕೋಕ್ತ, ಸ್ಕಂದಸೂಕ್ತ, ಗರ್ಭೋಪನಿಷತ್, ನೀಲರುದ್ರ, ರುದ್ರಶೀರ್ಷ, ವಿಷ್ಣುಸೂಕ್ತ ಇವುಗಳಿಂದ ಅಗ್ನಿಯಲ್ಲಿ ಹೋಮಮಾಡಿ ಹೋಮದ ಕೊನೆಯಲ್ಲಿ ಅದರ ನೀರನ್ನು ಮುಟ್ಟಿದರು.

೧೮. ಇಷ್ಟರಲ್ಲಿ ಇಂದ್ರನು ತನ್ನ ನಾಶಕ್ಕಾಗಿ ಸುತ್ತಲೂ ಉಂಟಾಗುತ್ತಿರುವ ಭಯಂಕರಗಳಾದ ಉತ್ಪಾತಗಳನ್ನು ನೋಡಿದನು.

೧೯. ಇವನ ಎಡತೋಳು, ಕಣ್ಣುಗಳು ಬಾರಿಬಾರಿಗೂ ಅದರಿದುವು. ತನ್ನ ಮೂಗು ನಾಲಿಗೆಗಳ ಕೊನೆಗಳನ್ನೂ ಕಪೋಲಗಳನ್ನೂ ನೋಡಲಿಲ್ಲ.

೨೦. ಹಾಗೆಯೇ ತನ್ನ ತಲೆಯಿಲ್ಲದ ನೆರಳನ್ನೂ ಆಕಾಶದಲ್ಲಿ ಎರಡು ಸೂರ್ಯರನ್ನೂ ಕಂಡನು. ಅರುಂಧತಿ, ಧ್ರುವ, ವಿಷ್ಣುಪದಗಳನ್ನು ನೋಡಲಿಲ್ಲ.

ನ ಚ ಮಂದಂ ನ ಚಾಕಾಶೇ ಸಂಸ್ಥಿತಾಂ ಸ್ವರ್ಧುನೀಂ ಹರಿಃ ।
ಸ್ವಪನ್ ಪಶ್ಯತಿ ಕೃಷ್ಣಾಂಗೀಂ ನಿತ್ಯಂ ನಾರೀಂ ಧೃತಾಯುಧಾಂ ॥ ೨೧ ॥
ಮುಕ್ತಕೇಶೀಂ ವಿವಸ್ತ್ರಾಂ ಚ ಕೃಷ್ಣದಂತಾಂ ಭಯಾನಕಾಂ ।
ತಾನ್ ದೃಷ್ಟ್ವಾ ಸ ಮಹೋತ್ಪಾತಾನ್ ದೇವರಾಜೋ ಬೃಹಸ್ಪತಿಂ ॥ ೨೨ ॥
ಪಪ್ರಚ್ಛ ಭಯಸಂತ್ರಸ್ತಃ ಕಿಮೇತದಿತಿ ಮೇ ಗುರೋ ।
ಜಾಯಂತೇ ಸುಮಹೋತ್ಪಾತಾ ದುರ್ನಿಮಿತ್ತಾನಿ ವೈ ಪೃಥಕ್ ॥ ೨೩ ॥
ಕಿಂ ಮೇ ಭವಿಷ್ಯತಿ ಪ್ರಾಜ್ಞ ವಿನಾಶಃ ಸಾಂಪ್ರತಂ ವದ ।
ಕಿಂ ವಾ ತ್ರೈಲೋಕ್ಯರಾಜ್ಯಸ್ಯ ಕಿಂ ವಾ ವಿತ್ತಾದಿಕಸ್ಯ ಚ ॥ ೨೪ ॥

ಬೃಹಸ್ಪತಿರುವಾಚ :—

ಯೇ ತ್ವಯಾ ಮದಮತ್ತೇನ ವಾಲಖಿಲ್ಯಾ ಮಹರ್ಷಯಃ ।
ಉಲ್ಲಂಘಿತಾಃ ಸ್ಥಿತಾ ಮಾರ್ಗೇ ಗೋಷ್ಪದಂ ತರ್ತುಮಿಚ್ಛವಃ ॥ ೨೫ ॥
ತೈರೇವಾಥರ್ವಣೈರ್ಮಂತ್ರೈಸ್ತ್ವತ್ಕೃತೇಽಸ್ತಿ ಶಚೀಪತೇ ।
ಕೃತೋ ಹೋಮಃ ಸುಸಂಪೂರ್ಣಃ ಕಲಶಶ್ಚಾಭಿಮಂತ್ರಿತಃ ॥ ೨೬ ॥
ಯುಷ್ಮಾಕಂ ಸುವಿನಾಶಾಯ ಸರ್ವದೇವಾಧಿನಾಯಕಃ ।
ಭವಿಷ್ಯತಿ ನ ಸಂದೇಹೋ ಮಂತ್ರೈರಾಥರ್ವಣೈರ್ಹರಿಃ ॥ ೨೭ ॥

---

೨೧–೨೩. ಆಕಾಶದಲ್ಲಿ ಶನಿ ಮತ್ತು ಗಂಗೆಯನ್ನೂ ಕಾಣಲಿಲ್ಲ. ಸ್ವಪ್ನದಲ್ಲಿ ನಿತ್ಯವೂ ಕೃಷ್ಣವರ್ಣಳೂ, ಆಯುಧಗಳನ್ನು ಹಿಡಿದವಳೂ, ತಲೆಕೂದಲುಗಳನ್ನು ಬಿಡಿಸಿಕೊಂಡಿರುವವಳೂ, ವಸ್ತ್ರಹೀನಳೂ, ಕೃಷ್ಣದನ್ತಳೂ, ಭಯಂಕರಳೂ ಆದ ಓರ್ವ ಹೆಂಗಸನ್ನು ಕಾಣುತ್ತಿದ್ದನು. ಆ ಇಂದ್ರನು ಆ ಮಹೋತ್ಪಾತಗಳನ್ನು ಕಂಡು ಭಯದಿಂದ ಬೃಹಸ್ಪತಿಯನ್ನು ಹೀಗೆ ಪ್ರಶ್ನಿಸಿದನು. ಗುರುವೆ! ಇದೇನು? ಉತ್ಪಾತಗಳೂ, ದುರ್ನಿಮಿತ್ತಗಳೂ ಉಂಟಾಗುತ್ತಿವೆ.

೨೪. ಈಗ ನಾನು ನಾಶವಾಗುವೆನೊ? ಅಥವಾ ತ್ರೈಲೋಕ್ಯರಾಜ್ಯ, ದ್ರವ್ಯಾದಿಗಳು ನಾಶವಾಗುವುವೊ?

೨೫. ಬೃಹಸ್ಪತಿಯು ಹೇಳುತ್ತಾನೆ:—ಮದಮತ್ತನಾದ ನೀನು ದಾರಿಯಲ್ಲಿ ಗೋಷ್ಪದವನ್ನು ದಾಟಲಿಚ್ಛಿಸುತ್ತಿರುವ ವಾಲಖಿಲ್ಯ ಮಹಾಮುನಿಗಳನ್ನು ದಾಟಿರುವೆ.

೨೬. ಆ ಮುನಿಗಳು ನಿನಗಾಗಿ ಅಥರ್ವಣ ಮಂತ್ರಗಳಿಂದ ಹೋಮವನ್ನು ಪೂರ್ತಿಮಾಡಿ ಕಲಶವನ್ನು ಅಭಿಮಂತ್ರಿಸಿರುವರು.

೨೭. ಆಥರ್ವಣ ಮಂತ್ರಗಳಿಂದ ನಿಮ್ಮ ನಾಶಕ್ಕಾಗಿ ಸರ್ವ ದೇವತೆಗಳಿಗೆ ಒಡೆಯನಾದ ಇಂದ್ರನು ನಿಶ್ಚಯವಾಗಿಯೂ ಹುಟ್ಟುವನು.

ತಸ್ಯ ತದ್ವಚನಂ ಶ್ರುತ್ವಾ ಸಹಸ್ರಾಕ್ಷೋ ಭಯಾನ್ವಿತಃ ।
ದಕ್ಷಂ ಗತ್ವಾ ಚ ದೀನಾಸ್ಯಃ ಪ್ರೋವಾಚ ತದನಂತರಂ ॥ ೨೮ ॥
ಅಸ್ಮನ್ನಾಶಾಯ ಮುನಿಭಿರ್ವಾಲಖಿಲ್ಯೈಃ ಪ್ರಜಾಪತೇ ।
ಪ್ರೋದ್ಯಮೋ ವಿಹಿತಃ ಸಮ್ಯಕ್ ಶಕ್ರಸ್ಯಾಽನ್ಯಸ್ಯ ವೈ ಕೃತೇ ॥ ೨೯ ॥
ತಾನ್ವಾರಯ ಸ್ವಯಂ ಗತ್ವಾ ಯಾವನ್ನೋ ಜಾಯತೇ ಪರಃ ।
ಶಕ್ರೋಽಸ್ಮದ್ಧ್ವಂಸನಾರ್ಥಾಯ ನಾಽಸ್ತಿ ತೇಷಾಮಸಾಧ್ಯತಾ ॥ ೩೦ ॥
ಅಥ ದಕ್ಷೋ ದ್ರುತಂ ಗತ್ವಾ ಶಕ್ರಾದ್ಯೈರಮರೈರ್ವೃತಃ ।
ಪ್ರಹಸಂಸ್ತಾನುವಾಚೇದಂ ವಿನಯೇನ ಸಮನ್ವಿತಃ ॥ ೩೧ ॥
ಕಿಮೇತತ್ಕ್ರಿಯತೇ ವಿಪ್ರಾಃ ಕರ್ಮ ರೌದ್ರತಮಂ ಮಹತ್ ।
ತ್ರೈಲೋಕ್ಯಂ ವ್ಯಾಕುಲಂ ಯೇನ ಸರ್ವಮೇತದ್ವ್ಯವಸ್ಥಿತಂ ॥ ೩೨ ॥
ಅಥ ತೇ ದಕ್ಷಮಾಲೋಕ್ಯ ಸಮಾಯಾಂತಂ ಸ್ವಮಾಶ್ರಯಂ ।
ಸಮ್ಮುಖಾಶ್ಚಾಽಭ್ಯಯುಸ್ತೂರ್ಣಂ ಪ್ರಗೃಹೀತಾಽರ್ಘ್ಯಪಾಣಯಃ ॥ ೩೩ ॥
ಅರ್ಘ್ಯಂ ದತ್ವಾ ಯಥಾ ನ್ಯಾಯಂ ಪೂಜಾಂ ಕೃತ್ವಾಽಥ ಭಕ್ತಿತಃ ।
ಪ್ರೋಚುಶ್ಚ ಪ್ರಣತಾ ಭೂತ್ವಾ ಸ್ವಾಗತಂ ತೇ ಪ್ರಜಾಪತೇ ॥ ೩೪ ॥
ಆದೇಶೋ ದೀಯತಾಂ ಶೀಘ್ರಂ ಯದರ್ಥಮಿಹ ಚಾಗತಃ ।
ಅಪಿ ಪ್ರಾಣಪ್ರದಾನೇನ ಕರಿಷ್ಯಾಮಃ ಪ್ರಿಯಂ ತವ ॥ ೩೫ ॥

---

೨೮. ಇಂದ್ರನು ಬೃಹಸ್ಪತಿಯ ಆ ಮಾತನ್ನು ಕೇಳಿ ಭಯಗೊಂಡು ದಕ್ಷನೆಡೆಗೆ ಹೋಗಿ ದೈನ್ಯದಿಂದ ಇಂತೆಂದನು.

೨೯. ಬ್ರಹ್ಮನೆ! ವಾಲಖಿಲ್ಯ ಮುನಿಗಳು ಇನ್ನೊಬ್ಬ ಇಂದ್ರನನ್ನು ಉಂಟುಮಾಡಲು ಪ್ರಯತ್ನಮಾಡಿದ್ದಾರೆ.

೩೦. ನಮ್ಮ ನಾಶಕ್ಕಾಗಿ ಇನ್ನೊಬ್ಬ ಇಂದ್ರನು ಹುಟ್ಟುವುದರೊಳಗೆ ಆ ಮುನಿಗಳನ್ನು ತಡೆ. ಆ ಮುನಿಗಳಿಗೆ ಅಸಾಧ್ಯವಾದುದಿಲ್ಲ.

೩೧. ಬಳಿಕ ದಕ್ಷನು ಇಂದ್ರಾದಿ ದೇವತೆಗಳೊಡನೆ ಆ ಮುನಿಗಳೆಡೆಗೆ ಹೋಗಿ ನಗುತ್ತ ವಿನಯದಿಂದ ಇಂತೆಂದನು.

೩೨. ಬ್ರಾಹ್ಮಣರೆ! ಇದೇನು? ಭಯಂಕರವಾದ ಕಾರ್ಯವನ್ನೆಸಗುತ್ತಿದ್ದೀರಿ. ಇದರಿಂದ ಮೂರು ಲೋಕಗಳು ವ್ಯಾಕುಲಗೊಂಡಿವೆ.

೩೩. ತರುವಾಯ ಆ ವಾಲಖಿಲ್ಯರು ತಮ್ಮ ಆಶ್ರಮಕ್ಕೆ ಬರುತ್ತಿರುವ ದಕ್ಷನನ್ನು ನೋಡಿ ಬೇಗನೆ ಅರ್ಘ್ಯಪಾಣಿಗಳಾಗಿ ಎದುರುಗೊಂಡರು.

೩೪. ನ್ಯಾಯದಂತೆ ಅರ್ಘ್ಯವನ್ನಿತ್ತು ಭಕ್ತಿಯಿಂದ ಪೂಜಿಸಿ ನಮಸ್ಕಾರ ಮಾಡಿ ಹೀಗೆಂದರು. ದಕ್ಷನೆ! ನಿನಗೆ ಸುಖಾಗಮನವೊ?

೩೫. ಏತಕ್ಕಾಗಿ ಇಲ್ಲಿಗೆ ಬಂದಿರುವೆ? ಆಜ್ಞಾಪಿಸು. ಪ್ರಾಣವನ್ನಾದರೂ ಕೊಟ್ಟು ನಿನಗೆ ಹಿತವನ್ನುಂಟುಮಾಡುವೆವು?

ದಕ್ಷ ಉವಾಚ:—
ಏತದ್ರೌತತಮಂ ಕರ್ಮ ಸರ್ವದೇವಭಯಾವಹಂ ।
ತ್ಯಾಜ್ಯಂ ಯುಷ್ಮಾಭಿರವ್ಯಗ್ರೈರೇತದರ್ಥಮಿಹಾಗತಃ ॥ ೩೬ ॥
ಮುನಯ ಊಚುಃ:—
ವಯಂ ಶಕ್ರೇಣ ತೇ ಯಜ್ಞೇ ಸಮಾಯಾತಾಃ ಸುಭಕ್ತಿತಃ ।
ಉಲ್ಲಂಘಿತಾ ಮದೋದ್ರೇಕಾತ್ಕೃತ್ವಾ ಹಾಸ್ಯಂ ಮುಹುರ್ಮುಹುಃ ॥ ೩೭ ॥
ಶಕ್ರೋಚ್ಛೇದಾಯ ಚಾಸ್ಮಾಭಿಃ ಶಕ್ರೋಽನ್ಯೋ ವೀರ್ಯಮಂತ್ರತಃ ।
ಪ್ರಾರಬ್ಧಃ ಕರ್ತುಮತ್ಯುಗ್ರೈರ್ಹೋಮಾಂತಶ್ಚ ವ್ಯವಸ್ಥಿತಃ ॥ ೩೮ ॥
ತತ್ಕಥಂ ಮಂತ್ರವೀರ್ಯಂ ತತ್ಕ್ರಿಯತೇಽಮೋಘಮಿತ್ಯಹೋ ।
ವೇದೋಕ್ತಂ ಚ ವಿಶೇಷೇಣ ತಸ್ಮಾದತ್ರ ವದ ಪ್ರಭೋ ॥ ೩೯ ॥
ತ್ವಮೇವ ಯದಿ ಶಕ್ತಃ ಸ್ಯಾದನ್ಯಥಾ ಕರ್ತುಮೇವ ಹಿ ।
ಕುರುಷ್ವ ವಾ ಸ್ವಯಂ ನಾಥ ನಾಽಸ್ಮಾಕಂ ಶಕ್ತಿರೀದೃಶೀ ॥ ೪೦ ॥
ದಕ್ಷ ಉವಾಚ:—
ಸತ್ಯಮೇತನ್ಮಹಾಭಾಗಾ ಯದ್ಯುಷ್ಮಾಭಿಃ ಪ್ರಕೀರ್ತಿತಂ ।
ನಾಽನ್ಯಥಾ ಶಕ್ಯತೇ ಕರ್ತುಂ ವೇದಮಂತ್ರೋದ್ಭವಂ ಬಲಂ ॥ ೪೧ ॥
ತದ್ಯ ಏಷ ಕೃತೋ ಹೋಮೋ ಯುಷ್ಮಾಭಿರ್ವೇದಮಂತ್ರತಃ ।
ದೇವರಾಜಾರ್ಥಮವ್ಯಗ್ರೈಃ ಕಲಶಶ್ಚಾಭಿಮಂತ್ರಿತಃ ॥ ೪೨ ॥

---

೩೬. ದಕ್ಷನು ಹೇಳುತ್ತಾನೆ:—ನೀವು ಸಕಲ ದೇವತೆಗಳಿಗೆ ಭಯವನ್ನುಂಟು ಮಾಡುವ ಈ ಭಯಂಕರವಾದ ಕಾರ್ಯವನ್ನು ತ್ಯಜಿಸಿ. ನಾನು ಇದಕ್ಕಾಗಿ ಇಲ್ಲಿಗೆ ಬಂದಿರುವೆನು.

೩೭. ಮುನಿಗಳು ಹೇಳುತ್ತಾರೆ:—ನಿನ್ನ ಯಜ್ಞಕ್ಕೆ ಭಕ್ತಿಯಿಂದ ಬರುತ್ತಿರುವ ನಮ್ಮನ್ನು ಇಂದ್ರನು ಗರ್ವದಿಂದ ಅನೇಕ ಬಾರಿ ನಕ್ಕು ದಾಟಿರುವನು.

೩೮. ನಾವು ಶಕ್ರನನ್ನು ಕೊಲ್ಲುವುದಕ್ಕಾಗಿ ಮಂತ್ರಶಕ್ತಿಯಿಂದ ಮತ್ತೊಬ್ಬ ಇಂದ್ರನನ್ನು ಸೃಜಿಸಲು ಉದ್ಯುಕ್ತರಾಗಿದ್ದೇವೆ. ಹೋಮವೂ ಮುಗಿದಿದೆ.

೩೯–೪೦. ಆದ್ದರಿಂದ ವೇದೋಕ್ತವಾದ ಮಂತ್ರದ ಸಾಮರ್ಥ್ಯವನ್ನು ಹೇಗೆ ವ್ಯರ್ಥಗೊಳಿಸುವೆವು ಹೇಳು. ನೀನೇ ವ್ಯತ್ಯಾಸಗೊಳಿಸಲು ಶಕ್ತನಾಗಿದ್ದರೆ ಹಾಗೆಯೇ ಮಾಡು. ನಮಗೆ ಇಂತಹ ಶಕ್ತಿಯಿಲ್ಲ.

೪೧. ದಕ್ಷನು ಹೇಳುತ್ತಾನೆ:—ಭಾಗ್ಯಶಾಲಿಗಳೆ! ನೀವು ಹೇಳಿರುವುದು ನಿಜ. ವೇದಮಂತ್ರದ ಬಲವನ್ನು ವ್ಯತ್ಯಾಸಗೊಳಿಸಲು ಸಾಧ್ಯವಿಲ್ಲ.

೪೨. ನೀವು ಮತ್ತೊಬ್ಬ ಇಂದ್ರನನ್ನು ಹುಟ್ಟಿಸಲು ವೇದಮಂತ್ರದಿಂದ ಹೋಮವನ್ನು ಮಾಡಿ ಕಲಶವನ್ನು ಅಭಿಮಂತ್ರಿಸಿದ್ದೀರಿ.

ಸೋಽಯಂ ಮದ್ವಚನಾದ್ರಾಜಾ ಭವಿಷ್ಯತಿ ಪತತ್ರಿಣಾಂ ।
ತೇಜೋವೀರ್ಯಸಮೋಪೇತಃ ಶಕ್ರಾದಪಿ ಸುವೀರ್ಯವಾನ್ ॥ ೪೩ ॥
ಏತಸ್ಯ ದೇವರಾಜಸ್ಯ ಕ್ಷಂತವ್ಯಂ ಮಮ ವಾಕ್ಯತಃ ।
ತತ್ಕೃತಂ ಮೂಢಭಾವೇನ ಯದನೇನ ವಿಚೇಷ್ಟಿತಂ ॥ ೪೪ ॥
ಏವಮುಕ್ತ್ವಾಽಥ ತೇಷಾಂ ತಂ ಸಹಸ್ರಾಕ್ಷಂ ಭಯಾತುರಂ ।
ದರ್ಶಯಾಮಾಸ ದಕ್ಷಸ್ತು ವಿನಯಾಽವನತಂ ಸ್ಥಿತಂ ॥ ೪೫ ॥
ತೇಽಪಿ ದೃಷ್ಟ್ವಾ ಸಹಸ್ರಾಕ್ಷಂ ವೇಪಮಾನಂ ಕೃತಾಂಜಲಿಂ ।
ಪ್ರೋಚುರ್ಮಾಽತಿಕ್ರಮಂ ಶಕ್ರ ಬ್ರಾಹ್ಮಣಾನಾಂ ಕರಿಷ್ಯಸಿ ॥ ೪೬ ॥
ಭೂಯೋ ಯದಿ ದಿವೇಶಾನಾಮಾಧಿಪತ್ಯಂ ಪ್ರವಾಂಛಸಿ ।
ಅಪಿ ಮಂದೋಽಪಿ ಮೂರ್ಖೋಽಪಿ ಕ್ರಿಯಾಹೀನೋಽಪಿ ವಾ ದ್ವಿಜಃ ।
ನಾಽವಜ್ಞೇಯೋ ಬುಧೈಃ ಕ್ವಾಽಪಿ ಲೋಕದ್ವಯಮಭೀಪ್ಸುಭಿಃ ॥ ೪೭ ॥

ಇಂದ್ರ ಉವಾಚ :—

ಅಜ್ಞಾನಾದ್ಯದಿ ವಾ ಜ್ಞಾನಾದ್ಯನ್ಮಯಾ ದುಷ್ಕೃತಂ ಕೃತಂ ।
ತತ್ಕ್ಷಂತವ್ಯಂ ದ್ವಿಜೈಃ ಸರ್ವೈರ್ವಿಶೇಷಾದ್ದಕ್ಷವಾಕ್ಯತಃ ॥ ೪೮ ॥
ಪ್ರಗೃಹ್ಯತಾಂ ವರೋಽಸ್ಮಾಕಂ ಯಃ ಸದಾ ವರ್ತತೇ ಹೃದಿ ।
ಪ್ರದಾಸ್ಯಾಮಿ ನ ಸಂದೇಹೋ ನಾಽದೇಯಂ ವಿದ್ಯತೇ ಮಮ ॥ ೪೯ ॥

---

೪೩. ಇದರಿಂದ ನನ್ನ ಮಾತಿನಂತೆ ತೇಜೋವೀರ್ಯಗಳಿಂದ ಕೂಡಿದವನೂ, ಇಂದ್ರನಿಗಿಂತ ಸಮರ್ಥನೂ ಆದ ಪಕ್ಷಿರಾಜನು ಜನಿಸುವನು.

೪೪. ನೀವು ನನ್ನ ಮಾತಿನಿಂದ ಇಂದ್ರನು ಅಜ್ಞಾನದಿಂದೆಸಗಿದ ದುಶ್ಚೇಷ್ಟೆಯನ್ನು ಕ್ಷಮಿಸಿರಿ.

೪೫. ದಕ್ಷನು ವಾಲಖಿಲ್ಯರಿಗೆ ಹೀಗೆ ಹೇಳಿ ವಿನಯದಿಂದ ಬಗ್ಗಿರುವ ಭಯಗೊಂಡ ಇಂದ್ರನನ್ನು ತೋರಿಸಿದನು.

೪೬—೪೭. ಅವರು ಕೈ ಮುಗಿದುಕೊಂಡು ನಡುಗುತ್ತಿರುವ ಇಂದ್ರನನ್ನು ನೋಡಿ ಹೀಗೆಂದರು. ದೇವರಾಜ! ನೀನು ದೇವಾಧಿಪತ್ಯವನ್ನು ಅಪೇಕ್ಷಿಸುವುದಾದರೆ ಮರಳಿ ಹೀಗೆ ಬ್ರಾಹ್ಮಣರನ್ನು ಅತಿಕ್ರಮಿಸಬೇಡ. ಉಭಯ ಲೋಕವನ್ನು ಬಯಸುವವರು ಮೂಢನಾಗಲಿ, ಮೂರ್ಖನಾಗಲಿ, ಕ್ರಿಯಾಭ್ರಷ್ಟನಾಗಲಿ, ಬ್ರಾಹ್ಮಣನನ್ನು ಅವಮಾನಗೊಳಿಸಬಾರದು.

೪೮. ಇಂದ್ರನು ಹೇಳುತ್ತಾನೆ:—ಬ್ರಾಹ್ಮಣರೆ! ದಕ್ಷನ ವಾಕ್ಯದಿಂದ ತಿಳಿದೊ, ತಿಳಿಯದೆಯೊ ನಾನು ಮಾಡಿದ ಅಪರಾಧವನ್ನು ಕ್ಷಮಿಸಿರಿ.

೪೯. ನೀವು ಅಭೀಷ್ಟವಾದ ವರವನ್ನು ಸ್ವೀಕರಿಸಿರಿ. ನಿಶ್ಚಯವಾಗಿಯೂ ಅದನ್ನು ಕೊಡುವೆನು. ನಿಮಗೆ ಕೊಡದಿರುವುದು ಯಾವುದೂ ಇಲ್ಲ.

ಮುನಯೊ ಊಚುಃ :—
ಅಸ್ಮಿನ್ ಕುಂಡೇ ನರೋ ಹೋಮಂ ಯಃ ಕುರ್ಯಾಚ್ಛ್ರದ್ಧಯಾನ್ವಿತಃ ।
ಏತಲ್ಲಿಂಗಂ ಸಮಭ್ಯರ್ಚ್ಯ ತಸ್ಯಾಸ್ತು ಹೃದಿ ವಾಂಛಿತಂ ॥ ೫೦ ॥
ಇಂದ್ರ ಉವಾಚ :—
ಏತಲ್ಲಿಂಗಂ ಸಮಭ್ಯರ್ಚ್ಯ ಯೋಽತ್ರ ಹೋಮಂ ಕರಿಷ್ಯತಿ ।
ಕುಂಡೇಽತ್ರ ವಾಂಛಿತಂ ಸದ್ಯಃ ಸಫಲಂ ಸ ಹಿ ಲಪ್ಸ್ಯತೇ ॥ ೫೧ ॥
ನಿಷ್ಕಾಮೋ ವಾಽಥ ಸಂಪೂಜ್ಯ ಲಿಂಗಮೇತಚ್ಛುಭಾವಹಂ ।
ಪ್ರಯಾಸ್ಯತಿ ಪರಾಂ ಸಿದ್ಧಿಂ ತ್ರಿದಶೈರಪಿ ದುರ್ಲಭಾಂ ॥ ೫೨ ॥
ಸೂತ ಉವಾಚ :—
ಏವಮುಕ್ತ್ವಾ ಸಹಸ್ರಾಕ್ಷೋ ವಾಲಖಿಲ್ಯಾನ್ ಮುನೀಶ್ವರಾನ್ ।
ಐರಾವತಂ ಸಮಾರುಹ್ಯ ದಕ್ಷಯಜ್ಞೇ ತತೋ ಗತಃ ॥ ೫೩ ॥
ದಕ್ಷೋಽಪಿ ವಿಧಿವದ್ಯಜ್ಞಂ ಚಕಾರ ದ್ವಿಜಸತ್ತಮಾಃ ।
ಸಂಹೃಷ್ಟೈರ್ವಾಲಖಿಲ್ಯೈಸ್ತೈರುಪವಿಷ್ಟೈಃ ಸಮೀಪತಃ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಾಲಖಿಲ್ಯಾಶ್ರಮಮಾಹಾತ್ಮ್ಯಕಥನಂ"
ನಾಮೈಕೋನಾಽಶೀತಿತಮೋಽಧ್ಯಾಯಃ

---

೫೦. ಮುನಿಗಳು ಹೇಳುತ್ತಾರೆ :—ಈ ಕುಂಡದಲ್ಲಿ ಶ್ರದ್ಧೆಯಿಂದ ಈ ಲಿಂಗವನ್ನರ್ಚಿಸಿ ಹೋಮವನ್ನು ಮಾಡಿದವನ ಇಷ್ಟಾರ್ಥವು ಕೈಗೂಡಲಿ.

೫೧. ಇಂದ್ರನು ಹೇಳುತ್ತಾನೆ :—ಇಲ್ಲಿ ಈ ಲಿಂಗವನ್ನು ಅರ್ಚಿಸಿ ಹೋಮವನ್ನು ಮಾಡಿದವನ ಇಷ್ಟಾರ್ಥವು ಸಿದ್ಧಿಸುವುದು.

೫೨. ನಿಷ್ಕಾಮನಾಗಿ ಶುಭಕರವಾದ ಈ ಲಿಂಗವನ್ನು ಅರ್ಚಿಸಿದವನು ದೇವದುರ್ಲಭವಾದ ಸಿದ್ಧಿಯನ್ನು ಪಡೆಯುವನು.

೫೩. ಸೂತನು ಹೇಳುತ್ತಾನೆ :—ಇಂದ್ರನು ವಾಲಖಿಲ್ಯರನ್ನು ಕುರಿತು ಹೀಗೆ ಹೇಳಿ ಐರಾವತವನ್ನೇರಿ ದಕ್ಷಯಜ್ಞಕ್ಕೆ ತೆರಳಿದನು.

೫೪. ದಕ್ಷನೂ ಸಮೀಪದಲ್ಲಿ ಸಂತೋಷದಿಂದ ಕುಳಿತಿರುವ ವಾಲಖಿಲ್ಯರೊಡನೆ ಯಜ್ಞವನ್ನು ನೆರವೇರಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಾಲಖಿಲ್ಯಾಶ್ರಮಮಾಹಾತ್ಮ್ಯವರ್ಣನ" ವೆಂಬ
ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಶೀತಿತಮೋಽಧ್ಯಾಯಃ

### ಅಥ ಸುಪರ್ಣಾಖ್ಯಮಾಹಾತ್ಮ್ಯೇ ವಿಷ್ಣುದರ್ಶನಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಯದೇತದ್ಭವತಾ ಪ್ರೋಕ್ತಂ ತೇಜೋವೀರ್ಯಸಮನ್ವಿತಃ ।
ಗರುಡಸ್ತೇನ ಸಂಜಜ್ಞೇ ಮುನೀನಾಂ ಹೋಮಕರ್ಮಣಾ ॥ ೧ ॥
ಸ ಕಥಂ ತತ್ರ ಸಂಭೂತ ಏತನ್ನೋ ವಿಸ್ತರಾದ್ವದ ।
ವಿನತಾಯಾಃ ಸಮುದ್ಭೂತ ಇತ್ಯೇಷಾ ಶ್ರೂಯತೇ ಶ್ರುತಿಃ ॥ ೨ ॥

ಸೂತ ಉವಾಚ:—

ಯೋಽಸಾವಾಥರ್ವಣೈರ್ಮಂತ್ರೈಃ ಕಲಶಶ್ಚಾಭಿಮಂತ್ರಿತಃ ।
ತೈರ್ಮಂತ್ರೈರ್ವಾಲಖಿಲ್ಯೈಶ್ಚ ಮಹಾಮರ್ಷಸಮನ್ವಿತೈಃ ॥ ೩ ॥
ನಿವಾರಿತೈಶ್ಚ ದಕ್ಷೇಣ ಸೂಚಿತೇ ವಿಹಗಾಧಿಪೇ ।
ಕಶ್ಯಪಸ್ತಂ ಸಮಾದಾಯ ಕಲಶಂ ಪ್ರಯಯೌ ಗೃಹಂ ॥ ೪ ॥
ತತಃ ಪ್ರೋವಾಚ ಸಂಹೃಷ್ಟೋ ವಿನತಾಂ ದಯಿತಾಂ ನಿಜಾಂ ।
ಏತತ್ಪಿಬ ಜಲಂ ಭದ್ರೇ ಮಂತ್ರಪೂತಂ ಮಹತ್ತರಂ ॥ ೫ ॥

---

### ಕನ್ನಡದ ಅನುವಾದ

#### ವಿಷ್ಣುದರ್ಶನಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಮುನಿಗಳ ಹೋಮದಿಂದ ತೇಜೋವೀರ್ಯಗಳಿಂದ ಕೂಡಿದ ಗರುಡನು ಜನಿಸಿದನೆಂದು ಹೇಳಿರುವೆ.

೨. ಆ ಗರುಡನು ವಿನತೆಯಿಂದ ಜನಿಸಿರುವನೆಂದು ಕೇಳಿದ್ದೇವೆ. ಅವನು ಆ ಹೋಮದಿಂದ ಹೇಗೆ ಜನಿಸಿದನು? ವಿಸ್ತಾರವಾಗಿ ನಮಗೆ ಹೇಳು.

೩-೪. ಸೂತನು ಹೇಳುತ್ತಾನೆ:—ಅತ್ಯಂತ ಕುಪಿತರಾದ ವಾಲಖಿಲ್ಯರು ಆಥರ್ವಣ ಮಂತ್ರಗಳಿಂದ ಕಲಶವನ್ನು ಅಭಿಮಂತ್ರಿಸಲು ದಕ್ಷನು ಅವರನ್ನು ತಡೆದು ಕಶ್ಯಪನಿಗೆ ಗರುಡನು ಜನಿಸುವನೆಂದು ತಿಳಿಸಿದನು. ಕಶ್ಯಪನು ಆ ಕಲಶವನ್ನು ತೆಗೆದುಕೊಂಡು ಮನೆಗೆ ಹೋದನು.

೫. ಬಳಿಕ ಕಶ್ಯಪನು ಸಂತೋಷದಿಂದ ತನ್ನ ಸತಿಯಾದ ವಿನತೆಯನ್ನು ಕುರಿತು ಮಂಗಳಕರಳೆ! ಮಂತ್ರಶುದ್ಧವಾದ ಈ ನೀರನ್ನು ಕುಡಿ.

ಯೇನ ತೇ ಜಾಯತೇ ಪುತ್ರಃ ಸಹಸ್ರಾಕ್ಷಾಧಿಕೋ ಬಲೀ ।
ತೇಜಸ್ವೀ ಚ ಯಶಸ್ವೀ ಚ ಅಜೇಯಃ ಸರ್ವದಾನವೈಃ ॥ ೬ ॥
ತಸ್ಯ ತದ್ವಚನಂ ಶ್ರುತ್ವಾ ತತ್ಕ್ಷಣಾದೇವ ಸಂಪಪೌ ।
ತತ್ತೋಯಂ ಸಾ ವರಾರೋಹಾ ಸದ್ಯೋಗರ್ಭಂ ತತೋ ದಧೇ ॥ ೭ ॥
ಏವಂ ತಜ್ಜಲಪಾನೇನ ತೇಜೋವೀರ್ಯಸಮನ್ವಿತಃ ।
ಕಶ್ಯಪಾದ್ಗರುಡೋ ಜಜ್ಞೇ ಸರ್ವಸರ್ಪಭಯಾವಹಃ ॥ ೮ ॥
ಯೇನಾಽಮೃತಂ ಹೃತಂ ವೀರ್ಯಾತ್ಪರಿಭೂಯ ಪುರಂದರಂ ।
ಮಾತೃಭಕ್ತಿಪರೀತೇನ ಸರ್ಪಾಣಾಂ ಸನ್ನಿವೇದಿತಂ ॥ ೯ ॥
ಯೋ ಜಜ್ಞೇ ದಯಿತೋ ವಿಷ್ಣೋರ್ವಾಹನತ್ವಮುಪಾಗತಃ ।
ಧ್ವಜಾಗ್ರೇ ತು ರಥಸ್ಯಾಽಪಿ ಯಃ ಸದೈವ ವ್ಯವಸ್ಥಿತಃ ॥ ೧೦ ॥
ಯೇನ ಪೂರ್ವಂ ತಪಸ್ತಪ್ತ್ವಾ ಕ್ಷೇತ್ರೇಽತ್ರೈವ ಮಹಾತ್ಮನಾ ।
ತ್ರಿನೇತ್ರಸ್ತುಷ್ಟಿಮಾನೀತೋ ಗತಪಕ್ಷೇಣ ಧೀಮತಾ ॥ ೧೧ ॥
ಪಕ್ಷಾಪ್ತಿರ್ಯೇನ ಸಂಜಾತಾ ಯಸ್ಯ ಭೂಯೋಽಪಿ ತಾದೃಶೀ ।
ದೇವದೇವಪ್ರಸಾದೇನ ವಿಶಿಷ್ಟಾ ಚಾಽಥ ನಿರ್ಮಿತಾ ॥ ೧೨ ॥

---

೬. ಇದರಿಂದ ನಿನಗೆ ಇಂದ್ರನಿಗಿಂತ ಬಲಿಷ್ಠನೂ, ತೇಜಸ್ವಿಯೂ, ಕೀರ್ತಿಮಂತನೂ, ಸಮಸ್ತ ದಾನವರಿಗೆ ಅಜೇಯನೂ ಆದ ಪುತ್ರನು ಜನಿಸುವನು ಎಂದನು.

೭. ಆ ವಿನತೆಯು ಅವನ ಆ ಮಾತನ್ನು ಕೇಳಿ ಕೂಡಲೆ ಆ ನೀರನ್ನು ಕುಡಿದು ಗರ್ಭಿಣಿಯಾದಳು.

೮. ಹೀಗೆ ಆ ನೀರನ್ನು ಕುಡಿಯುವುದರಿಂದ ಕಶ್ಯಪನಿಗೆ ತೇಜೋವೀರ್ಯಗಳಿಂದ ಕೂಡಿದವನೂ, ಸಕಲ ಸರ್ಪಗಳಿಗೆ ಭಯಂಕರನೂ ಆದ ಗರುಡನು ಹುಟ್ಟಿದನು.

೯. ಅವನು ಶೌರ್ಯದಿಂದ ಇಂದ್ರನನ್ನು ತಿರಸ್ಕರಿಸಿ ಮಾತೃಭಕ್ತಿಯಿಂದ ಸಹಿತನಾಗಿ ಸರ್ಪಗಳಿಗಿತ್ತ ಅಮೃತವನ್ನು ಅಪಹರಿಸಿದನು.

೧೦. ಅವನು ವಿಷ್ಣುವಿಗೆ ಪ್ರಿಯನಾಗಿ ವಾಹನನಾದನು. ಯಾವಾಗಲೂ ಅವನ ರಥದ ಧ್ವಜದ ಮೇಲೆಯೂ ನೆಲೆಸಿದನು.

೧೧. ಮಹಾತ್ಮನಾದ ಆ ಗರುಡನು ಪಕ್ಷರಹಿತನಾಗಿ ಈ ಕ್ಷೇತ್ರದಲ್ಲಿ ತಪವಂಗೈದು ಶಂಕರನನ್ನು ಒಲಿಸಿಕೊಂಡನು.

೧೨. ಅವನಿಗೆ ಮರಳಿ ಶಿವನ ಅನುಗ್ರಹದಿಂದ ಉತ್ತಮವಾದ ರೆಕ್ಕೆಯು ಉಂಟಾಯಿತು.

ಮುನಯ ಊಚುಃ:—

ಕಥಂ ತಸ್ಯ ಗತೌ ಪಕ್ಷೌ ಗರುಡಸ್ಯ ಮಹಾತ್ಮನಃ ।
ಪುನರ್ಲಬ್ಧೌ ಕಥಂ ತೇನ ಕಥಂ ತುಷ್ಟೋ ಮಹೇಶ್ವರಃ ।
ಏತನ್ನೋ ವಿಸ್ತರಾದ್ಬ್ರೂಹಿ ಸೂತಪುತ್ರ ಯಥಾತಥಂ ॥ ೧೩ ॥

ಸೂತ ಉವಾಚ :—

ಪುರಾಽಽಸೀದ್ಬ್ರಾಹ್ಮಣೋ ಮಿತ್ರಂ ಭೃಗುವಂಶ ಕುಲೋದ್ವಹಃ ।
ಗರುಡಸ್ಯ ದ್ವಿಜಶ್ರೇಷ್ಠಾ ಬಾಲಭಾವಾದಪಿ ಪ್ರಭೋ ॥ ೧೪ ॥
ತಸ್ಯ ಕನ್ಯಾ ಪುರಾ ಜಾತಾ ಮಾಧವೀನಾಮ ಸಮ್ಮತಾ ।
ರೂಪೌದಾರ್ಯಗುಣೋಪೇತಾ ಸರ್ವಲಕ್ಷಣ ಲಕ್ಷಿತಾ ॥ ೧೫ ॥
ನ ದೇವೀ ನ ಚ ಗಂಧರ್ವೀ ನಾಽಽಸುರೀ ನ ಚ ಪನ್ನಗೀ ।
ತಾದೃಗ್ರೂಪಾ ಮಹಾಭಾಗಾ ಯಾದೃಶೀ ಸಾ ಸುಮಧ್ಯಮಾ ॥ ೧೬ ॥
ಅಥ ತಸ್ಯಾ ವರಾರ್ಥಾಯ ಗರುಡಂ ವಿಹಗಾಧಿಪಂ ।
ಸ ಪ್ರೋವಾಚ ಪರಂ ಮಿತ್ರಂ ವಿನಯಾಽವನತಃ ಸ್ಥಿತಃ ॥ ೧೭ ॥
ಏತಸ್ಯಾ ಮಮಕನ್ಯಾಯಾ ವರಂ ತ್ವಂ ವಿಹಗಾಧಿಪ ।
ಸದೃಶಂ ವೀಕ್ಷಯಸ್ವಾಽದ್ಯ ಯೇನ ತಸ್ಮೈ ದದಾಮ್ಯಹಂ ॥ ೧೮ ॥

ಗರುಡ ಉವಾಚ :—

ಮಮ ಪೃಷ್ಠಂ ಸಮಾರುಹ್ಯ ಸಮಸ್ತಂ ಕ್ಷಿತಿಮಂಡಲಂ ।
ತ್ವಂ ಭ್ರಮಸ್ವ ದ್ವಿಜಶ್ರೇಷ್ಠ ಗೃಹೀತ್ವೇಮಾಂ ಚ ಕನ್ಯಕಾಂ ॥ ೧೯ ॥

---

೧೩. ಮುನಿಗಳು ಹೇಳುತ್ತಾರೆ:— ಸೂತತನಯ! ಮಹಾತ್ಮನಾದ ಆ ಗರುಡನ ರೆಕ್ಕೆಗಳು ಹೇಗೆ ನಾಶವಾದುವು? ಮರಳಿ ಹೇಗೆ ಉಂಟಾದುವು? ಮಹೇಶ್ವರನು ಹೇಗೆ ತುಷ್ಟನಾದನು? ಇದನ್ನು ನಮಗೆ ವಿಸ್ತಾರವಾಗಿ ಹೇಳು.

೧೪. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಹಿಂದೆ ಗರುಡನಿಗೆ ಬಾಲ್ಯದಿಂದಲೂ ಭೃಗುವಂಶದ ಒಬ್ಬ ಬ್ರಾಹ್ಮಣನು ಸ್ನೇಹಿತನಾಗಿದ್ದನು.

೧೫. ಅವನಿಗೆ ರೂಪೌದಾರ್ಯಗಳಿಂದಲೂ, ಸಕಲ ಲಕ್ಷಣಗಳಿಂದಲೂ ಕೂಡಿದ ಮಾಧವಿಯೆಂಬ ಓರ್ವಕನ್ಯೆಯು ಹುಟ್ಟಿದಳು.

೧೬–೧೭. ದೇವ, ಗಂಧರ್ವ, ಅಸುರ, ಪನ್ನಗರಲ್ಲಿ ಯಾವ ಹೆಂಗಸೂ ಅವಳಂತೆ ಸುಂದರಿಯಾಗಿರಲಿಲ್ಲ. ಅನಂತರ ಆ ಭಾರ್ಗವ ಬ್ರಾಹ್ಮಣನು ಆ ಕನ್ಯೆಗಾಗಿ ಅತ್ಯಂತ ಮಿತ್ರನಾದ ಗರುಡನನ್ನು ಕುರಿತು ಇಂತೆಂದನು.

೧೮. ಪಕ್ಷಿರಾಜ! ಈ ನನ್ನ ಕನ್ಯೆಗೆ ನೀನು ಸರಿಯಾದ ವರನನ್ನು ನೋಡು. ಅವನಿಗೆ ನಾನು ಇವಳನ್ನು ದಾನಮಾಡುವೆನು.

೧೯. ಗರುಡನು ಹೇಳುತ್ತಾನೆ:—ದ್ವಿಜವರ್ಯನೆ! ನೀನು ಈ ಕನ್ಯೆಯನ್ನು ಕರೆದುಕೊಂಡು ನನ್ನ ಬೆನ್ನಿನಮೇಲೆ ಕುಳಿತು ಸಕಲಭೂಮಂಡಲದಲ್ಲಿ ಸಂಚರಿಸು.

ತತಸ್ತಸ್ಯಾಃ ಕುಮಾರ್ಯಾ ವೈ ಅನುರೂಪಂ ಗುಣಾನ್ವಿತಂ ।
ಸ್ವಯಂ ಚಾಹರ ಭರ್ತಾರಮೇಷಾ ಮೈತ್ರೀ ಮನೋದ್ಭವಾ ॥ ೨೦ ॥

ಸೂತ ಉವಾಚ :—

ಏವಮುಕ್ತೋಽಥ ವಿಪ್ರಃ ಸ ತತ್ಕನ್ಯಾತ್ಮಕನ್ಯಯಾ ಸಹ ।
ಆರೂಢೋ ಗಾರುಡಂ ಪೃಷ್ಠಂ ವರಾರ್ಥಾಯ ದ್ವಿಜೋತ್ತಮಾಃ ॥ ೨೧ ॥
ಯಂ ಯಂ ಪಶ್ಯತಿ ವಿಪ್ರಃ ಸ ಕುಮಾರಂ ತರುಣಾಕೃತಿಂ ।
ಸ ಸ ನೋ ತಸ್ಯ ಚಿತ್ತಾಂತೇ ವರ್ತತೇಸ್ಮ ಕಥಂಚನ ॥ ೨೨ ॥
ಕಸ್ಯಚಿದ್ರೂಪಮತ್ಯುಗ್ರಂ ನ ಕುಲಂ ಚ ಸುನಿರ್ಮಲಂ ।
ಕುಲಂ ರೂಪಂ ಚ ಯಸ್ಯಸ್ಯಾತ್ತಸ್ಯನೋ ಗುಣಸಂಚಯಃ ॥ ೨೩ ॥
ಯಸ್ಯವಾ ಗುಣಸಂದೋಹಸ್ತಸ್ಯನೋ ರೂಪಮುತ್ತಮಂ ।
ಪಕ್ಷಪಾತಂ ಚ ವಿತ್ತಂ ಚ ತಥಾಽನ್ಯದ್ವರಲಕ್ಷಣಂ ॥ ೨೪ ॥
ಏವಂ ವರ್ಷಸಹಸ್ರಾಂತೇ ಭ್ರಮತಸ್ತಸ್ಯ ಭೂತಲಂ ।
ವಿಪ್ರಸ್ಯ ಪಕ್ಷಿನಾಥಸ್ಯ ವರಾರ್ಥಾಯ ದ್ವಿಜೋತ್ತಮಾಃ ॥ ೨೫ ॥
ಕದಾಚಿದಥ ತೌ ಶ್ರಾಂತೌ ಭ್ರಮಮಾಣಾವಿತಸ್ತತಃ ।
ಕ್ಷೇತ್ರೇಽತ್ರೈವ ಸಮಾಯಾತೌ ವಾಸುದೇವದಿದೃಕ್ಷಯಾ ॥ ೨೬ ॥
ಶ್ವೇತದ್ವೀಪಂ ಸಮಾಲೋಕ್ಯ ತಥಾಽನ್ಯಾಂ ಬದರೀಂ ಶುಭಾಂ ।
ಕ್ಷೀರೋದಂ ಚ ಸ ವೈಕುಂಠಂ ತಥಾಽನ್ಯಂ ತಸ್ಯ ಸಂಶ್ರಯಂ ॥ ೨೭ ॥

---

೨೦. ಅನಂತರ ನಿನ್ನ ಪುತ್ರಿಗೆ ಅನುರೂಪನಾದ ವರನನ್ನು ನೀನೇ ಆರಿಸು. ಇದು ನನ್ನ ಸ್ನೇಹದಿಂದಾಗತಕ್ಕದು.

೨೧–೨೨. ಸೂತನು ಹೇಳುತ್ತಾನೆ :—ದ್ವಿಜವರ್ಯರೆ! ಗರುಡನು ಹೀಗೆನ್ನಲು ಆ ಬ್ರಾಹ್ಮಣನು ಕೂಡಲೆ ಕನ್ಯೆಯೊಡನೆ ವರನಿಗಾಗಿ ಗರುಡನ ಬೆನ್ನಿನಮೇಲೆ ಏರಿದನು. ಆ ಬ್ರಾಹ್ಮಣನು ಯಾವ ಯಾವ ತರುಣನಾದ ಕುಮಾರನನ್ನು ನೋಡುವನೊ; ಅವನು ಅವನ ಮನಸ್ಸಿಗೆ ಒಪ್ಪಲಿಲ್ಲ.

೨೩–೨೪. ಸುಂದರನಾಗಿದ್ದವನ ವಂಶವು ಶುದ್ಧವಾಗಿರಲಿಲ್ಲ. ಕುಲರೂಪ ವುಳ್ಳವನಲ್ಲಿ ಗುಣವಿರಲಿಲ್ಲ. ಗುಣವಿದ್ದವನಲ್ಲಿ ಸೌಂದರ್ಯ, ಪಕ್ಷಪಾತ, ದ್ರವ್ಯ ಮತ್ತು ಇತರ ವರಲಕ್ಷಣಗಳಿರಲಿಲ್ಲ.

೨೫. ದ್ವಿಜವರ್ಯರೆ! ಭೂಮಿಯಲ್ಲಿ ಹೀಗೆ ಗರುಡನೂ, ಬ್ರಾಹ್ಮಣನೂ ಸಂಚರಿಸುತ್ತಿರಲು ಸಾವಿರ ವರ್ಷಗಳಾದುವು.

೨೬–೨೭. ಒಂದಾನೊಂದು ವೇಳೆ ಅವರು ವಿಷ್ಣುವನ್ನು ನೋಡಲು ಇಲ್ಲಿ ಅಲ್ಲಿ ಸಂಚರಿಸುತ್ತ ಶ್ವೇತದ್ವೀಪ, ಬದರಿಕಾಶ್ರಮ, ಕ್ಷೀರಸಮುದ್ರ, ವೈಕುಂಠ ಮತ್ತು ಇತರ ವಿಷ್ಣುವಿನ ವಾಸಸ್ಥಳಗಳನ್ನು ನೋಡಿ ಬಳಲಿ ಈ ಕ್ಷೇತ್ರಕ್ಕೆ ಬಂದರು.

ಅಥ ತಾಭ್ಯಾಂ ಮುನಿರ್ದೃಷ್ಟೋ ನಾರದೋ ಬ್ರಹ್ಮಸಂಭವಃ ।
ಸಾಂತ್ವಪೂರ್ವಂ ತದಾ ಪೃಷ್ಟೋ ವಿಷ್ಣುಂ ಬ್ರಹ್ಮ ಸನಾತನಂ ॥ ೨೮ ॥
ಕ್ವ ದೇವಃ ಪುಂಡರೀಕಾಕ್ಷಃ ಸಾಂಪ್ರತಂ ವರ್ತತೇ ಮುನೇ ।
ವಿಷ್ಣುಸ್ಥಾನಾನಿ ಸರ್ವಾಣಿ ವೀಕ್ಷಿತಾನಿ ಸಮಂತತಃ ।
ಆವಾಭ್ಯಾಂ ಸಂಪ್ರಹೃಷ್ಟಾಭ್ಯಾಂ ನ ಸಂಪ್ರಹೃಷ್ಟಃ ಸ ಕೇಶವಃ ॥ ೨೯ ॥

ನಾರದ ಉವಾಚ :—

ಜಲಶಾಯಿಸ್ವರೂಪೇಣ ಯಾವನ್ಮಾಸಚತುಷ್ಟಯಂ ।
ಹಾಟಕೇಶ್ವರಜೇ ಕ್ಷೇತ್ರೇ ಸ ಸಂತಿಷ್ಠತಿ ಸರ್ವದಾ ॥ ೩೦ ॥
ತಸ್ಮಾತ್ತದ್ದರ್ಶನಾರ್ಥಾಯ ಗಮ್ಯತಾಂ ತತ್ರ ಮಾಚಿರಂ ।
ಯೇನ ಸಂದರ್ಶನಂ ಯಾತಿ ದ್ವಾಭ್ಯಾಮಪಿ ಸ ಚಕ್ರಧೃಕ್ ॥ ೩೧ ॥
ಅಹಮಪ್ಯೇವ ತತ್ರೈವ ಪ್ರಸ್ಥಿತಸ್ತಸ್ಯ ದರ್ಶನಾತ್ ।
ಪ್ರಸ್ಥಿತಶ್ಚ ತ್ವಯಾ ಯುಕ್ತೋ ದೇವಕಾರ್ಯೇಣ ಕೇನಚಿತ್ ॥ ೩೨ ॥
ಅಥ ತೌ ಪಕ್ಷಿವಿಪ್ರೇಂದ್ರೌ ಸ ಚ ಬ್ರಹ್ಮಸುತೋ ಮುನಿಃ ।
ಪ್ರಾಪ್ತಾಃ ಸರ್ವೇ ಸ್ಥಿತೋ ಯತ್ರ ಜಲಶಾಯೀ ಜನಾರ್ದನಃ ॥ ೩೩ ॥
ಅಥ ದೃಷ್ಟ್ವಾ ಮಹತ್ತೇಜೋ ವೈಷ್ಣವಂ ದೂರತೋಽಪಿ ತಂ ।
ಬ್ರಾಹ್ಮಣಂ ಗರುಡಃ ಪ್ರಾಹ ನಾರದಶ್ಚ ಮುನೀಶ್ವರಃ ॥ ೩೪ ॥

---

೨೮–೨೯. ಬಳಿಕ ಅವರು ಬ್ರಹ್ಮತನಯನಾದ ನಾರದನನ್ನು ನೋಡಿ ಸಮಾಧಾನಪೂರ್ವಕವಾಗಿ ಸನಾತನ ಬ್ರಹ್ಮನಾದ ವಿಷ್ಣುವು ಈಗ ಎಲ್ಲಿರುವನು? ಅವನ ಸ್ಥಾನಗಳನ್ನೆಲ್ಲ ನೋಡಿದೆವು. ಎಲ್ಲಿಯೂ ಅವನು ಕಾಣಲಿಲ್ಲ.

೩೦. ನಾರದನು ಹೇಳುತ್ತಾನೆ:—ಆ ವಿಷ್ಣುವು ಹಾಟಕೇಶ್ವರ ಕ್ಷೇತ್ರದಲ್ಲಿ ನಾಲ್ಕು ತಿಂಗಳುಕಾಲ ಜಲಶಾಯಿರೂಪದಿಂದ ಯಾವಾಗಲೂ ಇರುವನು.

೩೧. ಆದ್ದರಿಂದ ನೀವು ಅವನನ್ನು ನೋಡುವುದಕ್ಕಾಗಿ ಬೇಗನೆ ಅಲ್ಲಿಗೆ ಹೋಗಿರಿ. ನಿಮ್ಮಿರ್ವರಿಗೆ ಅವನು ಕಾಣುವನು.

೩೨. ನಾನೂ ದೇವತೆಗಳ ಒಂದು ಕಾರ್ಯಕ್ಕಾಗಿ ಆ ವಿಷ್ಣುವನ್ನು ನೋಡಲು ಹೊರಟು ನಿಮ್ಮೊಡನೆ ಸೇರಿದೆನು.

೩೩. ತರುವಾಯ ಆ ಗರುಡ ಬ್ರಾಹ್ಮಣರೂ, ಬ್ರಹ್ಮನ ಮಗನಾದ ನಾರದನೂ ಜಲಶಾಯಿಯಾದ ವಿಷ್ಣುವಿರುವ ಸ್ಥಳಕ್ಕೆ ಹೋದರು.

೩೪. ಗರುಡ ನಾರದರು ದೂರದಲ್ಲಿಯೇ ವಿಷ್ಣುವಿನ ಮಹಾತೇಜಸ್ಸನ್ನು ನೋಡಿ ಬ್ರಾಹ್ಮಣನನ್ನು ಕುರಿತು ಇಂತೆಂದರು.

ಅತ್ರೈವ ತ್ವಂ ದ್ವಿಜಶ್ರೇಷ್ಠ ತಿಷ್ಠ ದೂರೇಽಪಿ ತೇಜಸಃ ।
ವೈಷ್ಣವಸ್ಯ ಸುತಾಯುಕ್ತಃ ಕಲ್ಪಾಂತಾಗ್ನಿಸಮಸ್ಯ ಚ ॥ ೩೫ ॥
ನೋ ಚೇತ್ಸಂಪತ್ಸ್ಯಸೇ ಭಸ್ಮ ಪತಂಗ ಇವ ಪಾವಕಂ ।
ಸಮಾಸಾದ್ಯ ನಿಶಾಯೋಗೇ ಮೂಢಂ ಭಾವಂ ಸಮಾಶ್ರಿತಃ ॥ ೩೬ ॥
ಆವಾಭ್ಯಾಂ ತತ್ಪ್ರಸಾದೇನ ಸೋಢಮೇತತ್ಸುದುಃಸಹಂ ।
ನ ಕರೋತಿ ಶರೀರಾರ್ತಿಂ ತಥಾಽನ್ಯದಪಿ ಕುತ್ಸಿತಂ ॥ ೩೭ ॥
ಏವಂ ತಂ ಬ್ರಾಹ್ಮಣಂ ತತ್ರ ಮುಕ್ತ್ವಾ ದೂರೇ ಸುತಾನ್ವಿತಂ ।
ಗತೌ ತೌ ತತ್ರ ಸಂಸುಪ್ತಸ್ತೋಯೇ ಯತ್ರ ಜನಾರ್ದನಃ ॥ ೩೮ ॥
ದಿವ್ಯಸ್ತುತಿಪರೌ ಮೂರ್ಧ್ನಿ ಧೃತಹಸ್ತಾಂಜಲೀಪುಟೌ ।
ಪುಲಕಾಂಕಿತಸರ್ವಾಂಗಾವಾನಂದಾಶ್ರುಪ್ಲುತಾನನೌ ॥ ೩೯ ॥
ತ್ರಿಃ ಪರಿಕ್ರಮ್ಯ ತಂ ದೇವಮಷ್ಟಾಂಗೌ ಪ್ರಣತೌ ಹರಿಂ ।
ದೃಷ್ಟವಂತೌ ಚ ಪಾದಾಂತೇ ಸನ್ನಿವಿಷ್ಟಾಂ ಸಮುದ್ರಜಾಂ ॥ ೪೦ ॥
ಪಾದಸಂವಾಹನಾಸಕ್ತಾಂ ವಿಷ್ಣುವಕ್ತ್ರಾಹಿತೇಕ್ಷಣಾಂ ।
ಅಥಾಽಪರಾಂ ವಯೋವೃದ್ಧಾಂ ಶ್ವೇತವಸ್ತ್ರಾವಗುಂಠಿತಾಂ ॥ ೪೧ ॥

---

೩೫. ದ್ವಿಜವರ್ಯನೆ! ನೀನು ಮಗಳೊಡನೆ ಪ್ರಳಯಕಾಲದ ಅಗ್ನಿಯಂತಿರುವ ಈ ವಿಷ್ಣುವಿನ ತೇಜಸ್ಸಿನ ದೂರದಲ್ಲಿಯೇ ನಿಂತಿರು.

೩೬. ಹಾಗಿಲ್ಲದಿದ್ದರೆ ರಾತ್ರಿವೇಳೆ ಮೌಢ್ಯವನ್ನು ಹೊಂದಿರುವ ಪತಂಗವು ಅಗ್ನಿಯನ್ನು ಹೊಂದಿ ಬೂದಿಯಾಗುವಂತೆ ಭಸ್ಮವಾಗುವೆ.

೩೭. ನಾವು ಆ ವಿಷ್ಣುವಿನ ಅನುಗ್ರಹದಿಂದ ಈ ಸಹಿಸಲಾಗದ ತೇಜಸ್ಸನ್ನು ಸಹಿಸಿರುವೆವು. ಆದ್ದರಿಂದ ಆ ತೇಜಸ್ಸು ನಮಗೆ ಶರೀರಪೀಡೆಯನ್ನೂ, ಬೇರೆ ಯಾವ ಕೆಡಕನ್ನೂ ಉಂಟುಮಾಡುವುದಿಲ್ಲ.

೩೮. ಅವರೀರ್ವರು ಹೀಗೆ ಹೇಳಿ ಆ ಬ್ರಾಹ್ಮಣನನ್ನು ಮಗಳೊಡನೆ ದೂರದಲ್ಲಿಯೇ ಬಿಟ್ಟು ವಿಷ್ಣುವು ಮಲಗಿರುವ ನೀರಿನ ಹತ್ತಿರ ಹೋದರು.

೩೯–೪೩. ಅವರು ಸ್ತುತಿಸುವವರೂ, ತಲೆಯಲ್ಲಿ ಕೈಮುಗಿದುಕೊಂಡಿರುವವರೂ, ರೋಮಾಂಚಗೊಂಡ ಸಕಲಾವಯುವಗಳುಳ್ಳವರೂ, ಆನಂದಬಾಷ್ಪದಿಂದ ವ್ಯಾಪ್ತವಾದ ಮುಖವುಳ್ಳವರೂ ಆಗಿ ಆ ವಿಷ್ಣುವನ್ನು ಮೂರು ಸಾರಿ ಪ್ರದಕ್ಷಿಣೆಗೈದು ಸಾಷ್ಟಾಂಗ ನಮಸ್ಕಾರಮಾಡಿ ಕಾಲಿನ ಕೊನೆಯಲ್ಲಿ ಕುಳಿತಿರುವವಳೂ, ಕಾಲನ್ನು ಒತ್ತುತ್ತಿರುವವಳೂ, ವಿಷ್ಣುವಿನ ಮುಖದಲ್ಲಿಡಲ್ಪಟ್ಟ ಕಣ್ಣುಗಳುಳ್ಳವಳೂ ಆದ ಲಕ್ಷ್ಮಿಯನ್ನೂ, ವಯೋವೃದ್ಧಳೂ, ಬಿಳಿವಸ್ತ್ರವನ್ನು ಹೊದ್ದಿರುವವಳೂ, ಆ ವಿಷ್ಣುವಿನ ಹತ್ತಿರ ಧ್ಯಾನಿಸುತ್ತ ಕುಳಿತಿರುವವಳೂ, ದ್ವಾದಶಾದಿತ್ಯ

ಸನ್ನಿವಿಷ್ಟಾಂ ತದಭ್ಯಾಶೇ ಸಮ್ಯಗ್ಧ್ಯಾನಪರಾಯಣಾಂ ।
ದ್ವಾದಶಾರ್ಕಪ್ರಭಾಯುಕ್ತಾಂ ಕೃಶಾಂಗೀಂ ಪುಲಕಾನ್ವಿತಾಂ ॥ ೪೨ ॥
ಅಥ ತೌ ವಿಷ್ಣುನಾ ಹರ್ಷಾದುಭಾವಪಿ ಪ್ರಹರ್ಷಿತೌ ।
ಸಂಭಾಷಿತೌ ಚ ಸಂಪ್ರಷ್ಟೌ ಯದರ್ಥಂ ಚ ಸಮಾಗತೌ ॥ ೪೩ ॥

ಶ್ರೀ ನಾರದ ಉವಾಚ :—

ಅಹಂ ಹಿ ಸುರಕಾರ್ಯೇಣ ಸಂಪ್ರಾಪ್ತೋಽತ್ರ ತವಾಂತಿಕಂ ।
ಗರುಡೋ ವೈ ಬ್ರಾಹ್ಮಣಾಯ ಯನ್ಮಾಂ ಪೃಚ್ಛಸಿ ಕೇಶವ ॥ ೪೪ ॥

ಶ್ರೀ ಭಗವಾನುವಾಚ :—

ಕಚ್ಚಿತ್ಕ್ಷೇತ್ರಂ ಮುನಿಶ್ರೇಷ್ಠ ಸರ್ವೇಷಾಂ ತ್ರಿದಿವೌಕಸಾಂ ।
ಕಚ್ಚಿನ್ನೇಂದ್ರಸ್ಯ ಸಂಜಾತಂ ಭಯಂ ದಾನವಸಂಭವಂ ॥ ೪೫ ॥
ಯಜ್ಞಭಾಗಂ ಲಭಂತೇ ಸ್ಮ ಕಚ್ಚಿದ್ದೇವಾಃ ಸವಾಸವಾಃ ।
ಕಚ್ಚಿನ್ನ ದಾನವಃ ಕಶ್ಚಿದುತ್ಕಟೋಽಭೂದ್ಧರಾತಲೇ ॥ ೪೬ ॥

ಶ್ರೀ ನಾರದ ಉವಾಚ :—

ಸಾಂಪ್ರತಂ ಧರಣೀ ಪ್ರಾಪ್ತಾ ಚತುರ್ವಕ್ತ್ರಸ್ಯ ಸನ್ನಿಧೌ ।
ರೋರೂಯಮಾಣಾ ಭಾರಾರ್ತಾ ದಾನವೈಃ ಪೀಡಿತಾ ಭೃಶಂ ।
ಪ್ರೋವಾಚ ಪದ್ಮಜಂ ತತ್ರ ದುಃಖೇನ ಮಹತಾನ್ವಿತಾ ॥ ೪೭ ॥

---

ರಂತೆ ಕಾಂತಿಯುಳ್ಳವಳೂ, ಕೃಶಾಂಗಿಯೂ, ರೋಮಾಂಚಗೊಂಡವಳೂ ಆದ ಮತ್ತೊಬ್ಬಳನ್ನೂ ನೋಡಿದರು.

೪೩. ತರುವಾಯ ವಿಷ್ಣುವು ಅವರಿಬ್ಬರನ್ನು ಸಂತೋಷಗೊಳಿಸಿ ಮಾತಾಡಿಸಿ ಏಕೆ ಬಂದಿರುವಿರಿ? ಎಂದು ಪ್ರಶ್ನಿಸಿದನು.

೪೪. ನಾರದನು ಹೇಳುತ್ತಾನೆ:—ಕೇಶವ! ನಾನು ದೇವಕಾರ್ಯಕ್ಕಾಗಿ ನಿನ್ನೆಡೆಗೆ ಬಂದಿರುವೆನು. ಈ ಗರುಡನು ಬ್ರಾಹ್ಮಣನ ಕೆಲಸಕ್ಕಾಗಿ ಬಂದಿದ್ದಾನೆ. ನನ್ನನ್ನು ಬೇರೆ ಏನನ್ನು ಕೇಳುವೆ?

೪೫. ಶ್ರೀ ಭಗವಂತನು ಹೇಳುತ್ತಾನೆ:—ಮುನಿವರನೆ! ಸಕಲ ದೇವತೆಗಳೂ ಕ್ಷೇಮದಿಂದಿರುವರೆ? ಇಂದ್ರನಿಗೆ ದಾನವರಿಂದ ಭಯವುಂಟಾಗಲಿಲ್ಲವೆ?

೪೬. ಇಂದ್ರಾದಿ ದೇವತೆಗಳು ಯಜ್ಞಭಾಗವನ್ನು ಪಡೆಯುವರೊ? ಧರಣಿಯಲ್ಲಿ ಯಾವ ದಾನವನೂ ಉದ್ಧತನಾಗಿಲ್ಲವೊ?

೪೭. ಶ್ರೀ ನಾರದನು ಹೇಳುತ್ತಾನೆ:—ಈಗ ಭೂಮಿಯು ಭಾರಪೀಡೆಯಿಂದ ರೋದಿಸುವವಳೂ, ದಾನವರಿಂದ ಪೀಡಿತಳೂ ಆಗಿ ಬ್ರಹ್ಮನೆಡೆಗೆ ಬಂದು ಅತಿ ದುಃಖದಿಂದ ಬ್ರಹ್ಮನನ್ನು ಕುರಿತು ಇಂತೆಂದಳು.

ಧರಣ್ಯುವಾಚ :—

ಕಾಲನೇಮಿರ್ಹತೋ ಯೋಽಸೌ ವಿಷ್ಣುನಾ ಪ್ರಭವಿಷ್ಣುನಾ ।
ಉಗ್ರಸೇನಸುತಃ ಕಂಸಃ ಸಂಭೂತಃ ಸ ಮಹಾಸುರಃ ॥ ೪೮ ॥
ಅರಿಷ್ಟೋ ಧೇನುಕಃ ಕೇಶೀ ಪ್ರಲಂಬೋ ನಾಮ ಚಾಽಪರಃ ।
ತಥಾಽನ್ಯಾ ತು ಮಹಾರೌದ್ರಾ ಪೂತನಾನಾಮ ರಾಕ್ಷಸೀ ॥ ೪೯ ॥
ಇತಶ್ಚೇತಶ್ಚ ಧಾವದ್ಭಿರ್ದಾನವೈರೇಭಿರೇವ ಚ ।
ವೃಥಾ ಮೇ ಜಾಯತೇ ಪೀಡಾ ತಥಾಽನ್ಯೈರಪಿ ದಾರುಣೈಃ ॥ ೫೦ ॥
ಊರ್ಧ್ವಬಾಹುಸ್ತಥಾ ಜಾತೋ ಮರ್ತ್ಯಲೋಕೇ ಜನೋಽಧುನಾ ।
ಬಹುತ್ವಾನ್ನ ಪ್ರಮಾತಿ ಸ್ಮ ಕಥಂಚಿದ್ಧಿ ಮಮೋಪರಿ ॥ ೫೧ ॥
ಭಾರಾವತರಣಂ ದೇವ ನ ಕರಿಷ್ಯಸಿ ಚಾಽಽಶುಚೇತ್ ।
ರಸಾತಲಂ ಪ್ರಯಾಸ್ಯಾಮಿ ತದಾಽಹಂ ನಾಽತ್ರ ಸಂಶಯಃ ॥ ೫೨ ॥
ತಸ್ಯಾಸ್ತದ್ವಚನಂ ಶ್ರುತ್ವಾ ಬ್ರಹ್ಮಣಾ ಲೋಕಕರ್ತೃಣಾ ।
ಸಂಮಂತ್ರ್ಯ ವಿಬುಧೈಃ ಸಾರ್ಧಂ ಪ್ರೇಷಿತೋಽಹಂ ತವಾಂತಿಕಂ ॥ ೫೩ ॥
ಪ್ರೋಕ್ತವ್ಯೋ ಭಗವಾನ್ ವಾಕ್ಯಂ ತ್ವಯಾ ದೇವೋ ಜನಾರ್ದನಃ ।
ಯಥಾಽವತೀರ್ಯ ಭೂಪೃಷ್ಠೇ ಭಾರಮಸ್ಯಾಃ ಪ್ರಣಾಶಯೇತ್ ॥ ೫೪ ॥
ತಸ್ಮಾದ್ಭೂಮಿತಲೇ ದೇವ ಕೃತ್ವಾ ಜನ್ಮ ಸ್ವಯಂ ವಿಭೋ ।
ಭಾರಂ ನಾಶಯ ಮೇದಿನ್ಯಾ ಏತದರ್ಥ ಮಿಹಾಗತಃ ॥ ೫೫ ॥

---

೪೮. ಧರಣಿದೇವಿಯು ಹೇಳುತ್ತಾಳೆ:—ಹಿಂದೆ ಸಮರ್ಥನಾದ ವಿಷ್ಣುವು ಕೊಂದ ಕಾಲನೇಮಿಯೆಂಬ ಅಸುರನು ಉಗ್ರಸೇನನ ಮಗನಾದ ಕಂಸನಾದನು.

೪೯–೫೦. ಅರಿಷ್ಟ, ಧೇನುಕ, ಕೇಶಿ, ಪ್ರಲಂಬ, ಭಯಂಕರಳಾದ ಪೂತನೆ ಇವರೂ, ಇತರ ದಾನವರೂ ಇಲ್ಲಿ ಅಲ್ಲಿ ಓಡುತ್ತಿರುವುದರಿಂದ ವ್ಯರ್ಥವಾಗಿ ನನಗೆ ಪೀಡೆಯನ್ನುಂಟು ಮಾಡುತ್ತಿರುವರು.

೫೧. ಈಗ ಭೂಲೋಕದ ಜನರು ಮೇಲಕ್ಕೆತ್ತಿದ ತೋಳುಗಳುಳ್ಳವರಾಗಿರುವರು. ಅವರು ಹೆಚ್ಚಿರುವುದರಿಂದ ನನ್ನಲ್ಲಿ ಹಿಡಿಯುವುದಿಲ್ಲ.

೫೨. ಸ್ವಾಮಿ! ನೀನು ಬೇಗನೆ ನನ್ನ ಭಾರವನ್ನು ಇಳಿಸದಿದ್ದರೆ ನಾನು ನಿಶ್ಚಯವಾಗಿಯೂ ಪಾತಾಳಕ್ಕೆ ಹೋಗುವೆನು.

೫೩–೫೪. ಲೋಕವನ್ನು ಸೃಷ್ಟಿಸುವ ಬ್ರಹ್ಮನು ಆ ಭೂಮಿದೇವಿಯ ಆ ಮಾತನ್ನು ಕೇಳಿ ದೇವತೆಗಳೊಡನೆ ಆಲೋಚಿಸಿ ನಿನ್ನ ಹತ್ತಿರಕ್ಕೆ ನನ್ನನ್ನು ಹೀಗೆ ಹೇಳಿಕಳುಹಿಸಿದನು. ವಿಷ್ಣುವು ಭೂಮಿಯಲ್ಲಿ ಅವತಾರಮಾಡಿ ಇವಳ ಭಾರವನ್ನು ಇಳಿಸುವಂತೆ ನೀನು ಅವನಿಗೆ ಹೇಳು.

೫೫. ಸ್ವಾಮಿ! ಆದ್ದರಿಂದ ನೀನು ಭೂಮಿಯಲ್ಲಿ ಅವತರಿಸಿ ಆ ಭೂಮಿಯ ಭಾರವನ್ನು ನಿವಾರಿಸು. ಇದಕ್ಕಾಗಿ ನಾನು ಇಲ್ಲಿಗೆ ಬಂದಿರುವೆನು.

ಶ್ರೀ ಭಗವಾನುವಾಚ :—

ಏವಂ ಮುನೇ ಕರಿಷ್ಯಾಮಿ ಸಂಮಂತ್ರ್ಯ ಬ್ರಹ್ಮಣಾ ಸಹ ।
ಭಾರಾಽವತರಣಂ ಭೂಮೇಃ ಸಾಕಂ ದೇವೈಃ ಸವಾಸವೈಃ ॥ ೫೬ ॥
ಏವಮುಕ್ತ್ವಾಽಥ ತಂ ವಿಷ್ಣುರ್ನಾರದಂ ಮುನಿಪುಂಗವಂ ।
ತತಶ್ಚ ಗರುಡಂ ಪ್ರಾಹ ತ್ವಂ ಕಿಮರ್ಥಮಿಹಾಽಽಗತಃ ॥ ೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸುಪರ್ಣಾಖ್ಯಮಾಹಾತ್ಮ್ಯೇ ವಿಷ್ಣುದರ್ಶನಮಾಹಾತ್ಮ್ಯವರ್ಣನಂ"
ನಾಮಾಶೀತಿತಮೋಽಧ್ಯಾಯಃ

---

೫೬. ಶ್ರೀ ಭಗವಂತನು ಹೇಳುತ್ತಾನೆ:—ಮುನಿಯೆ! ನಾನು ಬ್ರಹ್ಮನೊಡನೆ ಆಲೋಚಿಸಿ ಇಂದ್ರಾದಿ ದೇವತೆಗಳೊಡನೆ ಭೂಮಿಯ ಭಾರವನ್ನು ಇಳಿಸುವೆನು.

೫೭. ವಿಷ್ಣುವು ಮುನಿವರ್ಯನಾದ ನಾರದನನ್ನು ಕುರಿತು ಹೀಗೆ ಹೇಳಿ ಗರುಡನನ್ನು ಕುರಿತು ನೀನು ಏತಕ್ಕೆ ಇಲ್ಲಿಗೆ ಬಂದಿರುವೆ? ಎಂದು ಕೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಷ್ಣುದರ್ಶನಮಾಹಾತ್ಮ್ಯವರ್ಣನ" ವೆಂಬ
ಎಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಾಽಶೀತಿತಮೋಽಧ್ಯಾಯಃ

## ಸುಪರ್ಣಪಕ್ಷಪಾತವರ್ಣನಂ

ಶ್ರೀ ಗರುಡ ಉವಾಚ :—
ಮಮಾಸ್ತಿ ದಯಿತಂ ಮಿತ್ರಂ ಬ್ರಾಹ್ಮಣೋ ಭೃಗುವಂಶಜಃ ।
ತಸ್ಯಾಸ್ತಿ ಮಾಧವೀನಾಮ ಕನ್ಯಾ ಕಮಲಲೋಚನಾ ॥ ೧ ॥
ನ ತಸ್ಯಾಃ ಸದೃಶಃ ಕಾಂತಃ ಪ್ರಾಪ್ತಸ್ತೇನ ಮಹಾತ್ಮನಾ ।
ಯತಸ್ತತೋಽಹಮಾದಿಷ್ಟಃ ಕಾಂತಮಸ್ಯಾಸ್ತ್ವಮಾನಯ ।
ಅನುರೂಪಂ ದ್ವಿಜಶ್ರೇಷ್ಠ ಯದ್ಯಹಂ ಸಂಮತಸ್ತವ ॥ ೨ ॥
ತತೋ ಮಯಾಽಖಿಲಾ ಭೂಮಿಸ್ತದ್ವರಾರ್ಥಂ ವಿಲೋಕಿತಾ ।
ನ ತದರ್ಥಂ ವರೋ ಲಬ್ಧಃ ಸರ್ವೈಃ ಸಮುಚಿತೋ ಗುಣೈಃ ॥ ೩ ॥
ತತಸ್ತ್ವಂ ಪುಂಡರೀಕಾಕ್ಷ ಮಮ ಚಿತ್ತೇ ವ್ಯವಸ್ಥಿತಃ ।
ಅನುರೂಪಃ ಪತಿಸ್ತಸ್ಯಾಃ ಸರ್ವೈರೇವ ಗುಣೈರ್ಯುತಃ ॥ ೪ ॥
ತಸ್ಮಾತ್ಪಾಣಿಗ್ರಹಂ ತಸ್ಯಾಃ ಸ್ವೀಕುರುಷ್ವ ಸುರೇಶ್ವರ ।
ಅತ್ಯಂತರೂಪಯುಕ್ತಾಯಾ ಮಮ ವಾಕ್ಯಪ್ರಣೋದಿತಃ ॥ ೫ ॥

---

## ಕನ್ನಡದ ಅನುವಾದ

### ಸುಪರ್ಣಪಕ್ಷಪಾತವರ್ಣನ

೧. ಶ್ರೀ ಗರುಡನು ಹೇಳುತ್ತಾನೆ:—ನನ್ನ ಸ್ನೇಹಿತನಾದ ಭೃಗುವಂಶದ ಬ್ರಾಹ್ಮಣನೋರ್ವನಿರುವನು. ಅವನಿಗೆ ಮಾಧವಿಯೆಂಬ ಒಬ್ಬ ಕನ್ಯೆಯಿರುವಳು.

೨. ಮಹಾತ್ಮನಾದ ಅವನು ತನ್ನ ಕನ್ಯೆಗೆ ಅನುರೂಪನಾದ ವರನನ್ನು ಪಡೆಯಲಿಲ್ಲ. ಆದ್ದರಿಂದ ನನ್ನನ್ನು ಕುರಿತು ಇವಳಿಗೆ ಅನುರೂಪನಾದ ವರನನ್ನು ಕರೆದುಕೊಂಡು ಬಾ ಎಂದನು.

೩. ನಾನು ವರನಿಗಾಗಿ ಸಕಲಭೂಮಿಯಲ್ಲಿಯೂ ಸಂಚರಿಸಿ ನೋಡಿದೆನು. ಆದರೆ ಸಮಸ್ತಗುಣಗಳಿಂದ ಕೂಡಿದ ವರನು ದೊರೆಯಲಿಲ್ಲ.

೪. ಆದ್ದರಿಂದ ಸಕಲ ಗುಣಪರಿಪೂರ್ಣನಾದ ನೀನು ಅವಳಿಗೆ ಅನುರೂಪನಾದ ವರನೆಂದು ನಾನು ಆಲೋಚಿಸಿರುವೆನು.

೫. ನನ್ನ ಮಾತಿನಂತೆ ನೀನು ಅತ್ಯಂತ ಸುಂದರಿಯಾದ ಅವಳನ್ನು ವಿವಾಹ ಮಾಡಿಕೊ.

ಭಗವಾನುವಾಚ :—

ಅತ್ರಾನಯ ದ್ವಿಜಶ್ರೇಷ್ಠ ತಾಂ ಕನ್ಯಾಂ ಕಮಲೇಕ್ಷಣಾಂ ।
ಯೇನ ದೃಷ್ಟ್ವಾ ಸ್ವಯಂ ಪಶ್ಚಾತ್ಪ್ರಕರೋಮಿ ಯಥೋದಿತಂ ॥ ೬ ॥

ಗರುಡ ಉವಾಚ :—

ತವ ತೇಜೋಭಯಾದೇವ ಸಾ ಕನ್ಯಾ ಜನಕಾನ್ವಿತಾ ।
ಮಯಾ ದೂರೇ ವಿನಿರ್ಮುಕ್ತಾ ತತ್ಕಥಂ ತಾಮಿಹಾನಯೇ ॥ ೭ ॥

ಶ್ರೀ ಭಗವಾನುವಾಚ :—

ಅತ್ರ ತಾಂ ಮಮ ತತ್ತೇಜೋ ಜನಕೇನ ಸಮನ್ವಿತಾಂ ।
ನಹಿ ಧಕ್ಷ್ಯತಿ ತಸ್ಮಾತ್ತ್ವಂ ಶೀಘ್ರಂ ದ್ವಿಜವರಾನಯ ॥ ೮ ॥
ಏವಮುಕ್ತಸ್ತತಸ್ತೇನ ವಿಷ್ಣುನಾ ಪ್ರಭವಿಷ್ಣುನಾ ।
ತಾಂ ಕನ್ಯಾಮಾನಯಾಮಾಸ ತಂ ಚ ವಿಪ್ರಂ ಭೃಗೂದ್ವಹಂ ॥ ೯ ॥
ಅಥಾಽಸೌ ಪ್ರಣಿಪತ್ಯೋಚ್ಚೈರ್ಬ್ರಾಹ್ಮಣೋ ಮಧುಸೂದನಂ ।
ಲಕ್ಷ್ಮೀರಿವನ್ಯವಿಶತ್ಪಾರ್ಶ್ವೇ ಗರುಡಸ್ಯ ಸಮೀಪತಃ ॥ ೧೦ ॥
ಸಾಽಪಿ ಕನ್ಯಾ ವರಾರೋಹಾ ಬಾಲ್ಯಭಾವಾದನಿಂದಿತಾ ।
ಶಯ್ಯೈಕಾಂತೇ ಸಮಾವಿಷ್ಟಾ ದಕ್ಷಿಣೇ ಮುರವಿದ್ವಿಷಃ ॥ ೧೧ ॥

---

೬. ಭಗವಂತನು ಹೇಳುತ್ತಾನೆ :—ಗರುಡ! ಕಮಲಾಕ್ಷಿಯಾದ ಆ ಕನ್ಯೆಯನ್ನು ಇಲ್ಲಿಗೆ ಕರೆದುಕೊಂಡು ಬಾ. ನಾನು ಸ್ವಂತವಾಗಿ ಅವಳನ್ನು ನೋಡಿ ನೀನು ಹೇಳಿದಂತೆ ಮಾಡುವೆನು.

೭. ಗರುಡನು ಹೇಳುತ್ತಾನೆ:—ನಿನ್ನ ತೇಜಸ್ಸಿನ ಭಯದಿಂದ ಆ ಕನ್ಯೆಯನ್ನು ತಂದೆಯೊಡನೆ ದೂರದಲ್ಲಿರಿಸಿರುವೆನು. ಆದ್ದರಿಂದ ಅವಳನ್ನು ಇಲ್ಲಿಗೆ ಹೇಗೆ ಕರೆತರಲಿ.

೮. ಶ್ರೀ ಭಗವಂತನು ಹೇಳುತ್ತಾನೆ:—ಇಲ್ಲಿ ನನ್ನ ತೇಜಸ್ಸು ತಂದೆಯೊಡನೆ ಇರುವ ಆ ಕನ್ಯೆಯನ್ನು ಸುಡುವುದಿಲ್ಲ. ಆದ್ದರಿಂದ ನೀನು ಅವಳನ್ನು ಇಲ್ಲಿಗೆ ಶೀಘ್ರವಾಗಿ ಕರೆದುಕೊಂಡು ಬಾ.

೯. ವಿಷ್ಣುವು ಹೀಗೆನ್ನಲು ಗರುಡನು ಆ ಕನ್ಯೆಯನ್ನೂ, ಬ್ರಾಹ್ಮಣನನ್ನೂ ಕರೆತಂದನು.

೧೦. ಬಳಿಕ ಆ ಬ್ರಾಹ್ಮಣನು ವಿಷ್ಣುವನ್ನು ವಂದಿಸಿ ಗರುಡನ ಹತ್ತಿರ ಲಕ್ಷ್ಮಿಯಂತೆ ಕುಳಿತನು.

೧೧. ಆ ಸುಂದರಿಯಾದ ಕನ್ಯೆಯೂ ಬಾಲಭಾವದಿಂದ ಶ್ರೀ ಮಹಾವಿಷ್ಣುವಿನ ಹಾಸಿಗೆಯ ಒಂದೆಡೆಯಲ್ಲಿ ಕುಳಿತಳು.

ಅಥ ಕೋಪಪರೀತಾಂಗೀ ಮಹಿಷ್ಯಾಧರ್ಮಮಾಶ್ರಿತಾ ।
ಲಕ್ಷ್ಮೀಃ ಶಶಾಪ ತಾಂ ಕನ್ಯಾಂ ಸಪತ್ನೀತಿ ವಿಚಿಂತ್ಯಚ ॥ ೧೨ ॥
ಯಸ್ಮಾನ್ಮೇ ಪುರತಃ ಪಾಪೇ ಕಾಂತಸ್ಯ ಮಮ ಹರ್ಷಿತಾ ।
ಶಯ್ಯಾಯಾಂ ತ್ವಂ ಸಮಾವಿಷ್ಟಾ ಲಜ್ಜಾಂ ತ್ಯಕ್ತ್ವಾ ಸುದೂರತಃ ।
ತಸ್ಮಾದಶ್ವಮುಖೀ ನೂನಂ ವಿಕೃತಾ ತ್ವಂ ಭವಿಷ್ಯಸಿ ॥ ೧೩ ॥
ಏವಂ ಶಾಪೇ ಶ್ರಿಯಾ ದತ್ತೇ ಹಾಹಾಕಾರೋ ಮಹಾನಭೂತ್ ।
ಸರ್ವೇಷಾಂ ತತ್ರ ಸಂಸ್ಥಾನಾಂ ಕೋಪಶ್ಚಾಽಪಿ ದ್ವಿಜನ್ಮನಃ ॥ ೧೪ ॥

ಬ್ರಾಹ್ಮಣ ಉವಾಚ :—

ಸಹಸ್ರಂ ಯಾಚ್ಯತೇ ಕನ್ಯಾ ಕರೋತ್ಯೇಕಃ ಕರಗ್ರಹಂ ।
ವಾಙ್ಮಾತ್ರೇಣ ನ ತಸ್ಯಾಃ ಸ್ಯಾತ್ಪತ್ನೀಭಾವಃ ಕಥಂಚನ ॥ ೧೫ ॥
ಯಾವನ್ನಾಗ್ನಿ ದ್ವಿಜಾತೀನಾಂ ಪ್ರತ್ಯಕ್ಷಂ ಗುರುಸನ್ನಿಧೌ ।
ಸಸಂಕಲ್ಪಂ ಸ್ವಯಂ ದತ್ತಾ ಗೃಹ್ಯೋಕ್ತವಿಧಿನಾ ಜನೈಃ ॥ ೧೬ ॥
ತಸ್ಮಾತ್ತದ್ದೋಷ ನಿರ್ಮುಕ್ತಾ ಸಪತ್ನ್ಯೇಷಾ ಸಮಾ ತ್ವಯಾ ।
ಕೃತಾ ವಾಜಿಮುಖೀ ಪಾಪೇ ತ್ವಂ ಗಜಾಸ್ಯಾ ಭವಿಷ್ಯಸಿ ॥ ೧೭ ॥

---

೧೨. ತರುವಾಯ ವಿಷ್ಣುವಿನ ಪಟ್ಟದರಾಣಿಯಾದ ಲಕ್ಷ್ಮಿಯು ಆ ಕನ್ಯೆಯು ತನ್ನ ಸವತಿಯೆಂದರಿತು ಕುಪಿತಳಾಗಿ ಅವಳನ್ನು ಹೀಗೆ ಶಪಿಸಿದಳು.

೧೩. "ಪಾಪಿಷ್ಠಳೆ! ನೀನು ನನ್ನ ಪ್ರಿಯನ ಮುಂದೆ ಲಜ್ಜೆಯನ್ನು ತ್ಯಜಿಸಿ ಸಂತೋಷದಿಂದ ಹಾಸಿಗೆಯಲ್ಲಿ ಕುಳಿತಿರುವುದರಿಂದ ಅಶ್ವಮುಖಿಯಾಗಿ ವಿಕಾರ ರೂಪವುಳ್ಳವಳಾಗುವೆ."

೧೪. ಲಕ್ಷ್ಮಿಯು ಹೀಗೆ ಶಾಪವನ್ನು ಕೊಡಲು ಅಲ್ಲಿರುವ ಸಕಲ ಜನರಲ್ಲಿ ಹಾಹಾಕಾರವುಂಟಾಯಿತು. ಆ ಭಾರ್ಗವ ಬ್ರಾಹ್ಮಣನೂ ಕೋಪಗೊಂಡನು.

೧೫–೧೬. ಬ್ರಾಹ್ಮಣನು ಹೇಳುತ್ತಾನೆ:—ಕನ್ಯೆಯು ಸಾವಿರ ಜನರನ್ನು ಯಾಚಿಸುವಳು. ಅವರಲ್ಲಿ ಒಬ್ಬನು ಪಾಣಿಗ್ರಹಣಮಾಡಿಕೊಳ್ಳುವನು. ಕನ್ಯೆಯನ್ನು ಅಗ್ನಿಬ್ರಾಹ್ಮಣ ಗುರುಗಳ ಮುಂದೆ ಗೃಹ್ಯೋಕ್ತವಿಧಿಯಿಂದ ಸಂಕಲ್ಪಪೂರ್ವಕವಾಗಿ ದಾನಮಾಡುವವರೆಗೆ ಮಾತಿನಿಂದ ಮಾತ್ರವೇ ಅವಳು ಸಪತ್ನಿಯು ಹೇಗೆ ಆಗುವಳು.

೧೭. ಆದ್ದರಿಂದ ನೀನು ದೋಷವಿಲ್ಲದೆ, ನಿನಗೆ ಸಮಾನಳಾದ ಈ ಕನ್ಯೆಯನ್ನು ಸಪತ್ನಿಯೆಂದರಿತು ಅಶ್ವಮುಖಿಯಾಗೆಂದು ಶಾಪವಿತ್ತುದರಿಂದ ನೀನು ಗಜಮುಖಿಯಾಗುವೆ.

ಏವಮುಕ್ತ್ವಾ ಸ ವಿಪ್ರೇಂದ್ರಸ್ತತಃ ಪ್ರೋವಾಚ ಕೇಶವಂ ।
ಆತಿಥ್ಯಂ ವಿಹಿತಂ ಹ್ಯೇತತ್ತವ ಪತ್ನ್ಯಾ ಯಥೋಚಿತಂ ।
ತಸ್ಮಾತ್ತತ್ರ ಪ್ರಯಾಸ್ಯಾಮಿ ಯತ್ರ ಸ್ಯಾತ್ತಾದೃಶೀ ಸುತಾ ॥ ೧೮ ॥
ಶ್ರೀ ಭಗವಾನುವಾಚ :—
ನ ಸಂತಾಪಸ್ತ್ವಯಾ ಕಾರ್ಯಃ ಕೃತ್ಯೇಽಸ್ಮಿನ್ದ್ವಿಜಸತ್ತಮ ।
ಮಮಾಂತಿಕೇ ಪ್ರಯಾತಾನಾಂ ನಾಽಶುಭಂ ಜಾಯತೇ ಕ್ವಚಿತ್ ॥ ೧೯ ॥
ತಸ್ಮಾನ್ನಾಽಶ್ವಮುಖೀ ಹ್ಯೇಷಾ ಜನ್ಮನ್ಯಸ್ಮಿನ್ಭವಿಷ್ಯತಿ ।
ಗೃಹೀತ್ವೇಮಾಂ ಗೃಹಂ ಗಚ್ಛ ಪ್ರಯಚ್ಛಸ್ವೇಪ್ಸಿತಾಯ ಚ ॥ ೨೦ ॥
ಶಯನೇ ವಾಮದಿಗ್ಭಾಗಃ ಕಲತ್ರಾಣಾಮುದಾಹೃತಃ ।
ದಕ್ಷಿಣೇ ಬಂಧುಲೋಕಾನಾಂ ತತ್ಕಾಲೋಚಿತಶಾಯಿನಾಂ ॥ ೨೧ ॥
ಸೇಯಂ ತವ ಸುತಾ ವಿಪ್ರ ಬಂಧುಸ್ಥಾನಂ ಸಮಾಶ್ರಿತಾ ।
ಭವಿಷ್ಯತಿ ತತೋ ಜಾಮಿಃ ಕನಿಷ್ಠಾ ಮೇಽನ್ಯ ಜನ್ಮನಿ ॥ ೨೨ ॥
ಅವತೀರ್ಣಸ್ಯ ಭೂಪೃಷ್ಠೇ ದೇವಕಾರ್ಯೇಣ ಕೇನಚಿತ್ ।
ವಾಜಿವಕ್ತ್ರಧರಾ ಪ್ರೋಕ್ತಾ ಯದ್ಯೇಷಾ ಮಮ ಕಾಂತಯಾ ॥ ೨೩ ॥
ತತೋಽಹಂ ಸುಮಹತ್ಕೃತ್ವಾ ತಪಶ್ಚೈವಾಽನಯಾ ಸಹ ।
ಕರಿಷ್ಯಾಮಿ ಶುಭಾಸ್ಯಾಂ ಚ ತಥಾ ಲಕ್ಷ್ಮೀಮಪಿ ದ್ವಿಜ ॥ ೨೪ ॥

---

೧೮. ಆ ಬ್ರಾಹ್ಮಣನು ಹೀಗೆ ಹೇಳಿ ವಿಷ್ಣುವನ್ನು ಕುರಿತು ನಿನ್ನ ಪತ್ನಿಯು ನನಗೆ ಉಚಿತವಾದ ಆತಿಥ್ಯವನ್ನುಮಾಡಿದಳು. ಆದ್ದರಿಂದ ನನ್ನ ಅಂತಹ ಪುತ್ರಿಯಿರುವ ಸ್ಥಳಕ್ಕೆ ಹೋಗುವೆನೆಂದನು.

೧೯. ಶ್ರೀ ಭಗವಂತನು ಹೇಳುತ್ತಾನೆ:—ದ್ವಿಜವರ್ಯನೆ! ಈ ವಿಷಯದಲ್ಲಿ ನೀನು ಸಂಕಟಪಡಬೇಡ. ನನ್ನ ಹತ್ತಿರ ಬಂದವರಿಗೆ ಅಮಂಗಳವುಂಟಾಗುವುದಿಲ್ಲ.

೨೦. ಆದ್ದರಿಂದ ಇವಳು ಈ ಜನ್ಮದಲ್ಲಿ ಅಶ್ವಮುಖಿಯಾಗುವುದಿಲ್ಲ. ಇವಳನ್ನು ಕರೆದುಕೊಂಡು ಹೋಗಿ ಇಷ್ಟನಾದ ವರನಿಗೆ ಕೊಡು.

೨೧. ಬ್ರಾಹ್ಮಣನೆ! ಹಾಸಿಗೆಯ ಎಡಭಾಗವು ಪತ್ನಿಯರಿಗೆ ಸಲ್ಲುವುದು. ಬಲಭಾಗವು ಆ ಕಾಲಕ್ಕೆ ಉಚಿತವಾಗುವಂತೆ ಮಲಗುವ ಬಂಧುಗಳಿಗಾಗಿರುವುದು.

೨೨—೨೪. ನಿನ್ನ ಮಗಳು ಬಂಧುಸ್ಥಾನವನ್ನು ಆಶ್ರಯಿಸಿದ್ದರಿಂದ ಇನ್ನೊಂದು ಜನ್ಮದಲ್ಲಿ ಯಾವುದೊ ಒಂದು ದೇವಕಾರ್ಯಕ್ಕಾಗಿ ಭೂಮಿಯಲ್ಲಿ ಅವತಾರ ಮಾಡಿದ ನನಗೆ ಸಹೋದರಿಯಾಗುವಳು. ನನ್ನ ಪತ್ನಿಯಾದ ಲಕ್ಷ್ಮಿಯು ಇವಳಿಗೆ ಅಶ್ವಮುಖಿಯಾಗೆಂದು ಶಪಿಸಿದ್ದರಿಂದ ನಾನು ಇವಳೊಡನೆ ಮಹಾತಪಸ್ಸನ್ನಾಚರಿಸಿ ಇವಳನ್ನೂ, ಲಕ್ಷ್ಮಿಯನ್ನೂ ಸುಂದರಮುಖವುಳ್ಳವರನ್ನಾಗಿ ಮಾಡುವೆನು.

ಏವಂ ಸ ಭಗವಾನ್ವಿಪ್ರಂ ತಂ ಸಂತೋಷ್ಯ ತದಾ ಗಿರಾ ।
ಗರುಡೇನ ಸಮಂ ಚಕ್ರೇ ಕಥಾಶ್ಚಿತ್ರಾ ಮನೋರಮಾಃ ॥ ೨೫ ॥
ಅಥ ತಸ್ಮಿನ್ ಕಥಾಂತೇ ಸ ಗರುಡಃ ಪುರುಷೋತ್ತಮಂ ।
ಪ್ರೋವಾಚ ತಾಂ ಸ್ತ್ರಿಯಂ ದೃಷ್ಟ್ವಾ ವೃದ್ಧಾಂ ತೇಜಃಸಮನ್ವಿತಾಂ ॥ ೨೬ ॥
ಅಪೂರ್ವೇಯಂ ಸುರಶ್ರೇಷ್ಠ ಸ್ತ್ರೀ ವೃದ್ಧಾ ತವ ಪಾರ್ಶ್ವಗಾ ।
ಕಿಮರ್ಥಂ ಕೇಯಮಾಖ್ಯಾಹಿ ಕುತಃ ಪ್ರಾಪ್ತಾ ಜನಾರ್ದನ ॥ ೨೭ ॥

ಶ್ರೀ ಭಗವಾನುವಾಚ :—

ಏಷಾ ಖ್ಯಾತಾ ಖಗಶ್ರೇಷ್ಠ ಲೋಕೇಽಸ್ಮಿನ್ ವೃದ್ಧಕನ್ಯಕಾ ।
ಶಾಂಡಲೀನಾಮ ಸರ್ವಜ್ಞಾ ಬ್ರಹ್ಮಚರ್ಯಪರಾಯಣಾ ॥ ೨೮ ॥
ತಪೋವೀರ್ಯಸಮೋಪೇತಾ ಸರ್ವದೇವಾಽಭಿವಂದಿತಾ ।
ನಾಽಸ್ತಿ ವೈ ಚೇದೃಶೀ ನಾರೀ ಖಗೇಂದ್ರಾಽತ್ರ ಜಗತ್ತ್ರಯೇ ॥ ೨೯ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ವಿಹಸ್ಯ ವಿಹಗಾಧಿಪಃ ।
ಪ್ರೋವಾಚ ವಾಸುದೇವಂ ಚ ತಾಂ ವಿಲೋಕ್ಯ ಚಿರಂ ದ್ವಿಜಾಃ ॥ ೩೦ ॥

ಗರುಡ ಉವಾಚ :—

ನೈತಚ್ಚಿತ್ರಂ ತಪೋ ಯಚ್ಚ ಕ್ರಿಯತೇ ಸುಮಹತ್ತರಂ ।
ಯಥಾ ಚ ದೀಯತೇ ದಾನಂ ಯಚ್ಚ ತನ್ನಾಽಸ್ತಿ ಚಾದ್ಭುತಂ ।
ತಥಾ ಚ ಕ್ರಿಯತೇ ಯುದ್ಧಂ ಸಂಗ್ರಾಮೇ ಯುದ್ಧಶಾಲಿಭಿಃ ॥ ೩೧ ॥

---

೨೫. ಆ ವಿಷ್ಣುವು ಹೀಗೆ ಆ ಬ್ರಾಹ್ಮಣನನ್ನು ಮಾತಿನಿಂದ ಸಂತೋಷ ಗೊಳಿಸಿ ಗರುಡನೊಡನೆ ಆಶ್ಚರ್ಯಕರಗಳಾದ ಕಥೆಗಳನ್ನು ಹೇಳುತ್ತಿದ್ದನು.

೨೬. ತರುವಾಯ ಆ ಗರುಡನು ಕಥೆಯ ಕೊನೆಯಲ್ಲಿ ತೇಜಸ್ವಿನಿಯೂ ವೃದ್ಧಳೂ ಆದ ಆ ಹೆಂಗಸನ್ನು ನೋಡಿ ಇಂತೆಂದನು.

೨೭. "ಎಲೈ ವಿಷ್ಣುವೆ! ಅಪೂರ್ವಳಾದ ಈ ಮುದಿ ಹೆಂಗಸು ಏಕೆ ನಿನ್ನ ಹತ್ತಿರದಲ್ಲಿರುವಳು? ಇವಳು ಯಾರು? ಎಲ್ಲಿಂದ ಬಂದಿರುವಳು? ಹೇಳು."

೨೮-೨೯. ಶ್ರೀ ಭಗವಂತನು ಹೇಳುತ್ತಾನೆ:— ಗರುಡ! ಈ ವೃದ್ಧ ಕನ್ಯೆಯು ಜಗತ್ತಿನಲ್ಲಿ ಬ್ರಹ್ಮಚರ್ಯನಿರತಳೂ, ತಪಸ್ಸಾಮರ್ಥ್ಯದಿಂದ ಕೂಡಿದವಳೂ, ಸಮಸ್ತದೇವವಂದಿತಳೂ ಆದ ಶಾಂಡಿಲಿಯೆಂದು ವಿಖ್ಯಾತಳಾಗಿರುವಳು. ಮೂರುಲೋಕಗಳಲ್ಲಿ ಇವಳಿಗೆ ಸಮಾನಳಾದ ಹೆಂಗಸಿಲ್ಲ.

೩೦. ಸೂತನು ಹೇಳುತ್ತಾನೆ:—ದ್ವಿಜರೆ! ಗರುಡನು ಅವನ ಆ ಮಾತನ್ನು ಕೇಳಿ ನಕ್ಕು ಬಹಳ ಹೊತ್ತು ಅವಳನ್ನು ನೋಡಿ ವಿಷ್ಣುವನ್ನು ಕುರಿತು ಇಂತೆಂದನು.

೩೧. ಗರುಡನು ಹೇಳುತ್ತಾನೆ:—ಆಚರಿಸುವ ಮಹಾತಪಸ್ಸೂ, ದಾನವೂ, ಯೋಧರು ಮಾಡುವ ಯುದ್ಧವೂ ಆಶ್ಚರ್ಯಕರವಲ್ಲ.

ನಾಶ್ಚರ್ಯಂ ಚಿತ್ರಮೇತಚ್ಚ ಬ್ರಹ್ಮಚರ್ಯಂ ತದದ್ಭುತಂ ।
ವಿಶೇಷಾದ್ಯೌವನಾಽವಸ್ಥಾಂ ಸಂಪ್ರಾಪ್ಯ ಪುರುಷೋತ್ತಮ ॥ ೩೨ ॥
ವಿಶೇಷೇಣ ಚ ನಾರೀಭಿರತ್ರ ನ ಶ್ರದ್ಧಧಾಮ್ಯಹಂ ।
ಅವಶ್ಯಂ ಯೌವನಸ್ಥೇನ ತಿರ್ಯಗ್ಯೋನಿಗತೇನ ಚ ॥ ೩೩ ॥
ವಿಕಾರಃ ಖಲು ಕರ್ತವ್ಯೋ ನಾಽಧಿಕಾರಾಯ ಯೌವನಂ ।
ಯದಿ ನ ಪ್ರಾಪ್ನುವಂತ್ಯೇತಾಃ ಪುರುಷಂ ಯೋಷಿತಃ ಕ್ವಚಿತ್ ॥ ೩೪ ॥
ಅನ್ಯೋನ್ಯಂ ಮೈಥುನಂ ಚಕ್ರುಃ ಕಾಮಬಾಣಪ್ರಪೀಡಿತಾಃ ।
ಕುಷ್ಠಿನಂ ವ್ಯಾಧಿತಂ ವಾಽಪಿ ಸ್ಥವಿರಂ ವ್ಯಂಗಮೇವ ಚ ।
ಅಪೇತ್ಯಾಃ ಪುರುಷಾಭಾವೇ ಮನ್ಯಂತೇ ಪಂಚಸಾಯಕಂ ॥ ೩೫ ॥
ನಾಽಗ್ನಿಸ್ತೃಪ್ಯತಿ ಕಾಷ್ಠಾನಾಂ ನಾಽಽಪಗಾನಾಂ ಮಹೋದಧಿಃ ।
ನಾಂತಕಃ ಸರ್ವಭೂತಾನಾಂ ನಪುಂಸಾಂ ವಾಮಲೋಚನಾ ॥ ೩೬ ॥
ನ ಪರತ್ರ ಭಯಾದೇತಾ ಮರ್ಯಾದಾಂ ವಿದಧುಃ ಸ್ತ್ರಿಯಃ ।
ಮುಕ್ತ್ವಾ ಭೂಪಭಯಂ ಚೈಕಮಥವಾ ಗುರುಜಂ ಭಯಂ ॥ ೩೭ ॥

ಸೂತ ಉವಾಚ :—

ಏವಂ ತಸ್ಯ ವಚಃ ಶ್ರುತ್ವಾ ಶಾಂಡಿಲೀ ಬ್ರಹ್ಮಚಾರಿಣೀ ।
ಮೌನವ್ರತಧರೋಽಪ್ಯೇವಂ ಹೃದಿ ಕೋಪಂ ದಧಾರ ಸಾ ॥ ೩೮ ॥

---

೩೨. ಯೌವನಾವಸ್ಥೆಯಲ್ಲಿ ಆಚರಿಸುವ ಬ್ರಹ್ಮಚರ್ಯೆಯು ಆಶ್ಚರ್ಯಕರವಾದುದು.

೩೩–೩೫. ವಿಶೇಷವಾಗಿ ಹೆಂಗಸರು ಆಚರಿಸುವ ಬ್ರಹ್ಮಚರ್ಯೆಯಲ್ಲಿ ನನಗೆ ನಂಬಿಕೆಯಿಲ್ಲ. ಯುವಕನಾದ ಮನುಷ್ಯನಾಗಲಿ, ಪಶುಪಕ್ಷಿಗಳಾಗಲಿ ವಿಕಾರಗೊಳ್ಳುವರು. ಯೌವನವು ತಡೆಯಲಸಾಧ್ಯವಾದುದು. ಈ ಹೆಂಗಸರು ಪುರುಷನನ್ನು ಹೊಂದದಿದ್ದರೆ ಮನ್ಮಥಪೀಡಿತರಾಗಿ ಪರಸ್ಪರ ಮೈಥುನಮಾಡುವರು. ಇವರು ಸರಿಯಾದ ಗಂಡಸು ಸಿಕ್ಕದಿದ್ದರೆ ಕುಷ್ಠರೋಗಿಯಾಗಲಿ, ರೋಗದನಾಗಲಿ, ಮುದುಕನಾಗಲಿ ವಿಕಲಾಂಗನಾಗಲಿ, ಪುರುಷನನ್ನು ಮನ್ಮಥನೆಂದು ಭಾವಿಸುವರು.

೩೬–೩೭. ಅಗ್ನಿಯು ಕಟ್ಟಿಗೆಯಿಂದಲೂ, ಸಮುದ್ರವು ನದಿಗಳಿಂದಲೂ, ಯಮನು ಸಕಲಪ್ರಾಣಿಗಳಿಂಧಲೂ, ಹೆಂಗಸು ಪುರುಷರಿಂದಲೂ ತೃಪ್ತಿಗೊಳ್ಳುವುದಿಲ್ಲ. ಈ ನಾರಿಯರು ರಾಜನ ಅಥವಾ ಗುರುವಿನ ಭಯದ ಹೊರತು ಪರಲೋಕದ ಭಯದಿಂದ ನಿಯಮವನ್ನು ಪಾಲಿಸುವುದಿಲ್ಲ.

೩೮. ಸೂತನು ಹೇಳುತ್ತಾನೆ :—ಬ್ರಹ್ಮಚಾರಿಣಿಯಾದ ಆ ಶಾಂಡಿಲಿಯು ಗರುಡನ ಈ ಮಾತನ್ನು ಕೇಳಿ ಮೌನವ್ರತವನ್ನು ಧರಿಸಿದ್ದರೂ ಮನಸ್ಸಿನಲ್ಲಿ ಕೋಪಗೊಂಡಳು.

ಏತಸ್ಮಿನ್ನಂತರೇ ತಸ್ಯ ಪಕ್ಷಿನಾಥಸ್ಯ ತಕ್ಷಣಾತ್ ।
ಉಭೌ ಪಕ್ಷೌ ಗತೌ ನಾಶಂ ರುಂಡಾಕಾರೋಽತ್ರಸೋಽಭವತ್ ॥ ೩೯ ॥
ಮಾಂಸ ಪಿಂಡಮಯೋ ರೌದ್ರಃ ಸರ್ವರೋಗವಿವರ್ಜಿತಃ ।
ಅಶಕ್ತಶ್ಚ ತಥಾ ಗಂತುಂ ಪದಮಾತ್ರಮಪಿ ಕ್ವಚಿತ್ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸುಪರ್ಣಪಕ್ಷಪಾತವರ್ಣನಂ" ನಾಮೈಕಾಽಶೀತಿತಮೋಽಧ್ಯಾಯಃ

---

೩೯. ಇಷ್ಟರಲ್ಲಿ ಆ ಗರುಡನ ಎರಡು ರೆಕ್ಕೆಗಳು ನಾಶವಾದುವು. ಅದರಿಂದ ಅವನು ರುಂಡಾಕಾರನಾದನು.

೪೦. ಅವನು ಯಾವರೋಗವಿಲ್ಲದಿದ್ದರೂ ಭಯಂಕರವಾದ ಮಾಂಸ ಪಿಂಡದಂತಾಗಿ ಒಂದು ಹೆಜ್ಜೆಯನ್ನು ಇಟ್ಟು ಎಲ್ಲಿ ಹೋಗಲೂ ಶಕ್ತನಾಗಲಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸುಪರ್ಣಪಕ್ಷಪಾತವರ್ಣನ" ವೆಂಬ
ಎಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವ್ಯಶೀತಿತಮೋಽಧ್ಯಾಯಃ

### ಸುಪರ್ಣೇಶ್ವರಾಖ್ಯಾನಮಾಹಾತ್ಮ್ಯವರ್ಣನಮ್

ಸೂತ ಉವಾಚ :—

ತದ್ದೃಷ್ಟ್ವಾ ಪುಂಡರೀಕಾಕ್ಷೋ ಗರುಡಸ್ಯ ವಿಚೇಷ್ಟಿತಂ ।
ವಿಸ್ಮಿತಶ್ಚಿಂತಯಾಮಾಸ ಕಿಮಿದಂ ಸಾಂಪ್ರತಂ ಸ್ಥಿತಂ ॥ ೧ ॥
ಅಪಿ ವಜ್ರಪ್ರಹಾರೇಣ ಯಸ್ಯರೋಮಾಪ್ಯಪಿ ನ ಚ್ಯುತಂ ।
ತೌ ಪಕ್ಷೌ ಸಹಸಾ ಚಾಽಸ್ಯ ಕಥಂ ನಿಪತಿತೌ ಭುವಿ ॥ ೨ ॥
ನೂನಮೇತೇನ ಯಾ ಸ್ತ್ರೀಣಾಂ ಕೃತಾ ನಿಂದಾ ಮಹಾತ್ಮನಾ ।
ದೂಷಿತಂ ಬ್ರಹ್ಮಚರ್ಯಂ ಯಚ್ಛಾಂಡಿಲೀಂ ಸಮವೇಕ್ಷ್ಯಚ ॥ ೩ ॥
ಅನಯಾ ಪಾತಿತೌ ಪಕ್ಷೌ ತಪಃಶಕ್ತಿಪ್ರಭಾವತಃ ।
ನಾಽನ್ಯಸ್ಯ ವಿದ್ಯತೇ ಶಕ್ತಿರೀದೃಶೀ ಭುವನತ್ರಯೇ ॥ ೪ ॥
ತತಃ ಪ್ರಸಾದಯಾಮಾಸ ಶಾಂಡಿಲೀಂ ಗರುಡಧ್ವಜಃ ।
ತದರ್ಥಂ ವಿನಯೋಪೇತಃ ಸ್ಮಿತಂ ಕೃತ್ವಾ ದ್ವಿಜೋತ್ತಮಾಃ ॥ ೫ ॥

---

### ಕನ್ನಡದ ಅನುವಾದ

#### ಸುಪರ್ಣೇಶ್ವರಾಖ್ಯಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ವಿಷ್ಣುವು ಗರುಡನ ಆ ಸ್ಥಿತಿಯನ್ನು ನೋಡಿ ಈಗ ಇದೇನಾಯಿತೆಂದು ಆಶ್ಚರ್ಯದಿಂದ ಚಿಂತಿಸಿದನು.

೨. ವಜ್ರದ ಪ್ರಹಾರದಿಂದ ಇವನ ರೆಕ್ಕೆಗಳ ರೋಮವೂ ಉದುರಲಿಲ್ಲ. ಅಂತಹ ಈ ರೆಕ್ಕೆಗಳು ಇದೀಗ ಭೂಮಿಯಲ್ಲಿ ಹೇಗೆ ಬಿದ್ದುವು.

೩. ಮಹಾತ್ಮನಾದ ಇವನು ಸ್ತ್ರೀಯರನ್ನು ನಿಂದಿಸಿದನು. ಶಾಂಡಿಲಿಯನ್ನು ನೋಡಿ ಬ್ರಹ್ಮಚರ್ಯವನ್ನು ದೂಷಿಸಿದನು.

೪. ಇವಳು ತಪಶ್ಶಕ್ತಿಯ ಪ್ರಭಾವದಿಂದ ಗರುಡನ ರೆಕ್ಕೆಗಳನ್ನು ಕೆಡವಿದಳು. ಮೂರು ಲೋಕಗಳಲ್ಲಿ ಬೇರೆಯವರಿಗೆ ಇಂತಹ ಶಕ್ತಿಯಿಲ್ಲ.

೫. ದ್ವಿಜವರ್ಯರೆ! ಅನಂತರ ವಿಷ್ಣುವು ವಿನಯದಿಂದ ನಕ್ಕು ಆದಕ್ಕಾಗಿ ಶಾಂಡಿಲಿಯನ್ನು ಸಮಾಧಾನಗೊಳಿಸಿದನು.

ಶ್ರೀ ಭಗವಾನುವಾಚ :—
ಸಾಮಾನ್ಯವಚನಂ ಪ್ರೋಕ್ತಂ ಸರ್ವಸ್ತ್ರೀಣಾಮನೇನ ಹಿ ।
ತತ್ಕಿಮರ್ಥಂ ಮಹಾಭಾಗೇ ತ್ವಯಾಚ್ಛೈವೇದೃಶಃ ಕೃತಃ ॥ ೬ ॥
ಶಾಂಡಿಲ್ಯುವಾಚ :—
ಮಮ ವಕ್ತ್ರಂ ಸಮಾಲೋಕ್ಯ ಸ್ಮಿತಂ ಚಕ್ರೇ ಜನಾರ್ದನ ।
ಸ್ತ್ರೀ ನಿಂದಾ ವಿಹಿತಾಽನೇನ ಸ್ವಮತ್ಯಾಽಪಿ ಜಗದ್ಗುರೋ ॥ ೭ ॥
ಏತಸ್ಮಾತ್ಕಾರಣಾದಸ್ಯ ನಿಗ್ರಹೋಽಯಂ ಮಯಾ ಕೃತಃ ।
ಮನಸಾ ನ ಚ ವಾಕ್ಯೇನ ನ ಚ ಕೇಶವ ಕರ್ಮಣಾ ॥ ೮ ॥
ಶ್ರೀ ಭಗವಾನುವಾಚ :—
ತಥಾಽಪಿ ಕುರು ಚಾಽಸ್ಯ ತ್ವಂ ಪ್ರಸಾದಂ ಗತಕಲ್ಮಷೇ ।
ಮಮ ವಾಕ್ಯಾನುರೋಧೇನ ಯದಿ ಮಾಂ ಮನ್ಯಸೇ ಶುಭೇ ॥ ೯ ॥
ಶಾಂಡಿಲ್ಯುವಾಚ :—
ಮನಸಾಽಪಿ ಮಯಾಧ್ಯಾತಂ ಶುಭಂ ವಾ ಯದಿ ವಾಽಶುಭಂ ।
ನಾಽನ್ಯಥಾ ಜಾಯತೇ ದೇವ ವಿಶೇಷಾತ್ಕೋಪಯುಕ್ತಯಾ ॥ ೧೦ ॥
ತಸ್ಮಾದೇಷ ಮಮಾದೇಶಾದಾರಾಧಯತು ಶಂಕರಂ ।
ಪಕ್ಷಲಾಭಾಯ ನಾಽನ್ಯಸ್ಯ ಶಕ್ತಿರ್ದಾತುಂ ವ್ಯವಸ್ಥಿತಾ ॥ ೧೧ ॥

---

೬. ಶ್ರೀ ಭಗವಂತನು ಹೇಳುತ್ತಾನೆ:—ಮಹಾಭಾಗ್ಯವಂತಳೆ! ಈ ಗರುಡನು ಸಾಮಾನ್ಯ ಸ್ತ್ರೀಯರನ್ನುದ್ದೇಶಿಸಿ ಸಾಮಾನ್ಯವಾಗಿಯೆ ಈ ಮಾತನ್ನಾಡಿರುವನು. ಆದ್ದರಿಂದ ನೀನು ಏಕೆ ಹೀಗೆ ಮಾಡಿದೆ?

೭. ಶಾಂಡಿಲಿಯು ಹೇಳುತ್ತಾಳೆ:—ಜನಾರ್ದನ! ಈ ಗರುಡನು ನನ್ನ ಮುಖವನ್ನು ನೋಡಿ ನಕ್ಕನು. ಸ್ವೇಚ್ಛೆಯಾಗಿ ನಾರಿಯರನ್ನು ನಿಂದಿಸಿದನು.

೮. ಈ ಕಾರಣದಿಂದ ನಾನು ಇವನನ್ನು ಮನಸ್ಸಿನಿಂದ ನಿಗ್ರಹಿಸಿದೆನು. ಮಾತು ಮತ್ತು ಕಾರ್ಯದಿಂದಲ್ಲ.

೯. ಶ್ರೀ ಭಗವಂತನು ಹೇಳುತ್ತಾನೆ:—ಪಾಪರಹಿತಳಾದ ಶಾಂಡಿಲಿಯೆ! ನೀನು ನನ್ನನ್ನು ಗೌರವಿಸುವುದಾದರೆ ನನ್ನ ಮಾತಿನಿಂದ ಈ ಗರುಡನನ್ನು ಅನುಗ್ರಹಿಸು.

೧೦. ಶಾಂಡಿಲಿಯು ಹೇಳುತ್ತಾಳೆ:—ಸ್ವಾಮಿ! ನಾನು ಕೋಪಗೊಂಡು ಮನಸ್ಸಿನಿಂದ ಆಲೋಚಿಸಿದ ಶುಭವಾಗಲಿ, ಅಶುಭವಾಗಲಿ ವ್ಯತಾಸವಾಗುವುದಿಲ್ಲ.

೧೧. ಆದ್ದರಿಂದ ಈ ಗರುಡನು ನನ್ನ ಆಣತಿಯಿಂದ ಪಕ್ಷವನ್ನು ಪಡೆಯುವುದಕ್ಕಾಗಿ ಶಂಕರನನ್ನು ಆರಾಧಿಸಲಿ. ಬೇರೆಯವರಿಗೆ ರೆಕ್ಕೆಯನ್ನು ಕೊಡಲು ಶಕ್ತಿಯಿಲ್ಲ.

ಅಥವಾ ಪುಂಡರೀಕಾಕ್ಷ ರೂಪಮಿದೃಗ್ವ್ಯವಸ್ಥಿತಃ ।
ಏಷ ಸಂಸ್ಥಾಸ್ಯತೇ ಲೋಕೇ ಸತ್ಯಮೇತದ್ಬ್ರವೀಮ್ಯಹಂ ॥ ೧೨ ॥
ಸೂತ ಉವಾಚ :—
ತಸ್ಯಾಸ್ತದ್ವಚನಂ ಶ್ರುತ್ವಾ ತಂ ಪ್ರೋವಾಚ ಜನಾರ್ದನಃ ।
ಗರುಡಂ ದೈನ್ಯ ಸಂಯುಕ್ತಂ ಮಾಂಸಪಿಂಡೋಪಮಂ ಸ್ಥಿತಂ ॥ ೧೩ ॥
ಏಷ ಏವ ವರಶ್ಚಾಸ್ಯಾ ದ್ವಿಪದೇಶ್ಯಾ ದ್ವಿಜೋತ್ತಮ ।
ಪಕ್ಷಲಾಭಾಯ ಯತ್ಪ್ರೋಕ್ತಂ ತವ ಶಂಭುಪ್ರಸಾದನಂ ॥ ೧೪ ॥
ತಸ್ಮಾದಾರಾಧಯ ಕ್ಷಿಪ್ರಂ ತ್ವಂ ದೇವಂ ಶಶಿಶೇಖರಂ ।
ಅವ್ಯಗ್ರಂ ಚಿತ್ತಮಾಸ್ಥಾಯ ದಿವಾರಾತ್ರಮತಂದ್ರಿತಃ ॥ ೧೫ ॥
ಯೇನ ತೇ ತತ್ಪ್ರಭಾವೇನ ಭೂಯಃ ಸ್ಯಾತ್ತಾದೃಶಂ ವಪುಃ ।
ತಸ್ಯ ದೇವಸ್ಯ ಮಾಹಾತ್ಮ್ಯಾದಚಿರಾದಪಿ ಕಾಶ್ಯಪ ॥ ೧೬ ॥
ತಚ್ಛ್ರುತ್ವಾ ಗರುಡಸ್ತೂರ್ಣಂ ಧೃತಪಾಶುಪತವ್ರತಃ ।
ಸಂಸ್ಥಾಪ್ಯ ದೇವಮೀಶಾನಂ ತತಸ್ತಂ ತೋಷಮಾನಯತ್ ॥ ೧೭ ॥
ಚಾಂದ್ರಾಯಣಾನಿ ಕೃಚ್ಛ್ರಾಣಿ ತಥಾ ಸಾಂತಪನಾನಿ ಚ ।
ಪ್ರಾಜಾಪತ್ಯಾನಿ ಚಕ್ರೇಽಥ ಪಾರಾಕಾಣಿ ತದಗ್ರತಃ ॥ ೧೮ ॥

---

೧೨. ಹಾಗೆ ಮಾಡದಿದ್ದರೆ ಇವನು ಇದೇ ರೂಪದಿಂದಿರಬೇಕಾಗುತ್ತದೆ. ನಾನು ನಿಜವಾಗಿ ಹೇಳುವೆನು.

೧೩. ಸೂತನು ಹೇಳುತ್ತಾನೆ:—ಜನಾರ್ದನನು ಆ ಶಾಂಡಿಲಿಯ ಆ ಮಾತನ್ನು ಕೇಳಿ ದೈನ್ಯದಿಂದ ಮಾಂಸಪಿಂಡದಂತಿರುವ ಆ ಗರುಡನನ್ನು ಕುರಿತು ಇಂತೆಂದನು.

೧೪. "ಗರುಡ! ಮನುಷ್ಯಶ್ರೇಷ್ಠಳಾದ ಈ ಶಾಂಡಿಲಿಯು ಪಕ್ಷಲಾಭಕ್ಕಾಗಿ ಶಂಕರನನ್ನು ಆರಾಧಿಸಬೇಕೆಂದು ಹೇಳಿರುವುದೇ ವರವಾಗಿರುವುದು.

೧೫. ಆದ್ದರಿಂದ ಬೇಗನೆ ಹಗಲು ರಾತ್ರಿ ಒಮ್ಮನಸ್ಸಿನಿಂದ ಶಂಕರನನ್ನು ಆರಾಧಿಸು.

೧೬. ಆ ಶಂಕರನ ಮಾಹಾತ್ಮ್ಯಯಿಂದ ಬೇಗನೆ ನಿನಗೆ ಅಂತಹ ಶರೀರವು ಲಭಿಸುವುದು."

೧೭. ಗರುಡನು ಜನಾರ್ದನನ ಆ ಮಾತನ್ನು ಕೇಳಿ ಪಾಶುಪತವ್ರತವನ್ನು ಧರಿಸಿ ಶಂಕರನನ್ನು ಸ್ಥಾಪಿಸಿ ಅವನನ್ನು ಸಂತೋಷಗೊಳಿಸಿದನು.

೧೮. ಅವನ ಮುಂದೆ ಚಾಂದ್ರಾಯಣ, ಕೃಚ್ಛ್ರ, ಸಾಂತಪನ, ಪ್ರಾಜಾಪತ್ಯ, ಪರಾಕವ್ರತಗಳನ್ನಾಚರಿಸಿದನು.

ಸ್ನಾತ್ವಾ ತ್ರಿಷವಣಂ ಪಶ್ಚಾದ್ಭಸ್ಮಸ್ನಾನ ಪರಾಯಣಃ ।
ಜಪನ್ರುದ್ರಶಿರೋ ರುದ್ರಾನ್ನೀಲ ರುದ್ರಾಂಸ್ತಥಾಽಪರಾನ್ ॥ ೧೯ ॥
ಚಕ್ರೇ ಪೂಜಾಂ ಸ್ವಯಂ ತಸ್ಯ ಸ್ನಾಪಯಿತ್ವಾ ಯಥಾವಿಧಿ ।
ಬಲಿಪೂಜೋಪಹಾರಾಂಶ್ಚ ವಿಧಾನೇನ ಪ್ರಯುಚ್ಛತಿ ॥ ೨೦ ॥
ಏವಂ ತಸ್ಯ ವ್ರತಸ್ಥಸ್ಯ ಜಪಪೂಜಾಪರಸ್ಯ ಚ ।
ತತೋ ವರ್ಷಸಹಸ್ರಾಂತೇ ಗತಸ್ತುಷ್ಟಿಂ ಮಹೇಶ್ವರಃ ।
ಅಬ್ರವೀದ್ವರದೋಽಸ್ಮೀತಿ ವೃಣುಷ್ವೇಷ್ಟಂ ದ್ವಿಜೋತ್ತಮ ॥ ೨೧ ॥

ಗರುಡ ಉವಾಚ :—

ಪಶ್ಯಾಽವಸ್ಥಾಂ ಮಮೇಶಾನ ಶಾಂಡಿಲ್ಯಾಯಾ ವಿನಿರ್ಮಿತಾ ।
ಪಕ್ಷಪಾತಃ ಕೃತೋಽಸ್ಮಾಕಂ ತಮಹಂ ಪ್ರಾರ್ಥಯಾಮಿ ವೈ ॥ ೨೨ ॥
ತ್ವಯಾಽತ್ರೈವ ಸದಾಲಿಂಗೇ ಸ್ಥೇಯಂ ಹರ ಮಮಾಽಧುನಾ ।
ಮಮ ವಾಕ್ಯಾದಸಂದಿಗ್ಧಂ ಯದಿ ಚೇಷ್ಟಂ ಪ್ರಯುಚ್ಛಸಿ ॥ ೨೩ ॥

ಭಗವಾನುವಾಚ :—

ಅದ್ಯ ಪ್ರಭೃತಿ ಮೇ ಚಾಽತ್ರ ಲಿಂಗೇ ವಾಸೋ ಭವಿಷ್ಯತಿ ।
ತ್ವಂ ಚ ತದ್ರೂಪ ಸಂಪನ್ನೋ ವಿಶೇಷಾದ್ಬಲವೇಗಭಾಕ್ ॥ ೨೪ ॥
ಭವಿಷ್ಯಸಿ ನ ಸಂದೇಹೋ ಮತ್ಪ್ರಸಾದಾದ್ವಿಹಂಗಮ ।
ಏವಮುಕ್ತ್ವಾಽಥ ತಂ ದೇವಃ ಸ್ವಯಂ ಪಸ್ಪರ್ಶ ಪಾಣಿನಾ ॥ ೨೫ ॥

---

೧೯–೨೦. ತ್ರಿಕಾಲಸ್ನಾನಮಾಡಿ ಅನಂತರ ಭಸ್ಮಸ್ನಾನಗೈದು ರುದ್ರಶೀರ್ಷ, ರುದ್ರ, ನೀಲರುದ್ರ ಮತ್ತು ಇತರ ಮಂತ್ರಗಳನ್ನು ಜಪಿಸುತ್ತ ಆ ಶಂಕರನಿಗೆ ವಿಧಿಯಂತೆ ಅಭಿಷೇಕಮಾಡಿ ಬಲಿ, ಪೂಜೆ, ಉಪಹಾರಗಳನ್ನು ಕೊಟ್ಟನು.

೨೧. ಹೀಗೆ ಆ ಗರುಡನು ವ್ರತಜಪಪೂಜಾ ನಿರತನಾಗಿರಲು ಒಂದು ಸಾವಿರವರ್ಷಗಳು ಕಳೆದಮೇಲೆ ಮಹೇಶ್ವರನು, "ಸಂತುಷ್ಟನಾಗಿ ವರವನ್ನು ಕೊಡುತ್ತೇನೆ ಕೇಳಿಕೊ" ಎಂದನು.

೨೨. ಆಗ ಗರುಡನು, "ಈಶ್ವರ! ಶಾಂಡಿಲಿಯು ಉಂಟುಮಾಡಿದ್ದ ನನ್ನ ಈ ಸ್ಥಿತಿಯನ್ನು ನೋಡು. ನನ್ನ ರೆಕ್ಕೆಗಳನ್ನು ಕೆಡವಿರುವಳು. ಅದನ್ನೀಗ ಬೇಡುತ್ತೇನೆ.

೨೩. ನೀನು ನನ್ನ ಇಷ್ಟಾರ್ಥವನ್ನು ಕೊಡುವುದಾದರೆ ನನ್ನ ಮಾತಿನಂತೆ ಈ ಲಿಂಗದಲ್ಲಿ ನೆಲೆಸು."

೨೪–೨೫. ಭಗವಂತನು ಹೇಳುತ್ತಾನೆ:—ಗರುಡ! ಇದು ಮೊದಲ್ಗೊಂಡು ನಾನು ಈ ಲಿಂಗದಲ್ಲಿ ವಾಸಮಾಡುವೆನು. ನೀನು ನನ್ನ ಅನುಗ್ರಹದಿಂದ ಆ ಮೊದಲಿನ ರೂಪವನ್ನು ಹೊಂದಿ ಅತಿಶಯಬಲವುಳ್ಳವನಾಗುವೆ. ಶಂಕರನು ಹೀಗೆ ಹೇಳಿ ಕೈಯಿಂದ ಆ ಗರುಡನನ್ನು ಮುಟ್ಟಿದನು.

ತತೋಽಸ್ಯ ಪಕ್ಷೌ ಸಂಜಾತೌ ತತ್ಕ್ಷಣಾದೇವ ಸುಂದರೌ ।
ತಥಾ ರೋಮಾಣಿ ದಿವ್ಯಾನಿ ಜಾತರೂಪೋಪಮಾನಿ ಚ ॥ ೨೬ ॥
ತತಃ ಪ್ರಣಮ್ಯ ತಂ ದೇವಂ ಪ್ರಹೃಷ್ಟಃ ಸ ವಿಹಂಗಮಃ ।
ಗತಃ ಸ್ವಭವನಂ ಪಶ್ಚಾದನುಜ್ಞಾಪ್ಯ ಮಹೇಶ್ವರಂ ॥ ೨೭ ॥
ದೇವೋಽಪಿ ವಚನಾತ್ತಸ್ಯ ತಸ್ಮಿಂಲ್ಲಿಂಗೇ ಸದಾ ಹರಃ ।
ನಿವಾಸಮಕರೋತ್ಸಮ್ಯಕ್ತ್ರಿಸ್ತ್ರೇ ಸಂಧ್ಯಾತ್ರಯೇ ಸದಾ ॥ ೨೮ ॥
ತಸ್ಯಚಾಯತನೇ ಪುಣ್ಯೇ ಯೋಗಾತ್ಪ್ರಾಣಾನ್ಪರಿತ್ಯಜೇತ್ ।
ಪ್ರಾಯೋಪವೇಶನಂ ಕೃತ್ವಾ ನ ಸ ಭೂಯೋಽಪಿ ಜಾಯತೇ ॥ ೨೯ ॥
ಅಪಿ ಪಾಪಸಮಾಚಾರಃ ಕೌಲೋ ವಾ ನಿರ್ಘೃಣೋಽಪಿ ವಾ ।
ಬ್ರಹ್ಮಘ್ನೋ ವಾ ಸುರಾಪೋ ವಾ ಚೌರೋ ವಾ ಭ್ರೂಣಹಾಽಪಿ ವಾ॥ ೩೦॥
ತ್ರಿಕಾಲಂ ಪೂಜಯನ್ಯಸ್ತು ಶ್ರದ್ಧಾಪೂತೇನ ಚೇತಸಾ ।
ಸಂವತ್ಸರಂ ವಸೇತ್ಸೋಽಪಿ ಶಿವಲೋಕೇ ಮಹೀಯತೇ ॥ ೩೧ ॥
ಅಥವಾ ಸೋಮವಾರೇಣ ಯಸ್ತಂ ಪಶ್ಯತಿ ಮಾನವಃ ।
ಕೃತ್ವಾ ಕ್ಷಣಂ ಸುಭಕ್ತ್ಯಾ ಯೋ ಯಾವತ್ಸಂವತ್ಸರಂ ದ್ವಿಜಾಃ ॥ ೩೨ ॥
ಸೋಽಪಿ ಯಾತಿ ನ ಸಂದೇಹಃ ಪುರುಷಃ ಶಿವಮಂದಿರೇ ।
ವಿಮಾನವರಮಾರೂಢಃ ಸೇವ್ಯಮಾನೋಽಪ್ಸರೋಗಣೈಃ ॥ ೩೩ ॥

---

೨೬. ಕೂಡಲೆ ಅವನ ಶರೀರದಲ್ಲಿ ಸುಂದರವಾದ ರೆಕ್ಕೆಗಳೂ, ಸುವರ್ಣಮಯವಾದ ಕೂದಲುಗಳೂ ಉಂಟಾದುವು.

೨೭. ಆ ಗರುಡನು ಬಳಿಕ ಸಂತೋಷಗೊಂಡು ಶಂಕರನನ್ನು ವಂದಿಸಿ ಅವನನ್ನು ಕೇಳಿಕೊಂಡು ತನ್ನ ಮನೆಗೆ ಹೋದನು.

೨೮. ಶಂಕರನೂ ಗರುಡನ ಮಾತಿನಿಂದ ತ್ರಿಸಂಧ್ಯಾಕಾಲಗಳಲ್ಲಿ ಆ ಲಿಂಗದಲ್ಲಿ ಯಾವಾಗಲೂ ವಾಸಮಾಡಿದನು.

೨೯. ಶಂಕರನ ಆಲಯದಲ್ಲಿ ಪ್ರಾಯೋಪವೇಶಮಾಡಿ ಯೋಗದಿಂದ ಪ್ರಾಣವನ್ನು ತ್ಯಜಿಸುವವನು ಮರಳಿ ಜನಿಸುವುದಿಲ್ಲ.

೩೦–೩೧. ಪಾಪಿಯಾಗಲಿ, ಅಪವಾದಗ್ರಸ್ತನಾಗಲಿ, ದಯಾರಹಿತನಾಗಲಿ, ಬ್ರಹ್ಮಘ್ನನಾಗಲಿ, ಸುರಾಪಾನಮಾಡಿದವನಾಗಲಿ, ಕಳ್ಳನಾಗಲಿ, ಶಿಶುಹತ್ಯೆಮಾಡಿದವನಾಗಲಿ ತ್ರಿಕಾಲದಲ್ಲಿ ಒಂದು ವರ್ಷದವರೆಗೆ ಶ್ರದ್ಧೆಯಿಂದ ಪೂಜಿಸುವವನು ಶಿವಲೋಕದಲ್ಲಿ ಪೂಜ್ಯನಾಗುವನು.

೩೨–೩೩. ಅಥವಾ ಸೋಮವಾರ ಒಂದು ವರ್ಷದವರೆಗೆ ಅವನನ್ನು ಭಕ್ತಿಯಿಂದ ದರ್ಶನ ಮಾಡುವವನು ಉತ್ತಮವಾದ ವಿಮಾನವನ್ನೇರಿ ಅಪ್ಸರೆಯರಿಂದ ಸೇವಿಸಲ್ಪಡುತ್ತ ಶಿವಾಲಯಕ್ಕೆ ಹೋಗುವನು.

ತಸ್ಮಾತ್ಸರ್ವಪ್ರಯತ್ನೇನ ಕಲಿಕಾಲೇ ವಿಶೇಷತಃ ।
ದ್ರಷ್ಟವ್ಯೋ ವೈ ಸುಪರ್ಣಾಖ್ಯೋ ದೇವಃ ಶ್ರದ್ಧಾಸಮನ್ವಿತೈಃ ॥ ೩೪ ॥
ಸಂತ್ಯಾಜ್ಯಾಶ್ಚ ತಥಾ ಪ್ರಾಣಾಸ್ತದಗ್ರೇ ಪ್ರಾಯಸಂಶ್ರಿತೈಃ ।
ವಾಂಛದ್ಭಿಃ ಶಿವಸಾನ್ನಿಧ್ಯಂ ಸತ್ಯಮೇತನ್ಮಯೋದಿತಂ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸುಪರ್ಣೇಶ್ವರಾಖ್ಯಮಾಹಾತ್ಮ್ಯವರ್ಣನಂ"
ನಾಮ ದ್ವ್ಯಶೀತಿತಮೋಽಧ್ಯಾಯಃ

---

೩೪. ಆದ್ದರಿಂದ ಕಲಿಕಾಲದಲ್ಲಿ ವಿಶೇಷವಾಗಿ ಶ್ರದ್ಧೆಯಿಂದ ಸುಪರ್ಣಾಖ್ಯ ದೇವನನ್ನು ದರ್ಶನಮಾಡಬೇಕು.

೩೫. ಶಿವಸಾನ್ನಿಧ್ಯವನ್ನು ಬಯಸುವವರು ಅವನ ಮುಂದೆ ಪ್ರಾಯೋಪವೇಶವನ್ನುಮಾಡಿ ಪ್ರಾಣವನ್ನು ತ್ಯಜಿಸಬೇಕು. ನಾನು ಹೇಳಿರುವುದು ನಿಜ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸುಪರ್ಣೇಶ್ವರಾಖ್ಯಮಾಹಾತ್ಮ್ಯವರ್ಣನ"ವೆಂಬ
ಎಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರ್ಯಶೀತಿತಮೋಽಧ್ಯಾಯಃ

## ಸುಪರ್ಣಾಖ್ಯಮಾಹಾತ್ಮ್ಯವರ್ಣನಂ

ಸೂತ ಉವಾಚ:—

ತತ್ರಾಶ್ಚರ್ಯಮಭೂತ್ಪೂರ್ವಂ ಯತ್ತ್ರದ್ವಾಬ್ರಹ್ಮಣ ಸತ್ತಮಾಃ ।
ಅಹಂ ವಃ ಕೀರ್ತಯಿಷ್ಯಾಮಿ ಪುರಾಣೇ ಯದುದಾಹೃತಂ ॥ ೧ ॥
ವೇಣುರ್ನಾಮ ಮಹೀಪಾಲಃ ಪುರಾಽಽಸೀತ್ಸೂರ್ಯವಂಶಜಃ ।
ಸದೈವ ಪಾಪಸಂಯುಕ್ತೋ ದುರ್ಮೇಧಾಃ ಕಾಮಪೀಡಿತಃ ॥ ೨ ॥
ಶಾಸನಾನಿ ಪ್ರದತ್ತಾನಿ ಬ್ರಾಹ್ಮಣಾನಾಂ ಮಹಾತ್ಮನಾಂ ।
ಅನ್ಯೈಃ ಪಾರ್ಥಿವಶಾರ್ದೂಲೈಸ್ತೇನ ತಾನಿ ಹೃತಾನ್ಯಲಂ ॥ ೩ ॥
ವಿಧ್ವಂಸಿತಾಃ ಸ್ತ್ರಿಯೋ ನೈಕಾ ವಿಧವಾಶ್ಚ ವಿಶೇಷತಃ ।
ಕುಮಾರ್ಯೋ ರೂಪವತ್ಯಶ್ಚ ತಥಾ ನಿಜಕುಲೋದ್ಭವಾಃ ॥ ೪ ॥
ದೇವತಾರಾಧನಂ ಪೂಜಾಂ ಕರ್ತುಂ ನೈವ ದದಾತಿ ಸಃ ।
ನ ಚ ಯಜ್ಞಂ ನ ಹೋಮಂ ಚ ಸ್ವಾಧ್ಯಾಯಂ ನ ಚ ಪಾದಕೃತ್ ॥ ೫ ॥

---

## ಕನ್ನಡದ ಅನುವಾದ

### ಸುಪರ್ಣಾಖ್ಯಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಬ್ರಾಹ್ಮಣವರ್ಯರೆ! ಹಿಂದೆ ಅಲ್ಲಿ ನಡೆದ ಪುರಾಣದಲ್ಲಿ ಹೇಳಿರುವ ಒಂದು ಆಶ್ಚರ್ಯಕರವಾದ ವಿಷಯವನ್ನು ನಿಮಗೆ ಹೇಳುವೆನು.

೨. ಹಿಂದೆ ಸೂರ್ಯವಂಶದವನೂ, ಪಾಪಿಯೂ, ದುಷ್ಟಬುದ್ಧಿಯೂ, ಕಾಮಪೀಡಿತನೂ ಆದ ವೇಣುವೆಂಬ ಒಬ್ಬ ರಾಜನಿದ್ದನು.

೩. ಇತರ ರಾಜವರ್ಯರು ಬ್ರಾಹ್ಮಣರಿಗಿತ್ತ ಅನೇಕ ಶಾಸನಗಳನ್ನು ಅವನು ಅಪಹರಿಸಿದನು.

೪. ಅವನು ಬಹುಮಂದಿ ಹೆಂಗಸರನ್ನೂ ವಿಧವೆಯರನ್ನೂ, ಸುಂದರಿಯರಾದ ತನ್ನ ವಂಶದ ಅನೇಕ ಕುಮಾರಿಯರನ್ನೂ ಹಾಳುಮಾಡಿದನು.

೫. ಪಾಪಿಯಾದ ಅವನು ದೇವಪೂಜೆ, ಯಜ್ಞ, ಹೋಮ, ವೇದಾಧ್ಯಯನ ಇವುಗಳನ್ನು ಮಾಡಲವಕಾಶಕೊಡಲಿಲ್ಲ.

ಪ್ರೋವಾಚಾಽಥ ಜನಾನ್ ಸರ್ವಾನ್ ಮಾಂ ಪೂಜಯತ ಸರ್ವದಾ ।
ನ ಮಾಮಭ್ಯಧಿಕೋಽನ್ಯೋಽಸ್ತಿ ದೇವೋ ವಾ ಬ್ರಾಹ್ಮಣೋಽಪಿ ವಾ ॥೬॥
ಮಯಾ ತುಷ್ಟೇನ ಸರ್ವೇಷಾಂ ಸಂಪತ್ಸ್ಯತಿ ಹೃದಿ ಸ್ಥಿತಂ ।
ಇಹಲೋಕೇಷ್ಟಸಂದಿಗ್ಧಂ ಶುಭಂ ವಾ ಯದಿ ವಾಽಶುಭಂ ॥ ೭ ॥
ತೇನ ಶಸ್ತ್ರವಿಹೀನಾನಾಂ ವಿಶ್ವಸ್ತಾನಾಂ ವಧಃಕೃತಃ ।
ಸಂತ್ಯಕ್ತಾಃ ಶರಣಂ ಪ್ರಾಪ್ತಾಃ ಪುರುಷಾ ಭಯವಿಹ್ವಲಾಃ ॥ ೮ ॥
ನಷ್ಟೋ ಮಹಾಹವಂ ದೃಷ್ಟ್ವಾ ಶತ್ರುಸಂಘಾನುಪಸ್ಥಿತಾನ್ ।
ಕ್ಷಾತ್ರಂ ಧರ್ಮಂ ಪರಿತ್ಯಜ್ಯ ಪ್ರಾಣರಕ್ಷಾರ್ಥಮೇವಹಿ ॥ ೯ ॥
ಅಚೌರಾಃ ಪ್ರಗೃಹೀತಾಶ್ಚ ಚೌರಾಃ ಸಂರಕ್ಷಿತಾಃ ಸದಾ ।
ಸಾಧವಃ ಕ್ಲೇಶಿತಾ ನಿತ್ಯಂ ತೇಷಾಂ ಸಂಹರತಾ ಧನಂ ॥ ೧೦ ॥
ನ ಕೃತಂ ಚ ವ್ರತಂ ತೇನ ಶ್ರದ್ಧಾಪೂತೇನ ಚೇತಸಾ ।
ನ ದತ್ತಂ ಬ್ರಾಹ್ಮಣೇಭ್ಯಶ್ಚ ನ ಚ ಯಷ್ಟಂ ಕದಾಚನ ॥ ೧೧ ॥
ಏವಂ ತಸ್ಯ ನರೇಂದ್ರಸ್ಯ ಪಾಪಾಸಕ್ತಸ್ಯ ನಿತ್ಯಶಃ ।
ಕುಷ್ಠವ್ಯಾಧಿರಭೂದುಗ್ರೋ ವಂಶೋಚ್ಛೇದಶ್ಚ ಸದ್ದ್ವಿಜಾಃ ॥ ೧೨ ॥
ತತಸ್ತಂ ವ್ಯಾಧಿನಾ ಗ್ರಸ್ತಂ ಪುತ್ರಪೌತ್ರ ವಿವರ್ಜಿತಂ ।
ದಾಯಾದಾಃ ಸಹಸೋಪೇತಾ ರಾಜ್ಯಂ ಜಹ್ರುಸ್ತತಃ ಪರಂ ॥ ೧೩ ॥

---

೬–೭. ಅವನು "ನನಗಿಂತ ಅಧಿಕನಾದ ದೇವತೆಯಾಗಲಿ, ಬ್ರಾಹ್ಮಣನಾಗಲಿ ಇಲ್ಲದರಿಂದ ನನ್ನನ್ನು ಪೂಜಿಸಿರಿ, ಈ ಲೋಕದಲ್ಲಿ ನಾನು ಸಂತುಷ್ಟನಾದರೆ ಸಕಲ ಜನರ ಮನಸ್ಸಿನಲ್ಲಿರುವ ಶುಭವಾಗಲಿ, ಅಶುಭವಾಗಲಿ ನಿಶ್ಚಯವಾಗಿಯೂ ಸಿದ್ಧಿಸುವುದು" ಎಂದು ಸಮಸ್ತ ಜನರಿಗೆ ಹೇಳಿದನು.

೮. ಅವನು ಆಯುಧವಿಲ್ಲದೆ ನಂಬಿಕೆಯಿಂದ ಇದ್ದವರನ್ನು ಕೊಂದನು. ಭಯದಿಂದ ಮರೆಹೊಕ್ಕವರನ್ನು ಬಿಟ್ಟನು.

೯. ಮಹಾಸಮರದಲ್ಲಿ ಸಮೀಪಕ್ಕೆ ಬಂದ ಶತ್ರುಗಳನ್ನು ನೋಡಿ ಕ್ಷತ್ರಿಯ ಧರ್ಮವನ್ನು ತ್ಯಜಿಸಿ ಪ್ರಾಣರಕ್ಷಣೆಗಾಗಿ ಓಡಿಹೋದನು.

೧೦. ಕಳ್ಳರಲ್ಲದವರನ್ನು ಸೆರೆಹಿಡಿದನು. ಕಳ್ಳರನ್ನು ಕಾಪಾಡಿದನು. ಸಾಧುಗಳ ದ್ರವ್ಯವನ್ನು ಅಪಹರಿಸಿ ಅವರನ್ನು ಕ್ಲೇಶಗೊಳಿಸಿದನು,

೧೧. ಅವನು ಶ್ರದ್ಧೆಗೊಂಡು ಮನಸ್ಸಿನಿಂದಲೂ ಸಹ ವ್ರತವನ್ನಾಚರಿಸಲಿಲ್ಲ. ಬ್ರಾಹ್ಮಣರಿಗೆ ದಾನಮಾಡಲಿಲ್ಲ. ಒಂದು ವೇಳೆಯೂ ಯಾಗಮಾಡಲಿಲ್ಲ.

೧೨. ಹೀಗೆ ಯಾವಾಗಲೂ ಪಾಪನಿರತನಾದ ಆ ರಾಜನಿಗೆ ಕಠಿನವಾದ ಕುಷ್ಠವ್ಯಾಧಿಯುಂಟಾಯಿತು. ವಂಶವು ಹಾಳಾಯಿತು.

೧೩. ಬಳಿಕ ವ್ಯಾಧಿಗ್ರಸ್ತನೂ, ಪುತ್ರಪೌತ್ರರಿಲ್ಲದವನೂ ಆದ ಆ ರಾಜನ ರಾಜ್ಯವನ್ನು ಬಂಧುಗಳು ಕೂಡಲೆ ಬಂದು ಅಪಹರಿಸಿದರು.

ತಂ ಚ ನಿರ್ವಾಸಯಾಮಾಸುಸ್ತಸ್ಮಾದ್ದೇಶಾತ್ಪದಾತಿಕಂ ।
ಏಕಾಕಿನಂ ಪರಿತ್ಯಕ್ತಂ ಸರ್ವೈರಪಿ ಸುಹೃದ್ಗಣೈಃ ॥ ೧೪ ॥
ಸೋಽಪಿ ಸರ್ವೈಃ ಪರಿತ್ಯಕ್ತಸ್ತೇನ ಪಾಪೇನ ಕರ್ಮಣಾ ।
ಕಲತ್ರೈರಪಿ ಚಾತ್ಮೀಯೈಃ ಸ್ಮೃತ್ವಾ ಪೂರ್ವವಿಚೇಷ್ಟಿತಂ ॥ ೧೫ ॥
ಏಕಾಕೀ ಭ್ರಮಮಾಣೋಽಥ ಸೋಽಪಿ ಕಷ್ಟವಶಂ ಗತಃ ।
ಕ್ಷುತ್ತೃಷ್ಣಾಸು ಪರಿಶ್ರಾಂತಃ ಕ್ಷೇತ್ರೇಽತ್ರೈವ ಸಮಾಗತಃ ॥ ೧೬ ॥
ತತಃ ಪ್ರಾಸಾದಮಾಸಾದ್ಯ ಸುಪರ್ಣಾಖ್ಯಸಮುದ್ಭವಂ ।
ಯಾವತ್ಪ್ರಾಪ್ತಃ ಪರಿತ್ಯಕ್ತಸ್ತಾವತ್ಪ್ರಾಣೈರುಪೋಷಿತಃ ॥ ೧೭ ॥
ತತೋ ದಿವ್ಯವಪುರ್ಭೂತ್ವಾ ವಿಮಾನವರಮಾಶ್ರಿತಃ ।
ಜಗಾಮ ಶಿವಲೋಕಂ ಸ ದುರ್ಲಭಂ ಧಾರ್ಮಿಕೈರಪಿ ॥ ೧೮ ॥
ಸೇವ್ಯಮಾನೋಽಪ್ಸರೋಭಿಶ್ಚ ಸ್ತೂಯಮಾನಶ್ಚ ಕಿನ್ನರೈಃ ।
ಗೀಯಮಾನಶ್ಚ ಗಂಧರ್ವೈಃ ಶಿವಪಾರ್ಶ್ವೇ ವ್ಯವಸ್ಥಿತಃ ॥ ೧೯ ॥
ಅಥ ತಂ ಸನ್ನಿಧೌ ದೃಷ್ಟ್ವಾ ಗೌರೀ ಪಪ್ರಚ್ಛ ಸಾದರಂ ।
ಕೋಽಯಂ ದೇವ ಸಮಾಯಾತಃ ಸುಕೃತೀ ತವ ಮಂದಿರೇ ।
ಅನೇನ ಕಿಂ ಕೃತಂ ಕರ್ಮ ಯತ್ಪ್ರಾಪ್ತೋಽತ್ರ ವಿಭೂತಿಧೃಕ್ ॥ ೨೦ ॥

---

೧೪. ಸಕಲ ಮಿತ್ರರೂ ತ್ಯಜಿಸಿದ ಒಬ್ಬಂಟಿಗನಾದ ಅವನನ್ನು ಆ ದೇಶದ ಜನರು ಪಾದಚಾರಿಯನ್ನಾಗಿ ಮಾಡಿ ಹೊರಡಿಸಿದರು.

೧೫. ಅವನ ಪತ್ನಿಯರೂ ಪೂರ್ವದಲ್ಲಿ ಅವನು ಮಾಡಿದ ಪಾಪಕಾರ್ಯಗಳೆಲ್ಲವನ್ನೂ ಸ್ಮರಿಸಿ ಪಾಪಿಯಾದ ಅವನನ್ನು ತ್ಯಜಿಸಿದರು.

೧೬. ಅವನು ಒಬ್ಬಂಟಿಗನಾಗಿ ಸಂಚರಿಸುತ್ತ ದುಃಖಗೊಂಡು ಹಸಿವು ಬಾಯಾರಿಕೆಗಳಿಂದ ಬಳಲುತ್ತ ಈ ಕ್ಷೇತ್ರಕ್ಕೆ ಬಂದನು.

೧೭. ಬಳಿಕ ಸುಪರ್ಣ ಪ್ರಾಸಾದಕ್ಕೆ ಬಂದು ಉಪವಾಸಮಾಡಿ ಮಡಿದನು.

೧೮. ತರುವಾಯ ದಿವ್ಯದೇಹವನ್ನು ಧರಿಸಿ ಉತ್ತಮ ವಿಮಾನವನ್ನೇರಿ ಧಾರ್ಮಿಕರಿಗೆ ದುರ್ಲಭವಾದ ಶಿವಲೋಕಕ್ಕೆ ಹೋದನು.

೧೯. ಅಪ್ಸರೆಯರಿಂದ ಸೇವಿಸಲ್ಪಡುವವನೂ, ಕಿನ್ನರರಿಂದ ಸ್ತುತಿಸಲ್ಪಡುವವನೂ, ಗಂಧರ್ವರಿಂದ ಗಾನಮಾಡಲ್ಪಡುವವನೂ ಆಗಿ ಶಿವಸನ್ನಿಧಿಯಲ್ಲಿದ್ದನು.

೨೦. ಅನಂತರ ಗೌರಿಯು ಹತ್ತಿರದಲ್ಲಿರುವ ಆ ರಾಜನನ್ನು ನೋಡಿ, "ನಾಥ! ನಿನ್ನ ಮನೆಗೆ ಬಂದ ಈ ಪುಣ್ಯವಂತನಾರು? ಇವನು ಯಾವ ಕರ್ಮವನ್ನು ಮಾಡಿರುವನು? ಯಾವುದರಿಂದ ವಿಭೂತಿಯನ್ನು ಧರಿಸಿ ಇಲ್ಲಿಗೆ ಬಂದಿದ್ದಾನೆ?"

ಶ್ರೀ ಭಗವಾನುವಾಚ :—
ಏಷ ಪಾಪಸಮಾಚಾರಃ ಸದಾಽಽಸೀತ್ಪೃಥಿವೀಪತಿಃ ।
ವೇಣುಸಂಜ್ಞೋ ಧರಾಪೃಷ್ಠೇ ಕುಷ್ಠವ್ಯಾಧಿಸಮಾಕುಲಃ ॥ ೨೧ ॥
ಸ ಸಂತ್ಯಕ್ತೋ ನಿಜೈರ್ದಾರೈಃ ಶತ್ರುವರ್ಗೇಣ ಧರ್ಷಿತಃ ।
ಭ್ರಮಮಾಣಃ ಸಮಾಯಾತಃ ಸುಪರ್ಣಾಖ್ಯಸ್ಯ ಮಂದಿರೇ ॥ ೨೨ ॥
ಉಪವಾಸಪರಿಶ್ರಾಂತಃ ಸಾನ್ನಿಧ್ಯಂ ಮಮ ಯತ್ರ ಚ ।
ಸವರ್ಣೈಃ ಸಂಪರಿತ್ಯಕ್ತಸ್ತಸ್ಮಿನ್ನಾಯತನೇ ಶುಭೇ ॥ ೨೩ ॥
ತತ್ಪ್ರಭಾವಾದಿಹ ಪ್ರಾಪ್ತಃ ಸತ್ಯಮೇತನ್ಮಯೋದಿತಂ ।
ಅನ್ಯೋಽಪ್ಯನಶನಂ ಕೃತ್ವಾ ಪ್ರಾಣಾನ್ಯಸ್ತತ್ರ ಸಂತ್ಯಜೇತ್ ॥ ೨೪ ॥
ಸ ಸರ್ವಾಭ್ಯಧಿಕಾಂ ಭೂತಿಂ ಪ್ರಾಪ್ನುಯಾದ್ವರವರ್ಣಿನಿ ।
ಯಾನೇತಾನ್ ವೀಕ್ಷಸೇ ದೇವಿ ಗಣಾನ್ ಮೇ ಪಾರ್ಶ್ವಸಂಸ್ಥಿತಾನ್ ॥ ೨೫ ॥
ಏತೈಸ್ತತ್ರ ಕೃತಂ ಸರ್ವೈರ್ದೇವಿ ಪ್ರಾಯೋಪವೇಶನಂ ।
ಅಪಿ ಕೀಟಪತಂಗಾ ಯೇ ಪಶವಃ ಪಕ್ಷಿಣೋ ಮೃಗಾಃ ।
ಪ್ರಾಸಾದೇ ತತ್ರ ನಿರ್ಮುಕ್ತಾಃ ಪ್ರಾಣೈರ್ಯಾಂತಿ ಮಮಾಂತಿಕಂ ॥ ೨೬ ॥

ಸೂತ ಉವಾಚ :—
ತಚ್ಛ್ರುತ್ವಾ ಪಾರ್ವತೀ ವಾಕ್ಯಂ ಪ್ರೋಕ್ತಂ ದೇವೇನ ಶಂಭುನಾ ।
ವಿಸ್ಮಯಾವಿಷ್ಟಹೃದಯಾ ಸಾಧು ಸಾಧ್ವಿತಿ ಸಾಽಬ್ರವೀತ್ ॥ ೨೭ ॥

---

೨೧. ಶ್ರೀ ಭಗವಂತನು ಹೇಳುತ್ತಾನೆ :—ಇವನು ಭೂಮಿಯಲ್ಲಿ ಪಾಪಿಷ್ಠನೂ, ಕುಷ್ಠವ್ಯಾಧಿಗ್ರಸ್ತನೂ ಆದ ವೇಣುವೆಂಬ ರಾಜನಾಗಿದ್ದನು.

೨೨–೨೩. ಪತ್ನಿಯರಿಂದ ಪರಿತ್ಯಕ್ತನಾಗಿ ಶತ್ರುಗಳಿಂದ ಪರಾಜಿತನಾಗಿ ಸಂಚರಿಸುತ್ತ ನನ್ನ ಸಾನ್ನಿಧ್ಯವುಳ್ಳ ಸುಪರ್ಣಾಖ್ಯ ಮಂದಿರಕ್ಕೆ ಬಂದು ಆ ಆಲಯದಲ್ಲಿ ಉಪವಾಸದಿಂದ ಬಳಲಿ ಮಡಿದನು.

೨೪–೨೬. ಆ ಆಲಯದ ಪ್ರಭಾವದಿಂದ ಇಲ್ಲಿಗೆ ಬಂದಿದ್ದಾನೆ. ನಾನು ಹೇಳಿರುವುದು ನಿಜ. ಅಲ್ಲಿ ಯಾವನಾದರೂ ಉಪವಾಸವನ್ನು ಮಾಡಿ ಪ್ರಾಣವನ್ನು ತ್ಯಜಿಸಿದರೆ ಎಲ್ಲರಿಗಿಂತಲೂ ಅಧಿಕವಾದ ಮೋಕ್ಷೈಶ್ವರ್ಯವನ್ನು ಹೊಂದುವನು. ನೀನು ನೋಡುತ್ತಿರುವ ನನ್ನ ಹತ್ತಿರದಲ್ಲಿರುವ ಈ ಗಣಗಳು ಆ ಕ್ಷೇತ್ರದಲ್ಲಿ ಪ್ರಾಯೋಪವೇಶವನ್ನು ಮಾಡಿರುವವು. ಆ ದೇವಾಲಯದಲ್ಲಿ ಮಡಿದ ಕೀಟ, ಪತಂಗ, ಪಶು, ಪಕ್ಷಿ, ಮೃಗಗಳೂ ನನ್ನ ಸಮೀಪಕ್ಕೆ ಬರುವುವು.

೨೭. ಸೂತನು ಹೇಳುತ್ತಾನೆ:—ಪಾರ್ವತಿಯು ಶಂಕರನ ಆ ಮಾತನ್ನು ಕೇಳಿ ಆಶ್ಚರ್ಯಗೊಂಡವಳಾಗಿ ಒಳ್ಳೆಯದೆಂದಳು.

ತತಃ ಪ್ರಭೃತಿ ಲೋಕೇಽತ್ರ ಪುರುಷಾ ಮುಕ್ತಿಮಿಚ್ಛವಃ ।
ದೂರತೋಽಪಿ ಸಮಭ್ಯೇತ್ಯ ಸ್ವಾನ್‌ಪ್ರಾಣಾಂಸ್ತತ್ರ ತತ್ಯಜುಃ ॥ ೨೮ ॥
ಪ್ರಾಯೋಪವೇಶನಂ ಕೃತ್ವಾ ಶ್ರದ್ಧಯಾ ಪರಯಾ ಯುತಾಃ ।
ಗಚ್ಛಂತಿ ಚ ಪರಾಂ ಸಿದ್ಧಿಮಪಿ ಪಾಪಪರಾಯಣಾಃ ॥ ೨೯ ॥
ಏತದ್ವಃ ಸರ್ವಮಾಖ್ಯಾತಂ ಸರ್ವಪಾತಕನಾಶನಂ ।
ಸುಪರ್ಣಾಖ್ಯಸ್ಯ ಮಾಹಾತ್ಮ್ಯಂ ಯನ್ಮಯಾ ಸ್ವಪಿತುಃ ಶ್ರುತಂ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸುಪರ್ಣಾಖ್ಯಮಾಹಾತ್ಮ್ಯವರ್ಣನಂ"
ನಾಮ ತ್ರ್ಯಶೀತಿತಮೋಽಧ್ಯಾಯಃ

---

೨೮. ಅದು ಮೊದಲ್ಗೊಂಡು ಈ ಲೋಕದಲ್ಲಿ ಮುಕ್ತಿಯನ್ನು ಬಯಸುವ ಪುರುಷರು ದೂರದಿಂದಲೂ ಅಲ್ಲಿಗೆ ಬಂದು ಪ್ರಾಣಗಳನ್ನು ತ್ಯಜಿಸುವರು.

೨೯. ಪಾಪಿಗಳೂ ಅತಿಶ್ರದ್ಧೆಯಿಂದ ಪ್ರಾಯೋಪವೇಶನವನ್ನು ಮಾಡಿ ಉತ್ತಮಸಿದ್ಧಿಯನ್ನು ಹೊಂದುವರು.

೩೦. ನಾನು ನನ್ನ ತಂದೆಯಿಂದ ಕೇಳಿದ ಸುಪರ್ಣಾಖ್ಯ ಮಂದಿರದ ಪಾಪವನ್ನು ನಾಶಗೊಳಿಸುವ ಮಾಹಾತ್ಮ್ಯವನ್ನೆಲ್ಲ ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸುಪರ್ಣಾಖ್ಯಮಾಹಾತ್ಮ್ಯವರ್ಣನ"ವೆಂಬ
ಎಂಬತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರಶೀತಿತಮೋಽಧ್ಯಾಯಃ

ಮಾಧವ್ಯಾ ಅಶ್ವಮುಖ್ಯಾಃ ಶ್ರೀಕೃಷ್ಣತಪಶ್ಚರ್ಯಯಾ ಪಶ್ಚಾದ್ದತ್ತಶಾಪವಿಮುಕ್ತಿಪೂರ್ವಕ ಸುಭದ್ರಾತ್ವಪ್ರಾಪ್ತಿವರ್ಣನಂ

ಋಷಯ ಊಚುಃ :—

ಯದೇತದ್ಭವತಾ ಪ್ರೋಕ್ತಂ ದೇವದೇವೇನ ವಿಷ್ಣುನಾ ।
ಮಾಧವೀಂ ಭಗಿನೀಂ ಪ್ರಾಪ್ಯ ಜನ್ಮಾಂತರಮುಪಸ್ಥಿತಾಂ ॥ ೧ ॥
ಅಶ್ವವಕ್ತ್ರಾಂ ಕರಿಷ್ಯಾಮಿ ತಪಸಾ ಸುಶುಭಾನನಾಂ ।
ಸಾ ಕಥಂ ವಿಹಿತಾ ತೇನ ತಪಸ್ತಪ್ತಂ ತಥಾ ಕಥಂ ।
ಸರ್ವಂ ವಿಸ್ತರತೋ ಬ್ರೂಹಿ ಪರಂ ಕೌತೂಹಲಂ ಹಿ ನಃ ॥ ೨ ॥

ಸೂತ ಉವಾಚ :—

ನಾರದಸ್ಯ ಸಮಾಕರ್ಣ್ಯ ತಂ ಸಂದೇಶಂ ಸುರೋದ್ಭವಂ ।
ಗತ್ವಾ ವಿಷ್ಣುಃ ಸುರೈಃ ಸಾರ್ಧಂ ಪ್ರಚಕ್ರೇ ಮಂತ್ರನಿಶ್ಚಯಂ ॥ ೩ ॥
ಭಾರಾಽವತರಣಾರ್ಥಾಯ ದಾನವಾನಾಂ ವಧಾಯ ಚ ।
ವಸುದೇವಗೃಹೇ ಶ್ರೀಮಾನ್‌ದ್ವಾಪರಾಂತೇ ತತೋ ಹರಿಃ ॥ ೪ ॥
ದೇವಕ್ಯಾ ಜಠರೇ ದೇವಃ ಸಂಜಾತೋ ದೈತ್ಯದರ್ಪಹಾ ।
ತಥಾಽನ್ಯಾ ರೋಹಿಣೀ ನಾಮ ಭಾರ್ಯಾ ತಸ್ಯ ಚ ಯಾಽಭವತ್ ॥ ೫ ॥

---

## ಕನ್ನಡದ ಅನುವಾದ

### ಅಶ್ವಮುಖೀಸುಭದ್ರಾತ್ವಪ್ರಾಪ್ತಿವರ್ಣನ

೧—೨. ಋಷಿಗಳು ಹೇಳುತ್ತಾರೆ:—ವಿಷ್ಣುವು ಜನ್ಮಾಂತರದಲ್ಲಿ ಮಾಧವಿಯನ್ನು ಸಹೋದರಿಯನ್ನಾಗಿ ಹೊಂದಿ ಅಶ್ವಮುಖಿಯಾದ ಅವಳನ್ನು ತಪಸ್ಸಿನಿಂದ ಸುಂದರಿಯನ್ನಾಗಿ ಮಾಡುವೆನೆಂದು ಹೇಳಿದುದಾಗಿ ಹೇಳಿರುವೆ. ಅವನು ಅವಳನ್ನು ಸುಂದರಿಯನ್ನಾಗಿ ಮಾಡಿದುದು ಹೇಗೆ? ತಪಸ್ಸನ್ನು ಹೇಗೆ ಆಚರಿಸಿದನು? ಎಲ್ಲವನ್ನೂ ವಿಸ್ತಾರವಾಗಿ ಹೇಳು. ಕೇಳಲು ನಮಗೆ ಅತ್ಯಂತ ಕುತೂಹಲವುಂಟಾಗಿದೆ.

೩—೭. ಸೂತನು ಹೇಳುತ್ತಾನೆ:—ವಿಷ್ಣುವು ನಾರದನಿಂದ ದೇವತೆಗಳ ಸಂದೇಶವನ್ನು ಕೇಳಿ ಆ ದೇವತೆಗಳೊಡನೆ ಆಲೋಚಿಸಿ ದಾನವರನ್ನು ಕೊಂದು ಭೂಮಿಯ ಭಾರವನ್ನು ಇಳಿಸಲು ದ್ವಾಪರಯುಗದ ಅಂತ್ಯದಲ್ಲಿ ವಸುದೇವನ ಮನೆಯಲ್ಲಿ ದೇವಕಿಯ ಉದರದಲ್ಲಿ ಜನಿಸಿದನು. ಆ ವಸುದೇವನ ರೋಹಿಣಿ ಯೆಂಬ ಮತ್ತೊಬ್ಬ ಪತ್ನಿಯಲ್ಲಿ ಹಲಾಯುಧನಾದ ಬಲರಾಮನು ಹುಟ್ಟಿದನು.

ತಸ್ಯಾಂ ಜಜ್ಞೇ ಹಲೀನಾಮ ಬಲಭದ್ರಃ ಪ್ರತಾಪವಾನ್ ।
ತೃತೀಯಾ ಸುಪ್ರಭಾನಾಮ ವಸುದೇವ ಪ್ರಿಯಾ ಚ ಯಾ ॥ ೬ ॥
ತಸ್ಯಾಂ ಸಾ ಮಾಧವೀ ಜಜ್ಞೇ ಅಶ್ವವಕ್ತ್ರಸ್ಸುರೂಪಧೃಕ್ ।
ತಾಂ ದೃಷ್ಟ್ವಾ ವಿಕೃತಾಕಾರಾಂ ಸುತಾಂ ಜಾತಾಂ ಚ ಸುಪ್ರಭಾ ।
ವಸುದೇವಸಮಾಯುಕ್ತಾ ವಿಷಾದಂ ಪರಮಂ ಗತಾ ॥ ೭ ॥
ಅಥ ತೇ ಯಾದವಾಃ ಸರ್ವೇ ಕೃತಶಾಂತಿಕಪೌಷ್ಟಿಕಾಃ ।
ಸ್ವಸ್ತಿ ಸ್ವಸ್ತೀತಿ ಸಂತ್ರಸ್ತಾಃ ಪ್ರೋಚುರ್ಭಯಾತ್ಕುಲೇಽತ್ರ ನಃ ॥ ೮ ॥
ಏವಂ ಸಾ ಯೌವನೋಪೇತಾ ತಥಾ ದುಃಖಸಮನ್ವಿತಾ ।
ನ ಕಶ್ಚಿದ್ವರಯಾಮಾಸ ವಾಜಿವಕ್ತ್ರಾಂ ವಿಲೋಕ್ಯ ತಾಂ ॥ ೯ ॥
ತತಶ್ಚ ಭಗವಾನ್ ವಿಷ್ಣುರ್ಜ್ಞಾತ್ವಾ ತಾಂ ಭಗಿನೀಂ ತಥಾ ।
ಮಾತರಂ ಪಿತರಂ ಚೈವ ತಥಾ ದುಃಖಸಮನ್ವಿತೌ ॥ ೧೦ ॥
ತಾಮಾದಾಯ ಗತಸ್ತೂರ್ಣಂ ಬಲದೇವಸಮನ್ವಿತಃ ।
ಹಾಟಕೇಶ್ವರಜೇ ಕ್ಷೇತ್ರೇ ತಪಸ್ತಪ್ತುಂ ತತಃ ಪರಂ ॥ ೧೧ ॥
ಬ್ರಹ್ಮಾಣಂ ತೋಷಯಾಮಾಸ ಸಮ್ಯಗ್ಯಜ್ಞಪರಾಯಣಃ ।
ವ್ರತೈಶ್ಚ ವಿವಿಧೈರ್ದಾನೈರ್ಬ್ರಾಹ್ಮಣಾನಾಂ ಚ ತರ್ಪಣೈಃ ॥ ೧೨ ॥
ತತಸ್ತುಷ್ಟಿಂ ಗತೋ ಬ್ರಹ್ಮಾ ವರ್ಷಾಂತೇ ತಸ್ಯ ಶಾರ್ಙ್ಗಿಣಃ ।
ಉವಾಚ ವರದೋಽಸ್ಮೀತಿ ಪ್ರಾರ್ಥಯಸ್ವಾಭಿವಾಂಛಿತಂ ॥ ೧೩ ॥

---

ಮೂರನೆಯ ಸುಪ್ರಭೆಯೆಂಬ ಹೆಂಡತಿಯಲ್ಲಿ ಅಶ್ವಮುಖಿಯಾದ ಮಾಧವಿಯು ಜನಿಸಿದಳು. ಸುಪ್ರಭೆಯು ತನ್ನಲ್ಲಿ ಹುಟ್ಟಿದ ವಿಕಾರವಾದ ಆಕಾರವುಳ್ಳ ಮಗಳನ್ನು ನೋಡಿ ವಸುದೇವನೊಡನೆ ಅತ್ಯಂತ ದುಃಖಗೊಂಡಳು.

೮. ಬಳಿಕ ಆ ಯಾದವರೆಲ್ಲ ಶಾಂತಿಕ ಪೌಷ್ಟಿಕ ಕರ್ಮಗಳನ್ನೆಸಗಿ ಭಯ ದಿಂದ ನಮ್ಮ ವಂಶಕ್ಕೆ ಮಂಗಳವಾಗಲೆಂದು ಹೇಳಿದರು.

೯. ಹೀಗೆ ಅವಳು ಜನಿಸಿ ಕ್ರಮವಾಗಿ ಯುವತಿಯಾಗಿ ತನ್ನ ರೂಪವನ್ನು ನೋಡಿಕೊಂಡು ಬಹಳವಾಗಿ ದುಃಖಗೊಂಡಳು. ಅಶ್ವಮುಖಿಯಾದ ಅವಳನ್ನು ಯಾವನೂ ವರಿಸಲಿಲ್ಲ.

೧೦–೧೧. ಬಳಿಕ ಪೂಜ್ಯನಾದ ಕೃಷ್ಣನು ಹಾಗೆ ಅಶ್ವಮುಖಿಯಾದ ಆ ಸಹೋದರಿಯನ್ನೂ, ದುಃಖಗೊಂಡ ತಾಯಿತಂದೆಗಳನ್ನೂ ತಿಳಿದು ಅವಳನ್ನು ಕರೆದುಕೊಂಡು ಬಲರಾಮನೊಡನೆ ತಪಸ್ಸನ್ನು ಮಾಡಲು ಹಾಟಕೇಶ್ವರಜ ಕ್ಷೇತ್ರಕ್ಕೆ ಹೋದನು.

೧೨. ಅಲ್ಲಿ ಯಜ್ಞ, ವ್ರತ, ವಿವಿಧ ದಾನಗಳು, ಬ್ರಾಹ್ಮಣ ತರ್ಪಣ ಇವು ಗಳಿಂದ ಬ್ರಹ್ಮನನ್ನು ಸಂತೋಷಗೊಳಿಸಿದನು.

೧೩. ತರುವಾಯ ಒಂದು ವರ್ಷದ ಅಂತ್ಯದಲ್ಲಿ ಬ್ರಹ್ಮನು ಆ ಕೃಷ್ಣನಲ್ಲಿ ಸಂತುಷ್ಟನಾಗಿ ಇಷ್ಟವಾದುದನ್ನು ಕೇಳಿಕೊ. ವರವನ್ನು ಕೊಡುವೆನು ಎಂದನು.

ವಿಷ್ಣುರುವಾಚ :—
ಏಷಾ ಮೇ ಭಗಿನೀ ದೇವ ಜಾತಾಽಶ್ವವದನಾ ಕಿಲ ।
ತವ ಪ್ರಸಾದಾತ್ಸದ್ವಕ್ತ್ರಾ ಭೂಯಾದೇತನ್ಮಮೇಪ್ಸಿತಂ ॥ ೧೪ ॥
ಶ್ರೀ ಬ್ರಹ್ಮೋವಾಚ :—
ಏಷಾ ಶುಭಾನನಾ ಸಾಧ್ವೀ ಮತ್ಪ್ರಸಾದಾದ್ಭವಿಷ್ಯತಿ ।
ಸುಭದ್ರಾನಾಮ ವಿಖ್ಯಾತಾ ವೀರಸೂಃ ಪತಿವಲ್ಲಭಾ ॥ ೧೫ ॥
ಏತದ್ರೂಪಾಂ ಪುಮಾನ್ ಯೋಽತ್ರ ಪೂಜಯಿಷ್ಯತಿ ಭಕ್ತಿತಃ ।
ಏತಾಂ ವಿಷ್ಣೋ ತ್ವಯಾ ಸಾರ್ಧಂ ತಥಾಽನೇನಚ ಸೀರಿಣಾ ॥ ೧೬ ॥
ದ್ವಾದಶ್ಯಾಂ ಮಾಘಮಾಸಸ್ಯ ಗಂಧಪುಷ್ಪಾಽನುಲೇಪನೈಃ ।
ಸೋಽಪ್ಯವಾಪ್ಸ್ಯತಿ ಯಚ್ಚಿತ್ತೇ ವರ್ತತೇ ನಾಽತ್ರ ಸಂಶಯಃ ॥ ೧೭ ॥
ಯಾ ನಾರೀ ಪತಿನಾ ತ್ಯಕ್ತಾ ವಂಧ್ಯಾ ವಾ ಭಕ್ತಿಸಂಯುತಾ ।
ತೃತೀಯಾ ದಿವಸೇ ಚೈತಾಂ ಪೂಜಯಿಷ್ಯತಿ ಕೇಶವ ॥ ೧೮ ॥
ಭವಿಷ್ಯತಿ ಸುಪುತ್ರಾಢ್ಯಾ ಸುಭಗಾ ಸಾ ಸುಖಾನ್ವಿತಾ ।
ಐಶ್ವರ್ಯಸಹಿತಾ ನಿತ್ಯಂ ಸರ್ವೈಃ ಸಮುದಿತಾ ಗುಣೈಃ ॥ ೧೯ ॥
ಏವಮುಕ್ತ್ವಾ ಚತುರ್ವಕ್ತ್ರೋ ವಿರರಾಮ ತತಃ ಪರಂ ।
ವಾಸುದೇವೋಽಪಿ ಹೃಷ್ಟಾತ್ಮಾ ಯಯೌ ದ್ವಾರವತೀಂ ಪುರೀಂ ॥ ೨೦ ॥
ತಾಮಾದಾಯ ವಿಶಾಲಾಕ್ಷೀಂ ಚಂದ್ರಬಿಂಬಸಮಾನನಾಂ ।
ಬಲದೇವಸಮಾಯುಕ್ತೋ ಹ್ಯನುಜ್ಞಾಪ್ಯ ಪಿತಾಮಹಂ ॥ ೨೧ ॥

---

೧೪. ವಿಷ್ಣುವು ಹೇಳುತ್ತಾನೆ:—ಅಶ್ವಮುಖಿಯಾದ ಈ ನನ್ನ ಸಹೋದರಿಯು ನಿನ್ನ ಅನುಗ್ರಹದಿಂದ ಸುಂದರ ಮುಖವುಳ್ಳವಳಾಗಲಿ. ಇದೇ ನನ್ನ ಇಷ್ಟಾರ್ಥವು.

೧೫. ಶ್ರೀ ಬ್ರಹ್ಮನು ಹೇಳುತ್ತಾನೆ:—ಇವಳು ನನ್ನ ಅನುಗ್ರಹದಿಂದ ಸುಂದರ ಮುಖಿಯಾಗಿ ವೀರಮಾತೆಯೂ, ಪತಿಪ್ರಿಯಳೂ, ಸುಭದ್ರೆಯೆಂದು ಪ್ರಸಿದ್ಧಳೂ ಆಗುವಳು.

೧೬–೧೭. ಕೃಷ್ಣ! ಇವಳನ್ನೂ ಮತ್ತು ಬಲರಾಮನೊಡನೆ ನಿನ್ನನ್ನೂ ಮಾಘಮಾಸದ ದ್ವಾದಶೀ ದಿನ ಗಂಧ, ಪುಷ್ಪ, ಅನುಲೇಪನಗಳಿಂದ ಪೂಜಿಸುವ ಮನುಷ್ಯನು ಮನೋಭೀಷ್ಟವನ್ನು ಪಡೆಯುವನು.

೧೮–೧೯. ಪತಿಯಿಂದತ್ಯಕ್ತಳೂ, ಬಂಜೆಯೂ ಆದ ನಾರಿಯು ತದಿಗೆಯ ದಿನ ಭಕ್ತಿಯಿಂದ ಇವಳನ್ನು ಪೂಜಿಸಿದರೆ ಸುಪುತ್ರವತಿಯೂ, ಸುಭಗಳೂ, ಸುಖವುಳ್ಳವಳೂ, ಐಶ್ವರ್ಯದಿಂದ ಕೂಡಿದವಳೂ, ಸಕಲಗುಣಗಳಿಂದ ಸಹಿತಳೂ ಆಗುವಳು.

೨೦–೨೧. ಬ್ರಹ್ಮನು ಹೀಗೆ ನುಡಿದು ಸುಮ್ಮನಾದನು. ಕೃಷ್ಣನೂ ಸಂತೋಷಗೊಂಡು ಚಂದ್ರಬಿಂಬದಂತೆ ಮುಖವುಳ್ಳ ಆ ಸುಭದ್ರೆ, ಬಲರಾಮ ಇವರೊಡನೆ ಬ್ರಹ್ಮನನ್ನು ಕೇಳಿಕೊಂಡು ದ್ವಾರವತಿಗೆ ತೆರಳಿದನು.

ಸೂತ ಉವಾಚ :—

ಏವಂ ಸಾ ಮಾಧವೀ ವಿಪ್ರಾಃ ಸುಭಗಾ ರೂಪಮಾಸ್ಥಿತಾ ।
ಅವತೀರ್ಣಾ ಧರಾಪೃಷ್ಠೇ ಲಕ್ಷ್ಮೀಶಾಪಪ್ರಪೀಡಿತಾ ॥ ೨೨ ॥
ಉಪಯೇಮೇ ಸುತಃ ಪಾಂಡೋರ್ಯಾಂ ಪಾರ್ಥಶ್ಚಾರುಹಾಸಿನೀಂ ।
ಜಜ್ಞೇ ತಸ್ಯಾಃ ಸುತೋ ವೀರೋಽಭಿಮನ್ಯುರಿತಿ ವಿಶ್ರುತಃ ॥ ೨೩ ॥
ಏತದ್ವಃ ಸರ್ವಮಾಖ್ಯಾತಂ ಮಾಧವೀಜನ್ಮಸಂಭವಂ ।
ಸುಪರ್ಣಾಖ್ಯಸ್ಯ ದೇವಸ್ಯ ಕಥಾಸಂಗಾದ್ದ್ವಿಜೋತ್ತಮಾಃ ॥ ೨೪ ॥
ಯಶ್ಚೈತತ್ಪಠತೇ ಮರ್ತ್ಯೋ ಭಕ್ತ್ಯಾ ಯುಕ್ತಃ ಶೃಣೋತಿ ವಾ ।
ಮುಚ್ಯತೇ ಸ ನರಃ ಪಾಪಾತ್ತದ್ದಿನೈಕಸಮುದ್ಭವಾತ್ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮಾಧವ್ಯಾ ಅಶ್ವಮುಖ್ಯಾಃ ಶ್ರೀ ಕೃಷ್ಣತಪಶ್ಚರ್ಯಯಾ ಪಶ್ಚಾದ್ದತ್ತಶಾಪವಿಮುಕ್ತಿ
ಪೂರ್ವಕ ಸುಭದ್ರಾತ್ವಪ್ರಾಪ್ತಿ ವರ್ಣನಂ"ನಾಮ ಚತುರಶೀತಿತಮೋಽಧ್ಯಾಯಃ

---

೨೨. ಸೂತನು ಹೇಳುತ್ತಾನೆ:—ವಿಪ್ರರೆ! ಹೀಗೆ ಲಕ್ಷ್ಮಿಯ ಶಾಪದಿಂದ ಪೀಡಿತಳಾದ ಆ ಮಾಧವಿಯು ಭೂಮಿಯಲ್ಲಿ ಅವತರಿಸಿ ಸುಂದರಿಯಾದಳು.

೨೩. ಚಾರುಹಾಸಿನಿಯಾದ ಆ ಸುಭದ್ರೆಯನ್ನು ಪಾಂಡುವಿನ ಮಗನಾದ ಅರ್ಜುನನು ಮದುವೆಮಾಡಿಕೊಂಡನು. ಅವಳಲ್ಲಿ ಅಭಿಮನ್ಯುವೆಂಬ ವೀರನಾದ ಮಗನು ಜನಿಸಿದನು.

೨೪. ದ್ವಿಜವರ್ಯರೆ! ನಿಮಗೆ ಸುಪರ್ಣಾಖ್ಯದೇವನ ಕಥಾಪ್ರಸಂಗದಿಂದ ಮಾಧವಿಯ ಈ ಜನನವನ್ನು ಹೇಳಿರುವೆನು.

೨೫. ಭಕ್ತಿಯಿಂದ ಇದನ್ನು ಪಠಿಸುವ ಅಥವಾ ಕೇಳುವ ಮಾನವನು ಪಾಪ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಶ್ವಮುಖೀಸುಭದ್ರಾತ್ವಪ್ರಾಪ್ತಿವರ್ಣನ"ವೆಂಬ
ಎಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಽಶೀತಿತಮೋಽಧ್ಯಾಯಃ

### ಮಹಾಲಕ್ಷ್ಮೀಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಮಾಧವ್ಯಾಃ ಪದ್ಮಯಾ ದತ್ತೋ ಯಃ ಶಾಪಸ್ತಸ್ಯ ಯತ್ಫಲಂ ।
ಪರಿಣಾಮೋದ್ಭವಂ ಸರ್ವಂ ಶ್ರುತಮಸ್ಮಾಭಿರದ್ಯ ತತ್ ॥ ೧ ॥
ತೇನ ಯತ್ಕಮಲಾ ಶಪ್ತಾ ಬ್ರಾಹ್ಮಣೇನ ಮಹಾತ್ಮನಾ ।
ಸಾ ಕಥಂ ಗಜವಕ್ತ್ರಾಽಥ ಪುನರ್ಜಾತಾ ಶುಭಾನನಾ ॥ ೨ ॥

ಸೂತ ಉವಾಚ :—

ಶಾಪೇನ ತಸ್ಯ ವಿಪ್ರಸ್ಯ ತತ್ಕ್ಷಣಾದೇವ ಸಾ ದ್ವಿಜಾಃ ।
ಗಜವಕ್ತ್ರಾ ಸಮುತ್ಪನ್ನಾ ಮಹಾವಿಸ್ಮಯಕಾರಿಣೀ ॥ ೩ ॥
ಸಾ ಪ್ರೋಕ್ತಾ ಹರಿಣಾ ತಿಷ್ಠ ಕಿಂಚಿತ್ಕಾಲಾಂತರೇ ಶುಭೇ ।
ಅನೇನೈವ ತು ರೂಪೇಣ ಯಾವತ್ಸ್ಯಾದ್ದ್ವಾಪರಕ್ಷಯಃ ॥ ೪ ॥
ತತೋಽಹಂ ಮೇದಿನೀ ಪೃಷ್ಠೇ ಹ್ಯವತೀರ್ಯ ಸಮುದ್ರಜೇ ।
ತಪಃ ಶಕ್ತ್ಯಾ ಕರಿಷ್ಯಾಮಿ ಭೂಯಸ್ತ್ವಾಂ ತು ಶುಭಾನನಾಂ ॥ ೫ ॥

---

### ಕನ್ನಡದ ಅನುವಾದ

### ಮಹಾಲಕ್ಷ್ಮೀಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ! ನಾವು ಲಕ್ಷ್ಮಿಯು ಮಾಧವಿಗೆ ಕೊಟ್ಟ ಶಾಪ, ಅದರ ಪರಿಣಾಮದ ಫಲ ಇವುಗಳನ್ನೆಲ್ಲ ಈಗ ಕೇಳಿದ್ದೇವೆ.

೨. ಮಹಾತ್ಮನಾದ ಆ ಬ್ರಾಹ್ಮಣನ ಶಾಪದಿಂದ ಗಜಮುಖಿಯಾದ ಲಕ್ಷ್ಮಿಯು ಹೇಗೆ ಸುಂದರಮುಖಿಯಾದಳು?

೩. ಸೂತನು ಹೇಳುತ್ತಾನೆ :—ದ್ವಿಜರೆ! ಆ ಬ್ರಾಹ್ಮಣನ ಶಾಪದಿಂದ ಆ ಲಕ್ಷ್ಮಿಯು ಕೂಡಲೆ ಅತ್ಯಂತ ಆಶ್ಚರ್ಯವನ್ನುಂಟುಮಾಡುವ ಗಜಮುಖಿಯಾದಳು.

೪. ವಿಷ್ಣುವು ಅವಳಿಗೆ “ ದ್ವಾಪರಯುಗಾವಸಾನದವರೆಗೆ ಸ್ವಲ್ಪಕಾಲ ಈ ರೂಪದಿಂದಲೇ ಇರು.

೫. ಅನಂತರ ನಾನು ಭೂಮಿಯಲ್ಲಿ ಅವತರಿಸಿ ತಪಶ್ಶಕ್ತಿಯಿಂದ ನಿನ್ನನ್ನು ಸುಂದರಮುಖಿಯನ್ನಾಗಿ ಮಾಡುವೆನು ” ಎಂದನು.

ಅವಜ್ಞಾಯಾಽಥ ಸಾ ತಸ್ಯ ತದ್ವಾಕ್ಯಂ ಶಾರ್ಙ್ಗಧನ್ವಿನಃ ।
ಶುಭಾಸ್ಯತ್ವಕೃತೇ ತೇಪೇ ತಪಸ್ತೀವ್ರಂ ಸುಹರ್ಷಿತಾ ॥ ೬ ॥
ಏತತ್ಕ್ಷೇತ್ರಂ ಸಮಾಸಾದ್ಯ ತ್ರಿಕಾಲಂ ಸ್ನಾನಮಾಚರತ್ ।
ಬ್ರಹ್ಮಾಣಂ ತೋಷಯಾಮಾಸ ದಿವಾರಾತ್ರಮತಂದ್ರಿತಾ ॥ ೭ ॥
ತಾಮುವಾಚ ತತೋ ಬ್ರಹ್ಮಾ ವರ್ಷಾಂತೇ ತುಷ್ಟಿಮಾಗತಃ ।
ವರಂ ಪ್ರಾರ್ಥಯ ತುಷ್ಟೋಽಹಂ ತವ ಕೇಶವವಲ್ಲಭೇ ॥ ೮ ॥

ಲಕ್ಷ್ಮೀರುವಾಚ :—

ಗಜಾಸ್ಯಾಽಹಂ ಕೃತಾ ದೇವ ಶಾಪಂ ದತ್ವಾ ಸುದಾರುಣಂ ।
ಬ್ರಾಹ್ಮಣೇನ ಸುಕ್ರುದ್ಧೇನ ಕಸ್ಮಿಂಶ್ಚಿತ್ಕಾರಣಾಂತರೇ ॥ ೯ ॥
ತಸ್ಮಾತ್ತದ್ರೂಪಿಣೀಂ ಭೂಯೋ ಮಾಂ ಕುರುಷ್ವ ಪಿತಾಮಹ ।
ಯದಿ ಮೇ ತುಷ್ಟಿಮಾಪನ್ನೋ ನಾಽನ್ಯತ್ಕಿಂಚಿದ್ವೃಣೋಮ್ಯಹಂ ॥ ೧೦ ॥

ಬ್ರಹ್ಮೋವಾಚ :—

ಭವಿಷ್ಯತಿ ಶುಭಂ ವಕ್ತ್ರಂ ಮತ್ಪ್ರಸಾದಾದಸಂಶಯಂ ।
ತವ ಭದ್ರೇ ವಿಶೇಷೇಣ ತಸ್ಮಾತ್ತ್ವಂ ಸ್ವಗೃಹಂ ವ್ರಜ ॥ ೧೧ ॥
ಮಹತ್ತ್ವಂ ತೇ ಮಯಾ ದತ್ತಮದ್ಯಪ್ರಭೃತಿ ಶೋಭನೇ ।
ಮಹಾಲಕ್ಷ್ಮೀತಿ ತೇ ನಾಮ ತಸ್ಮಾದತ್ರ ಭವಿಷ್ಯತಿ ॥ ೧೨ ॥

---

೬–೭. ಆ ಲಕ್ಷ್ಮಿಯು ವಿಷ್ಣುವಿನ ಮಾತನ್ನು ತಿರಸ್ಕರಿಸಿ ಸುಂದರಮುಖಿಯಾಗಲು ಈ ಕ್ಷೇತ್ರಕ್ಕೆ ಬಂದು ತ್ರಿಕಾಲದಲ್ಲಿ ಮಿಂದು ಹಗಲುರಾತ್ರಿ ಆಲಸ್ಯವಿಲ್ಲದೆ ಕಠಿನ ತಪಸ್ಸನ್ನು ಮಾಡುತ್ತ ಬ್ರಹ್ಮನನ್ನು ಸಂತೋಷಗೊಳಿಸಿದಳು.

೮. ವರ್ಷಾವಸಾನದಲ್ಲಿ ಸಂತುಷ್ಟನಾದ ಬ್ರಹ್ಮನು, "ಎಲೌ ಲಕ್ಷ್ಮಿಯೆ! ನಿನ್ನ ವಿಷಯದಲ್ಲಿ ಸಂತುಷ್ಟನಾಗಿರುವೆನು. ವರವನ್ನು ಕೇಳಿಕೊ" ಎಂದನು.

೯. ಲಕ್ಷ್ಮಿಯು ಹೇಳುತ್ತಾಳೆ:—ಕುಪಿತನಾದ ಆ ಬ್ರಾಹ್ಮಣನು ಯಾವುದೊ ಒಂದು ಕಾರಣದಿಂದ ಗಜಮುಖಿಯಾಗೆಂದು ನನಗೆ ಶಾಪವನ್ನು ಕೊಟ್ಟಿರುವನು.

೧೦. ಪಿತಾಮಹ! ನೀನು ಸಂತುಷ್ಟನಾಗಿದ್ದರೆ ನನ್ನನ್ನು ಮರಳಿ ಮೊದಲಿನ ರೂಪವುಳ್ಳವಳನ್ನಾಗಿಸು. ಬೇರೆ ಯಾವುದನ್ನೂ ವರಿಸುವುದಿಲ್ಲ.

೧೧. ಬ್ರಹ್ಮನು ಹೇಳುತ್ತಾನೆ:—ಮಂಗಳಕರಳೆ! ನನ್ನ ಅನುಗ್ರಹದಿಂದ ನಿನಗೆ ಸುಂದರವಾದ ಮುಖವುಂಟಾಗುವುದು. ಆದ್ದರಿಂದ ಮನೆಗೆ ಹೋಗು.

೧೨. ನಿನಗೆ ಇನ್ನೊಂದು ಮಹತ್ವವನ್ನು ಕೊಟ್ಟಿದ್ದೇನೆ. ಆದ್ದರಿಂದ ಇದು ಮೊದಲ್ಗೊಂಡು ನೀನು ಮಹಾಲಕ್ಷ್ಮಿಯೆಂದು ವಿಖ್ಯಾತಳಾಗುವೆ.

ಗಜವಕ್ತ್ರಾಂ ನರೋ ಯಸ್ತ್ವಾಂ ಪೂಜಯಿಷ್ಯತಿ ಭಕ್ತಿತಃ ।
ಸಗಜಾಧಿಪತಿರ್ಭೂಪೋ ಭವಿಷ್ಯತಿ ಚ ಭೂತಲೇ ॥ ೧೩ ॥
ದ್ವಿತೀಯಾ ದಿವಸೇ ಯಸ್ತ್ವಾಂ ಮಹಾಲಕ್ಷ್ಮೀರಿತಿಬ್ರುವನ್ ।
ಶ್ರೀಸೂಕ್ತೇನ ಸುಭಕ್ತ್ಯಾಽಥ ದೇವಿ ಸಂಪೂಜಯಿಷ್ಯತಿ ॥ ೧೪ ॥
ಸಪ್ತ ಜನ್ಮಾಂತರಾಣ್ಯೇವ ನ ಭವಿಷ್ಯತಿ ಸೋಽಧನಃ ।
ಏವಮುಕ್ತ್ವಾ ಚತುರ್ವಕ್ತ್ರೋ ವಿರರಾಮ ತತಃ ಪರಂ ॥ ೧೫ ॥
ಸಾಽಪಿ ಹೃಷ್ಟಾ ಗತಾ ದೇವೀ ಯತ್ರ ತಿಷ್ಠತಿ ಕೇಶವಃ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮಹಾಲಕ್ಷ್ಮೀಮಾಹಾತ್ಮ್ಯವರ್ಣನಂ" ನಾಮ
ಪಂಚಾಽಶೀತಿತಮೋಽಧ್ಯಾಯಃ

---

೧೩. ಭೂಮಿಯಲ್ಲಿ ಗಜಮುಖಿಯಾದ ನಿನ್ನನ್ನು ಭಕ್ತಿಯಿಂದ ಪೂಜಿಸಿದ ರಾಜನು ಗಜಾಧಿಪನಾಗುವನು.

೧೪–೧೫. ದೇವಿ! ನಿನ್ನನ್ನು ಬಿದಿಗೆ ದಿನ ಮಹಾಲಕ್ಷ್ಮಿಯೆಂದು ಸ್ತುತಿಸುತ್ತ ಶ್ರೀಸೂಕ್ತ ಪಠನಪೂರ್ವಕ ಭಕ್ತಿಯಿಂದ ಪೂಜಿಸುವವನು ಏಳು ಜನ್ಮಗಳಲ್ಲಿ ಬಡವನಾಗುವುದಿಲ್ಲ." ಬ್ರಹ್ಮನು ಹೀಗೆ ಹೇಳಿ ಸುಮ್ಮನಾದನು.

೧೬. ಆ ಲಕ್ಷ್ಮಿಯೂ ಸಂತೋಷಗೊಂಡು ವಿಷ್ಣುವಿನೆಡೆಗೆ ಹೋದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮಹಾಲಕ್ಷ್ಮೀಮಾಹಾತ್ಮ್ಯವರ್ಣನ"ವೆಂಬ
ಎಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡಶೀತಿತಮೋಽಧ್ಯಾಯಃ

## ಸಪ್ತವಿಂಶತಿಕಾ ಮಾಹಾತ್ಮ್ಯವರ್ಣನಂ

ಸೂತ ಉವಾಚ:—

ಅಥಾಽನ್ಯಾಪಿ ಚ ತತ್ರಾಽಸ್ತಿ ಸಪ್ತವಿಂಶತಿಕಾ ತಥಾ ।
ನಕ್ಷತ್ರೈಃ ಸ್ಥಾಪಿತಾ ದೇವೀ ವಾಂಛಿತಸ್ಯ ಪ್ರದಾಯಿನೀ ॥ ೧ ॥
ದಕ್ಷಸ್ಯ ತನಯಾಃ ಪೂರ್ವಂ ಸಪ್ತವಿಂಶತಿ ಸಂಖ್ಯಯಾ ।
ಉದ್ವಾಹಿತಾ ಹಿ ಸೋಮೇನ ಪೂರ್ವಂ ಬ್ರಾಹ್ಮಣಸತ್ತಮಾಃ ॥ ೨ ॥
ತಾಸಾಂ ಮಧ್ಯೇಽಭವಚ್ಚೈಕಾ ರೋಹಿಣೀ ತಸ್ಯವಲ್ಲಭಾ ।
ಪ್ರಾಣೇಭ್ಯೋಽಪಿ ಸದಾಸಕ್ತಸ್ತಯಾ ಸಾರ್ಧಂ ಸ ತಿಷ್ಠತಿ ॥ ೩ ॥
ತತೋ ದೌರ್ಭಾಗ್ಯಸಂತಪ್ತಾಃ ಸರ್ವಾಽಸ್ತಾ ದಕ್ಷಕನ್ಯಕಾಃ ।
ವೈರಾಗ್ಯಂ ಪರಮಂ ಗತ್ವಾ ಕ್ಷೇತ್ರೇಽಸ್ಮಿಂಸ್ತಪಸಿ ಸ್ಥಿತಾಃ ॥ ೪ ॥
ಸಂಸ್ಥಾಪ್ಯ ದೇವತಾಂ ದುರ್ಗಾಂ ಶ್ರದ್ಧಯಾ ಪರಯಾ ಯುತಾಃ ।
ಬಲಿಪೂಜೋಪಹಾರೈಸ್ತಾಂ ಪೂಜಯಂತ್ಯಃ ಸುರೇಶ್ವರೀಂ ॥ ೫ ॥
ತತಃ ಕಾಲೇನ ಮಹತಾ ತಾಸಾಂ ಸಾ ತುಷ್ಟಿಮಭ್ಯಗಾತ್ ।
ಅಬ್ರವೀಚ್ಚ ಪ್ರತುಷ್ಟೋಽಹಂ ವರಂ ದಾಸ್ಯಾಮಿ ಪುತ್ರಿಕಾಃ ॥ ೬ ॥

---

## ಕನ್ನಡದ ಅನುವಾದ

### ಸಪ್ತವಿಂಶತಿಕಾ ಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:— ಅಲ್ಲಿ ನಕ್ಷತ್ರಸುಂದರಿಯರು ಸ್ಥಾಪಿಸಿದ ಇಷ್ಟಾರ್ಥಗಳನ್ನು ಕೊಡುವ ಮತ್ತೊಬ್ಬ ಸಪ್ತವಿಂಶತಿಕಾ ದೇವಿಯಿರುವಳು.

೨. ಬ್ರಾಹ್ಮಣವರ್ಯರೆ! ಹಿಂದೆ ಚಂದ್ರನು ದಕ್ಷನ ಇಪ್ಪತ್ತೇಳು ಮಂದಿ ಕನ್ಯೆಯರನ್ನು ವಿವಾಹಮಾಡಿಕೊಂಡನು.

೩. ಆ ಕನ್ಯೆಯರಲ್ಲಿ ರೋಹಿಣಿಯೆಂಬುವಳು ಚಂದ್ರನಿಗೆ ಪ್ರಾಣಕ್ಕಿಂತ ಪ್ರಿಯಳಾದಳು. ಅವನು ಅವಳಲ್ಲಿ ಯಾವಾಗಲೂ ಆಸಕ್ತನಾಗಿದ್ದನು.

೪. ಅನಂತರ ದೌರ್ಭಾಗ್ಯದಿಂದ ಸಂತಪ್ತರಾದ ಆ ದಕ್ಷಕನ್ಯೆಯರೆಲ್ಲ ಅತ್ಯಂತ ವೈರಾಗ್ಯಗೊಂಡು ಈ ಕ್ಷೇತ್ರದಲ್ಲಿ ತಪಸ್ಸನ್ನು ಮಾಡಿದರು.

೫. ಅವರು ದುರ್ಗಾದೇವಿಯನ್ನು ಸ್ಥಾಪಿಸಿ ಅತಿಶ್ರದ್ಧೆಯಿಂದ ಅವಳನ್ನು ಬಲಿ, ಪೂಜೆ, ಉಪಹಾರಗಳಿಂದ ಪೂಜಿಸುತ್ತಿದ್ದರು.

೬–೭. ಅನಂತರ ಆ ದೇವಿಯು ಬಹುಕಾಲದಮೇಲೆ ಸಂತುಷ್ಟಳಾಗಿ "ಪುತ್ರಿಯರೆ! ಸಂತುಷ್ಟಳಾಗಿದ್ದೇನೆ. ವರವನ್ನು ಕೊಡುವೆನು. ಆದ್ದರಿಂದ

ತಸ್ಮಾತ್ತತ್ಪ್ರಾರ್ಥ್ಯತಾಂ ಚಿತ್ತೇ ಯದ್ಯುಷ್ಮಾಕಂ ವ್ಯವಸ್ಥಿತಂ ।
ಸರ್ವಂ ದಾಸ್ಯಾಮ್ಯಸಂದಿಗ್ಧಂ ಯದ್ಯುಷ್ಮಾಕಂ ಹೃದಿಸ್ಥಿತಂ ॥ ೭ ॥
ತತಃ ಪ್ರೋಚುಶ್ಚ ತಾಃ ಸರ್ವಾಃ ಪ್ರಸಾದಾತ್ತವ ವಾಂಛಿತಂ ।
ಅಸ್ಮಾಕಂ ವಿದ್ಯತೇ ದೇವಿ ಯಾವತ್ತ್ರೈಲೋಕ್ಯಸಂಸ್ಥಿತಂ ॥ ೮ ॥
ಏಕಂ ಪತ್ಯುಃ ಸುಖಂ ಮುಕ್ತ್ವಾ ಯತ್ಸೌಭಾಗ್ಯಸಮುದ್ಭವಂ ।
ತಸ್ಮಾತ್ತದ್ದೇಹಿ ಚಾಸ್ಮಾಕಂ ಯದಿ ತುಷ್ಟಾಽಸಿ ಚಂಡಿಕೇ ॥ ೯ ॥
ವಯಂ ದೌರ್ಭಾಗ್ಯದೋಷೇಣ ಸರ್ವಾಃ ಕ್ಲೇಶಂ ಪರಂ ಗತಾಃ ।
ನ ಶಕ್ನುಮಃ ಪ್ರಿಯಾನ್ ಪ್ರಾಣಾನ್ದೇಹೇ ಧರ್ತುಂ ಕಥಂಚನ ॥ ೧೦ ॥

ಶ್ರೀ ದೇವ್ಯುವಾಚ :—

ಅದ್ಯ ಪ್ರಭೃತಿ ಯುಷ್ಮಾಕಂ ಸೌಭಾಗ್ಯಂ ಪತಿಸಂಭವಂ ।
ಮತ್ಪ್ರಸಾದಾದಸಂದಿಗ್ಧಂ ಭವಿಷ್ಯತಿ ಸುಖೋದಯಂ ॥ ೧೧ ॥
ಅನ್ಯಾಽಪಿ ಯಾ ಪತಿತ್ಯಕ್ತಾ ಸ್ತ್ರೀ ಮಾಮತ್ರ ಸ್ಥಿತಾಂ ಸದಾ ।
ಪೂಜಯಿಷ್ಯತಿ ಸದ್ಭಕ್ತ್ಯಾ ಚತುರ್ದಶ್ಯಾಮುಪೋಷಿತಾ ॥ ೧೨ ॥
ಸಾ ಭವಿಷ್ಯತಿ ಸೌಭಾಗ್ಯಯುಕ್ತಾ ಪುತ್ರವತೀ ಸತೀ ।
ಯಾವತ್ಸಂವತ್ಸರಂ ತಾವದೇಕಭಕ್ತಪರಾಯಣಾ ॥ ೧೩ ॥
ಅಕ್ಷಾರಲವಣಾಶಾ ಯಾ ನಾರೀ ಮಾಂ ಪೂಜ್ಯಯಿಷ್ಯತಿ ।
ನ ತಸ್ಯಾಃ ಪತಿಜಂ ದುಃಖಂ ದೌರ್ಭಾಗ್ಯಂ ವಾ ಭವಿಷ್ಯತಿ ॥ ೧೪ ॥

---

ನಿಮ್ಮ ಮನಸ್ಸಿನಲ್ಲಿರುವುದನ್ನು ಕೇಳಿಕೊಳ್ಳಿರಿ. ನಿಶ್ಚಯವಾಗಿಯೂ ಎಲ್ಲವನ್ನೂ ಕೊಡುವೆನು" ಎಂದಳು.

೮–೯. ಅನಂತರ ಆ ದಕ್ಷಕನ್ಯೆಯರು ಹೀಗೆಂದರು. "ದೇವಿ! ನಿನ್ನ ಅನುಗ್ರಹದಿಂದ ನಮಗೆ ಮೂರು ಲೋಕಗಳಲ್ಲಿ ಪತಿಸುಖವನ್ನು ಬಿಟ್ಟು ಇತರ ಎಲ್ಲ ಸೌಖ್ಯಗಳೂ ಇರುವುವು. ಆದ್ದರಿಂದ ನೀನು ಸಂತುಷ್ಟಳಾಗಿದ್ದರೆ ನಮಗೆ ಆ ಸೌಖ್ಯವನ್ನು ಕೊಡು.

೧೦. ನಾವೆಲ್ಲರೂ ದೌರ್ಭಾಗ್ಯದೋಷದಿಂದ ಅತ್ಯಂತ ದುಃಖಗೊಂಡಿದ್ದೇವೆ. ದೇಹದಲ್ಲಿ ಪ್ರಿಯವಾದ ಪ್ರಾಣವನ್ನು ಧರಿಸಲು ಶಕ್ತರಾಗಿಲ್ಲ."

೧೧. ಶ್ರೀ ದೇವಿಯು ಹೇಳುತ್ತಾಳೆ:—"ಇದು ಮೊದಲ್ಗೊಂಡು ನಿಮಗೆ ನನ್ನ ಅನುಗ್ರಹದಿಂದ ನಿಶ್ಚಯವಾಗಿಯೂ ಪತಿಯ ಸೌಖ್ಯವುಂಟಾಗುವುದು.

೧೨–೧೪. ಪತಿಯಿಂದ ತ್ಯಕ್ತಳಾದ ಇತರ ಹೆಂಗಸೂ ಇಲ್ಲಿರುವ ನನ್ನನ್ನು ಚತುರ್ದಶೀದಿನ ಉಪವಾಸಮಾಡಿ ಭಕ್ತಿಯಿಂದ ಪೂಜಿಸಿದರೆ ಸೌಭಾಗ್ಯವತಿಯೂ, ಪುತ್ರವತಿಯೂ ಆಗುವಳು. ಕ್ಷಾರಲವಣಾನ್ನವನ್ನು ತಿನ್ನದೆ ಒಂದೇ ಭೋಜನವನ್ನು ಮಾಡುತ್ತ ಒಂದು ವರ್ಷದವರೆಗೆ ನನ್ನನ್ನು ಪೂಜಿಸಿದ ನಾರಿಗೆ ಪತಿವಿರಹ ದುಃಖವೂ, ದೌರ್ಭಾಗ್ಯವೂ ಉಂಟಾಗುವುದಿಲ್ಲ.

ಆಶ್ವಿನಸ್ಯ ಸಿತೇ ಪಕ್ಷೇ ಸಂಪ್ರಾಪ್ತೇ ನವಮೀದಿನೇ ।
ಉಪವಾಸಪರಾ ಯಾ ಮಾಂ ನಿಶೀಥೇ ಪೂಜಯಿಷ್ಯತಿ ।
ತಸ್ಯಾಃ ಸೌಭಾಗ್ಯಮತ್ಯುಗ್ರಂ ಸರ್ವದಾ ವೈ ಭವಿಷ್ಯತಿ ॥ ೧೫ ॥
ಏವಮುಕ್ತ್ವಾ ತು ಸಾ ದೇವೀ ವಿರರಾಮ ದ್ವಿಜೋತ್ತಮಾಃ ।
ತಾಶ್ಚ ಸರ್ವಾಃ ಸುಸಂಹೃಷ್ಟಾ ಜಗ್ಮುರ್ದಕ್ಷಸ್ಯ ಮಂದಿರಂ ॥ ೧೬ ॥
ಏತಸ್ಮಿನ್ನಂತರೇ ದಕ್ಷ ಆಹೂತಃ ಶೂಲಪಾಣಿನಾ ।
ಪ್ರೋಕ್ತಃ ಕಸ್ಮಾತ್ತ್ವಯಾ ಚಂದ್ರೋ ಯಕ್ಷ್ಮಣಾ ಸನ್ನಿಯೋಜಿತಃ ।
ತದಯುಕ್ತಂ ಕೃತಂ ದಕ್ಷ ಜಾಮಾತಾಽಯಂ ಯತಸ್ತವ ॥ ೧೭ ॥

ದಕ್ಷ ಉವಾಚ :—

ಅನೇನ ತನಯಾ ಮಹ್ಯಮಷ್ಟಾವಿಂಶತಿಸಂಖ್ಯಯಾ ।
ಊಢಾ ಅಖಂಡಚರಿತ್ರಾಸ್ತಾಸ್ತ್ಯಕ್ತಾ ದೋಷವರ್ಜಿತಾಃ ।
ಮುಕ್ತ್ವೈಕಾಂ ರೋಹಿಣೀಂ ದೇವ ನಿಷಿದ್ಧೇನ ಮಯಾಽಸಕೃತ್ ॥ ೧೮ ॥
ತತೋ ಮಯಾಽತಿಕೋಪೇನ ನಿಯುಕ್ತೋ ರಾಜಯಕ್ಷ್ಮಣಾ ।
ಅಸತ್ಯಜಲ್ಪಕೋ ಮಂದಃ ಕಾಮದೇವವಶಂ ಗತಃ ॥ ೧೯ ॥

ಶ್ರೀ ಭಗವಾನುವಾಚ :—

ಅದ್ಯ ಪ್ರಭೃತಿ ಸರ್ವಾಸಾಂ ಸಮಂ ಸ ಪ್ರಚರಿಷ್ಯತಿ ।
ಮದ್ವಾಕ್ಯಾನ್ನಾತ್ರ ಸಂದೇಹಃ ಸತ್ಯಮೇತನ್ಮಯೋದಿತಂ ॥ ೨೦ ॥

---

೧೫. ಆಶ್ವಿನ ಶುಕ್ಲಪಕ್ಷ ನವಮೀದಿನ ಉಪವಾಸಮಾಡಿ ನನ್ನನ್ನು ಅರ್ಧ ರಾತ್ರಿಯವೇಳೆಯಲ್ಲಿ ಪೂಜಿಸಿದ ನಾರಿಗೆ ಯಾವಾಗಲೂ ಸೌಭಾಗ್ಯವುಂಟಾಗುವುದು.''

೧೬. ದ್ವಿಜವರ್ಯರೆ! ಆ ದೇವಿಯು ಹೀಗೆ ಹೇಳಿ ಸುಮ್ಮನಾದಳು. ಆ ನಾರಿಯರೆಲ್ಲ ಸಂತೋಷಗೊಂಡು ದಕ್ಷನ ಮನೆಗೆ ಹೋದರು.

೧೭. ಇಷ್ಟರಲ್ಲಿ ಶಂಕರನು ದಕ್ಷನನ್ನು ಕರೆದು, ''ನೀನು ಚಂದ್ರನನ್ನು ಏಕೆ ಕ್ಷಯರೋಗವುಳ್ಳವನಾಗುವಂತೆ ಮಾಡಿದೆ? ಇವನು ನಿನ್ನ ಅಳಿಯನಾದ್ದರಿಂದ ಅನುಚಿತಕಾರ್ಯವನ್ನೆಸಗಿರುವೆ'' ಎಂದನು.

೧೮–೧೯. ದಕ್ಷನು ಹೇಳುತ್ತಾನೆ:—ಈ ಚಂದ್ರನು ಸಚ್ಚರಿತೆಯರಾದ ನನ್ನ ಇಪ್ಪತ್ತೆಂಟುಮಂದಿ ಕನ್ಯೆಯರನ್ನು ವಿವಾಹಮಾಡಿಕೊಂಡು ನಾನು ಅನೇಕಬಾರಿ ತಡೆದರೂ ರೋಹಿಣಿಯೊಬ್ಬಳಲ್ಲಿಯೆ ಆಸಕ್ತನಾಗಿ ದೋಷವಿಲ್ಲದ ಇತರರನ್ನು ತೊರೆದುಬಿಟ್ಟಿರುವನು. ಆದ್ದರಿಂದ ಅತ್ಯಂತ ಕುಪಿತನಾದ ನಾನು ಸುಳ್ಳಾಡುವವನೂ, ಮೂಢನೂ, ಮನ್ಮಥವಶನೂ ಆದ ಈ ಚಂದ್ರನಿಗೆ ಕ್ಷಯರೋಗವುಂಟಾಗುವಂತೆ ಮಾಡಿದೆನು.

೨೦. ಶ್ರೀ ಭಗವಂತನು ಹೇಳುತ್ತಾನೆ:—ಆ ಚಂದ್ರನು ಇಂದಿನಿಂದ ನನ್ನ ಮಾತಿನಂತೆ ಎಲ್ಲರಲ್ಲಿಯೂ ಸಮವಾಗಿ ವರ್ತಿಸುವನು. ನಾನು ಹೇಳಿರುವುದು ನಿಜ.

ತ್ವಯಾಽಪಿ ಯದ್ವಚಃ ಪ್ರೋಕ್ತಮಸತ್ಯಂ ಸ್ಯಾನ್ನತತ್ಕ್ವಚಿತ್ ।
ತಸ್ಮಾದೇಷ ಕ್ಷಯಂ ಪಕ್ಷಂ ವೃದ್ಧಿಂ ಪಕ್ಷಂ ಪ್ರಯಾಸ್ಯತಿ ॥ ೨೧ ॥
ದಕ್ಷೋಽಪಿ ಬಾಡಮಿತ್ಯೇವಂ ತತ್ಪ್ರೋಕ್ತ್ವಾ ಚ ಯಯೌ ಗೃಹಂ ।
ಚಂದ್ರಸ್ತು ದಕ್ಷಕನ್ಯಾಸ್ತಾಃ ಸಮಂ ಪಶ್ಯತಿ ಸರ್ವದಾ ॥ ೨೨ ॥
ಗಚ್ಛಮಾನಃ ಕ್ಷಯಂ ಪಕ್ಷಂ ವೃದ್ಧಿಂ ಪಕ್ಷಂ ಚ ಸದ್ವಿಜಾಃ ।
ಸಾಽಪಿ ದೇವೀ ತತಃ ಪ್ರೋಕ್ತಾ ಸಪ್ತವಿಂಶತಿಕಾ ಕ್ಷಿತೌ ।
ಸರ್ವಸೌಭಾಗ್ಯದಾ ಸ್ತ್ರೀಣಾಂ ತಸ್ಮಿನ್ ಕ್ಷೇತ್ರೇ ವ್ಯವಸ್ಥಿತಾ ॥ ೨೩ ॥
ಯಶ್ಚೈತತ್ಪುರತಸ್ತಸ್ಯಾಃ ಸಂಪ್ರಾಪ್ತೇ ಚಾಷ್ಟಮೀದಿನೇ ।
ಶುಚಿರ್ಭೂತ್ವಾ ಪಠೇದ್ಭಕ್ತ್ಯಾ ಸ ಸೌಭಾಗ್ಯಮವಾಪ್ನುಯಾತ್ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಪ್ತವಿಂಶತಿಕಾಮಾಹಾತ್ಮ್ಯವರ್ಣನಂ" ನಾಮ
ಷಡಶೀತಿತಮೋಽಧ್ಯಾಯಃ

---

೨೧. ನೀನು ಹೇಳಿದ ಮಾತೂ ಅಸತ್ಯವಾಗಲಾರದು. ಆದ್ದರಿಂದ ಇವನು ಒಂದು ಪಕ್ಷ ವೃದ್ಧಿಯನ್ನೂ, ಒಂದು ಪಕ್ಷ ಕ್ಷಯವನ್ನೂ ಹೊಂದುವನು.

೨೨–೨೩. ದಕ್ಷನೂ ಹಾಗೆಯೇ ಆಗಲೆಂದು ಮನೆಗೆ ಹೋದನು. ಚಂದ್ರನು ಒಂದು ಪಕ್ಷವೃದ್ಧಿಯನ್ನೂ, ಒಂದು ಪಕ್ಷ ಕ್ಷಯವನ್ನೂ ಹೊಂದುತ್ತ ಯಾವಾಗಲೂ ಆ ಕನ್ಯೆಯರನ್ನು ಸಮವಾಗಿ ನೋಡುತ್ತಿದ್ದನು. ಆದ್ದರಿಂದ ಆ ದೇವಿಯು ಭೂಮಿಯಲ್ಲಿ ಸಪ್ತವಿಂಶತಿಕಾ ಎಂದು ಹೇಳಿಸಿಕೊಳ್ಳುತ್ತ ನಾರಿಯರಿಗೆ ಸಕಲ ಸೌಭಾಗ್ಯಗಳನ್ನು ಕೊಡುತ್ತ ಆ ಕ್ಷೇತ್ರದಲ್ಲಿ ಇದ್ದಳು.

೨೪! ಅಷ್ಟಮಿಯ ದಿನ ಆ ಸಪ್ತವಿಂಶತಿಕೆಯ ಮುಂದೆ ಶುದ್ಧನಾಗಿ ಇದನ್ನು ಭಕ್ತಿಯಿಂದ ಪಠಿಸುವ ಮಾನವನು ಸೌಭಾಗ್ಯವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಪ್ತವಿಂಶತಿಕಾಮಾಹಾತ್ಮ್ಯವರ್ಣನ"ವೆಂಬ
ಎಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಾಶೀತಿತಮೋಽಧ್ಯಾಯಃ

### ಸೋಮಪ್ರಾಸಾದಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾ ತತ್ರಾಸ್ತಿ ವಿಪ್ರೇಂದ್ರಾಃ ಸೋಮಸ್ಯಾಯತನಂ ಶುಭಂ ।
ಯಸ್ಯಾಽಪಿ ದರ್ಶನಾದೇವ ಮುಚ್ಯತೇ ಪಾತಕೈರ್ನರೈಃ ॥ ೧ ॥
ಸೋಮವಾರೇ ತು ಸಂಪ್ರಾಪ್ತೇ ಸೋಮಸ್ಯ ಗ್ರಹಣೇ ನರಃ ।
ಯಸ್ತಂ ಪಶ್ಯತಿ ಪಾಪೋಽಪಿ ನರಕಂ ಸ ನ ಪಶ್ಯತಿ ॥ ೨ ॥

ಋಷಯ ಊಚುಃ :—

ಸರ್ವೇಷಾಮೇವ ದೇವಾನಾಂ ದೃಶ್ಯಂತೇಽತ್ರ ಸಮಾಶ್ರಯಾಃ ।
ಅತ್ರ ಚಂದ್ರಸ್ಯ ಚೈವೈಕಃ ಕಥಂ ಜಾತಃ ಸಮಾಶ್ರಯಃ ॥ ೩ ॥
ಏತನ್ನಃ ಸೂತಪುತ್ರಾಽತಿಚಿತ್ರಂ ಮನಸಿ ವರ್ತತೇ ।
ತಸ್ಮಾದ್ವದ ಮಹಾಭಾಗ ಸರ್ವಂ ತ್ವಂ ವೇತ್ಸ್ಯಶೇಷತಃ ॥ ೪ ॥

ಸೂತ ಉವಾಚ :—

ಏತಜ್ಜಗದ್ದ್ವಿಜಶ್ರೇಷ್ಠಾಃ ಸರ್ವಂ ಸೋಮಮಯಂ ಸ್ಮೃತಂ ।
ತಸ್ಮಾತ್ಪ್ರತಿಷ್ಠಿತೇ ತಸ್ಮಿಂಸ್ತ್ರೈಲೋಕ್ಯಂ ಸ್ಯಾತ್ಪ್ರತಿಷ್ಠಿತಂ ॥ ೫ ॥

---

## ಕನ್ನಡದ ಅನುವಾದ

### ಸೋಮಪ್ರಾಸಾದಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ವಿಪ್ರವರ್ಯರೆ! ಅಲ್ಲಿ ಮಂಗಳಕರವಾದ ಸೋಮಪ್ರಾಸಾದವಿರುವುದು. ಅದರ ದರ್ಶನದಿಂದಲೇ ಮಾನವನು ಪಾಪಮುಕ್ತನಾಗುವನು.

೨. ಸೋಮವಾರದ ದಿನ ಚಂದ್ರಗ್ರಹಣವು ಬರಲು ಅವನನ್ನು ದರ್ಶನ ಮಾಡಿದ ಪಾಪಿಯೂ ನರಕವನ್ನು ನೋಡುವುದಿಲ್ಲ.

೩. ಋಷಿಗಳು ಹೇಳುತ್ತಾರೆ:—ಇಲ್ಲಿ ಸಕಲದೇವತೆಗಳಿಗೂ ಆಲಯಗಳು ಕಾಣುವುವು. ಚಂದ್ರನ ಆಲಯವು ಮಾತ್ರ ಹೇಗೆ ಪ್ರಸಿದ್ಧವಾಯಿತು.

೪. ಸೂತಪುತ್ರ! ಇದು ನಮಗೆ ಆಶ್ಚರ್ಯಕರವಾಗಿದೆ. ಆದ್ದರಿಂದ ಎಲ್ಲವನ್ನೂ ಹೇಳು. ನೀನು ಎಲ್ಲವನ್ನೂ ತಿಳಿದಿರುವೆ.

೫. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಈ ಪ್ರಪಂಚವೆಲ್ಲ ಚಂದ್ರಮಯವಾಗಿರುವುದು. ಆದ್ದರಿಂದ ಆ ಚಂದ್ರನನ್ನು ಸ್ಥಾಪಿಸಿದರೆ ಮೂರು ಲೋಕಗಳನ್ನೂ ಸ್ಥಾಪಿಸಿದಂತಾಗುವುದು.

ಏತಾಶ್ಚೌಷಧಯಃ ಸರ್ವಾಃ ಸಸ್ಯಾದ್ಯಾಶ್ಚೇಹ ಭೂತಲೇ ।
ಸರ್ವಾಃ ಸೋಮಮಯಾಸ್ತಾಶ್ಚ ಯಾಭಿರ್ಜೀವಂತಿ ಜಂತವಃ ॥ ೬ ॥
ತಸ್ಮಾದ್ಬ್ರಹ್ಮಾದಯೋ ದೇವಾಃ ಸೋಮಂ ಪ್ರಾಪ್ಯ ಕ್ರಮಾದ್ದ್ವಿಜಾಃ ।
ತೃಪ್ತಿಂ ಯಾಂತಿ ಪರಾಂ ಹೃಷ್ಟಾ ಯತಸ್ತಸ್ಮಾದ್ವರೋಽತ್ರಸಃ ॥ ೭ ॥
ಅಗ್ನಿಷ್ಟೋಮಾದಯೋ ಯಜ್ಞಾಸ್ತಥಾ ಸೋಮೋ ಪ್ರತಿಷ್ಠಿತಾಃ ।
ತಸ್ಯ ಪಾನಾದ್ಯತಸ್ತೃಪ್ತಿಂ ತತ್ರ ಯಾಂತಿ ದ್ವಿಜೋತ್ತಮಾಃ ॥ ೮ ॥
ಏತಸ್ಮಾತ್ಕಾರಣಾತ್ಸೋಮಃ ಸರ್ವೇಷಾಮಧಿಕಃ ಸ್ಮೃತಃ ।
ದೇವಾನಾಂ ದಾನವಾನಾಂ ಚ ಸ ಹಿ ಪೂಜ್ಯತಮಃ ಸ್ಮೃತಃ ॥ ೯ ॥
ಯಥಾಽನ್ಯೇಷಾಂ ಸುರೇಂದ್ರಾಣಾಂ ಹರ್ಮ್ಯಾಣಿ ಧರಣೀತಲೇ ।
ಕ್ರಿಯಂತೇ ರಾತ್ರಿನಾಥಸ್ಯ ತದ್ವತ್ಕುರ್ವಂತಿ ಮಾನವಾಃ ॥ ೧೦ ॥
ಯೈರ್ಯೈರ್ನರೈರ್ನಿಶೇಶಸ್ಯ ಪ್ರಾಸಾದೋ ವಿಹಿತಃ ಕ್ಷಿತೌ ।
ತೇ ತೇ ಮುಕ್ತಿಪದಂ ಪ್ರಾಪ್ತಾಃ ಕೃತ್ವಾಽಥ ಶುಭಸಂಚಯಂ ॥ ೧೧ ॥
ಯನ್ಮಹೇಶ್ವರಹರ್ಮ್ಯಾಣಾಂ ಸಹಸ್ರೇಣ ಭವೇಚ್ಛುಭಂ ।
ತದೇಕೇನೈವ ಚಂದ್ರಸ್ಯ ಪ್ರಾಪ್ನುವಂತಿ ಶುಭಂ ನರಾಃ ॥ ೧೨ ॥
ಅಥ ಚಂದ್ರೋತ್ಥಹರ್ಮ್ಯಸ್ಯ ಮಾಹಾತ್ಮ್ಯಂ ತದ್ದ್ವಿಜೋತ್ತಮಾಃ ।
ಜ್ಞಾತ್ವಾ ಬ್ರಹ್ಮಾದಯೋ ದೇವಾ ಭಯಸಂತ್ರಸ್ತಮಾನಸಾಃ ।
ತದ್ವಿಘ್ನಾರ್ಥಮಿದಂ ಪ್ರೋಚುರ್ಮೇರುಮೂರ್ಧಾನಮಾಶ್ರಿತಾಃ ॥ ೧೩ ॥

---

೬. ಈ ಪ್ರಪಂಚದಲ್ಲಿರುವ ಸಕಲೌಷಧಿಗಳೂ, ಸಸ್ಯಾದಿಗಳೂ ಸೋಮಮಯವಾಗಿರುವುವು. ಇವುಗಳಿಂದ ಜಂತುಗಳು ಜೀವಿಸುವುವು.

೭. ಆದ್ದರಿಂದ ಬ್ರಹ್ಮಾದಿದೇವತೆಗಳು ಚಂದ್ರನನ್ನು ಹೊಂದಿ. ತೃಪ್ತರಾಗುವರು. ಆದ್ದರಿಂದ ಆ ಚಂದ್ರನು ದೇವತೆಗಳಲ್ಲೆಲ್ಲ ಉತ್ತಮನಾಗಿರುವನು.

೮–೧೦. ಅಗ್ನಿಷ್ಟೋಮಾದಿ ಯಜ್ಞಗಳು ಸೋಮನಲ್ಲಿ ನೆಲೆಸಿರುವುವು. ದ್ವಿಜವರ್ಯರು ಆ ಸೋಮಪಾನದಿಂದ ತೃಪ್ತಿಗೊಳ್ಳುವರು. ಆದ್ದರಿಂದ ಸೋಮನು ಎಲ್ಲರಿಂದಲೂ ಅಧಿಕನಾಗಿರುವನು. ಅವನು ದೇವದಾನವರಿಬ್ಬರಿಗೂ ಪೂಜ್ಯನಾಗಿರುವನು. ಮಾನವರು ಭೂಮಿಯಲ್ಲಿ ಇತರ ದೇವತೆಗಳಿಗೆ ಆಲಯವನ್ನು ನಿರ್ಮಿಸುವಂತೆ ಚಂದ್ರನಿಗೂ ಆಲಯವನ್ನು ರಚಿಸುವರು.

೧೧. ಚಂದ್ರನಿಗೆ ಪ್ರಾಸಾದವನ್ನು ರಚಿಸಿದ ಮಾನವರೆಲ್ಲ ಪುಣ್ಯವನ್ನು ಸಂಗ್ರಹಿಸಿಕೊಂಡು ಮೋಕ್ಷವನ್ನು ಹೊಂದುವರು.

೧೨–೧೩. ಸಾವಿರ ಶಿವಾಲಯವನ್ನು ರಚಿಸಿದ ಪುಣ್ಯವು ಒಂದು ಚಂದ್ರಪ್ರಾಸಾದವನ್ನು ರಚಿಸುವುದರಿಂದುಂಟಾಗುವುದು. ಅನಂತರ ಬ್ರಹ್ಮಾದಿದೇವತೆಗಳು ಚಂದ್ರಪ್ರಾಸಾದದ ಮಾಹಾತ್ಮ್ಯವನ್ನು ಕೇಳಿ ಭಯಗೊಂಡವರಾಗಿ ಮೇರುಶಿಖರವನ್ನಾಶ್ರಯಿಸಿ ಆ ಪ್ರಾಸಾದದ ವಿಘ್ನಕ್ಕಾಗಿ ಹೀಗೆಂದರು.

ಸೌಮ್ಯರ್ಕ್ಷೇ ಸೋಮವಾರೇಣ ಸೌಮ್ಯೇ ಮಾಸಿ ಚ ಸಂಸ್ಥಿತೇ ।
ತಿಥೌ ಚ ಸೋಮದೇವತ್ಯೇ ಪ್ರಾಪ್ತೇ ಸೋಮಗ್ರಹೇ ತಥಾ ।
ಸಕಾರೈಃ ಪಂಚಭಿರ್ಯುಕ್ತೇ ಕಾಲೇ ಸೋಮಸ್ಯ ಮಂದಿರಂ ॥ ೧೪ ॥
ಯ ಏಕಾಽಹೇನ ಸಂಪಾದ್ಯ ಪ್ರಾಸಾದಂ ಸ್ಥಾಪಯಿಷ್ಯತಿ ।
ಚಂದ್ರಂ ಸ ಸರ್ವದೇವೋತ್ಥಹರ್ಮ್ಯಸ್ಯಾಪ್ನೋತಿ ಸತ್ಫಲಂ ॥ ೧೫ ॥
ಸಹಸ್ರಗುಣಿತಂ ಸಮ್ಯಕ್ ಶ್ರಧ್ಧಾಪೂತೇನ ಚೇತಸಾ ।
ಅನ್ಯಥಾ ಯಸ್ತು ಚಂದ್ರಸ್ಯ ಪ್ರಾಸಾದಂ ಪ್ರಕರಿಷ್ಯತಿ ॥ ೧೬ ॥
ವಂಶೋಚ್ಛೇದಂ ಸಮಾಸಾದ್ಯ ನರಕಂ ಸ ಪ್ರಯಾಸ್ಯತಿ ।
ಏತಸ್ಮಾತ್ಕಾರಣಾದ್ಭೀತಾ ನ ಕುರ್ವಂತಿ ನರಾ ಭುವಿ ॥ ೧೭ ॥
ಪ್ರಾಸಾದಂ ರಾತ್ರಿನಾಥಸ್ಯ ಸುಪುಣ್ಯಮಪಿ ಸದ್ದ್ವಿಜಾಃ ।
ಯ ಏಷ ರಾತ್ರಿನಾಥಸ್ಯ ಕ್ಷೇತ್ರೇಽತ್ರೈವ ವ್ಯವಸ್ಥಿತಃ ॥ ೧೮ ॥
ಪ್ರಾಸಾದಸ್ತ್ವಂಬರೀಷೇಣ ಭೂಭುಜಾ ಸ ವಿನಿರ್ಮಿತಃ ।
ಕಥಂಚಿತ್ಸಮಯಂ ಪ್ರಾಪ್ಯ ಯಥೋಕ್ತಂ ಶಾಸ್ತ್ರಚಿಂತಕೈಃ ॥ ೧೯ ॥
ತಸ್ಯೈವೋತ್ತರದಿಗ್ಭಾಗೇ ದ್ವಿತೀಯೋಽನ್ಯಃ ಪ್ರತಿಷ್ಠಿತಃ ।
ಚಂದ್ರಮಾ ಧುಂಧುಮಾರೇಣ ತದ್ವತ್ಸೋಽಪಿ ಪ್ರತಿಷ್ಠಿತಃ ॥ ೨೦ ॥
ತತಶ್ಚ ತೌ ಮಹೀಪಾಲೌ ತತ್ಪ್ರಭಾವಾದುಭೌ ದ್ವಿಜಾಃ ।
ಗತೌ ಚ ಪರಮಾಂ ಸಿದ್ಧಿಂ ಜನ್ಮಮೃತ್ಯುವಿವರ್ಜಿತಾಂ ॥ ೨೧ ॥

---

೧೪–೧೯. ಸೋಮದೇವತಾಕವಾದ ನಕ್ಷತ್ರ, ವಾರ, ಮಾಸ, ತಿಥಿ, ಸೋಮಗ್ರಹಣ ಈ ಐದು ಸಕಾರಗಳಿಂದ ಕೂಡಿದ ಕಾಲದಲ್ಲಿ ಒಂದೇ ದಿವಸದಲ್ಲಿ ಪ್ರಾಸಾದವನ್ನು ನಿರ್ಮಿಸಿ ಚಂದ್ರನನ್ನು ಸ್ಥಾಪಿಸಿದವನು ಸಕಲದೇವತೆಗಳ ಪ್ರಾಸಾದಗಳನ್ನೂ ರಚಿಸಿದ ಫಲದ ಸಾವಿರದಷ್ಟು ಫಲವನ್ನು ಪಡೆಯುವನು. ಹಾಗಿಲ್ಲದೆ ಪ್ರಾಸಾದವನ್ನು ರಚಿಸಿದವನು ವಂಶೋಚ್ಛೇದವನ್ನು ಹೊಂದಿ ನರಕಕ್ಕೆ ಹೋಗುವನು. ಈ ಕಾರಣದಿಂದ ಮಾನವರು ಭೂಮಿಯಲ್ಲಿ ಭಯಗೊಂಡು ಪುಣ್ಯಕರವಾಗಿದ್ದರೂ ಚಂದ್ರನ ಪ್ರಾಸಾದವನ್ನು ನಿರ್ಮಿಸುವುದಿಲ್ಲ. ಈ ಕ್ಷೇತ್ರದಲ್ಲಿರುವ ಚಂದ್ರಪ್ರಾಸಾದವನ್ನು ಅಂಬರೀಷರಾಜನು ಶಾಸ್ತ್ರಜ್ಞರಿಂದ ಹೇಗೋ ಉಕ್ತಸಮಯವನ್ನರಿತು ನಿರ್ಮಿಸಿದನು.

೨೦. ಆ ಪ್ರಾಸಾದದ ಉತ್ತರದಿಕ್ಕಿನಲ್ಲಿ ಧುಂಧುಮಾರನು ಹಾಗೆಯೇ ಮತ್ತೊಂದು ಚಂದ್ರನ ಪ್ರಾಸಾದವನ್ನು ನಿರ್ಮಿಸಿರುವನು.

೨೧. ಆದ್ದರಿಂದ ಆ ಇಬ್ಬರು ರಾಜರೂ ಆ ಪ್ರಾಸಾದಗಳ ಪ್ರಭಾವದಿಂದ ಜನ್ಮಮರಣವಿಲ್ಲದ ಉತ್ತಮಸಿದ್ಧಿಯನ್ನು ಹೊಂದಿರುವರು.

ಪ್ರಾಸಾದೋಽನ್ಯಸ್ತೃತೀಯಸ್ತು ಕ್ಷೇತ್ರೇ ಪ್ರಾಭಾಸಿಕೇ ತಥಾ ।
ಇಕ್ಷ್ವಾಕುಣಾ ನರೇಂದ್ರೇಣ ಶ್ರದ್ಧಾಯುಕ್ತೇನ ನಿರ್ಮಿತಃ ॥ ೨೨ ॥
ಪ್ರಾಸಾದತ್ರಯಮೇತದ್ಧಿ ಮುಕ್ತ್ವಾಽತ್ರ ಧರಣೀತಲೇ ।
ಅಪರೋ ನಾಽಸ್ತಿ ಚಂದ್ರಸ್ಯ ಸತ್ಯಮೇತನ್ಮಯೋದಿತಂ ।
ಏಕೋಽಸ್ತಿ ನರ್ಮದಾತೀರೇ ಪುಣ್ಯೇ ರೇವೋರಿಸಂಗಮೇ ॥ ೨೩ ॥
ಏತದ್ವಃ ಸರ್ವಮಾಖ್ಯಾತಂ ಚಂದ್ರಮಾಹಾತ್ಮ್ಯಮುತ್ತಮಂ ।
ಪಠತಾಂ ಶೃಣ್ವತಾಂ ಚಾಽಪಿ ಸರ್ವಪಾತಕನಾಶನಂ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
“ ಸೋಮಪ್ರಾಸಾದಮಾಹಾತ್ಮ್ಯವರ್ಣನಂ ”
ನಾಮ ಸಪ್ತಾಶೀತಿತಮೋಽಧ್ಯಾಯಃ

---

೨೨. ಪ್ರಾಭಾಸಿಕಕ್ಷೇತ್ರದಲ್ಲಿ ಇಕ್ಷ್ವಾಕುರಾಜನು ಶ್ರದ್ಧೆಯಿಂದ ಮೂರನೆ ಪ್ರಾಸಾದವನ್ನು ರಚಿಸಿದನು.

೨೩. ಭೂಮಿಯಲ್ಲಿ ಈ ಮೂರು ಪ್ರಾಸಾದಗಳನ್ನು ಬಿಟ್ಟರೆ ಚಂದ್ರನಿಗೆ ಬೇರೆ ಆಲಯವಿಲ್ಲ. ನಾನು ಹೇಳಿರುವುದು ನಿಜ. ನರ್ಮದಾ ತೀರದಲ್ಲಿ ಪುಣ್ಯಕರವಾದ ರೇವೋರಿ ಸಂಗಮದಲ್ಲಿ ಒಂದು ಪ್ರಾಸಾದವಿದೆ.

೨೪. ಪಠಿಸುವವರ ಮತ್ತು ಕೇಳುವವರ ಸಕಲ ಪಾಪಗಳನ್ನು ನಾಶಗೊಳಿಸುವ ಉತ್ತಮವಾದ ಈ ಚಂದ್ರಮಾಹಾತ್ಮ್ಯವನ್ನು ಸಂಪೂರ್ಣವಾಗಿ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ “ ಸೋಮಪ್ರಾಸಾದಮಾಹಾತ್ಮ್ಯವರ್ಣನ ”ವೆಂಬ
ಎಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಾಶೀತಿತಮೋಽಧ್ಯಾಯಃ

### ಅಂಬಾವೃದ್ಧಾಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಯಾಸ್ತ್ವಯಾ ದೇವತಾಃ ಪ್ರೋಕ್ತಾಶ್ಚತಸ್ರಃ ಸೂತನಂದನ ।
ಚಮತ್ಕಾರೀ ಮಹಿತ್ಥಾ ಚ ಮಹಾಲಕ್ಷ್ಮೀಸ್ತಥಾಽಪರಾ ॥ ೧ ॥
ಅಂಬಾವೃದ್ಧಾ ಚತುರ್ಥೀ ಚ ತಾಸಾಂ ತಿಸ್ರಃ ಪ್ರಕೀರ್ತಿತಾಃ ।
ವಿಸ್ತರೇಣ ಚತುರ್ಥೀ ಚ ಅಂಬಾವೃದ್ಧಾ ನ ಕೀರ್ತಿತಾ ॥ ೨ ॥
ಏತಸ್ಯಾಃ ಸರ್ವಮಾಚಕ್ಷ್ವ ಪ್ರಭಾವಂ ಸೂತಸಂಭವ ।
ಕೇನೈಷಾ ನಿರ್ಮಿತಾ ಯಾತ್ರಾ ಸರ್ವಂ ವಿಸ್ತರತೋ ವದ ॥ ೩ ॥

ಸೂತ ಉವಾಚ :—

ಏಷಾ ತಪೋಮಯೀ ಶಕ್ತಿರಂಬಾವೃದ್ಧಾ ಸುರೇಶ್ವರೀ ।
ಯಥಾಽತ್ರ ಸಂಸ್ಥಿತಾ ಪೂರ್ವಂ ತತ್ಸರ್ವಂ ಶ್ರೂಯತಾಂ ಮಮ ॥ ೪ ॥
ಚಮತ್ಕಾರಮಹೀಪೇನ ಪುರಮೇತದ್ಯದಾಕೃತಂ ।
ತದಾ ತದ್ರಕ್ಷಣಾರ್ಥಾಯ ನಿರ್ಮಿತಾ ಭಾವಿತಾತ್ಮನಾ ।
ಚತಸ್ರೋ ದೇವತಾ ಹ್ಯೇತಾಃ ಸಮ್ಮತೇನ ದ್ವಿಜನ್ಮನಾಂ ॥ ೫ ॥

---

## ಕನ್ನಡದ ಅನುವಾದ

### ಅಂಬಾವೃದ್ಧಾಮಾಹಾತ್ಮ್ಯವರ್ಣನ

೧—೨. ಋಷಿಗಳು ಹೇಳುತ್ತಾರೆ:—ಸೂತ! ನೀನು ಚಮತ್ಕಾರೀ, ಮಹಿತ್ಥಾ, ಮಹಾಲಕ್ಷ್ಮೀ, ಅಂಬಾವೃದ್ಧಾ ಎಂಬ ನಾಲ್ಕು ದೇವತೆಗಳನ್ನು ಹೇಳಿರುವೆ. ಅವರಲ್ಲಿ ಮೂರು ದೇವತೆಗಳ ಪ್ರಭಾವವನ್ನು ತಿಳಿಸಿರುವೆ. ನಾಲ್ಕನೆಯ ಅಂಬಾವೃದ್ಧೆಯ ಮಾಹಾತ್ಮ್ಯೆಯನ್ನು ವಿಸ್ತಾರವಾಗಿ ಹೇಳಲಿಲ್ಲ.

೩. ಇವಳ ಪ್ರಭಾವವನ್ನೆಲ್ಲ ಹೇಳು. ಇವಳ ಯಾತ್ರೆಯನ್ನು ಯಾರು ಮಾಡಿದ್ದರೆಂಬುದನ್ನು ವಿಸ್ತಾರವಾಗಿ ತಿಳಿಸು.

೪. ಈ ಅಂಬಾವೃದ್ಧೆಯು ತಪೋಮಯಶಕ್ತಿಯು. ಇವಳು ಹಿಂದೆ ಇಲ್ಲಿ ಹೇಗೆ ನೆಲೆಸಿರುವಳೆಂಬುದನ್ನು ಸಂಪೂರ್ಣವಾಗಿ ಕೇಳಿರಿ.

೫. ಚಮತ್ಕಾರ ರಾಜನು ಈ ಪಟ್ಟಣವನ್ನು ನಿರ್ಮಿಸಿದಾಗ ಇದರ ರಕ್ಷಣೆಗಾಗಿ ಬ್ರಾಹ್ಮಣರ ಸಮ್ಮತಿಯಿಂದ ನಾಲ್ಕು ದೇವತೆಗಳನ್ನು ನಿರ್ಮಿಸಿದನು.

ಅಥ ತಸ್ಯ ಮಹೀಪಸ್ಯ ಅಂಬಾ ನಾಮಾಽಭವತ್ಸುತಾ ।
ತಥಾಽನ್ಯಾ ವೃದ್ಧಸಂಜ್ಞಾ ಚ ರೂಪೌದಾರ್ಯಗುಣಾನ್ವಿತೇ ॥ ೬ ॥
ಉಭೇ ತೇ ಕಾಶಿರಾಜೇನ ಪರಿಣೀತೇ ದ್ವಿಜೋತ್ತಮಾಃ ।
ಗೃಹ್ಯೋಕ್ತೇನ ವಿಧಾನೇನ ದೇವವಿಪ್ರಾಽಗ್ನಿಸನ್ನಿಧೌ ॥ ೭ ॥
ಕಸ್ಯಚಿತ್ತ್ವಥ ಕಾಲಸ್ಯ ಕಾಶಿರಾಜಸ್ಯ ಭೂಪತೇಃ ।
ತೈಃ ಕಾಲಯವನೈಃ ಸಾರ್ಧಮಭವತ್ಸಂಗರೋ ಮಹಾನ್ ॥ ೮ ॥
ಅಥ ತೈರ್ನಿಹಿತಃ ಸಂಖ್ಯೇ ಸಭೃತ್ಯಬಲವಾಹನಃ ।
ಹರಲಬ್ಧವರೈ ರೌದ್ರೈಃ ಕಾಶಿರಾಜಃ ಪ್ರತಾಪವಾನ್ ॥ ೯ ॥
ಅಥಾಂಬಾ ಚೈವ ವೃದ್ಧಾ ಚ ವೈಧವ್ಯಂ ಪ್ರಾಪ್ಯ ದುಃಖದಂ ।
ಹಾಟಕೇಶ್ವರಜಂ ಕ್ಷೇತ್ರಂ ಗತ್ವಾ ತೇ ವಾಂಛಿತಪ್ರದಂ ॥ ೧೦ ॥
ದೇವ್ಯಾ ಆರಾಧನೇ ಯತ್ನಂ ಕೃತವತ್ಯೌ ತತಃ ಪರಂ ।
ನಾಶಾರ್ಥಂ ಪತಿಶತ್ರೂಣಾಂ ಧೃತವತ್ಯೌ ಶುಭವ್ರತಂ ॥ ೧೧ ॥
ಯಾವದ್ವರ್ಷಶತಂ ಸಾಗ್ರಂ ನ ಚ ತುಷ್ಟಾ ಸುರೇಶ್ವರೀ ।
ತತೋ ವೈರಾಗ್ಯಮಾಸಾದ್ಯ ವಾಂಛಂತ್ಯೌ ಸ್ವತನುಕ್ಷಯಂ ॥ ೧೨ ॥
ಮಂತ್ರೈರಾಥರ್ವಣೈರ್ವಿಪ್ರಾಃ ಕ್ಷುರಿಕಾಸೂಕ್ತಸಂಭವೈಃ ।
ಛಿತ್ವಾ ಛಿತ್ವಾ ಸ್ವಮಾಂಸಾನಿ ಮಂತ್ರ ಪೂತಾನಿ ಭಕ್ತಿತಃ ॥ ೧೩ ॥

---

೬. ರಾಜನಿಗೆ ಅಂಬಾ, ವೃದ್ಧಾ ಎಂಬ ರೂಪೌದಾರ್ಯಗುಣಗಳಿಂದ ಕೂಡಿದ ಇಬ್ಬರು ಹೆಣ್ಣುಮಕ್ಕಳು ಇದ್ದರು.

೭. ದ್ವಿಜವರ್ಯರೆ! ಅವರಿಬ್ಬರನ್ನೂ ಕಾಶಿರಾಜನು ದೇವ, ದ್ವಿಜ ಮತ್ತು ಅಗ್ನಿಗಳ ಸನ್ನಿಧಿಯಲ್ಲಿ ಗೃಹ್ಯೋಕ್ತವಿಧಿಯಿಂದ ವಿವಾಹಮಾಡಿಕೊಂಡನು.

೮–೯. ಕೆಲವು ಕಾಲದ ಮೇಲೆ ಕಾಶಿರಾಜನಿಗೆ ಕಾಲಯವನರೊಡನೆ ಭಯಂಕರ ಯುದ್ಧವಾಯಿತು. ಆ ಯುದ್ಧದಲ್ಲಿ ಹರನಿಂದ ವರವನ್ನು ಪಡೆದ ಭಯಂಕರರಾದ ಕಾಲಯವನರು ಪ್ರತಾಪಶಾಲಿಯಾದ ಕಾಶಿರಾಜನನ್ನು ಭೃತ್ಯ ಬಲವಾಹನಗಳೊಡನೆ ಕೊಂದರು.

೧೦–೧೧. ಅನಂತರ ಆ ಕಾಶಿರಾಜನ ಪತ್ನಿಯರಾದ ಅಂಬಾವೃದ್ಧೆಯರು ದುಃಖದಾಯಕವಾದ ವೈಧವ್ಯವನ್ನು ಹೊಂದಿ ಇಷ್ಟಾರ್ಥವನ್ನು ನೀಡುವ ಹಾಟಕೇಶ್ವರಕ್ಷೇತ್ರಕ್ಕೆ ಹೋಗಿ ಶುಭವ್ರತವನ್ನು ಧರಿಸಿ ಪತಿಯ ಶತ್ರುಗಳ ನಾಶಕ್ಕಾಗಿ ದೇವಿಯ ಆರಾಧನೆಯಲ್ಲಿ ತೊಡಗಿ ಪ್ರಯತ್ನಮಾಡಿದರು.

೧೨–೧೬. ದೇವಿಯು ನೂರುವರ್ಷಗಳವರೆಗೆ ಸಂತುಷ್ಟಳಾಗದಿರಲು ಅವರು ವೈರಾಗ್ಯವನ್ನು ಹೊಂದಿ ತಮ್ಮ ಶರೀರನಾಶವನ್ನು ಬಯಸುತ್ತ ಕ್ಷುರಿಕಾಸೂಕ್ತ ಸಂಬಂಧವಾದ ಮಂತ್ರಗಳಿಂದ ಪವಿತ್ರವಾದ ತಮ್ಮ ಮಾಂಸಗಳನ್ನು ಕತ್ತರಿಸಿ

ಕೃತೇನತೌ ತತೋ ಹೋಮಂ ಸುಸಮಿದ್ಧೇ ಹುತಾಶನೇ ।
ಅಗ್ನಿಕುಂಡಾತ್ತತಸ್ತಸ್ಮಾಚ್ಚತುರ್ಹಸ್ತಾ ಶುಭಾನನಾ ॥ ೧೪ ॥
ಶ್ವೇತವಸ್ತ್ರಾ ವಿನಿಷ್ಕ್ರಾಂತಾ ನಾರೀ ಬಾಲಾರ್ಕಸನ್ನಿಭಾ ।
ತಥಾಽನ್ಯಾ ಚ ಸುನೇತ್ರಾಸ್ಯಾ ತಪ್ತಹಾಟಕಸನ್ನಿಭಾ ॥ ೧೫ ॥
ತಸ್ಮಾತ್ಕುಂಡಾದ್ವಿನಿಷ್ಕ್ರಾಂತಾ ಧೃತಖಡ್ಗಾ ಭಯಾವಹಾ ।
ಸಾಽಪರಾಪಿ ತಥಾರೂಪಾ ಶಕ್ತಿಃ ಪರಮದಾರುಣಾ ॥ ೧೬ ॥
ಪ್ರೋಚತುಸ್ತೇ ವರಂ ಹೃತ್ಸ್ಥಂ ಪ್ರಾರ್ಥ್ಯತಾಮಿತಿ ದುರ್ಲಭಂ ॥ ೧೭ ॥
ತೇ ಊಚತುಃ:—
ಅಸ್ಮಾಕಂ ದಯಿತೋ ಭರ್ತಾ ಕಾಶಿರಾಜಃ ಪ್ರತಾಪವಾನ್ ।
ನಿಹತಃ ಸಂಗರೇ ಕ್ರುದ್ಧೈರ್ಯವನೈಃ ಕಾಲಪೂರ್ವಕೈಃ ॥ ೧೮ ॥
ಯುಷ್ಮದೀಯಪ್ರಸಾದೇನ ಯಥಾ ತೇಷಾಂ ಪರಿಕ್ಷಯಃ ।
ಸಂಜಾಯತೇ ಮಹಾದೇವ್ಯೌ ತಥಾ ಕಾರ್ಯಮಸಂಶಯಂ ॥ ೧೯ ॥
ಸ್ಥಾತವ್ಯಂ ಚ ತಥಾಽತ್ರೈವ ಉಭಾಭ್ಯಾಮಪಿ ಸಾದರಂ ।
ಸ್ವಪುರಸ್ಯ ಪ್ರರಕ್ಷಾರ್ಥಮೇತತ್ಕೃತ್ಯಂ ಮತಂ ಹಿ ನೌ ॥ ೨೦ ॥
ತಯೋಸ್ತದ್ವಚನಂ ಶ್ರುತ್ವಾ ಉಭೇತೇ ದೇವತೇ ತತಃ ।
ಸಂಪ್ರೋಚ್ಯ ಬಾಢಮಿತ್ಯೇವಂ ತಸ್ಮಿನ್ಕುಂಡೇ ವ್ಯವಸ್ಥಿತೇ ॥ ೨೧ ॥

---

ಕೆತ್ತರಿಸಿ ಜ್ವಲಿಸುವ ಅಗ್ನಿಯಲ್ಲಿ ಭಕ್ತಿಯಿಂದ ಹೋಮಿಸಿದರು. ಅನಂತರ ಆ ಅಗ್ನಿಕುಂಡದಿಂದ ನಾಲ್ಕು ಕೈಯುಳ್ಳವಳೂ, ಸುಂದರಮುಖಿಯೂ, ಶ್ವೇತವಸ್ತ್ರವನ್ನುಟ್ಟವಳೂ, ಬಾಲಸೂರ್ಯನಿಗೆ ಸಮಾನಳೂ ಆದ ಓರ್ವ ನಾರಿಯು ಹೊರಟಳು. ಸುನೇತ್ರಾಸ್ಯಳೂ, ಕಾಯಿಸಿದ ಚಿನ್ನಕ್ಕೆ ಸಮಾನಳೂ, ಖಡ್ಗಧಾರಿಣಿಯೂ, ಭಯಂಕರಳೂ, ಅತಿಕಠಿನಳೂ ಆದ ಮತ್ತೊಬ್ಬ ನಾರಿಯೂ ಉದ್ಭವಿಸಿದಳು.

೧೭. ಆ ದೇವಿಯರಿಬ್ಬರೂ ಅವರನ್ನು ಕುರಿತು, "ನಿಮ್ಮ ಮನಸ್ಸಿನಲ್ಲಿರುವ ದುರ್ಲಭವಾದ ವರವನ್ನು ಕೇಳಿಕೊಳ್ಳಿರಿ" ಎಂದರು.

೧೮. ಅಂಬಾ ವೃದ್ಧೆಯರು ಹೇಳುತ್ತಾರೆ:—ನಮ್ಮ ಪತಿಯಾದ ಕಾಶಿರಾಜನನ್ನು ಯುದ್ಧದಲ್ಲಿ ಕೃದ್ಧರಾದ ಕಾಲಯವನರು ಕೊಂದರು.

೧೯. ನಿಮ್ಮ ಅನುಗ್ರಹದಿಂದ ಅವರು ನಾಶವಾಗುವಂತೆ ಮಾಡಿರಿ.

೨೦. ಹಾಗೆಯೇ ನೀವಿಬ್ಬರು ಪ್ರೀತಿಯಿಂದ ಇಲ್ಲಿ ನಮ್ಮ ಪಟ್ಟಣದ ರಕ್ಷಣೆಗಾಗಿ ನೆಲೆಸಿರಿ. ಈ ಕಾರ್ಯವು ನಮಗೆ ಇಷ್ಟವಾದುದು.

೨೧. ಆ ಇಬ್ಬರು ದೇವತೆಯರು ಅವರಿಬ್ಬರ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿ ಆ ಕುಂಡದಲ್ಲಿ ನೆಲೆಸಿದರು.

ಏತಸ್ಮಿನ್ನಂತರೇ ತಸ್ಮಾತ್ಕುಂಡಾಚ್ಛತಸಹಸ್ರಶಃ ।
ನಿಷ್ಕ್ರಾಂತಾಃ ಸಂಖ್ಯಯಾ ಹೀನಾ ಮಾತರೋ ನೈಕರೂಪಿಕಾಃ ॥ ೨೨ ॥
ಏಕಾ ಗಜಮುಖೀ ತತ್ರ ತಥಾಽನ್ಯಾ ತುರಗಾನನಾ ।
ಸಾರಮೇಯಮುಖಾಶ್ಚಾಽನ್ಯಾಃ ಪಕ್ಷಿಚ್ಛಾಗಮುಖಾಃ ಪರಾಃ ॥ ೨೩ ॥
ತಿರ್ಯಂಚ ವಪುಷಶ್ಚಾಽನ್ಯಾ ವಕ್ತ್ರೈರ್ಮಾನುಷಸಂಭವೈಃ ।
ತ್ರಿಶೀರ್ಷಾಃ ಪಂಚಶೀರ್ಷಾಶ್ಚ ದಶಶೀರ್ಷಾಸ್ತಥಾಪರಾಃ ॥ ೨೪ ॥
ಗುಹ್ಯಸ್ಥಾನಸ್ಥಿತೈರ್ವಕ್ತ್ರೈ ರೇಕಾಶ್ಚಾನ್ಯಾ ಹೃದಿ ಸ್ಥಿತೈಃ ।
ಪಾರ್ಶ್ವಸಂಸ್ಥೈಃ ಸ್ಥಿತಾಶ್ಚಾಽನ್ಯಾ ಅನ್ಯಾಃ ಪೃಷ್ಠಿಗತೈರ್ಮುಖೈಃ ॥ ೨೫ ॥
ಏಕಹಸ್ತಾ ದ್ವಿಹಸ್ತಾಶ್ಚ ಪಂಚ ಹಸ್ತಾಸ್ತಥಾಽಪರಾಃ ।
ಅನ್ಯಾ ವಿಂಶತಿಹಸ್ತಾಶ್ಚ ವಿಹಸ್ತಾಶ್ಚ ತಥಾಽಪರಾಃ ॥ ೨೬ ॥
ಬಹುಪಾದಾ ವಿಪಾದಾಶ್ಚ ಏಕಪಾದಾಸ್ತಥಾಽಪರಾಃ ।
ತಥಾಽನ್ಯಾಶ್ಚಾರ್ಧಪಾದಾಶ್ಚ ಅಧೋವಕ್ತ್ರಾ ವಿಭೀಷಣಾಃ ॥ ೨೭ ॥
ಏಕನೇತ್ರಾ ದ್ವಿನೇತ್ರಾಶ್ಚ ತ್ರಿನೇತ್ರಾಶ್ಚ ತಥಾಽಪರಾಃ ।
ಕಾಶ್ಚಿದ್ಗಜಸಮಾರೂಢಾ ಹಯಾರೂಢಾಸ್ತಥಾಽಪರಾಃ ॥ ೨೮ ॥

---

೨೨. ಇಷ್ಟರಲ್ಲಿ ಆ ಕುಂಡದಿಂದ ಅನೇಕ ರೂಪವುಳ್ಳ ಲೆಕ್ಕವಿಲ್ಲದಷ್ಟು ಮಾತೆಯರು ಹೊರಟರು.

೨೩–೨೮. ಅವರಲ್ಲಿ ಕೆಲವರು ಗಜಮುಖಿಯರೂ, ಕೆಲವರು ತುರಗಾಸ್ಯರೂ, ಕೆಲವರು ನಾಯಿಯಂತೆ ಮುಖವುಳ್ಳವರೂ, ಕೆಲವರು ಪಕ್ಷಿ, ಮೇಕೆಗಳ ಮುಖವುಳ್ಳವರೂ, ಕೆಲವರು ಪಶು, ಪಕ್ಷಿ ದೇಹವುಳ್ಳವರಾಗಿ ಮನುಷ್ಯ ಮುಖವುಳ್ಳವರೂ, ಕೆಲವರು ಮೂರು ತಲೆಯುಳ್ಳವರೂ, ಇನ್ನು ಕೆಲವರು ಐದು ತಲೆಯುಳ್ಳವರೂ, ಇತರರು ಹತ್ತು ತಲೆಯುಳ್ಳವರೂ, ಕೆಲವರು ಗುಹ್ಯಸ್ಥಾನದಲ್ಲಿ ಮುಖವುಳ್ಳವರೂ, ಕೆಲವರು ಎದೆಯಲ್ಲಿ ಮುಖವುಳ್ಳವರೂ, ಕೆಲವರು ಪಾರ್ಶ್ವದಲ್ಲಿ ಮುಖವುಳ್ಳವರೂ, ಕೆಲವರು ಬೆನ್ನಿನಲ್ಲಿ ಮುಖವುಳ್ಳವರೂ, ಕೆಲವರು ಒಂದು ಕೈಯುಳ್ಳವರೂ, ಕೆಲವರು ಎರಡು ಕೈಯುಳ್ಳವರೂ, ಕೆಲವರು ಐದು ಕೈಗಳುಳ್ಳವರೂ, ಕೆಲವರು ಇಪ್ಪತ್ತು ಕೈಯುಳ್ಳವರೂ, ಕೆಲವರು ಕೈಯಿಲ್ಲದವರೂ, ಕೆಲವರು ಅನೇಕ ಕಾಲುಳ್ಳವರೂ, ಕೆಲವರು ಕಾಲುಗಳಿಲ್ಲದವರೂ, ಕೆಲವರು ಒಂದೇ ಕಾಲುಳ್ಳವರೂ, ಕೆಲವರು ಅರ್ಧ ಕಾಲುಳ್ಳವರೂ, ಕೆಲವರು ಅಧೋವಕ್ತ್ರರೂ, ಕೆಲವರು ಭಯಂಕರರೂ, ಕೆಲವರು ಒಂದು ಕಣ್ಣುಳ್ಳವರೂ, ಕೆಲವರು ಎರಡು ಕಣ್ಣುಳ್ಳವರೂ, ಕೆಲವರು ಮೂರು ಕಣ್ಣುಗಳುಳ್ಳವರೂ, ಕೆಲವರು ಆನೆಯನ್ನು ಏರಿದವರೂ, ಇತರರು ಕುದುರೆಯನ್ನೇರಿದವರೂ,

ವೃಷವಾನರಸಿಂಹಾಽಜವ್ಯಾಘ್ರಸರ್ಪಾಸ್ಥಿತಾಃ ಪರಾಃ ।
ಗೋಧಾಶ್ವರಾಸಭಾರೂಢಾಸ್ತಥಾ ಚ ವಿಹಗಾಶ್ರಿತಾಃ ॥ ೨೯ ॥
ಕೂರ್ಮಕುಕ್ಕುಟ ಸರ್ಪಾದಿ ಸಮಾರೂಢಾಃ ಸಹಸ್ರಶಃ ।
ಪ್ರಕುರ್ವಂತ್ಯೋ ರುದಂತ್ಯಶ್ಚ ಗಾಯಂತ್ಯಶ್ಚ ತಥಾಽಪರಾಃ ।
ನೃತ್ಯಂತ್ಯಶ್ಚ ಹಸಂತ್ಯಶ್ಚ ಕ್ರೀಡಾಸಕ್ತಾಃ ಪರಸ್ಪರಂ ॥ ೩೦ ॥
ಊರ್ಧ್ವಕೇಶಾ ವಿಕೇಶಾಶ್ಚ ಗಾತ್ರಕೇಶಾಶ್ಚ ಭೂರಿಶಃ ।
ಲಂಬಕೇಶಾ ವಿಕೇಶಾಶ್ಚ ವಾಜಿಕೇಶಾಸ್ತಥೈವ ಚ ॥ ೩೧ ॥
ಹ್ರಸ್ವದಂತ್ಯೋ ವಿದಂತ್ಯಶ್ಚ ದೀರ್ಘದಂತ್ಯೋ ವಿಭೀಷಣಾಃ ।
ಗಜದಂತ್ಯಸ್ತಥೈವಾನ್ಯಾ ಲೋಹದಂಶ್ಯೋ ಭಯಾವಹಾಃ ॥ ೩೨ ॥
ಲಂಬಕರ್ಣ್ಯೋ ವಿಕರ್ಣ್ಯಶ್ಚ ಶೂರ್ಪಕರ್ಣ್ಯಸ್ತಥಾಽಪರಾಃ ।
ಶಂಕುಕರ್ಣ್ಯಃ ಕುಕರ್ಣ್ಯಶ್ಚ ಬಹುಕರ್ಣ್ಯಃ ಸುಕರ್ಣಿಕಾಃ ॥ ೩೩ ॥
ಏಕವಸ್ತ್ರಾ ವಿವಸ್ತ್ರಾಶ್ಚ ಬಹುವಸ್ತ್ರಾಸ್ತಥಾಪರಾಃ ।
ಚರ್ಮ ಪ್ರಾವರಣಾಶ್ಚೈವ ಕಂಥಾಪ್ರಾವರಣಾನ್ವಿತಾಃ ॥ ೩೪ ॥
ಖಡ್ಗಹಸ್ತಾಃ ಶರಾಹಸ್ತಾಃ ಕುಂತಹಸ್ತಾಶ್ಚ ಭೀಷಣಾಃ ।
ಪಾಶಹಸ್ತಾಸ್ತಥೈವಾಽನ್ಯಾಃ ಪ್ರಾಸ ಚಾಪಕರಾಃ ಪರಾಃ ।
ಶೂಲಮುದ್ಗರ ಹಸ್ತಾಶ್ಚ ಭುಶುಂಡಿಕರಭೂಷಿತಾಃ ॥ ೩೫ ॥

---

ಕೆಲವರು ಎತ್ತು, ಕಪಿ, ಸಿಂಹ, ಆಡು, ಹುಲಿ, ಸರ್ಪಗಳಲ್ಲಿ ಕುಳಿತವರೂ, ಕೆಲವರು ಗೋಧಾ, ಕತ್ತೆಗಳನ್ನು ಏರಿದವರೂ, ಕೆಲವರು ಪಕ್ಷಿಯಮೇಲೆ ಕುಳಿತವರೂ ಆಗಿದ್ದರು.

೩೦–೩೫. ಇನ್ನೂ ಸಾವಿರಾರು ಮಂದಿಗಳು ಆಮೆ, ಕೋಳಿ, ಸರ್ಪ ಮೊದಲಾದುವುಗಳನ್ನು ಏರಿದವರೂ, ಅಳುವವರೂ, ಗಾನ ಮಾಡುವವರೂ, ಕುಣಿಯುವವರೂ, ನಗುವವರೂ, ಪರಸ್ಪರ ಕುಣಿಯುವವರೂ, ಊರ್ಧ್ವಕೇಶರೂ, ಕೇಶವಿಲ್ಲದವರೂ, ಶರೀರದಲ್ಲಿ ಕೇಶವುಳ್ಳವರೂ, ಜೋಲಾಡುವ ಕೂದಲುಳ್ಳವರೂ, ಕೂದಲಿಲ್ಲದವರೂ, ಕುದುರೆಯಂತೆ ಕೂದಲುಳ್ಳವರೂ, ಸಣ್ಣ ಹಲ್ಲುಳ್ಳವರೂ, ಹಲ್ಲುಗಳಿಲ್ಲದವರೂ, ಉದ್ದವಾದ ಹಲ್ಲುಳ್ಳವರೂ, ಭಯಂಕರರೂ, ಆನೆಯಂತೆ ಹಲ್ಲುಗಳುಳ್ಳವರೂ, ಕಬ್ಬಿಣದ ಹಲ್ಲುಗಳುಳ್ಳವರೂ, ಜೋಲು ಕಿವಿಯುಳ್ಳವರೂ, ಕಿವಿಯಿಲ್ಲದವರೂ, ಮೊರದಂತೆ ಕಿವಿಯುಳ್ಳವರೂ, ಶಂಕುವಿನಂತೆ ಕಿವಿಯುಳ್ಳವರೂ, ಕೆಟ್ಟ ಕಿವಿಯುಳ್ಳವರೂ, ಅನೇಕ ಕಿವಿಗಳುಳ್ಳವರೂ, ಸುಂದರವಾದ ಕಿವಿಗಳುಳ್ಳವರೂ, ಒಂದು ಬಟ್ಟೆಯನ್ನುಟ್ಟವರೂ, ಬತ್ತಲೆಯಾದವರೂ, ಅನೇಕ ವಸ್ತ್ರಗಳನ್ನುಟ್ಟವರೂ, ಚರ್ಮವನ್ನು ಹೊದ್ದವರೂ, ಕಂತೆಯನ್ನು ಹೊದ್ದವರೂ, ಖಡ್ಗಧಾರಿಗಳೂ, ಬಾಣವನ್ನು ಹಿಡಿದವರೂ, ಕುಂತಧಾರಿಗಳೂ, ಪಾಶಹಸ್ತರೂ, ಪ್ರಾಸಚಾಪಗಳನ್ನು ಹಿಡಿದವರೂ, ಶೂಲ, ಮುದ್ಗರ, ಭುಶುಂಡಿಗಳನ್ನು ಧರಿಸಿದವರೂ ಆಗಿದ್ದರು.

ಅಥ ತಾಭ್ಯಾಂ ತಥಾಕರ್ಣ್ಯ ತಾಃ ಸರ್ವಾ ಹರ್ಷಸಂಯುತಾಃ ।
ಪ್ರಸ್ಥಿತಾಸ್ತತ್ರ ತಾ ಯತ್ರ ತೇ ಕಾಲಯವನಾಃ ಸ್ಥಿತಾಃ ॥ ೩೬ ॥
ತತಸ್ತೇ ತತ್ಸಮಾಲೋಕ್ಯ ಬಲಂ ದೇವೀಸಮುದ್ಭವಂ ।
ರೌದ್ರರೂಪಧರಂ ತೀವ್ರಂ ವಿಕೃತಂ ವಿಕೃತೈರ್ಮುಖೈಃ ॥ ೩೭ ॥
ವಿಷಣ್ಣವದನಾಃ ಸರ್ವೇ ಭಯಭೀತಾಃ ಸಮಂತತಃ ।
ಧಾವಂತೋ ಭಕ್ಷಿತಾಸ್ತಾಭಿರ್ದೇವತಾಭಿಃ ಸುನಿರ್ದಯಂ ॥ ೩೮ ॥
ಬಾಲವೃದ್ಧಸಮೋಪೇತಂ ತೇಷಾಂ ರಾಷ್ಟ್ರಂ ದುರಾತ್ಮನಾಂ ।
ಸ್ತ್ರೀಭಿಶ್ಚ ಸಹಿತಂ ತಾಭಿರ್ದೇವತಾಭಿಃ ಪ್ರಭಕ್ಷಿತಂ ॥ ೩೯ ॥
ಏವಂ ನಿರ್ವಾಸ್ಯ ತದ್ರಾಷ್ಟ್ರಂ ಸರ್ವಾಸ್ತಾ ಹರ್ಷಸಂಯುತಾಃ ।
ಭೂಯ ಏವ ನಿಜಂ ಸ್ಥಾನಂ ಸಂಪ್ರಾಪ್ತಾ ದ್ವಿಜಸತ್ತಮಾಃ ॥ ೪೦ ॥
ತತಃ ಪ್ರೋಚುಃ ಪ್ರಣಮ್ಯೋಚ್ಚೈಸ್ತಾಭ್ಯಾಂ ವಿನಯಪೂರ್ವಕಂ ।
ಹತಾಸ್ತೇ ಯವನಾಃ ಕೃಷ್ಣಾಃ ಸಪುತ್ರಪಶುಬಾಂಧವಾಃ ॥ ೪೧ ॥
ಉದ್ವಾಸಿತಸ್ತಥಾ ಸರ್ವೇ ದೇಶಸ್ತೇಷಾಂ ಸ ವೈ ಮಹಾನ್ ।
ಸಾಂಪ್ರತಂ ದೀಯತಾಂ ಕಶ್ಚಿದಾಹಾರಸ್ತೃಪ್ತಿಹೇತವೇ ।
ನಿವಾಸಾಯ ತತಃ ಸ್ಥಾನಂ ಕಿಂಚಿಚ್ಚಾವೇದ್ಯತಾಂ ಹಿ ನಃ ॥ ೪೨ ॥

---

೩೬. ಅವರೆಲ್ಲರೂ ಆ ಇಬ್ಬರು ದೇವತೆಗಳಿಂದ ಆಜ್ಞೆಯನ್ನು ಪಡೆದು ಸಂತೋಷದಿಂದ ಕಾಲಯವನರೆಡೆಗೆ ಹೋದರು.

೩೭–೩೮. ಬಳಿಕ ಆ ಕಾಲಯವನರು ದೇವಿಯ ಪ್ರಭಾವದಿಂದ ಉತ್ಪನ್ನವಾಗಿ ಭಯಂಕರ ರೂಪವನ್ನು ಧರಿಸಿ, ಕಠಿನವೂ, ವಿಕಾರ ಮುಖಗಳಿಂದ ವಿಕಾರವೂ ಆದ ಬಲವನ್ನು ನೋಡಿ ವಿಷಾದಗೊಂಡ ಮುಖವುಳ್ಳವರಾಗಿ ಭಯದಿಂದ ಓಡುತ್ತ ಆ ದೇವತೆಗಳಿಂದ ಭಕ್ಷಿತರಾದರು.

೩೯. ಆ ದೇವತೆಗಳು ಬಾಲಕರು, ವೃದ್ಧರು, ಸ್ತ್ರೀಯರು ಇವರಿಂದ ಸಹಿತವಾದ ದುರಾತ್ಮರಾದ ಆ ಕಾಲಯವನರ ರಾಜ್ಯವನ್ನು ಭಕ್ಷಿಸಿದರು.

೪೦. ದ್ವಿಜವರ್ಯರೆ! ಅವರೆಲ್ಲರೂ ಹೀಗೆ ಆ ರಾಜ್ಯವನ್ನು ಹಾಳುಮಾಡಿ ಮರಳಿ ತಮ್ಮ ಸ್ಥಾನಕ್ಕೆ ತೆರಳಿದರು.

೪೧. ಅನಂತರ ಆ ಇಬ್ಬರು ದೇವತೆಯರಿಗೆ ವಿನಯದಿಂದ ವಂದಿಸಿ ಇಂತೆಂದರು. , "ದೇವಿಯರೆ! ಆ ಯವನರನ್ನು ಪುತ್ರ, ಪಶು, ಬಾಂಧವರೊಡನೆ ವಧಿಸಿದೆವು.

೪೨. ಅವರ ದೇಶವನ್ನೆಲ್ಲ ಹಾಳುಮಾಡಿದೆವು. ಈಗ ತೃಪ್ತಿಗಾಗಿ ಏನಾದರೂ ಆಹಾರವನ್ನು ಕೊಡಿರಿ. ನಾವೆಲ್ಲರೂ ನೆಲಸಲು ಒಂದು ವಾಸಸ್ಥಾನವನ್ನು ತಿಳಿಸಿರಿ.

ದೇವ್ಯಾವೂಚತುಃ :—

ಮರ್ತ್ಯಲೋಕೇಽತ್ರ ಯಾ ನಾರ್ಯೋ ಗರ್ಭವತ್ಯಃ ಸ್ವಪಂತಿ ಚ ।
ಸಂಧ್ಯಾಕಾಲ ಪ್ರಕಾಶೇ ಚ ತಾಸಾಂ ಗರ್ಭೋಽಸ್ತು ವೋ ದ್ರುತಂ ॥ ೪೩ ॥
ರುದಂತ್ಯೋ ಯಾ ವಿನಿರ್ಯಾಂತಿ ಚತ್ವರೇಷು ತ್ರಿಕೇಷು ಚ ।
ತಾಸಾಂ ಗರ್ಭಸ್ತು ಯುಷ್ಮಾಕಂ ಸಂಪ್ರದತ್ತಃ ಪ್ರಯುಜ್ಯತಾಂ ॥ ೪೪ ॥
ಉಚ್ಛಿಷ್ಟಾಯಾಃ ಪ್ರಸರ್ಪಂತಿ ರಮಂತೇ ಚ ಸ್ವಪಂತಿ ಚ ।
ತಾಸಾಂ ಗರ್ಭಃ ಸಮಸ್ತಾನಾಂ ಯುಷ್ಮಾಕಂ ಭೋಜನಾಯ ವೈ ॥ ೪೫ ॥
ಸೂತಿಕಾಭವನೇ ಯಸ್ಮಿನ್ನುಚ್ಛಿಷ್ಟಂ ಚೋಪಜಾಯತೇ ।
ಸ ಬಾಲಕಸ್ತು ಯುಷ್ಮಾಕಂ ಭೋಜನಾಯ ಪ್ರಕಲ್ಪಿತಃ ॥ ೪೬ ॥
ನ ಷಷ್ಠೀ ಜಾಗರೋ ಯಸ್ಯ ಬಾಲಕಸ್ಯ ಭವಿಷ್ಯತಿ ।
ಸ ಭವಿಷ್ಯತಿ ಭೋಜ್ಯಾಯ ಯುಷ್ಮಾಕಂ ನಾಽತ್ರ ಸಂಶಯಃ ॥ ೪೭ ॥
ನಾಶಂ ಯಾಸ್ಯತಿ ವಾ ಯತ್ರ ಪಾವಕಃ ಸೂತಿಕಾಗೃಹೇ ।
ಸ ಭವಿಷ್ಯತಿ ಭೋಜ್ಯಾಯ ಯುಷ್ಮಾಕಂ ಬಾಲರೂಪಧೃಕ್ ॥ ೪೮ ॥
ಮಾಂಗಲ್ಯೈಃ ಸಂಪರಿತ್ಯಕ್ತಂ ಯದ್ಭವೇತ್ಸೂತಿಕಾಗೃಹಂ ।
ತಸ್ಮಿನ್ ಯಸ್ತಿಷ್ಠತೇ ಬಾಲಃ ಸ ಯುಷ್ಮಾಕಂ ಪ್ರಕಲ್ಪಿತಃ ॥ ೪೯ ॥
ಸಂಧ್ಯಾಯಾಂ ಬಾಲಕಾ ಯೇ ವಾ ಸ್ವಪಂತ್ಯಾಕಾಶದೇಶಗಾಃ ।
ತೇ ಸರ್ವೇ ಭೋಜನಾರ್ಥಾಯ ಯುಷ್ಮಾಕಂ ಸನ್ನಿವೇದಿತಾಃ ॥ ೫೦ ॥

---

೪೩. ದೇವಿಯರು ಹೇಳುತ್ತಾರೆ:—ಈ ಮನುಷ್ಯಲೋಕದಲ್ಲಿ ಪ್ರಕಾಶವಿರುವ ಸಂಧ್ಯಾಕಾಲದಲ್ಲಿ ನಿದ್ರಿಸುವ ಹೆಂಗಸರ ಗರ್ಭವು ನಿಮಗಾಗಲಿ.

೪೪. ಚತ್ವರಗಳಲ್ಲಿಯೂ, ಮೂರು ದಾರಿಗಳು ಸೇರಿದ ಸ್ಥಳಗಳಲ್ಲಿಯೂ ಅಳುತ್ತ ಸಂಚರಿಸುವವರ ಗರ್ಭವನ್ನು ನಿಮಗೆ ಕೊಟ್ಟಿರುವೆವು. ಅದನ್ನು ಭುಂಜಿಸಿರಿ.

೪೫. ಉಚ್ಛಿಷ್ಟರಾಗಿ ಸಂಚರಿಸುವವರೂ, ಕ್ರೀಡಿಸುವವರೂ, ನಿದ್ರಿಸುವವರೂ ಆದ ಸಮಸ್ತ ಹೆಂಗಸರ ಗರ್ಭವೂ ನಿಮ್ಮ ಭೋಜನಕ್ಕಾಗಲಿ.

೪೬—೪೭. ಸೂತಿಕಾಲಯದಲ್ಲಿ ಉಚ್ಛಿಷ್ಟವುಂಟಾದರೆ ಅಲ್ಲಿರುವ ಶಿಶುವು ನಿಮ್ಮ ಭೋಜನಕ್ಕಾಗಲಿ. ಷಷ್ಠೀ ದಿನ ಮಲಗಿ ಎಚ್ಚರಗೊಳ್ಳದ ಬಾಲಕನು ನಿಮ್ಮ ಭೋಜನಕ್ಕಾಗಲಿ.

೪೮. ಯಾವ ಸೂತಿಕಾಗೃಹದಲ್ಲಿ ಅಗ್ನಿಯು ನಾಶವಾಗುವುದೊ ಅಲ್ಲಿ ಬಾಲರೂಪವನ್ನು ಧರಿಸಿರುವ ಆ ಶಿಶುವು ನಿಮ್ಮ ಭೋಜನಕ್ಕಾಗಲಿ.

೪೯. ಮಂಗಳದ್ರವ್ಯಗಳಿಲ್ಲದ ಸೂತಿಕಾಗೃಹದಲ್ಲಿರುವ ಬಾಲಕನು ನಿಮಗಾಗಲಿ.

೫೦. ಸಂಧ್ಯಾಕಾಲದಲ್ಲಿ ಅನಾವರಣ ಸ್ಥಳದಲ್ಲಿ ನಿದ್ರಿಸಿರುವ ಬಾಲಕರು ನಿಮ್ಮ ಭೋಜನಕ್ಕಾಗಿ ಕ್ಲುಪ್ತರಾಗಿರುವರು.

ಯಸ್ಯ ಜನ್ಮ ದಿನೇ ಪ್ರಾಪ್ತೇ ವರ್ಷಾಂತೇ ಕ್ರಿಯತೇ ನ ಚ ।
ಮಾಂಗಲ್ಯಂ ತಸ್ಯ ಯದ್ಗಾತ್ರಂ ತದ್ಯುಷ್ಮಾಕಂ ಪ್ರಕಲ್ಪಿತಂ ॥ ೫೧ ॥
ತೈಲಾಭ್ಯಂಗಂ ನರಃ ಕೃತ್ವಾ ಯಶ್ಚ ಸ್ನಾನಂ ಕರೋತಿ ನ ।
ಸ ದತ್ತೋ ಭೋಜನಾರ್ಥಾಯ ಯುಷ್ಮಾಕಂ ನಾತ್ರ ಸಂಶಯಃ ॥ ೫೨ ॥
ಉಚ್ಛಿಷ್ಟೋ ಯಃ ಪುಮಾಂಸ್ತಿಷ್ಠೇದ್ಯೋ ವಾ ಚತ್ವರಮಧ್ಯಗಃ ।
ಭಕ್ಷಣೀಯಃ ಸ ಸರ್ವಾಭಿರ್ನಿರ್ವಿಕಲ್ಪೇನ ಚೇತಸಾ ॥ ೫೩ ॥
ರಜಸ್ವಲಾಂ ವ್ರಜೇದ್ಯೋ ವಾ ಪುರುಷಃ ಕಾಮಮೋಹಿತಃ ।
ನಗ್ನಃ ಶೇತೇ ತಥಾ ಸ್ನಾತಿ ಭಕ್ಷಣೀಯಃ ಸ ಸತ್ವರಂ ॥ ೫೪ ॥
ದಕ್ಷಿಣಾಭಿಮುಖೋ ರಾತ್ರೌ ಯಶ್ಚ ಸ್ನಾತಿ ವಿಮೂಢಧೀಃ ।
ಶೇತೇ ಚ ಶಯನೇ ಸೋಽಪಿ ಭಕ್ಷಣೀಯಶ್ಚ ಸತ್ವರಂ ॥ ೫೫ ॥
ಉದಙ್ಮುಖಶ್ಚ ಯೋ ರಾತ್ರೌ ದಿವಾ ವಾ ದಕ್ಷಿಣಾಮುಖಃ ।
ಮೂತ್ರೋತ್ಸರ್ಗಂ ಪುರೀಷಂ ವಾ ಪ್ರಕುರ್ಯಾದ್ಭಕ್ಷ್ಯ ಏವ ಸಃ ॥ ೫೬ ॥
ಯಃ ಕುರ್ಯಾದ್ರಜನೀವಕ್ತ್ರೇ ದಧಿಸಕ್ತುಪ್ರಭಕ್ಷಣಂ ।
ಅಂತ್ಯಜಾಭಿಗಮಂ ಚಾಽಥ ಭಕ್ಷಣೀಯೋ ದ್ರುತಂ ಹಿ ಸಃ ॥ ೫೭ ॥

---

೫೧. ವರ್ಷಾಂತ್ಯದಲ್ಲಿ ಹುಟ್ಟಿದ ದಿನ ಮಂಗಳಕಾರ್ಯವನ್ನು ಮಾಡದ ಬಾಲಕನ ಶರೀರವು ನಿಮಗಾಗಲಿ.

೫೨. ತೈಲಾಭ್ಯಂಗವನ್ನು ಮಾಡಿಕೊಂಡು ಸ್ನಾನಮಾಡದ ಮಾನವನನ್ನು ನಿಮಗೆ ಕೊಟ್ಟಿರುವೆವು.

೫೩. ಉಚ್ಛಿಷ್ಟನಾಗಿರುವವನೂ, ಅಂಗಣದಲ್ಲಿರುವವನೂ ಆದ ನರನನ್ನು ವಿಚಾರಮಾಡದೆ ಭಕ್ಷಿಸಿರಿ.

೫೪. ರಜಸ್ವಲೆಯಾದ ಹೆಂಗಸನ್ನು ಕಾಮದಿಂದ ಸೇರುವವನೂ, ಬತ್ತಲೆಯಾಗಿ ಸ್ನಾನಮಾಡುವವನೂ, ಮಲಗುವವನೂ ಆದ ಮನುಷ್ಯನನ್ನು ನೀವು ಭಕ್ಷಿಸಿರಿ.

೫೫. ರಾತ್ರಿಯವೇಳೆಯಲ್ಲಿ ದಕ್ಷಿಣಾಭಿಮುಖವಾಗಿ ಸ್ನಾನಮಾಡುವವನೂ, ಹಾಸಿಗೆಯಲ್ಲಿ ಮಲಗುವವನೂ ಆದ ಮೂಢನನ್ನು ಬೇಗನೆ ಭಕ್ಷಿಸಿರಿ.

೫೬. ರಾತ್ರಿಯವೇಳೆ ಉತ್ತರಾಭಿಮುಖನಾಗಿ, ಹಗಲು ದಕ್ಷಿಣಾಭಿಮುಖನಾಗಿ ಮಲಮೂತ್ರಗಳನ್ನು ವಿಸರ್ಜಿಸುವವನನ್ನು ಭಕ್ಷಿಸಿರಿ.

೫೭. ರಾತ್ರಿಯ ಆರಂಭದಲ್ಲಿ ದಧಿಸಕ್ತುಗಳನ್ನು ಭಕ್ಷಿಸುವವನೂ, ಅಂತ್ಯಜಸ್ತ್ರೀಯನ್ನು ಸೇರುವವನೂ ಆದ ನರನನ್ನು ಬೇಗನೆ ಭಕ್ಷಿಸಿರಿ.

ಸೂತ ಉವಾಚ :—

ಏವಂ ತಾಭ್ಯಾಂ ತದಾ ಪ್ರೋಕ್ತಾ ದೇವತಾಸ್ತಾಃ ಸಮಂತತಃ ।
ಪರಿವಾರ್ಯ ತದಾ ತಸ್ಥುಃ ಸಂಪ್ರಹೃಷ್ಟೇನ ಚೇತಸಾ ॥ ೫೮ ॥
ಏತಸ್ಮಿನ್ನಂತರೇ ರಾಜಾ ಚಮತ್ಕಾರಃ ಪ್ರತಾಪವಾನ್ ।
ಪ್ರಾಸಾದಂ ನಿರ್ಮಮೇ ತಾಭ್ಯಾಂ ಕೈಲಾಸಶಿಖರೋಪಮಂ ॥ ೫೯ ॥
ತತಃ ಪ್ರಭೃತಿ ತೇ ಖ್ಯಾತೇ ಕ್ಷೇತ್ರೇ ತತ್ರ ಮಹೋದಯೇ ।
ಅಂಬಾವೃದ್ಧಾಭಿಧಾನೇ ಚ ಪುರರಕ್ಷಾಪರೇ ಸದಾ ॥ ೬೦ ॥
ಯಃ ಪುಮಾನ್ ಪ್ರಾತರುತ್ಥಾಯ ತಾಭ್ಯಾಂ ಪಶ್ಯತಿ ಚಾನನಂ ।
ತಸ್ಯ ಸಂವತ್ಸರಂ ಯಾವನ್ನಚ ಛಿದ್ರಂ ಪ್ರಜಾಯತೇ ॥ ೬೧ ॥
ವೃದ್ಧ್ಯಾದೌ ಚಾಽಥ ಚಾಂತೇ ವಾ ತಾಭ್ಯಾಂ ಪೂಜಾಂ ಕರೋತಿ ಯಃ ।
ನ ತಸ್ಯ ಜಾಯತೇ ಛಿದ್ರಂ ಕಥಂಚಿದಪಿ ಭೂತಲೇ ॥ ೬೨ ॥
ಯಾತ್ರಾಕಾಲೇ ಪುಮಾನ್ ಯಶ್ಚ ತಾಭ್ಯಾಂ ಪೂಜಾಂ ಸಮಾಚರೇತ್ ।
ಸ ವಾಂಛಿತಫಲಂ ಪ್ರಾಪ್ಯ ಶೀಘ್ರಂ ಸ್ವಗೃಹಮಾಪ್ನುಯಾತ್ ॥ ೬೩ ॥
ಸದಾಷ್ಟಮ್ಯಾಂ ಚತುರ್ದಶ್ಯಾಂ ಯಸ್ತಾಭ್ಯಾಂ ಬಲಿಮಾಹರೇತ್ ।
ಸ ಕಾಮಾನಾಪ್ನುಯಾದಿಷ್ಟಾನಿಹ ಪ್ರೇತ್ಯ ಚ ಸದ್ಗತಿಂ ॥ ೬೪ ॥

---

೫೮. ಸೂತನು ಹೇಳುತ್ತಾನೆ:— ಹೀಗೆ ಆ ದೇವಿಯರು ಹೇಳಲು ಆ ದೇವತೆಯರು ಸಂತುಷ್ಟಚಿತ್ತರಾಗಿ ಸುತ್ತುವರಿದು ನಿಂತರು.

೫೯. ಈ ಸಮಯದಲ್ಲಿ ಪ್ರತಾಪಶಾಲಿಯಾದ ಚಮತ್ಕಾರರಾಜನು ಆ ದೇವಿಯರಿಗೆ ಕೈಲಾಸಶಿಖರದಂತಿರುವ ಪ್ರಾಸಾದವನ್ನು ನಿರ್ಮಿಸಿದನು.

೬೦. ಅದು ಮೊದಲ್ಗೊಂಡು ಆ ಕ್ಷೇತ್ರದಲ್ಲಿ ಅಂಬಾವೃದ್ಧೆಯರೆಂದು ಪ್ರಖ್ಯಾತರಾದ ಆ ದೇವಿಯರು ಪಟ್ಟಣದ ರಕ್ಷಣೆಯಲ್ಲಿ ಆಸಕ್ತರಾದರು.

೬೧. ಬೆಳಗ್ಗೆ ಎದ್ದು ಅವರ ಮುಖವನ್ನು ನೋಡಿದ ಮಾನವನಿಗೆ ಒಂದು ವರ್ಷದವರೆಗೆ ಅನಿಷ್ಟವುಂಟಾಗುವುದಿಲ್ಲ.

೬೨. ವೃದ್ಧಿಯ ಆದಿಯಲ್ಲಿ ಅಥವಾ ಅಂತ್ಯದಲ್ಲಿ ಆ ದೇವಿಯರನ್ನು ಪೂಜಿಸಿದವನಿಗೆ ಭೂಮಿಯಲ್ಲಿ ಅನಿಷ್ಟವುಂಟಾಗುವುದಿಲ್ಲ.

೬೩. ಪ್ರಯಾಣಕಾಲದಲ್ಲಿ ಅವರನ್ನು ಪೂಜಿಸಿದವನು ಇಷ್ಟಾರ್ಥವನ್ನು ಹೊಂದಿ ಬೇಗನೆ ತನ್ನ ಮನೆಯನ್ನು ಸೇರುವನು.

೬೪. ಯಾವಾಗಲೂ ಅಷ್ಟಮೀ ಚತುರ್ದಶೀ ದಿನಗಳಲ್ಲಿ ಅವರಿಗೆ ಬಲಿಯನ್ನು ಅರ್ಪಿಸಿದವನು ಈ ಲೋಕದಲ್ಲಿ ಇಷ್ಟಾರ್ಥವನ್ನೂ, ಮರಣಾನಂತರ ಪರಲೋಕದಲ್ಲಿ ಸದ್ಗತಿಯನ್ನೂ ಹೊಂದುವನು.

ಯೋ ಮಹಾನವಮೀಸಂಜ್ಞೇ ದಿವಸೇ ಶ್ರದ್ಧಯಾನ್ವಿತಃ ॥
ತಾಭ್ಯಾಂ ಸಮಾಚರೇತ್ಪೂಜಾಂ ಸ ಸದಾ ಸ್ಯಾದಕಂಟಕೀ ॥ ೬೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಅಂಬಾವೃದ್ಧಾಮಾಹಾತ್ಮ್ಯವರ್ಣನಂ "
ನಾಮಾಷ್ಟಾಶೀತಿತಮೋಽಧ್ಯಾಯಃ

---

೬೫. ಮಹಾನವಮೀ ದಿನ ಶ್ರದ್ಧೆಯಿಂದ ಅವರನ್ನು ಪೂಜಿಸುವವನು ಯಾವಾಗಲೂ ಕಂಟಕವಿಲ್ಲದವನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಅಂಬಾವೃದ್ಧಾಮಾಹಾತ್ಮ್ಯವರ್ಣನ "ವೆಂಬ
ಎಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಸಪ್ತತಿತಮೋಽಧ್ಯಾಯಃ

### ಶ್ರೀಮಾತುಃ ಪಾದುಕಾಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ಏವಂ ತತ್ರ ಸ್ಥಿತೇ ನಿತ್ಯಂ ತಸ್ಮಿನ್ ಮಾತೃಗಣೇ ದ್ವಿಜಾಃ ।**
**ಬಾಲಕಾನಾಂ ಕ್ಷಯೋ ಜಜ್ಞೇ ಬ್ರಾಹ್ಮಣಾನಾಂ ಗೃಹೇ ಗೃಹೇ ॥ ೧ ॥**
**ತರುಣಾನಾಂ ವಿಶೇಷೇಣ ಚಮತ್ಕಾರಪುರೋತ್ತರೇ ।**
**ಛಿದ್ರಮನ್ವೇಷಮಾಣಾಸ್ತಾ ಭ್ರಮಂತ್ಯಖಿಲದೇವತಾಃ ॥ ೨ ॥**
**ತತಸ್ತೇ ಬ್ರಾಹ್ಮಣಾಃ ಸರ್ವೇ ಜ್ಞಾತ್ವಾ ಛಿದ್ರಸಮುದ್ಭವಂ ।**
**ವಿಘಾತಂ ಬಾಲಕಾನಾಂ ಚ ದೇವತಾಭಿರ್ವಿನಿರ್ಮಿತಂ ॥ ೩ ॥**
**ಅಂಬಾವೃದ್ಧೇ ಸಮಾಸಾದ್ಯ ಪೂಜಯಿತ್ವಾ ಪ್ರಯತ್ನತಃ ।**
**ಪ್ರೋಚುಶ್ಚ ದುಃಖಸಂತಪ್ತಾ ವಿನಯಾಽವನತಾಃ ಸ್ಥಿತಾಃ ॥ ೪ ॥**
**ರಕ್ಷಾರ್ಥಂ ಸರ್ವವಿಪ್ರಾಣಾಂ ಚಮತ್ಕಾರೇಣ ಭೂಭುಜಾ ।**
**ಭವದ್ಭ್ಯಾಂ ನಿರ್ಮಿತಃ ಶ್ರೇಷ್ಠಃ ಪ್ರಾಸಾದೋಽಯಂ ಮನೋಹರಃ ॥ ೫ ॥**
**ಹ್ರಿಯಂತೇ ಬಾಲಕಾ ರಾತ್ರೌ ಛಿದ್ರಂ ಪ್ರಾಪ್ಯ ಸಹಸ್ರಶಃ ।**
**ಯುಷ್ಮದೀಯಾಭಿರೇತಾಭಿರ್ದೇವತಾಭಿಃ ಸಮಂತತಃ ॥ ೬ ॥**

---

### ಕನ್ನಡದ ಅನುವಾದ

#### ಪಾದುಕಾಮಾಹಾತ್ಮ್ಯವರ್ಣನ

೧–೨. ಸೂತನು ಹೇಳುತ್ತಾನೆ:—ದ್ವಿಜರೆ! ಅಲ್ಲಿ ಮಾತೃಗಣಗಳು ಹೀಗಿರಲು ಪ್ರತಿ ಬ್ರಾಹ್ಮಣರ ಮನೆಯಲ್ಲಿ ಬಾಲಕರೂ, ವಿಶೇಷವಾಗಿ ತರುಣರೂ ಮೃತರಾದರು. ಆ ಸಕಲ ದೇವತೆಗಳು ಛಿದ್ರವನ್ನು ಹುಡುಕುತ್ತ ಚಮತ್ಕಾರ ಪುರದಲ್ಲಿ ಸಂಚರಿಸಿದರು.

೩–೪. ಬಳಿಕ ಆ ಬ್ರಾಹ್ಮಣರೆಲ್ಲ ದೇವತೆಗಳಿಂದಾದ ಬಾಲಕರ ನಾಶವನ್ನರಿತು ಅಂಬಾವೃದ್ಧೆಯರೆಡೆಗೆ ಹೋಗಿ ಅವರನ್ನು ಪೂಜಿಸಿ ದುಃಖತಪ್ತರಾಗಿ ವಿನಯದಿಂದ ತಲೆಬಗ್ಗಿಸಿಕೊಂಡಿದ್ದರು.

೫. "ಚಮತ್ಕಾರ ರಾಜನು ಸಕಲ ಬ್ರಾಹ್ಮಣರ ರಕ್ಷಣೆಗಾಗಿ ನಿಮಗೆ ಮನೋಹರವಾದ ಪ್ರಾಸಾದವನ್ನು ನಿರ್ಮಿಸಿದನು.

೬. ನಿಮ್ಮ ದೇವತೆಗಳು ರಾತ್ರಿಯವೇಳೆ ಛಿದ್ರವನ್ನು ಹೊಂದಿ ಸಾವಿರಾರು ಮಂದಿ ಬಾಲಕರನ್ನು ಅಪಹರಿಸುತ್ತಾರೆ.

ಪ್ರಸಾದಃ ಕ್ರಿಯತಾಂ ತಸ್ಮಾದ್ಬ್ರಾಹ್ಮಣಾನಾಂ ಮಹಾತ್ಮನಾಂ ।
ನೋ ಚೇತ್ಪುರಂ ಪರಿತ್ಯಜ್ಯ ಯಾಸ್ಯಾಮೋಽನ್ಯತ್ರ ಭೂತಲೇ ॥ ೭ ॥
ತೇಷಾಂ ತದ್ವಚನಂ ಶ್ರುತ್ವಾ ತತೋಽಂಬಾ ಕೃಪಯಾನ್ವಿತಾ ।
ಹತ್ವಾ ಪಾದಪ್ರಹಾರೇಣ ಮೂರ್ಧ್ನಿ ಚಕ್ರೇ ಗುಹಾಂ ತತಃ ॥ ೮ ॥
ತಸ್ಯಾಂ ಸ್ವೇ ಪಾದುಕೇ ನ್ಯಸ್ಯ ತತಃ ಪ್ರೋವಾಚ ದೇವತಾಃ ।
ಸರ್ವಾಸ್ತಾ ನತಸರ್ವಾಂಗೀರ್ವಿನಯೇನ ಸಮನ್ವಿತಾಃ ॥ ೯ ॥
ಇಮೇ ಮತ್ಪಾದುಕೇ ದಿವ್ಯೇ ಗುಹಾಮಧ್ಯಗತೇ ಸದಾ ।
ಸರ್ವಾಭಿಃ ಸೇವನೀಯೇ ಚ ನ ಗಂತವ್ಯಂ ಬಹಿಃಕ್ವಚಿತ್ ॥ ೧೦ ॥
ಯಾ ಕಾಚಿಲ್ಲೌಲ್ಯಮಾಸ್ಥಾಯ ನಿಷ್ಕ್ರಮಿಷ್ಯತಿ ಮೋಹತಃ ।
ಸಾ ದಿವ್ಯಭಾವನಿರ್ಮುಕ್ತಾ ಶೃಗಾಲೀ ಸಂಭವಿಷ್ಯತಿ ॥ ೧೧ ॥

ದೇವತಾ ಊಚುಃ :—

ಅತ್ರ ಸ್ಥಾನೇ ಮಹಾದೇವಿ ಕೋಽಸ್ಮಾಕಂ ಪ್ರಕರಿಷ್ಯತಿ
ಪೂಜಾಂ ಕೋವಾಽತ್ರ ಚಾಽಹಾರಸ್ತಸ್ಮಾದ್ಬ್ರೂಹಿ ಸುರೇಶ್ವರೀ ॥ ೧೨ ॥

ಅಂಬೋವಾಚ :—

ಅತ್ರಾಗತ್ಯ ವಿನಿರ್ಮುಕ್ತಾ ಯೋಗಿನೋ ಧ್ಯಾನಚಿಂತಕಾಃ ।
ಪೂಜಾಂ ಸಮ್ಯಕ್ಕರಿಷ್ಯಂತಿ ಸರ್ವಾಸಾಂ ಭಕ್ತಿಸಂಯುತಾಃ ॥ ೧೩ ॥

---

೭. ಆದ್ದರಿಂದ ಮಹಾತ್ಮರಾದ ಬ್ರಾಹ್ಮಣರಿಗೆ ಅನುಗ್ರಹಮಾಡಿರಿ. ಹಾಗಿಲ್ಲದಿದ್ದರೆ ಈ ಪಟ್ಟಣವನ್ನು ತ್ಯಜಿಸಿ ಬೇರೆ ಕಡೆಗೆ ಹೋಗುವೆವು."

೮. ಅಂಬೆಯು ಆ ಬ್ರಾಹ್ಮಣರ ಆ ಮಾತನ್ನು ಕೇಳಿ ದಯೆಗೊಂಡು ಪಾದದ ಹೊಡೆತದಿಂದ ಭೂಮಿಯಲ್ಲಿ ಗುಹೆಯನ್ನು ರಚಿಸಿದಳು.

೯. ಅನಂತರ ಆ ಗುಹೆಯಲ್ಲಿ ತನ್ನ ಪಾದುಕೆಗಳನ್ನು ಇಟ್ಟು ವಿನಯದಿಂದ ಕೂಡಿರುವ ಆ ದೇವತೆಗಳನ್ನು ಕುರಿತು ಹೀಗೆಂದಳು.

೧೦. "ನೀವೆಲ್ಲರೂ ಈ ಗುಹೆಯ ನಡುವೆ ಇರುವ ನನ್ನ ಪಾದುಕೆಗಳನ್ನು ಸೇವಿಸಿರಿ. ಹೊರಗೆ ಎಲ್ಲಿಯೂ ಹೋಗಬಾರದು.

೧೧. ಚಾಪಲ್ಯಗೊಂಡು ಮೋಹದಿಂದ ಇಲ್ಲಿಂದ ಹೊರಡುವವಳು ದಿವ್ಯಭಾವರಹಿತಳಾಗಿ ಹೆಣ್ಣು ನರಿಯಾಗುವಳು."

೧೨. ದೇವತೆಗಳು ಹೇಳುತ್ತಾರೆ:—ಮಹಾದೇವಿ! ಇಲ್ಲಿರುವ ನಮ್ಮನ್ನು ಯಾರು ಪೂಜಿಸುತ್ತಾರೆ. ನಮಗೆ ಆಹಾರವಾವುದು? ಹೇಳು.

೧೩. ಅಂಬೆಯು ಹೇಳುತ್ತಾಳೆ:—ಯೋಗಿಗಳು ಇಲ್ಲಿಗೆ ಬಂದು ಎಲ್ಲರನ್ನೂ ಭಕ್ತಿಯಿಂದ ಪೂಜಿಸಿ ಧ್ಯಾನಮಾಡಿದರೆ ಮುಕ್ತರಾಗುವರು.

ಪಾದುಕೇ ಮೇ ಪ್ರಪೂಜ್ಯಾದೌ ಮಾಂಸಮದ್ಯಾದಿಭಿಃ ಕ್ರಮಾತ್ ।
ಅವಾಪ್ಸ್ಯಂತಿ ಚ ಸಂಸಿದ್ಧಿಂ ದುರ್ಲಭಾಮಮರೈರಪಿ ॥ ೧೪ ॥
ತತಸ್ತಥೇತಿ ತಾಃ ಪ್ರೋಚ್ಯ ಗುಹಾಮಧ್ಯೇ ವ್ಯವಸ್ಥಿತಾಃ ।
ಪರಿವಾರ್ಯ ಶುಭೇ ತಸ್ಯಾಃ ಪಾದುಕೇ ಮೋಕ್ಷದಾಯಿಕೇ ॥ ೧೫ ॥
ತತಸ್ತತ್ರ ಸಮಾಗತ್ಯ ಪುರುಷಾ ಅಪಿ ದೂರತಃ ।
ಪ್ರಪೂಜ್ಯ ಪಾದುಕೇ ಸಮ್ಯಙ್ಮೋಕ್ಷಸ್ಥಾಶ್ಚ ತತಃ ಪರಂ ।
ಪ್ರಯಾಂತಿ ಚ ಪರಾಂ ಸಿದ್ಧಿಂ ಜನ್ಮಮೃತ್ಯುವಿವರ್ಜಿತಾಂ ॥ ೧೬ ॥
ಏತಸ್ಮಿನ್ನಂತರೇ ನಷ್ಟಾ ಅಗ್ನಿಷ್ಟೋಮಾದಿಕಾಃ ಕ್ರಿಯಾಃ ।
ತೀರ್ಥಯಾತ್ರಾವ್ರತಾನ್ಯೇವ ಸಂಯಮಾ ನಿಯಮಾಶ್ಚಯೇ ॥ ೧೭ ॥
ಯೇ ಚಾಽಪಿ ಬ್ರಾಹ್ಮಣಾಃ ಶಾಂತಾಃ ಸದಾ ಮದ್ಯಸ್ಯದೂಷಣಂ ।
ಪ್ರಕುರ್ವಂತಿ ಸ್ವಹಸ್ತೇನ ತೇಽಪಿ ಮದ್ಯೈಃ ಪೃಥಗ್ವಿಧೈಃ ॥ ೧೮ ॥
ತರ್ಪಯಂತಿ ತಥಾ ಮಾಂಸೈಸ್ತ್ಯಕ್ತ್ವಾಽಶೇಷಮುಖಕ್ರಿಯಾಃ ।
ಪಾದುಕೇ ಮಾತೃಭಿರ್ಜುಷ್ಟೇ ತಥಾ ಧೂಪಾಽನುಲೇಪನೈಃ ॥ ೧೯ ॥
ಏತಸ್ಮಿನ್ನಂತರೇ ಭೀತಾಃ ಸರ್ವೇದೇವಾಃ ಸವಾಸವಾಃ ।
ದೃಷ್ಟ್ವಾ ಯಜ್ಞಕ್ರಿಯೋಚ್ಛೇದಂ ಕ್ಷುತ್ಪಿಪಾಸಾಸಮಾಕುಲಾಃ ॥ ೨೦ ॥
ಪ್ರೋಚುರ್ಮಹೇಶ್ವರಂ ಗತ್ವಾ ವಿನಯಾಽವನತಾಃ ಸ್ಥಿತಾಃ ।
ಸ್ತುತ್ವಾ ಪೃಥಗ್ವಿಧೈಃ ಸೂಕ್ತೈರ್ವೇದೋಕ್ತೈಃ ಶತರುದ್ರಿಯೈಃ ॥ ೨೧ ॥

---

೧೪. ಮೊದಲು ನನ್ನ ಪಾದುಕೆಗಳನ್ನು ಮಾಂಸಮದ್ಯಾದಿಗಳಿಂದ ಕ್ರಮದಿಂದ ಪೂಜಿಸಿದವರು ದೇವದುರ್ಲಭವಾದ ಸಿದ್ಧಿಯನ್ನು ಪಡೆಯುವರು.

೧೫. ಬಳಿಕ ಆ ದೇವತೆಗಳು ಹಾಗೆಯೇ ಆಗಲೆಂದು ಹೇಳಿ ಗುಹೆಯ ನಡುವೆ ಮೋಕ್ಷವನ್ನೀಯುವ ಆ ಅಂಬೆಯ ಪಾದುಕೆಯ ಸುತ್ತಲೂ ನೆಲೆಸಿದರು.

೧೬. ಅನಂತರ ದೂರದಿಂದ ಜನರು ಅಲ್ಲಿಗೆ ಬಂದು ಪಾದುಕೆಗಳನ್ನೂ ಆ ಮಾತೆಯರನ್ನೂ ಪೂಜಿಸಿ ಜನ್ಮಮರಣಗಳಿಲ್ಲದ ಉತ್ತಮಸಿದ್ಧಿಯನ್ನು ಪಡೆದರು.

೧೭. ಈ ಸಮಯದಲ್ಲಿ ಅಗ್ನಿಷ್ಟೋಮಾದಿ ಕಾರ್ಯಗಳೂ, ತೀರ್ಥಯಾತ್ರೆ, ವ್ರತ, ಸಂಯಮ, ನಿಯಮಗಳೂ ಹಾಳಾದುವು.

೧೮–೧೯. ಮದ್ಯವನ್ನು ದೂಷಿಸುವ ಶಾಂತರಾದ ಬ್ರಾಹ್ಮಣರೂ ಯಜ್ಞಕಾರ್ಯಗಳನ್ನು ತ್ಯಜಿಸಿ ಮಾತೆಯರು ಸೇವಿಸುವ ಪಾದುಕೆಗೆ ತಮ್ಮ ಕೈಯಿಂದ ಮದ್ಯ, ಧೂಪ, ಅನುಲೇಪನಗನ್ನು ಅರ್ಪಿಸಿ ತೃಪ್ತಿಗೊಳಿಸುವರು.

೨೦–೨೧. ಈ ಸಮಯದಲ್ಲಿ ಇಂದ್ರಾದಿದೇವತೆಗಳು ಯಜ್ಞಕಾರ್ಯದ ನಾಶವನ್ನು ನೋಡಿ ಹಸಿವು ಬಾಯಾರಿಕೆಗಳಿಂದ ವ್ಯಾಕುಲಗೊಂಡವರಾಗಿ ಶಿವನೆಡೆಗೆ ಹೋಗಿ ವಿನಯದಿಂದ ಅವನನ್ನು ನಾನಾವಿಧ ಸೂಕ್ತಗಳಿಂದಲೂ, ಶತರುದ್ರಿಯ ಮಂತ್ರಗಳಿಂದಲೂ ಸ್ತುತಿಸಿ ಇಂತೆಂದರು.

ದೇವಾ ಊಚುಃ:—

ಹಾಟಕೇಶ್ವರಜೇ ಕ್ಷೇತ್ರೇ ಪಾದುಕೇ ತತ್ರ ಸಂಸ್ಥಿತೇ ।
ಅಂಬಾಯಾ ಮಾತೃಭಿಃ ಸಾರ್ಧಂ ಗುಹಾಮಧ್ಯೇ ಸುಗುಪ್ತಕೇ ॥ ೨೨ ॥
ಬ್ರಾಹ್ಮಣಾ ಅಪಿ ದೇವೇಶ ಮದ್ಯಮಾಂಸೇನ ಭಕ್ತಿತಃ ।
ತಾಭ್ಯಾಂ ಪೂಜಾಂ ಪ್ರಕುರ್ವಂತಿ ಪ್ರಯಾಂತಿ ಪರಮಾಂ ಗತಿಂ ॥ ೨೩ ॥
ನಷ್ಟಾ ಧರ್ಮಕ್ರಿಯಾ ಸರ್ವಾ ಮರ್ತ್ಯಲೋಕೇಽತ್ರ ಸಾಂಪ್ರತಂ ।
ಅಸ್ಮಾಕಂ ಸಂಕ್ಷಯೋ ಜಾತೋ ಯಜ್ಞಭಾಗಂ ವಿನಾಪ್ರಭೋ . ॥ ೨೪ ॥
ತಸ್ಮಾತ್ತ್ವಂ ಕುರು ದೇವೇಶ ಯಥಾ ಸ್ಯಾತ್ಪಾದುಕಾ ಕ್ಷಯಃ ।
ಪ್ರಭವಂತಿ ಮಖಾ ಭೂಮಾವಸ್ಮಾಕಂ ಸ್ಯುಃ ಪರಾಮುದಃ ॥ ೨೫ ॥

ಶ್ರೀ ಭಗವಾನುವಾಚ:—

ಯಾ ಸಾ ಅಂಬೇತಿ ವಿಖ್ಯಾತಾ ಶಕ್ತಿಃ ಸಾ ಪರಮೇಶ್ವರೀ ।
ಜಗನ್ಮಾತಾಽಕ್ಷಯಾ ಸಾಕ್ಷಾನ್ಮಮಾಽಪಿ ಜನನೀ ಚ ಸಾ ॥ ೨೬ ॥
ತತ್ಕಥಂ ಸಂಕ್ಷಯಸ್ತಸ್ಯಾಃ ಕರ್ತುಂ ಕೇನಾಽಪಿ ಶಕ್ಯತೇ ।
ಮನಸಾಽಪಿ ಮಹಾಭಾಗಾಃ ಪಾದುಕಾನಾಂ ವಿಶೇಷತಃ ॥ ೨೭ ॥
ಪರಂ ತತ್ರ ಕರಿಷ್ಯಾಮಿ ಸುಖೋಪಾಯಂ ಸುರೇಶ್ವರಾಃ ।
ಯುಷ್ಮಭ್ಯಂ ಪಾದುಕಾಭ್ಯಾಂ ಚ ಮಹತ್ವಂ ಯೇನ ಜಾಯತೇ ॥ ೨೮ ॥

---

೨೨. ದೇವತೆಗಳು ಹೇಳುತ್ತಾರೆ:—ಹಾಟಕೇಶ್ವರಜಕ್ಷೇತ್ರದಲ್ಲಿ ಗುಹೆಯ ನಡುವೆ ಮಾತೆಯರೊಡನೆ ಅಂಬೆಯ ಪಾದುಕೆಗಳಿರುವುವು.

೨೩. ಈಶ್ವರ! ಬ್ರಾಹ್ಮಣರೂ ಅವರಿಗೆ ಭಕ್ತಿಯಿಂದ ಮದ್ಯಮಾಂಸಗಳನ್ನರ್ಪಿಸಿ ಪೂಜೆಮಾಡಿ ಉತ್ತಮಗತಿಯನ್ನು ಹೊಂದುವರು.

೨೪. ಈಗ ಭೂಲೋಕದಲ್ಲಿ ಧರ್ಮಕಾರ್ಯಗಳೆಲ್ಲ ನಷ್ಟವಾದುವು. ಯಜ್ಞಭಾಗವಿಲ್ಲದೆ ನಾವು ಸಾಯುತ್ತಿರುವೆವು.

೨೫. ಶಂಕರ! ಆದ್ದರಿಂದ ನೀನು ಆ ಪಾದುಕೆಯು ನಾಶವಾಗುವಂತೆಯೂ, ಯಜ್ಞಗಳು ನಡೆದು ನಮಗೆ ಅತಿಶಯಸಂತೋಷವಾಗುವಂತೆಯೂ ಮಾಡು.

೨೬. ಶ್ರೀ ಭಗವಂತನು ಹೇಳುತ್ತಾನೆ:—ಅಂಬಾ ಎಂಬ ಪರಮೇಶ್ವರನ ಶಕ್ತಿಯು ಜಗನ್ಮಾತೆಯೂ, ನನಗೆ ಜನನಿಯೂ ಆಗಿರುವಳು.

೨೭. ಆದ್ದರಿಂದ ಆ ಅಂಬೆಯನ್ನೂ ವಿಶೇಷವಾಗಿ ಆ ಪಾದುಕೆಗಳನ್ನೂ ಮನಸ್ಸಿನಿಂದಲೂ ನಾಶಗೊಳಿಸಲು ಯಾರು ಸಮರ್ಥರು?

೨೮. ಸುರೇಶ್ವರರೆ! ಆದರೆ ಆ ವಿಷಯದಲ್ಲಿ ನಿಮಗೊಂದು ಸುಖವಾದ ಉಪಾಯವನ್ನು ಮಾಡುವೆನು. ಅದರಿಂದ ನಿಮಗೂ, ಪಾದುಕೆಗಳಿಗೂ ಮಹತ್ವವುಂಟಾಗುವುದು.

ಏವಮುಕ್ತ್ವಾ ತತೋ ಧ್ಯಾನಂ ಚಕ್ರೇ ದೇವೋ ಮಹೇಶ್ವರಃ ।
ವ್ಯಾವೃತ್ಯ ಕಮಲಂ ಹೃತ್ಥ್ಸಮಷ್ಟಪತ್ರಂ ಸಕರ್ಣಿಕಂ ॥ ೨೯ ॥
ತಸ್ಯಾಂತರ್ಗತಮಾಸೀನಮಂಗುಷ್ಠಾಗ್ರಮಿತಂ ಶುಭಂ ।
ದ್ವಾದಶಾರ್ಕಪ್ರಭಂ ಸೂಕ್ಷ್ಮಂ ಸ್ವಮಾತ್ಮಾನಂ ವ್ಯಲೋಕಯತ್ ॥ ೩೦ ॥
ತಸ್ಯೈವಂ ಧ್ಯಾಯಮಾನಸ್ಯ ತೃತೀಯನಯನಾತ್ತತಃ ।
ಶ್ವೇತಾಂಬರಧರಾ ಶುಭ್ರಾ ನಿರ್ಗತಾ ಕನ್ಯಕಾ ಶುಭಾ ॥ ೩೧ ॥
ಅಥ ಸಾ ಪ್ರಾಹ ತಂ ದೇವಂ ಪ್ರಣಿಪತ್ಯ ಮಹೇಶ್ವರಂ ।
ಕಿಮರ್ಥಂ ದೇವ ಸೃಷ್ಟಾಽಸ್ಮಿ ಮಮಾದೇಶಃ ಪ್ರದೀಯತಾಂ ॥ ೩೨ ॥

ಶ್ರೀ ಭಗವಾನುವಾಚ :—

ಹಾಟಕೇಶ್ವರಜೇ ಕ್ಷೇತ್ರೇ ಪಾದುಕೇ ಸಂಸ್ಥಿತೇ ಶುಭೇ ।
ಶ್ರೀಮಾತುರ್ಜಗತಾಂ ಮುಖ್ಯೇ ತಾಭ್ಯಾಂ ಪೂಜಾಂ ತ್ವಮಾಚರ ॥ ೩೩ ॥
ಕನ್ಯಕಾಂ ಸಂಪರಿತ್ಯಜ್ಯ ತವಾಽನ್ವಯವಿವರ್ಧಿತಾಂ ।
ಯಃ ಕರಿಷ್ಯತಿ ತತ್ಪೂಜಾಮಾಹಾರಃ ಸ್ಯಾತ್ಸಮಾತೃಷು ॥ ೩೪ ॥
ಕೌಮಾರಬ್ರಹ್ಮಚರ್ಯೇಣ ತ್ವಯಾಽಪಿ ಚ ಸುಭಕ್ತಿತಃ ।
ತಾಭ್ಯಾಂ ಪೂಜಾ ಪ್ರಕರ್ತವ್ಯಾ ನೋಚೇನ್ನಾಶಮವಾಪ್ಸ್ಯಸಿ ॥ ೩೫ ॥
ತವ ಪೂಜಾಂ ಕರಿಷ್ಯಂತಿ ಯೇ ನರಾ ಭಕ್ತಿತತ್ಪರಾಃ ।
ಮಾತೄಣಾಂ ಸಮ್ಮತಾಸ್ತೇಽಸ್ಯುಃ ಸರ್ವದೈವ ಸುಖಾನ್ವಿತಾಃ ॥ ೩೬ ॥

---

೨೯. ಮಹೇಶ್ವರನು ಹೀಗೆ ಹೇಳಿ ಹೃದಯದಲ್ಲಿರುವ ಅಷ್ಟದಳಕಮಲವನ್ನು ತಿರುಗಿಸಿ ಧ್ಯಾನಿಸಿದನು.

೩೦. ಆ ಕಮಲದ ನಡುವೆ ಕುಳಿತಿರುವವನೂ, ಅಂಗುಷ್ಠಪರಿಮಾಣನೂ, ದ್ವಾದಶಾದಿತ್ಯರಂತೆ ಕಾಂತಿಯುಳ್ಳವನೂ, ಸೂಕ್ಷ್ಮನೂ ಆದ ತನ್ನನ್ನು ನೋಡಿದನು.

೩೧. ಆ ಶಂಕರನು ಹೀಗೆ ಧ್ಯಾನಿಸುತ್ತಿರಲು ಅವನ ಮೂರನೆಯ ಕಣ್ಣಿನಿಂದ ಶ್ವೇತವಸ್ತ್ರಧಾರಿಣಿಯೂ, ಶುಭ್ರಳೂ ಆದ ಕನ್ಯೆಯು ಹೊರಟಳು.

೩೨. ಬಳಿಕ ಆ ಕನ್ಯೆಯು ಮಹೇಶ್ವರನನ್ನು ವಂದಿಸಿ ಸ್ವಾಮಿ! ನನ್ನನ್ನು ಏಕೆ ಸೃಷ್ಟಿಸಿರುವೆ? ಆಜ್ಞಾಪಿಸು ಎಂದಳು.

೩೩–೩೪. ಶ್ರೀ ಭಗವಂತನು ಹೇಳುತ್ತಾನೆ :—ಹಾಟಕೇಶ್ವರಜ ಕ್ಷೇತ್ರದಲ್ಲಿ ಶ್ರೀಮಾತೆಯ ಮಂಗಳಕರಗಳಾದ ಎರಡು ಪಾದುಕೆಗಳು ಇರುವುವು. ಅವುಗಳಿಗೆ ನೀನು ಪೂಜೆಯನ್ನು ಮಾಡು. ನಿನ್ನ ವಂಶದಲ್ಲಿ ಅಭಿವೃದ್ಧಿಯನ್ನು ಹೊಂದಿದ ಕನ್ಯೆಯನ್ನು ತ್ಯಜಿಸಿ ಆ ಪಾದುಕೆಗಳನ್ನು ಪೂಜಿಸಿದವನು ನಿನಗೆ ಆಹಾರವಾಗಲಿ.

೩೫–೩೬. ನೀನೂ ಕೌಮಾರಬ್ರಹ್ಮಚರ್ಯದಿಂದ ಆ ಪಾದುಕೆಗಳನ್ನು ಭಕ್ತಿಯಿಂದ ಪೂಜಿಸು. ಇಲ್ಲದಿದ್ದರೆ ಸಾಯುವೆ. ನಿನ್ನನ್ನು ಭಕ್ತಿಯಿಂದ ಪೂಜಿಸಿದ ಮಾನವರು ಆ ಮಾತೆಯರಿಗೆ ಇಷ್ಟರಾಗಿ ಸುಖಿಗಳಾಗುವರು.

ಏವಮುಕ್ತ್ವಾ ತತಸ್ತಸ್ಯಾ ಮಂತ್ರಮಾರ್ಗಂ ಯಥೋಚಿತಂ ।
ಪೂಜಾಮಾರ್ಗಂ ವಿಶೇಷೇಣ ಕಥಯಾಮಾಸ ವಿಸ್ತರಾತ್ ॥ ೩೭ ॥
ತತೋ ವಿಸರ್ಜಯಾಮಾಸ ದತ್ವಾ ಛತ್ರಾದಿಭೂಷಣಂ ।
ಪ್ರತಿಪತ್ತಿಂ ಮಹಾದೇವಸ್ತಾಂಶ್ಚ ಸರ್ವಾನ್ ಸುರೇಶ್ವರಾನ್ ॥ ೩೮ ॥

ಕುಮಾರ್ಯುವಾಚ :—

ತ್ವಯೈತತ್ಕಥಿತಂ ದೇವ ತ್ವದನ್ವಯ ಸಮುದ್ಭವಾಃ ।
ಕನ್ಯಕಾಃ ಪೂಜಯಿಷ್ಯಂತಿ ಪಾದುಕೇ ತೇ ಸುಶೋಭನೇ ॥ ೩೯ ॥
ಕೌಮಾರಬ್ರಹ್ಮಚರ್ಯೇಣ ಭವಿಷ್ಯತ್ಯನ್ವಯಃ ಕಥಂ ।
ಏತನ್ಮೇ ವಿಸ್ತರಾತ್ಸರ್ವಂ ಯಥಾವದ್ವಕ್ತುಮರ್ಹಸಿ ॥ ೪೦ ॥

ಶ್ರೀ ಭಗವಾನುವಾಚ :—

ಯಸ್ಯಾ ಯಸ್ಯಾಃ ಪ್ರಸನ್ನಾತ್ವಂ ಕನ್ಯಕಾಯಾ ವದಿಷ್ಯಸಿ ।
ಮಂತ್ರಗ್ರಾಮಮಿಮಂ ಸಮ್ಯಕ್ತ್ವದ್ಭಾವಾ ಸಾ ಭವಿಷ್ಯತಿ ॥ ೪೧ ॥
ಏವಂ ಚಾಽನ್ಯಾ ಮಹಾಭಾಗೇ ಪಾರಂಪರ್ಯೇಣ ಕನ್ಯಕಾಃ ।
ತವ ವಂಶೋದ್ಭವಾಃ ಸರ್ವಾಃ ಪ್ರಭವಿಷ್ಯಂತಿ ಮಂತ್ರತಃ ॥ ೪೨ ॥
ತತಃ ಸಾ ತಾಂ ಸಮಾಸಾದ್ಯ ಪಾದುಕಾ ಸಂಭವಾಂ ಗುಹಾಂ ।
ಪೂಜಾಂ ಚಕ್ರೇ ಯಥಾ ನ್ಯಾಯಂ ಯಥೋಕ್ತಂ ತ್ರಿಪುರಾಽರಿಣಾ ॥ ೪೩ ॥

---

೩೭. ಶಂಕರನು ಅವಳನ್ನು ಕುರಿತು ಹೀಗೆ ಹೇಳಿ ಉಚಿತವಾದ ಮಂತ್ರಗಳನ್ನೂ, ಪೂಜಾಮಾರ್ಗಗಳನ್ನೂ ವಿಸ್ತಾರವಾಗಿ ಉಪದೇಶ ಮಾಡಿದನು.

೩೮. ಅನಂತರ ಆ ಶಂಕರನು ಛತ್ರಾದಿ ಭೂಷಣಗಳನ್ನಿತ್ತು ಆ ಸಕಲ ದೇವತೆಗಳನ್ನೂ ಕಳುಹಿಸಿದನು.

೩೯. ಕುಮಾರಿಯು ಹೇಳುತ್ತಾಳೆ:—ಸ್ವಾಮಿ! ನೀನು ನನ್ನ ವಂಶದ ಕನ್ಯೆಯರು ಆ ಪಾದುಕೆಗಳನ್ನು ಪೂಜಿಸುವರೆಂದು ಹೇಳಿರುವೆ.

೪೦. ಕೌಮಾರಬ್ರಹ್ಮಚರ್ಯದಿಂದಿರುವ ನನ್ನ ವಂಶವು ಹೇಗೆ ವೃದ್ಧಿಯಾಗುವುದು? ಅದನ್ನೆಲ್ಲ ವಿಸ್ತಾರವಾಗಿ ಹೇಳು.

೪೧. ಶ್ರೀ ಭಗವಂತನು ಹೇಳುತ್ತಾನೆ:—ನೀನು ಪ್ರಸನ್ನಳಾದ ಯಾವ ಕನ್ಯೆಗೆ ಈ ಮಂತ್ರವನ್ನು ಉಪದೇಶ ಮಾಡುವೆಯೋ, ಅವಳು ನಿನ್ನಿಂದ ಹುಟ್ಟಿದವಳಾಗುವಳು.

೪೨. ಮಹಾಭಾಗಳೆ! ಹೀಗೆ ಕನ್ಯೆಯರು ಪಾರಂಪರ್ಯದಿಂದ ನಿನ್ನ ವಂಶೋದ್ಭವರಾಗುವರು.

೪೩. ಬಳಿಕ ಅವಳು ಪಾದುಕೆಯ ಗುಹೆಯನ್ನು ಹೊಂದಿ ಶಂಕರನು ಹೇಳಿದಂತೆ ಪೂಜೆ ಮಾಡಿದಳು.

ಸೂತ ಉವಾಚ :—

ತದನ್ವಯ ಸಮುತ್ಥಾಯಾಃ ಕನ್ಯಕಾಯಾಃ ಕರೇಣ ಯಃ ।
ಪಾದುಕಾಭ್ಯಾಂ ನರಃ ಪೂಜಾಂ ಪ್ರಕರೋತಿ ಸಮಾಹಿತಃ ।
ಇಹಲೋಕೇ ಸುಖಂ ಪ್ರಾಪ್ಯ ಸಸ್ಯಾತ್ಪ್ರೇತ್ಯ ಸುಖಾನ್ವಿತಃ ॥ ೪೪ ॥
ತಸ್ಮಾತ್ಸರ್ವಪ್ರಯತ್ನೇನ ಕನ್ಯಾಹಸ್ತೇನ ಪಾದುಕೇ ।
ಪೂಜನೀಯೇ ವಿಶೇಷೇಣ ಪೂಜ್ಯಾ ಸಾ ಚಾಽಪಿ ಕನ್ಯಕಾ ॥ ೪೫ ॥
ವಾಂಛದ್ಭಿಃ ಶಾಶ್ವತಂ ಸೌಖ್ಯಮಿಹ ಲೋಕೇ ಪರತ್ರ ಚ ।
ಮಾನವೈರ್ಭಕ್ತಿಸಂಯುಕ್ತೈರಿತ್ಯುವಾಚ ಮಹೇಶ್ವರಃ ॥ ೪೬ ॥
ಏತದ್ವಃ ಸರ್ವಮಾಖ್ಯಾತಂ ಮಾಹಾತ್ಮ್ಯಂ ಪಾದುಕೋದ್ಭವಂ ।
ಶ್ರೀಮಾತುರನುಷಂಗೇಣ ಅಂಬಾದೇವ್ಯಾ ದ್ವಿಜೋತ್ತಮಾಃ ॥ ೪೭ ॥
ಯಶ್ಚೈತಚ್ಛೃಣುಯಾದ್ಭಕ್ತ್ಯಾ ಚತುರ್ದಶ್ಯಾಂ ಸಮಾಹಿತಃ ।
ತಥಾಷ್ಟಮ್ಯಾಂ ವಿಶೇಷೇಣ ಸ ಪ್ರಾಪ್ನೋತಿ ಪರಂ ಪದಂ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರೀಮಾತುಃ ಪಾದುಕಾಮಾಹಾತ್ಮ್ಯವರ್ಣನಂ"
ನಾಮೈಕೋನನವತಿತಮೋಽಧ್ಯಾಯಃ

---

೪೪. ಸೂತನು ಹೇಳುತ್ತಾನೆ:—ಆ ಕನ್ಯೆಕೆಯ ಅನ್ವಯದಲ್ಲಿ ಹುಟ್ಟಿದ ಕನ್ಯೆಯ ಹಸ್ತದಿಂದ ಆ ಪಾದುಕೆಗಳಿಗೆ ಸಾವಧಾನ ಮನಸ್ಸಿನಿಂದ ಪೂಜೆಯನ್ನು ಮಾಡಿಸಿದ ಮಾನವನು ಈ ಲೋಕದಲ್ಲಿ ಸುಖವನ್ನು ಹೊಂದಿ ಪರಲೋಕ ದಲ್ಲಿಯೂ ಸುಖಿಯಾಗುವನು.

೪೫–೪೬. ಆದುದರಿಂದ ಇಹಪರ ಲೋಕಗಳಲ್ಲಿ ಶಾಶ್ವತ ಸೌಖ್ಯವನ್ನು ಬಯ ಸುವ ಮಾನವರು ಭಕ್ತಿಯಿಂದ ಪ್ರಯತ್ನಿಸಿ ಕನ್ಯೆಯ ಹಸ್ತದಿಂದ ಪಾದುಕೆಗಳನ್ನು ಪೂಜಿಸಬೇಕು. ವಿಶೇಷವಾಗಿ ಆ ಕನ್ಯೆಯನ್ನೂ ಆರಾಧಿಸಬೇಕು. ಎಂದು ಮಹೇಶ್ವರನು ಹೇಳಿದನು.

೪೭. ದ್ವಿಜವರ್ಯರೆ! ಶ್ರೀಮಾತೆಯ ಸಂಬಂಧದಿಂದ ಈ ಪಾದುಕೆಯ ಮಾಹಾತ್ಮ್ಯವನ್ನೆಲ್ಲ ನಿಮಗೆ ಹೇಳಿದ್ದೇನೆ.

೪೮. ಅಷ್ಟಮೀ ಚತುರ್ದಶೀ ದಿನಗಳಲ್ಲಿ ಇದನ್ನು ಕೇಳಿದ ಮಾನವನು ಉತ್ತಮ ಸ್ಥಾನವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರೀಮಾತುಃ ಪಾದುಕಾಮಾಹಾತ್ಮ್ಯವರ್ಣನ"ವೆಂಬ
ಎಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವತಿತಮೋಽಧ್ಯಾಯಃ

## ವಸೋರ್ಧಾರಾಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಅಗ್ನಿತೀರ್ಥಂ ತ್ವಯಾ ಪ್ರೋಕ್ತಂ ಬ್ರಹ್ಮತೀರ್ಥಂ ಚ ಯತ್ಪುರಾ ।
ನ ತಯೋಃ ಕಥಿತೋತ್ಪತ್ತಿರ್ಮಾಹಾತ್ಮ್ಯಂ ಚ ಮಹಾಮತೇ ॥ ೧ ॥
ತಸ್ಮಾದ್ವಿಸ್ತರತೋ ಬ್ರೂಹಿ ಏಕೈಕಸ್ಯ ಪೃಥಕ್ ಪೃಥಕ್ ।
ನ ವಯಂ ತೃಪ್ತಿಮಾಪನ್ನಾಃ ಶೃಣ್ವಂತಸ್ತೇ ವಚೋಽಮೃತಂ ॥ ೨ ॥

ಸೂತ ಉವಾಚ:—

ಅತ್ರ ವಃ ಕೀರ್ತಯಿಷ್ಯಾಮಿ ಕಥಾಂ ಪಾತಕನಾಶಿನೀಂ ।
ಅಗ್ನಿತೀರ್ಥ ಸಮುದ್ಭೂತಾಂ ಸರ್ವಸೌಖ್ಯಾವಹಾಂ ಶುಭಾಂ ॥ ೩ ॥
ಸೋಮವಂಶಸಮುದ್ಭೂತಃ ಪ್ರತೀಪೋ ನಾಮ ಭೂಪತಿಃ ।
ಪುರಾಽಸೀಚ್ಛೌರ್ಯ ಸಂಪನ್ನೋ ಬ್ರಹ್ಮಜ್ಞಾನವಿಚಕ್ಷಣಃ ॥ ೪ ॥
ತಸ್ಯ ಪುತ್ರದ್ವಯಂ ಜಜ್ಞೇ ಸರ್ವಲಕ್ಷಣಲಕ್ಷಿತಂ ।
ದೇವಾಽಪಿಃ ಪ್ರಥಮಸ್ತತ್ರ ದ್ವಿತೀಯಃ ಶಂತನುರ್ದ್ವಿಜಾಃ ॥ ೫ ॥
ಅಥೋ ಶಿವಪದಂ ಪ್ರಾಪ್ತೇ ಪ್ರತೀಪೇ ನೃಪಸತ್ತಮೇ ।
ತಪೋಽರ್ಥಂ ರಾಜ್ಯಮುತ್ಸೃಜ್ಯ ದೇವಾಽಪಿರ್ನಿರ್ಯಯೌ ವನಂ ॥ ೬ ॥

---

## ಕನ್ನಡದ ಅನುವಾದ

### ವಸೋರ್ಧಾರಾಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಪ್ರಾಜ್ಞನೆ! ನೀನು ಹಿಂದೆ ಹೇಳಿದ ಅಗ್ನಿತೀರ್ಥ ಬ್ರಹ್ಮತೀರ್ಥಗಳ ಉತ್ಪತ್ತಿ ಮತ್ತು ಮಾಹಾತ್ಮ್ಯಗಳನ್ನು ಹೇಳಲಿಲ್ಲ.

೨. ಆದುದರಿಂದ ಒಂದೊಂದರ ಮಾಹಾತ್ಮ್ಯವನ್ನೂ ಪ್ರತ್ಯೇಕವಾಗಿ ಹೇಳು. ನಿನ್ನ ವಚೋಮೃತವನ್ನು ಕೇಳುತ್ತಿರುವ ನಾವು ತೃಪ್ತರಾಗಲಿಲ್ಲ.

೩. ಸೂತನು ಹೇಳುತ್ತಾನೆ:—ಈ ವಿಷಯದಲ್ಲಿ ಪಾಪವನ್ನು ನಾಶಗೊಳಿಸುವುದೂ, ಸಮಸ್ತ ಸೌಖ್ಯವನ್ನುಂಟುಮಾಡುವುದೂ ಆದ ಅಗ್ನಿತೀರ್ಥದ ಮಾಹಾತ್ಮ್ಯವನ್ನು ಹೇಳುವೆನು.

೪. ಹಿಂದೆ ಶೂರನೂ, ಬ್ರಹ್ಮಜ್ಞಾನನಿಪುಣನೂ ಆದ ಸೋಮವಂಶದ ಪ್ರತೀಪನೆಂಬ ದೊರೆಯಿದ್ದನು.

೫–೬. ಅವನಿಗೆ ಸಕಲ ಲಕ್ಷಣಗಳಿಂದ ಕೂಡಿದ ದೇವಾಪಿ, ಶಂತನು ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಪ್ರತೀಪನು ಮಡಿಯಲು ದೇವಾಪಿಯು ರಾಜ್ಯವನ್ನು ತ್ಯಜಿಸಿ ಕಾಡಿಗೆ ಹೋದನು.

ತತಶ್ಚ ಮಂತ್ರಿಭಿಃ ಸರ್ವೈಃ ಶಂತನುಸ್ತಸ್ಯ ಚಾऽನುಜಃ ।
ಪಿತೃಪೈತಾಮಹೇ ರಾಜ್ಯೇ ಸತ್ವರಂ ಸನ್ನಿಯೋಜಿತಃ ॥ ೭ ॥
ಏತಸ್ಮಿನ್ನಂತರೇ ಶಕ್ರೋ ನ ವವರ್ಷ ಕ್ರುಧಾನ್ವಿತಃ ।
ಯಾವದ್ದ್ವಾದಶವರ್ಷಾಣಿ ತಸ್ಮಿನ್ರಾಜ್ಯಂ ಪ್ರಶಾಸತಿ ॥ ೮ ॥
ಅತಃ ಕೃಚ್ಛ್ರಂ ಗತಃ ಸರ್ವೋ ಲೋಕಃ ಕ್ಷುತ್ಪರಿಪೀಡಿತಃ ।
ಚಾಮುಂಡಾ ಸದೃಶೋ ಜಾತೋ ಯೋ ನ ಮೃತ್ಯುವಶಂ ಗತಃ ॥ ೯ ॥
ಸಂತ್ಯಕ್ತಾಃ ಪತಿಭಿರ್ನಾರ್ಯಃ ಪುತ್ರಾಶ್ಚ ಪಿತೃಭಿರ್ನಿಜೈಃ ।
ಮಾತರಶ್ಚ ತಥಾ ಪುತ್ರೈರ್ಲೋಕೇಷ್ವನ್ಯೇಷು ಕಾ ಕಥಾ ॥ ೧೦ ॥
ದೈವಯೋಗಾತ್ಕ್ವಚಿತ್ಕಿಂಚಿತ್ಕಸ್ಯಚಿದ್ಯದಿ ದೃಶ್ಯತೇ ।
ಸಸ್ಯಂ ಸಿದ್ಧಮಸಿದ್ಧಂ ವಾ ಹ್ರಿಯತೇ ವೀರ್ಯತಃ ಪರೈಃ ॥ ೧೧ ॥
ಶುಷ್ಕಾ ಮಹೀರುಹಾಃ ಸರ್ವೇ ತಥಾ ಯೇ ಚ ಜಲಾಶಯಾಃ ।
ನದ್ಯಶ್ಚ ಸ್ವಲ್ಪತೋಯಾಶ್ಚ ಗಂಗಾದ್ಯಾ ಅಪಿ ಸಂಸ್ಥಿತಾಃ ॥ ೧೨ ॥
ಏವಂ ವೃಷ್ಟೇಃ ಕ್ಷಯೇ ಜಾತೇ ನಷ್ಟೇ ಧರ್ಮಪಥೇ ತಥಾ ।
ಲೋಕೇऽಸ್ಮಿನ್ನಸ್ಥಿಸಂಘಾತೈಃ ಪೂರಿತೇ ಭಸ್ಮನಾವೃತೇ ॥ ೧೩ ॥
ನ ಕಶ್ಚಿದ್ಯಜನಂ ಚಕ್ರೇ ನ ಸ್ವಾಧ್ಯಾಯಂ ನ ಚ ವ್ರತಂ ।
ಏವಮಾಲೋಕ್ಯತೇ ವ್ಯೋಮ ವೃಷ್ಟ್ಯರ್ಥಂ ಕ್ಷುತ್ಸಮಾಕುಲೈಃ ॥ ೧೪ ॥

---

೭. ಅನಂತರ ಎಲ್ಲ ಮಂತ್ರಿಗಳೂ ಬೇಗನೆ ಅವನ ತಮ್ಮನಾದ ಶಂತನುವನ್ನು ವಂಶಪಾರಂಪರ್ಯದಿಂದ ಬಂದ ರಾಜ್ಯದಲ್ಲಿ ನೇಮಿಸಿದರು.

೮–೯. ಆ ಶಂತನುವು ರಾಜ್ಯವನ್ನಾಳುತ್ತಿರಲು, ಇಂದ್ರನು ಕುಪಿತನಾಗಿ ಹನ್ನೆರಡು ವರ್ಷಕಾಲ ಮಳೆಯನ್ನು ಸುರಿಸಲಿಲ್ಲ. ಆದುದರಿಂದ ಜನರೆಲ್ಲ ಹಸಿವಿನಿಂದ ಪೀಡಿತರಾದರು. ಮಡಿದಿರುವವರು ಚಾಮುಂಡಿಯಂತಾದರು.

೧೦. ಗಂಡಂದಿರು ಹೆಂಡತಿಯರನ್ನೂ, ತಂದೆಗಳು ಪುತ್ರರನ್ನೂ, ಮಕ್ಕಳು ತಾಯಂದಿರನ್ನೂ ತ್ಯಜಿಸಿದರು. ಇತರ ಜನರಿನ್ನೇನು.

೧೧. ಜನರು ಎಲ್ಲಿಯಾದರೂ ಸಿದ್ಧ ಅಥವಾ ಅಸಿದ್ಧವಾದ ಆಹಾರ ವಸ್ತುಗಳನ್ನು ನೋಡಿದರೆ ಅದನ್ನು ಅಪಹರಿಸುತ್ತಿದ್ದರು.

೧೨. ಸಮಸ್ತ ವೃಕ್ಷಗಳೂ, ಸರೋವರಗಳೂ ಒಣಗಿದುವು. ಗಂಗಾದಿ ನದಿಗಳೂ ಸ್ವಲ್ಪವಾದ ನೀರುಳ್ಳವಾದುವು.

೧೩–೧೪. ಹೀಗೆ ಮಳೆಯಿಲ್ಲದೆ ಧರ್ಮಮಾರ್ಗವು ನಷ್ಟವಾಗಲು, ಜಗತ್ತು ಮೂಳೆ ಮತ್ತು ಬೂದಿಗಳಿಂದ ತುಂಬಲು ಯಾರೂ ಯಾಗವನ್ನೂ, ವೇದಾಧ್ಯಯನ ವ್ರತಗಳನ್ನೂ ಮಾಡಲಿಲ್ಲ. ಹಸಿವುಗೊಂಡವರು ಆಕಾಶವನ್ನು ಸುಮ್ಮನೆ ನೋಡುತ್ತಿದ್ದರು.

ಏತಸ್ಮಿನ್ನೇವ ಕಾಲೇತು ವಿಶ್ವಾಮಿತ್ರೋ ಮಹಾಮುನಿಃ ।
ಚರ್ಮಾsಸ್ಥಿಶೇಷ ಸರ್ವಾಂಗೋ ಬುಭುಕ್ಷಾರ್ತ ಇತಸ್ತತಃ ॥ ೧೫ ॥
ಪರಿಭ್ರಮಂಸ್ತತಃ ಪ್ರಾಪ್ಯ ಕಂಚಿದ್ಗ್ರಾಮಂ ನಿರುದ್ವಸಂ ।
ಮೃತಮರ್ತ್ಯೇದ್ಭವೈರ್ವ್ಯಾಪ್ತಮಸ್ಥಿಸಂಘೈಃ ಸಮಂತತಃ ॥ ೧೬ ॥
ಅಥ ತತ್ರ ಭ್ರಮನ್ಪ್ರಾಪ್ತಶ್ಚಂಡಾಲಸ್ಯ ನಿವೇಶನಂ ।
ಶೂನ್ಯೇ ಗೋsಸ್ಥಿ ಸಮಾಕೀರ್ಣೇ ದುರ್ಗಂಧೇನ ಸಮಾವೃತೇ ॥ ೧೭ ॥
ಅಥಾsಪಶ್ಯನ್ಮೃತಂ ತತ್ರ ಸಾರಮೇಯಂ ಚಿರೋಷಿತಂ ।
ಸಂಶುಷ್ಕಂ ಗಂಧನಿರ್ಮುಕ್ತಂ ಗೃಹಪ್ರಾಂತೇ ವ್ಯವಸ್ಥಿತಂ ॥ ೧೮ ॥
ಸಮಾದಾಯ ತತಸ್ತಂ ಚ ಆಪದ್ಧರ್ಮಪರಾಯಣಃ ।
ಪ್ರಕ್ಷಾಲ್ಯ ಸಲಿಲೇ ಪಶ್ಚಾತ್ ಪ್ರಚಕರ್ತ ತದಾಮುನಿಃ ॥ ೧೯ ॥
ತತಶ್ಚ ಶ್ರಪಯಾಮಾಸ ಸುಸಮಿದ್ಧೇ ಹುತಾsಶನೇ ।
ಕ್ಷುತ್ಕ್ಷಾಮೋ ಭೋಜನಾರ್ಥಾಯ ತತಃ ಪಾಕಾಗ್ರಮೇವ ಚ ॥ ೨೦ ॥
ಸಮಾದಾಯ ಪಿತೄಂಸ್ತರ್ಪ್ಯಯಾಮವದಗ್ನೌ ಜುಹೋತಿ ಸಃ ।
ತಾವದ್ವಹ್ನಿಃ ಪರಿತ್ಯಜ್ಯ ಸಮಸ್ತಮಪಿ ಭೂತಲಂ ॥ ೨೧ ॥
ಗತಶ್ಚಾsದರ್ಶನಂ ಸದ್ಯಃ ಸರ್ವೇಷಾಂ ಕ್ಷಿತಿವಾಸಿನಾಂ ।
ಚಿತ್ತೇ ಕೋಪಂ ಸಮಾಧಾಯ ಶಕ್ರಸ್ಯೋಪರಿ ಭೂರಿಶಃ ॥ ೨೨ ॥

---

೧೫–೧೬. ಈ ಸಮಯದಲ್ಲಿ ವಿಶ್ವಾಮಿತ್ರಮಹಾಮುನಿಯು ಚರ್ಮ, ಮೂಳೆ ಇವುಗಳು ಮಾತ್ರ ಉಳಿದವನಾಗಿ ಹಸಿವಿನಿಂದ ಇಲ್ಲಿ ಅಲ್ಲಿ ಸಂಚರಿಸುತ್ತ ಮೃತರಾದ ಮಾನವರ ಮೂಳೆಗಳಿಂದ ತುಂಬಿರುವ ಶೂನ್ಯವಾದ ಗ್ರಾಮವನ್ನೊಂದನ್ನು ನೋಡಿದನು.

೧೭. ಬಳಿಕ ಅಲ್ಲಿ ಸಂಚರಿಸುತ್ತ ಅವನು ಗೋವಿನ ಮೂಳೆಗಳಿಂದಲೂ, ದುರ್ಗಂಧದಿಂದಲೂ ತುಂಬಿರುವ ಚಂಡಾಲನ ಮನೆಯನ್ನು ಸೇರಿದನು.

೧೮. ತರುವಾಯ ಅಲ್ಲಿ ಬಹುಕಾಲದ ಹಿಂದಿನಿಂದಲೂ ವಾಸಿಸುತ್ತಿದ್ದುದೂ, ಸತ್ತು ಒಣಗಿರುವುದೂ, ನಿರ್ಗಂಧವೂ, ಮನೆಯ ಹತ್ತಿರವಿರುವುದೂ ಆದ ನಾಯಿಯನ್ನು ಕಂಡನು.

೧೯. ಆಪದ್ಧರ್ಮಾಚರಣೆಯಲ್ಲಿ ನಿರತನಾದ ಮುನಿಯು ಆ ನಾಯಿಯ ಶವವನ್ನು ತೆಗೆದುಕೊಂಡು ನೀರಿನಲ್ಲಿ ಅದನ್ನು ತೊಳೆದು ಕತ್ತರಿಸಿದನು.

೨೦–೨೨. ಅನಂತರ ಹಸಿವುಗೊಂಡು ಭೋಜನಕ್ಕಾಗಿ ಅದನ್ನು ಉರಿಯುತ್ತಿರುವ ಅಗ್ನಿಯಲ್ಲಿ ಬೇಯಿಸಿ ಆ ಪಾಕವನ್ನು ತೆಗೆದುಕೊಂಡು ಪಿತೃಗಳನ್ನು ತೃಪ್ತಿಗೊಳಿಸಿ ಅಗ್ನಿಯಲ್ಲಿ ಹೋಮಿಸುವಷ್ಟರಲ್ಲಿ ಅಗ್ನಿಯು ಇಂದ್ರನಲ್ಲಿ ಕುಪಿತನಾಗಿ ಸಮಗ್ರ ಭೂಮಂಡಲವನ್ನು ತ್ಯಜಿಸಿ ಭೂಲೋಕದಲ್ಲಿ ವಾಸಿಸುವವರಿಗೆಲ್ಲ ಅದೃಶ್ಯನಾದನು.

ಏತಸ್ಮಿನ್ನಂತರೇ ವಹ್ನೌ ಮರ್ತ್ಯಲೋಕಾದ್ವಿನಿರ್ಗತೇ ।
ವಿಶೇಷಾತ್ಪೀಡಿತಾ ಲೋಕಾ ಯೇಽವಶಿಷ್ಟಾ ಧರಾತಲೇ ॥ ೨೩ ॥
ಏತಸ್ಮಿನ್ನಂತರೇ ದೇವಾ ಬ್ರಹ್ಮವಿಷ್ಣು ಪುರಃಸರಾಃ ।
ವಹ್ನೇರನ್ವೇಷಣಾರ್ಥಾಯ ಬಭ್ರಮುರ್ಧರಣೀತಲೇ ॥ ೨೪ ॥
ಅಥ ತೈರ್ಭ್ರಮಮಾಣೈಶ್ಚ ಪ್ರಹೃಷ್ಟೋಽಭೂದ್ಗಜೋ ಮಹಾನ್ ।
ನಿಶ್ವಸನ್ ಪತಿತೋ ಭೂಮೌ ವಹ್ನಿತಾಪಪ್ರಪೀಡಿತಃ ॥ ೨೫ ॥
ಅಥ ದೇವಾ ಗಜಂ ದೃಷ್ಟ್ವಾ ಪಪ್ರಚ್ಛುಸ್ತ್ವರಯಾನ್ವಿತಾಃ ।
ಕಚ್ಚಿತ್ತ್ವಯಾ ಸ ದೃಷ್ಟೋಽತ್ರ ಕಾನನೇ ಪಾವಕೋ ಗಜ ॥ ೨೬ ॥

ಗಜ ಉವಾಚ :—

ವಂಶಸ್ತಂಭೇಽತ್ರ ಸಂಕೀರ್ಣೇ ಸಂಪ್ರವಿಷ್ಟೋ ಹುತಾಶನಃ ।
ಸಾಂಪ್ರತಂ ತೇನ ನಿರ್ದಗ್ಧಃ ಕೃಚ್ಛ್ರಾದತ್ರಾಹಮಾಗತಃ ॥ ೨೭ ॥
ಅಥ ತೈರ್ವೀಕ್ಷಿತಸ್ತಸ್ಮಿನ್ವಂಶಸ್ತಂಭೇ ಹುತಾಶನಃ ।
ದೇವೈರ್ದತ್ವಾ ಗಜೇಂದ್ರಸ್ಯ ಶಾಪಂ ಪಶ್ಚಾದ್ವಿನಿರ್ಗತಃ ॥ ೨೮ ॥
ಯಸ್ಮಾತ್ತ್ವಯಾಽಹಮಾದಿಷ್ಟೋ ದೇವಾನಾಂ ವಾರಣಾಽಧಮ ।
ತಸ್ಮಾತ್ತವಮುಖೇ ಜಿಹ್ವಾ ವಿಪರೀತಾ ಭವಿಷ್ಯತಿ ॥ ೨೯ ॥

---

೨೩. ಇಷ್ಟರಲ್ಲಿ ಅಗ್ನಿಯು ಭೂಲೋಕದಿಂದ ಹೊರಟುಹೋಗಿರುವುದರಿಂದ ಭೂಮಂಡಲದಲ್ಲಿರುವ ಜನರು ಅತ್ಯಂತ ಪೀಡಿತರಾದರು.

೨೪. ಇಷ್ಟರಲ್ಲಿ ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳು ಅಗ್ನಿಯನ್ನು ಹುಡುಕುವುದಕ್ಕಾಗಿ ಭೂಮಿಯಲ್ಲೆಲ್ಲ ಸಂಚರಿಸಿದರು.

೨೫. ಅವರು ಸಂಚರಿಸುತ್ತ ಅಗ್ನಿಯ ಬೇಗೆಯಿಂದ ಪೀಡೆಗೊಂಡು ನಿಟ್ಟುಸಿರು ಬಿಡುತ್ತ ನೆಲದಮೇಲೆ ಬಿದ್ದಿರುವ ಮಹಾಗಜವೊಂದನ್ನು ಕಂಡರು.

೨೬. ಅವರು ಆ ಆನೆಯನ್ನು ಕುರಿತು ನೀನು ಈ ಕಾಡಿನಲ್ಲಿ ಅಗ್ನಿಯನ್ನು ನೋಡಿರುವೆಯಾ? ಬೇಗನೆ ಹೇಳು ಎಂದು ಪ್ರಶ್ನಿಸಿದರು.

೨೭. ಆನೆಯು ಹೇಳುತ್ತದೆ:—ನಾನೀಗ ಈ ಬಿದಿರಿನ ಸಮೂಹದಲ್ಲಿ ಪ್ರವೇಶಿಸಿದ ಅಗ್ನಿಯಿಂದ ದಗ್ಧನಾಗಿ ಅತಿ ಕಷ್ಟದಿಂದ ಇಲ್ಲಿಗೆ ಬಂದೆನು.

೨೮. ದೇವತೆಗಳು ಆ ಬಿದಿರುಗಳನ್ನು ಸುತ್ತಿಕೊಳ್ಳಲು ಅಗ್ನಿಯು ಆನೆಗೆ ಶಾಪವನ್ನಿತ್ತು ಹೊರಟುಹೋದನು.

೨೯. "ಎಲೈ ನೀಚವಾದ ಆನೆಯೆ! ನೀನು ಇಲ್ಲಿರುವ ನನ್ನನ್ನು ದೇವತೆಗಳಿಗೆ ತಿಳಿಸಿರುವುದರಿಂದ ನಿನ್ನ ಬಾಯಿಯಲ್ಲಿ ನಾಲಿಗೆ ತಿರುಗಿಕೊಳ್ಳಲಿ."

ಏವಂ ಶಪ್ತ್ವಾ ಗಜಂ ಶೀಘ್ರಂ ನಷ್ಟೋ ವೈಶ್ವಾನರಃ ಪುನಃ ।
ದೇವಾಶ್ಚಾಽಪಿ ತಥಾ ಪೃಷ್ಠೇ ಸಂಲ್ಲಗ್ನಾಸ್ತದ್ದಿದೃಕ್ಷಯಾ ॥ ೩೦ ॥
ಅಥ ದೃಷ್ಟಃ ಶುಕಸ್ತೈಶ್ಚ ಭ್ರಮಮಾಣೈರ್ಮಹಾವನೇ ।
ಭೋ ಭೋಃ ಶುಕ ತ್ವಯಾವಹ್ನಿರ್ಯದಿ ದೃಷ್ಟೋ ನಿವೇದ್ಯತಾಂ ॥ ೩೧ ॥

ಶುಕ ಉವಾಚ :—

ಯೋಽಯಂ ಸಂದೃಶ್ಯತೇ ದೂರಾಚ್ಛಮೀಗರ್ಭೇ ಚ ಪಿಪ್ಪಲಃ ।
ಏತಸ್ಮಿಂಸ್ತಿಷ್ಠತೇ ವಹ್ನಿರಶ್ವತ್ಥೇ ಸುರಸತ್ತಮಾಃ ॥ ೩೨ ॥
ಅತ್ರಸ್ಥೋ ಯಃ ಕುಲಾಯೋ ಮ ಆಸೀಚ್ಛಿಶುಸಮನ್ವಿತಃ ।
ಸಂದಗ್ಧಸ್ತತ್ಪ್ರತಾಪೇನ ಅಹಂ ಕೃಚ್ಛ್ರಾದ್ವಿನಿರ್ಗತಃ ॥ ೩೩ ॥
ತಚ್ಛ್ರುತ್ವಾ ತೈಃ ಸುರೈಃ ಸರ್ವೈಃ ಶಮೀಗರ್ಭಃ ಸ ತತ್ಕ್ಷಣಾತ್ ।
ವೇಷ್ಟಿತಃ ಪಾವಕೋಽಪ್ಯಾಶು ಶುಕಂ ಶಪ್ತ್ವಾ ವಿನಿರ್ಗತಃ ॥ ೩೪ ॥
ಅಹಂ ಯಸ್ಮಾತ್ತ್ವಯಾ ಪಾಪ ದೇವಾನಾಂ ಸನ್ನಿವೇದಿತಃ ।
ತಸ್ಮಾಚ್ಛುಕ ನ ತೇ ವಾಣೀ ವಿಸ್ಪಷ್ಟಾ ಸಂಭವಿಷ್ಯತಿ ॥ ೩೫ ॥
ಏವಮುಕ್ತ್ವಾ ಜಾತವೇದಾ ದೇವಾದರ್ಶನವಾಂಛಯಾ ।
ಹಾಟಕೇಶ್ವರಜೇ ಕ್ಷೇತ್ರೇ ದೇವಸ್ಯ ಪರಮೇಷ್ಠಿನಃ ॥ ೩೬ ॥
ಜಲಾಶಯಂ ಸುಗಂಭೀರಂ ಪೂರ್ವೋತ್ತರದಿಕ್ಸಂಸ್ಥಿತಂ ।
ದೃಷ್ಟ್ವಾ ತತ್ರ ಪ್ರವಿಷ್ಟಸ್ತು ನಿಭೃತಂ ಚ ಸಮಾಶ್ರಿತಃ ॥ ೩೭ ॥

---

೩೦. ಅಗ್ನಿಯು ಆನೆಗೆ ಹೀಗೆ ಶಾಪವನ್ನಿತ್ತು ಬೇಗನೆ ಅದೃಶ್ಯವಾಗಲು ದೇವತೆಗಳು ಅವನನ್ನು ನೋಡಲಪೇಕ್ಷೆಯಿಂದ ಹಿಂಬಾಲಿಸಿದರು.

೩೧. ಬಳಿಕ ಆ ದೇವತೆಗಳು ಕಾಡಿನಲ್ಲಿ ಸಂಚರಿಸುತ್ತ ಒಂದು ಗಿಳಿಯನ್ನು ನೋಡಿ, "ಎಲೈ ಗಿಳಿಯೆ! ನೀನು ಅಗ್ನಿಯನ್ನು ನೋಡಿದ್ದರೆ ತಿಳಿಸು" ಎಂದರು.

೩೨. ಗಿಳಿಯು ಹೇಳುತ್ತದೆ:—ಸುರವರ್ಯರೆ! ಅಗ್ನಿಯು ಈ ಶಮೀ ವೃಕ್ಷದ ನಡುವೆ ಇರುವ ಅರಳಿಮರದಲ್ಲಿದ್ದಾನೆ.

೩೩. ಇಲ್ಲಿರುವ ಶಿಶುಗಳಿಂದ ಕೂಡಿರುವ ನನ್ನ ಗೂಡು ಆ ಅಗ್ನಿಯ ತಾಪದಿಂದ ಭಸ್ಮವಾಗಲು ನಾನು ಕಷ್ಟದಿಂದ ಅಲ್ಲಿಂದ ಹೊರಟೆನು.

೩೪. ಆ ದೇವತೆಗಳೆಲ್ಲ ಅದನ್ನು ಕೇಳಿ ಕೂಡಲೆ ಆ ಶಮಿಯ ಮಧ್ಯವನ್ನು ಸುತ್ತಿಕೊಂಡರು. ಅಗ್ನಿಯೂ ಬೇಗನೆ ಗಿಳಿಯನ್ನು ಶಪಿಸಿ ಹೊರಟನು.

೩೫. "ಪಾಪಿಯಾದ ಗಿಳಿಯೆ! ನೀನು ನನ್ನನ್ನು ದೇವತೆಗಳಿಗೆ ತಿಳಿಸಿದ್ದರಿಂದ ನಿನ್ನ ಮಾತು ಅಸ್ಪಷ್ಟವಾಗುವುದು."

೩೬–೩೭. ಅಗ್ನಿಯು ಹೀಗೆ ಹೇಳಿ ದೇವತೆಗಳು ಕಾಣದಿರುವಂತೆ ಮಾಡಲು ಹಾಟಕೇಶ್ವರಜ ಕ್ಷೇತ್ರದಲ್ಲಿ ಪೂರ್ವೋತ್ತರ ದಿಕ್ಕಿನಲ್ಲಿರುವ ಅತಿ ಗಂಭೀರವಾದ ಬ್ರಹ್ಮ ಸರೋವರವನ್ನು ನೋಡಿ ಅದನ್ನು ಪ್ರವೇಶಿಸಿ ನಿಶ್ಚಲನಾದನು.

ಏತಸ್ಮಿನ್ನಂತರೇ ತತ್ರ ಮತ್ಸ್ಯ ಕಚ್ಛಪ ದರ್ದುರಾಃ ।
ವಹ್ನಿಪ್ರತಾಪ ನಿರ್ದಗ್ಧಾ ದೃಶ್ಯಂತೇ ಶತಶೋ ಮೃತಾಃ ॥ ೩೮ ॥
ಅಥ ಚೈಕೋಽರ್ಧನಿರ್ದಗ್ಧ ಆಯುಃಶೇಷೇಣ ದರ್ದುರಃ ।
ತಸ್ಮಾಜ್ಜಲಾದ್ವಿನಿಷ್ಕ್ರಾಂತೋ ದೃಷ್ಟೋ ದೇವೈಶ್ಚ ದೂರತಃ ॥ ೩೯ ॥
ಪೃಷ್ಟಶ್ಚ ಬ್ರೂಹಿ ಚೇದ್ಭೇಕ ತ್ವಯಾ ದೃಷ್ಟೋ ಹುತಾಶನಃ ।
ತದರ್ಥಮಿಹ ಸಂಪ್ರಾಪ್ತಾಃ ಸರ್ವೇದೇವಾಃ ಸವಾಸವಾಃ ॥ ೪೦ ॥

ಭೇಕ ಉವಾಚ :—

ಅಸ್ಮಿಂಜಲಾಶಯೇ ವಹ್ನಿಃ ಸಾಂಪ್ರತಂ ಪರ್ಯವಸ್ಥಿತಃ ।
ತಸ್ಯೈತೇ ಜಲಮಧ್ಯಸ್ಥಾ ಮೃತಾ ಭೂರಿ ಜಲೋದ್ಭವಾಃ. ॥ ೪೧ ॥
ಅಸ್ಮಾಕಂ ನಿಧನಂ ಪ್ರಾಪ್ತಂ ಕುಟುಂಬಂ ಸುರಸತ್ತಮಾಃ ।
ಅಹಂ ಕೃಚ್ಛ್ರೇಣ ನಿಷ್ಕ್ರಾಂತ ಏತಸ್ಮಾಜ್ಜಲಸಂಶ್ರಯಾತ್ ॥ ೪೨ ॥
ತಚ್ಛ್ರುತ್ವಾ ತೇ ಸುರಾಃ ಸರ್ವೇ ಸರ್ವತಸ್ತಂ ಜಲಾಶಯಂ ।
ವೇಷ್ಟಯಿತ್ವಾ ಸ್ಥಿತಾಸ್ತತ್ರ ವಹ್ನಿರ್ಭೇಕಂ ಶಶಾಪಹ ॥ ೪೩ ॥
ಯಸ್ಮಾದ್ಭೇಕ ತ್ವಯಾ ಮೂಢ ದೇವೇಭ್ಯೋಽಹಂ ನಿವೇದಿತಃ ।
ತಸ್ಮಾತ್ತ್ವಂ ಭವಿತಾ ನೂನಂ ವಿಜಿಹ್ವೋಽತ್ರ ಧರಾತಲೇ ॥ ೪೪ ॥

---

೩೮. ಇಷ್ಟರಲ್ಲಿ ಆ ಸರೋವರದಲ್ಲಿರುವ ನೂರಾರು ಮೀನು, ಆಮೆ, ಕಪ್ಪೆಗಳು ಅಗ್ನಿಯ ತಾಪದಿಂದ ಭಸ್ಮವಾದವುಗಳಾಗಿ ಕಾಣಿಸಿಕೊಂಡುವು.

೩೯. ಅನಂತರ ಆಯುಸ್ಸು ಸ್ವಲ್ಪ ಇರುವುದರಿಂದ ಅರ್ಧಭಾಗ ಸುಟ್ಟ ಕಪ್ಪೆಯೊಂದು ಆ ನೀರಿನಿಂದ ಹೊರಟಿತು. ದೇವತೆಗಳು ಅದನ್ನು ದೂರದಿಂದ ನೋಡಿದರು.

೪೦. ಆ ದೇವತೆಗಳು, "ಎಲೈ ಕಪ್ಪೆಯೆ! ನೀನು ಅಗ್ನಿಯನ್ನು ನೋಡಿದೆಯಾ? ಅವನಿಗಾಗಿ ಇಂದ್ರಾದಿ ದೇವತೆಗಳಾದ ನಾವು ಇಲ್ಲಿಗೆ ಬಂದಿರುವೆವು" ಎಂದು ಪ್ರಶ್ನೆ ಮಾಡಿದರು.

೪೧. ಕಪ್ಪೆಯು ಹೇಳುತ್ತದೆ :—ಈಗ ಅಗ್ನಿಯು ಈ ಸರೋವರದಲ್ಲಿ ಇರುವನು. ಅದರಿಂದ ನೀರಿನ ನಡುವೆ ಇರುವ ಅನೇಕ ಜಲಜಂತುಗಳು ಮೃತವಾಗಿರುವುವು.

೪೨. ಸುರವರ್ಯರೆ! ನಮ್ಮ ಕುಟುಂಬವು ನಾಶವಾಗಿರುವುದು. ನಾನು ಅತಿ ಕಷ್ಟದಿಂದ ಈ ಕೊಳದಿಂದ ಹೊರಟುಬಂದೆನು.

೪೩. ದೇವತೆಗಳೆಲ್ಲ ಆ ಮಾತನ್ನು ಕೇಳಿ ಆ ಸರೋವರವನ್ನು ಸುತ್ತಿಕೊಂಡು ನಿಂತರು. ಅಗ್ನಿಯು ಕಪ್ಪೆಯನ್ನು ಶಪಿಸಿದನು.

೪೪. "ಮೂಢನಾದ ಕಪ್ಪೆಯೆ! ನೀನು ನನ್ನನ್ನು ದೇವತೆಗಳಿಗೆ ತಿಳಿಸಿದ್ದರಿಂದ ನಾಲಿಗೆಯಿಲ್ಲದವನಾಗುವೆ."

ಏವಮುಕ್ತ್ವಾ ತತಃ ಸ್ಥಾನಾತ್ತತೋ ವಹ್ನಿರ್ವಿನಿರ್ಗತಃ ।
ತಾವತ್ಸ ಬ್ರಹ್ಮಣಾ ಪ್ರೋಕ್ತಃ ಸ್ವಯಮೇವ ಮಹಾತ್ಮನಾ ॥ ೪೫ ॥
ಭೋ ಭೋ ವಹ್ನೇ ಕಿಮರ್ಥಂ ತ್ವಂ ದೇವಾನ್ ದೃಷ್ಟ್ವಾ ಪ್ರಗಚ್ಛಸಿ ।
ತ್ವಮಾದ್ಯಶ್ಚೈವ ಸರ್ವೇಷಾಮೇತೇಷಾಂ ಸಂಸ್ಥಿತೋ ಮುಖಂ ॥ ೪೬ ॥
ತ್ವಯ್ಯಾಹುತಿರ್ಹುತಾ ಸಮ್ಯಗಾದಿತ್ಯಮುಪತಿಷ್ಠತೇ ।
ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥ ೪೭ ॥
ತಸ್ಮಾದ್ಧಾತಾ ವಿಧಾತಾ ಚ ತ್ವಮೇವ ಜಗತಃ ಸ್ಥಿತಃ ।
ಸಂತುಷ್ಟೇ ಧಾರ್ಯತೇ ವಿಶ್ವಂ ತ್ವಯಿ ರುಷ್ಟೇ ವಿನಂಕ್ಷ್ಯತಿ ॥ ೪೮ ॥
ಅಗ್ನಿಷ್ಟೋಮಾದಿಕಾ ಯಜ್ಞಾಸ್ತ್ವಯಿ ಸರ್ವೇ ಪ್ರತಿಷ್ಠಿತಾಃ ।
ಅಥ ಸರ್ವಾಣಿ ಭೂತಾನಿ ಜೀವಂತಿ ತವ ಸಂಶ್ರಯಾತ್ ॥ ೪೯ ॥
ತ್ವಮಗ್ನೇ ಸರ್ವಭೂತಾನಾಮಂತಶ್ಚರಸಿ ಸರ್ವದಾ ।
ತೇನೈವಾನ್ನಂ ಚ ಪಾನಂ ಚ ಜಠರಸ್ಥಂ ಪಚತ್ಯಲಂ ॥ ೫೦ ॥
ತಸ್ಮಾತ್ಕುರು ಪ್ರಸಾದಂ ತ್ವಂ ಸರ್ವೇಷಾಂ ಚ ದಿವೌಕಸಾಂ ।
ಕೋಪಸ್ಯ ಕಾರಣಂ ಬ್ರೂಹಿ ಯತಸ್ತ್ಯಕ್ತ್ವಾ ಪ್ರಗಚ್ಛಸಿ ॥ ೫೧ ॥

---

೪೫. ಅಗ್ನಿಯು ಹೀಗೆ ಹೇಳಿ ಆ ಸ್ಥಳದಿಂದ ಹೊರಟುಹೋದನು. ಅಷ್ಟರಲ್ಲಿ ಬ್ರಹ್ಮನು ಇಂತೆಂದನು.

೪೬. "ಎಲೈ ಅಗ್ನಿಯೆ! ನೀನು ದೇವತೆಗಳನ್ನು ನೋಡಿ ಏತಕ್ಕೆ ಹೊರಟು ಹೋಗುತ್ತೀಯೆ? ನೀನು ಈ ಎಲ್ಲಾ ದೇವತೆಗಳಿಗೆ ಆದ್ಯನೂ, ಮುಖನೂ ಆಗಿರುವೆ.

೪೭. ನಿನ್ನಲ್ಲಿ ಚೆನ್ನಾಗಿ ಹೋಮಿಸಿದ ಆಹುತಿಯು ಸೂರ್ಯನನ್ನು ಸೇರುತ್ತದೆ. ಆ ಆದಿತ್ಯನಿಂದ ಮಳೆಯೂ, ಮಳೆಯಿಂದ ಅನ್ನವೂ, ಅನ್ನದಿಂದ ಪ್ರಜೆಗಳೂ ಹುಟ್ಟುವರು.

೪೮. ಆದುದರಿಂದ ನೀನು ಜಗತ್ತನ್ನು ಸೃಷ್ಟಿಸುವವನೂ, ರಕ್ಷಿಸುವವನೂ ಆಗಿರುವೆ. ನೀನು ಸಂತುಷ್ಟನಾದರೆ ಪ್ರಪಂಚವು ನಿಲ್ಲುವುದು. ಕುಪಿತನಾದರೆ ನಾಶವಾಗುವುದು.

೪೯. ಅಗ್ನಿಷ್ಟೋಮಾದಿ ಯಜ್ಞಗಳೆಲ್ಲ ನಿನ್ನಲ್ಲಿ ನೆಲೆಸಿರುವುವು. ನಿನ್ನ ಆಶ್ರಯದಿಂದಲೇ ಸಕಲ ಪ್ರಾಣಿಗಳೂ ಜೀವಿಸುವುವು.

೫೦. ಅಗ್ನಿಯೆ! ನೀನು ಯಾವಾಗಲೂ ಸಕಲ ಪ್ರಾಣಿಗಳ ಒಳಗೆ ಸಂಚರಿಸುವೆ. ಅದರಿಂದಲೇ ಹೊಟ್ಟೆಯಲ್ಲಿರುವ ಅನ್ನಪಾನಗಳು ಪಚನವಾಗುವುವು.

೫೧. ಆದುದರಿಂದ ಸಮಸ್ತ ದೇವತೆಗಳಲ್ಲಿ ಅನುಗ್ರಹಮಾಡು. ನೀನು ಕೋಪದಿಂದ ಬಿಟ್ಟುಹೋಗುತ್ತಿರುವೆ. ಈ ಕೋಪಕ್ಕೆ ಕಾರಣವನ್ನು ಹೇಳು."

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ದೇವಸ್ಯ ಪರಮೇಷ್ಠಿನಃ ।
ಪ್ರೋವಾಚ ಪ್ರಣಯಾತ್ಕೋಪಂ ಕೃತ್ವಾ ನತ್ವಾ ಚ ಪದ್ಮಜಂ ॥ ೫೨ ॥

ಅಗ್ನಿರುವಾಚ :—

ಅಹಂ ಕೋಪಂ ಸಮಾಧಾಯ ಶಕ್ರಸ್ಯೋಪರಿ ಪದ್ಮಜ ।
ಪ್ರಣಷ್ಟೋ ಜಗದುತ್ಸೃಜ್ಯ ಯಸ್ಮಾತ್ತತ್ಕಾರಣಂ ಶೃಣು ॥ ೫೩ ॥
ಅನಾವೃಷ್ಟ್ಯಾ ಮಹೇಂದ್ರಸ್ಯ ಸಂಜಾತಶ್ಚೌಷಧೀಕ್ಷಯಃ ।
ತತೋಽಸ್ಮ್ಯಹಂ ಶ್ವಮಾಂಸೇನ ವಿಶ್ವಾಮಿತ್ರೇಣ ಯೋಜಿತಃ ॥ ೫೪ ॥
ಏತಸ್ಮಾತ್ಕಾರಣಾನ್ನಷ್ಟೋ ನ ಕಾಮಾನ್ನ ಚ ಸಂಭ್ರಮಾತ್ ।
ಅಭಕ್ಷ್ಯಭಕ್ಷಣಾದ್ಭೀತಃ ಸತ್ಯಮೇತನ್ಮಯೋದಿತಂ ॥ ೫೫ ॥
ತಚ್ಛ್ರುತ್ವಾ ಸ ಚತುರ್ವಕ್ತ್ರಃ ಶಕ್ರಮಾಹ ತತಃ ಪರಂ ।
ಯುಕ್ತಮೇವ ಶಿಖೀ ಪ್ರಾಹ ಕಿಮರ್ಥಂ ನ ಚ ವರ್ಷಸಿ ॥ ೫೬ ॥

ಶಕ್ರ ಉವಾಚ :—

ಜ್ಯೇಷ್ಠಂ ಭ್ರಾತರಮುಲ್ಲಂಘ್ಯ ಶಂತನುಃ ಪೃಥಿವೀಪತಿಃ ।
ಪಿತೃಪೈತಾಮಹೇ ರಾಜ್ಯೇ ಸ ನಿವಿಷ್ಟಃ ಪಿತಾಮಹ ॥ ೫೭ ॥

---

೫೨. ಸೂತನು ಹೇಳುತ್ತಾನೆ:—ಅಗ್ನಿಯು ಬ್ರಹ್ಮನ ಆ ಮಾತನ್ನು ಕೇಳಿ ಆ ಬ್ರಹ್ಮನನ್ನು ವಂದಿಸಿ ಪ್ರೀತಿಯಿಂದ ಕುಪಿತನಾಗಿ ಇಂತೆಂದನು.

೫೩. ಅಗ್ನಿಯು ಹೇಳುತ್ತಾನೆ:—ಎಲೈ ಬ್ರಹ್ಮನೆ! ನಾನು ಇಂದ್ರನಮೇಲೆ ಕೋಪಮಾಡಿಕೊಂಡು ಜಗತ್ತನ್ನು ಬಿಟ್ಟು ಅದೃಶ್ಯನಾದೆನು. ಅದಕ್ಕೆ ಕಾರಣ ವನ್ನು ಕೇಳು.

೫೪. ಇಂದ್ರನು ಮಳೆಯನ್ನು ಸುರಿಸದಿರುವುದರಿಂದ ಓಷಧಿಗಳು ನಷ್ಟ ವಾದುವು. ಆದುದರಿಂದ ವಿಶ್ವಾಮಿತ್ರನು ನಾಯಿಯ ಮಾಂಸವನ್ನು ನನ್ನಲ್ಲಿ ಹೋಮಿಸಿದನು.

೫೫. ಈ ಅಭಕ್ಷ್ಯಭಕ್ಷಣ ಕಾರಣದಿಂದ ಭೀತನಾದ ನಾನು ಅದೃಶ್ಯ ನಾದೆನು. ಇಚ್ಛೆಯಿಂದಾಗಲಿ, ಭಯದಿಂದಾಗಲಿ ಅಲ್ಲ. ನಾನು ಹೇಳಿರುವುದು ನಿಜ.

೫೬. ಬ್ರಹ್ಮನು ಆ ಮಾತನ್ನು ಕೇಳಿ ಇಂದ್ರನನ್ನು ಕುರಿತು, "ಅಗ್ನಿಯು ಉಚಿತವಾಗಿ ಹೇಳುತ್ತಿರುವನು. ನೀನು ಏತಕ್ಕಾಗಿ ಮಳೆ ಸುರಿಸುವುದಿಲ್ಲ" ಎಂದನು.

೫೭. ಇಂದ್ರನು ಹೇಳುತ್ತಾನೆ:—ಪಿತಾಮಹ! ಶಂತನು ರಾಜನು ಅಣ್ಣ ನನ್ನು ಬಿಟ್ಟು ವಂಶಪಾರಂಪರ್ಯದಿಂದ ಬಂದ ರಾಜ್ಯದಲ್ಲಿ ತಾನು ಪಟ್ಟಾಭಿಷಿಕ್ತ ನಾಗಿರುವನು.

ಏತಸ್ಮಾತ್ಕಾರಣಾದ್ವೃಷ್ಟಿಃ ಸನ್ನಿರುದ್ಧಾ ಮಯಾ ಪ್ರಭೋ ।
ತದ್ಬ್ರೂಹಿ ಕಿಂ ಕರೋಮ್ಯದ್ಯ ತ್ವಂ ಪ್ರಮಾಣಂ ಪಿತಾಮಹ ॥ ೫೮ ॥

ಪಿತಾಮಹ ಉವಾಚ :–

ತಸ್ಯಾಕ್ರಮಸ್ಯ ಸಂಪ್ರಾಪ್ತಂ ಪಾಪಂ ತೇನ ಮಹೀಭುಜಾ ।
ಉಪಭುಕ್ತಮವೃಷ್ಟ್ಯಾಽದ್ಯ ತಸ್ಮಾದ್ವೃಷ್ಟಿಂ ಕುರು ದ್ರುತಂ ॥ ೫೯ ॥
ಮದ್ವಾಕ್ಯಾದ್ಯಾತಿ ನೋ ನಾಶಂ ಯಾವದೇತಜ್ಜಗತ್ತ್ರಯಂ ।
ಅಕಾಲೇನಾಽಪಿ ದೇವೇಂದ್ರ ಸಸ್ಯಾಽಭಾವಾದ್ಬುಭುಕ್ಷಯಾ ॥ ೬೦ ॥
ಏತಸ್ಮಿನ್ನಂತರೇ ಶಕ್ರ ಆದಿದೇಶ ತ್ವರಾನ್ವಿತಃ ।
ಪುಷ್ಕರಾವರ್ತಕಾನ್ಮೇಘಾನ್ ವೃಷ್ಟ್ಯರ್ಥಂ ಧರಣೀತಲೇ ॥ ೬೧ ॥
ತೇಽಪಿ ಶಕ್ರಸಮಾದೇಶಾತ್ಸಮಸ್ತ ಧರಣೀತಲಂ ।
ತತ್ಕ್ಷಣಾತ್ಪೂರಯಾಮಾಸುರ್ಗರ್ಜಂತೋ ವಿದ್ಯುದನ್ವಿತಾಃ ॥ ೬೨ ॥
ಅಥಾಽಬ್ರವೀತ್ಪುನರ್ಬ್ರಹ್ಮಾ ದೇವೈಃಸಾರ್ಧಂ ಹುತಾಶನಂ ।
ಅಗ್ನಿಹೋತ್ರೇಷು ವಿಪ್ರಾಣಾಂ ಪ್ರತ್ಯಕ್ಷೋಭವ ಪಾವಕ ।
ಸಾಂಪ್ರತಂ ತ್ವಂ ವರಂ ಮತ್ತಃ ಪ್ರಾರ್ಥಯಸ್ವಾಭಿವಾಂಛಿತಂ ॥ ೬೩ ॥

ಅಗ್ನಿರುವಾಚ :–

ಅಯಂ ಜಲಾಶಯಃ ಪುಣ್ಯೋ ಮನ್ನಾಮ್ನಾ ಪೃಥಿವೀತಲೇ ।
ಖ್ಯಾತಿಂ ಯಾತು ಚತುರ್ವಕ್ತ್ರ ವಹ್ನಿತೀರ್ಥಮಿತಿಸ್ಮೃತಂ ॥ ೬೪ ॥

---

೫೮. ಈ ಕಾರಣದಿಂದ ನಾನು ಮಳೆಯನ್ನು ಸುರಿಸಲಿಲ್ಲ. ಆದುದರಿಂದ ಈಗ ಏನನ್ನು ಮಾಡಲಿ ಹೇಳು. ನೀನೇ ನಿರ್ಣಾಯಕನು.

೫೯–೬೦. ಪಿತಾಮಹನು ಹೇಳುತ್ತಾನೆ:–ಕ್ರಮವನ್ನು ಮೀರಿದ ಆ ರಾಜನು ಮಳೆಯಿಲ್ಲದಿರುವುದರಿಂದ ಕಷ್ಟವನ್ನು ಅನುಭವಿಸಿರುವನು. ಆದುದರಿಂದ ಈಗ ನನ್ನ ಮಾತಿನಂತೆ ಈ ಮೂರು ಲೋಕಗಳ ಪ್ರಾಣಿಗಳು ಆಹಾರವಿಲ್ಲದೆ ಹಸಿವಿನಿಂದ ಅಕಾಲದಲ್ಲಿ ನಾಶವಾಗದಿರುವಷ್ಟರಲ್ಲಿ ಶೀಘ್ರವಾಗಿ ಮಳೆಯನ್ನು ಸುರಿಸು.

೬೧. ಇಷ್ಟರಲ್ಲಿ ಇಂದ್ರನು ತ್ವರೆಯಾಗಿ ಪುಷ್ಕರಾವರ್ತಕವೆಂಬ ಮೇಘಗಳನ್ನು ಭೂಮಿಯಲ್ಲಿ ಮಳೆಯನ್ನು ಸುರಿಸಲು ಆಜ್ಞೆ ಮಾಡಿದನು.

೬೨. ಆ ಮೇಘಗಳೂ ಇಂದ್ರನ ಅಪ್ಪಣೆಯಿಂದ ಕೂಡಲೆ ಗರ್ಜಿಸುತ್ತ ಮಿಂಚುಗಳೊಡನೆ ಭೂಮಿಯನ್ನು ತುಂಬಿದುವು.

೬೩. ಬಳಿಕ ಬ್ರಹ್ಮನು ದೇವತೆಗಳೊಡನೆ ಅಗ್ನಿಯನ್ನು ಕುರಿತು, "ನೀನು ಅಗ್ನಿಹೋತ್ರಗಳಲ್ಲಿ ಬ್ರಾಹ್ಮಣರಿಗೆ ಪ್ರತ್ಯಕ್ಷನಾಗು. ಈಗ ನನ್ನಿಂದ ಇಷ್ಟವಾದ ವರವನ್ನು ಕೇಳಿಕೊ."

೬೪. ಅಗ್ನಿಯು ಹೇಳುತ್ತಾನೆ:—ಪಿತಾಮಹ! ಪುಣ್ಯಕರವಾದ ಈ ಸರೋವರವು ಭೂಮಿಯಲ್ಲಿ ನನ್ನ ಹೆಸರಿನಿಂದ ವಹ್ನಿತೀರ್ಥವೆಂದು ಪ್ರಸಿದ್ಧವಾಗಲಿ.

ಅತ್ರ ಯಃ ಪ್ರಾತರುತ್ಥಾಯ ಸ್ನಾತ್ವಾ ಶ್ರದ್ಧಾಸಮನ್ವಿತಃ ।
ಅಗ್ನಿಸೂಕ್ತಂ ಜಪಿತ್ವಾ ಚ ತ್ವಾಂ ಪ್ರಪಶ್ಯತಿ ಸಾದರಂ ।
ತಸ್ಯ ತುಷ್ಟಿಸ್ತ್ವಯಾ ಕಾರ್ಯಾ ದ್ರುತಂ ಮದ್ವಾಕ್ಯತಃ ಪ್ರಭೋ ॥ ೬೫ ॥

ಶ್ರೀ ಬ್ರಹ್ಮೋವಾಚ :—

ಅತ್ರ ಯಃ ಪ್ರಾತರುತ್ಥಾಯ ಸ್ನಾತ್ವಾ ವೈ ವೇದವಿದ್ದ್ವಿಜಃ ।
ಅಗ್ನಿಸೂಕ್ತಂ ಜಪಿತ್ವಾ ಚ ವೀಕ್ಷಯಿಷ್ಯತಿ ಮಾಂ ತತಃ ॥ ೬೬ ॥
ಅಗ್ನಿಷ್ಟೋಮಸ್ಯ ಯಜ್ಞಸ್ಯ ಸಕಲಂ ಲಪ್ಸ್ಯತೇ ಫಲಂ ।
ಅನೇಕಜನ್ಮಜಂ ಪಾಪಂ ನಾಶಮೇಷ್ಯತಿ ಪಾವಕ ॥ ೬೭ ॥

ಸೂತ ಉವಾಚ :—

ಏವಮುಕ್ತ್ವಾ ಸ ಭಗವಾನ್ವಿರರಾಮ ಪಿತಾಮಹಃ ।
ಪಾವಕೋಽಪಿ ಚ ವಿಪ್ರಾಣಾಮಗ್ನಿಹೋತ್ರೇಷು ಸಂಸ್ಥಿತಃ ॥ ೬೮ ॥
ಏವಂ ತತ್ರ ಸಮುದ್ಭೂತಂ ವಹ್ನಿತೀರ್ಥಂ ಮಹಾದ್ಭುತಂ ।
ತತ್ರ ಸ್ನಾತೋ ನರಃ ಪ್ರಾತಃ ಸರ್ವಪಾಪೈಃ ಪ್ರಮುಚ್ಯತೇ । ॥ ೬೯ ॥

ಅಗ್ನಿರುವಾಚ :—

ಮಮಾತೃಪ್ತಸ್ಯ ಲೋಕೇಶ ತಾವದ್ದ್ವಾದಶ ವತ್ಸರಾನ್
ಕ್ಷುತ್ಪೀಡಾಸಂವೃತೇ ಮರ್ತ್ಯೇ ನ ಪ್ರಾಪ್ತಂ ಕುತ್ರಚಿದ್ಧವಿಃ ॥ ೭೦ ॥

---

೬೫. ಸ್ವಾಮಿ! ಇಲ್ಲಿ ಬೆಳಗ್ಗೆ ಎದ್ದು ಶ್ರದ್ಧೆಯಿಂದ ಮಿಂದು ಅಗ್ನಿಸೂಕ್ತವನ್ನು ಜಪಿಸಿ ನಿನ್ನನ್ನು ನೋಡುವ ಮಾನವನಿಗೆ ನೀನು ನನ್ನ ಮಾತಿನಿಂದ ಬೇಗನೆ ಸಂತುಷ್ಟನಾಗು.

೬೬–೬೭. ಶ್ರೀ ಬ್ರಹ್ಮನು ಹೇಳುತ್ತಾನೆ:—ವೇದಜ್ಞನಾದ ಬ್ರಾಹ್ಮಣನು ಬೆಳಗ್ಗೆ ಎದ್ದು ಇಲ್ಲಿ ಮಿಂದು ಅಗ್ನಿಸೂಕ್ತವನ್ನು ಜಪಿಸಿ ನನ್ನನ್ನು ನೋಡಿದರೆ ಅಗ್ನಿಷ್ಟೋಮ ಯಾಗದ ಸಕಲ ಫಲಗಳನ್ನೂ ಹೊಂದುವನು. ಅವನ ಅನೇಕ ಜನ್ಮದ ಪಾಪವು ನಾಶವಾಗುವುದು.

೬೮. ಸೂತನು ಹೇಳುತ್ತಾನೆ:—ಪೂಜ್ಯನಾದ ಆ ಬ್ರಹ್ಮನು ಹೀಗೆ ಹೇಳಿ ಸುಮ್ಮನಾದನು. ಅಗ್ನಿಯು ಬ್ರಾಹ್ಮಣರ ಅಗ್ನಿಹೋತ್ರಗಳಲ್ಲಿ ನೆಲೆಸಿದನು.

೬೯. ಹೀಗೆ ಅಲ್ಲಿ ಆಶ್ಚರ್ಯಕರವಾದ ಅಗ್ನಿತೀರ್ಥವುಂಟಾಯಿತು. ಅಲ್ಲಿ ಬೆಳಗ್ಗೆ ಮಿಂದ ಮಾನವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

೭೦. ಅಗ್ನಿಯು ಹೇಳುತ್ತಾನೆ:—ಪಿತಾಮಹ! ನಾನು ಹನ್ನೆರಡು ವರ್ಷ ಕಾಲದಿಂದ ತೃಪ್ತಿಗೊಳ್ಳಲಿಲ್ಲ. ಮಾನವರು ಹಸಿವಿನಿಂದ ಪೀಡಿತರಾಗಿರುವುದರಿಂದ ಎಲ್ಲಿಯೂ ಹವಿಸ್ಸು ದೊರೆಯಲಿಲ್ಲ.

ಭವಿಷ್ಯಂತಿ ತಥಾ ಯಜ್ಞಾ ಕಾಲೇನ ಮಹತಾ ವಿಭೋ ।
ಸಂಜಾತೈಃ ಪಶುಭಿರ್ಭೂಯಃ ಸಸ್ಯಾದ್ಯೈರಪರೈರ್ಭುವಿ ॥ ೭೧ ॥
ಶ್ರೀ ಬ್ರಹ್ಮೋವಾಚ :—
ಅತ್ರ ಯೇ ಬ್ರಾಹ್ಮಣಾಃ ಕೇಚಿನ್ನಿವಸಂತಿ ಹುತಾಶನ ।
ವಸೋರ್ಧಾರಾಪ್ರದಾನೇನ ತೇ ತ್ವಾಂ ನಕ್ತಂದಿನಂ ಸದಾ ॥ ೭೨ ॥
ತರ್ಪಯಿಷ್ಯಂತಿ ಸದ್ಭಕ್ತ್ಯಾ ತತಃ ಪುಷ್ಟಿಮವಾಪ್ಸ್ಯಸಿ ।
ತೇಽಪಿ ಕಾಮ್ಯೈರ್ಮನೋಽಭೀಷ್ಟೈರ್ಭವಿಷ್ಯಂತಿ ಸಮನ್ವಿತಾಃ ॥ ೭೩ ॥
ಸಂಕ್ರಾಂತಿಸಮಯೇ ಯೇಷಾಂ ವಸೋರ್ಧಾರಾಪ್ರದಾಯಿನಾಂ ।
ಭವಿಷ್ಯತಿ ಕ್ಷತಂ ವಹ್ನೇ ಹೂಯಮಾನೇ ತವಾನಲ ॥ ೭೪ ॥
ತೇಷಾಂ ಪಾಪಂ ಚ ಯತ್ಕಿಂಚಿಜ್ಜ್ಞಾನತೋಽಜ್ಞಾನತಃ ಕೃತಂ ।
ತದ್ಯಾಸ್ಯತಿ ಕ್ಷಯಂ ಸರ್ವಮಾಜನ್ಮಮರಣಾಂತಿಕಂ ॥ ೭೫ ॥
ತ್ವಯಿ ತುಷ್ಟಿಂಗತೇ ಪಶ್ಚಾದ್ಭವಿಷ್ಯತಿ ಮಹೀಪತಿಃ ।
ಶಿಬಿರ್ನಾಮ ಸುವಿಖ್ಯಾತ ಉಶೀನರಸಮುದ್ಭವಃ ॥ ೭೬ ॥
ಸಕೃತ್ವಾ ಶ್ರದ್ಧಯಾ ಯುಕ್ತಃ ಸತ್ರಂ ದ್ವಾದಶ ವಾರ್ಷಿಕಂ ।
ವಸೋರ್ಧಾರಾಪ್ರದಾನೇನ ವರ್ಷಂ ತ್ವಾಂ ತರ್ಪಯಿಷ್ಯತಿ ।
ಕಲಶಸ್ಯ ಚ ವಕ್ತ್ರೇಣಾವಿಚ್ಛಿನ್ನೇನ ದಿವಾನಿಶಂ ॥ ೭೭ ॥

---

೭೧. ಬಹುಕಾಲದ ಮೇಲೆ ಹುಟ್ಟಿದ ಪಶುಗಳಿಂದಲೂ, ಇತರ ಸಸ್ಯಾದಿಗಳಿಂದಲೂ ಯಜ್ಞಗಳುಂಟಾಗುವುವು.

೭೨–೭೩. ಶ್ರೀ ಬ್ರಹ್ಮನು ಹೇಳುತ್ತಾನೆ:—ಅಗ್ನಿಯೆ! ಇಲ್ಲಿ ವಾಸಿಸುವ ಬ್ರಾಹ್ಮಣರು ಹಗಲು ರಾತ್ರಿ ಪೂರ್ಣಾಹುತಿಯನ್ನು ಕೊಡುವುದರಿಂದ ನಿನ್ನನ್ನು ತೃಪ್ತಿಗೊಳಿಸುವರು. ಅವರಿಂದ ನೀನು ಪುಷ್ಟಿಗೊಳ್ಳುವೆ. ಆ ಬ್ರಾಹ್ಮಣರೂ ತಮ್ಮ ಇಷ್ಟಾರ್ಥಗಳನ್ನು ಪಡೆಯುವರು.

೭೪–೭೫. ನಿನ್ನಲ್ಲಿ ಹೋಮಿಸಿ ನಿನ್ನ ಹಸಿವನ್ನು ನಿವಾರಿಸಿ ವಸುಧಾರೆಯನ್ನು ಕೊಡುವವರ ಜನ್ಮ ಮೊದಲ್ಗೊಂಡು ಮರಣಕಾಲದವರಿಗೆ ಜ್ಞಾನಾಜ್ಞಾನದಿಂದ ಮಾಡಿದ ಪಾಪವು ನಾಶವಾಗುವುದು.

೭೬. ಉಶೀನರಸಂಭೂತನಾದ ಶಿಬಿಯೆಂಬುವನು ನಿನ್ನನ್ನು ಸಂತೋಷಗೊಳಿಸಿ ರಾಜನಾಗುವನು.

೭೭. ಅವನು ಶ್ರದ್ಧೆಯಿಂದ ಹನ್ನೆರಡು ವರ್ಷದ ಯಜ್ಞವನ್ನು ಮಾಡಿ ಒಂದು ವರ್ಷ ವಸುಧಾರೆಯನ್ನು ಕೊಡುವುದರಿಂದ ನಿನ್ನನ್ನು ತೃಪ್ತಿಗೊಳಿಸುವನು.

ತತಸ್ತುಷ್ಟಿಂ ಪರಾಂ ಪ್ರಾಪ್ಯ ಪರಾಂ ಪುಷ್ಟಿಮವಾಪ್ಸ್ಯಸಿ ।
ಪೂಜ್ಯಮಾನೋ ಧರಾಪೃಷ್ಠೇ ಸರ್ವೈರ್ವೇದವಿದಾಂ ವರೈಃ ॥ ೭೮ ॥
ಅದ್ಯ ಪ್ರಭೃತಿ ಯತ್ಕಿಂಚಿತ್ಕರ್ಮ ಚಾಽತ್ರ ಭವಿಷ್ಯತಿ ।
ಶಾಂತಿಕಂ ಪೌಷ್ಟಿಕಂ ವಾಽಪಿ ವಸೋರ್ಧಾರಾ ಸಮನ್ವಿತಂ ।
ಸಂಭವಿಷ್ಯತಿ ತತ್ಸರ್ವಂ ತವ ತೃಪ್ತಿಕರಂ ಪರಂ ॥ ೭೯ ॥
ಅಪಿ ಯದ್ವೈಶ್ವದೇವೀಯಂ ಕರ್ಮಕಿಂಚಿದ್ದ್ವಿಜನ್ಮನಾಂ ।
ವಸೋರ್ಧಾರಾವಿಹೀನಂ ಚ ನಿಷ್ಫಲಂ ಸಂಭವಿಷ್ಯತಿ ॥ ೮೦ ॥
ಯಸ್ಮಾದ್ಭವತಿ ಸಂಪೂರ್ಣಂ ಕರ್ಮ ಯಜ್ಞಾದಿಕಂ ಹಿ ತತ್ ।
ಶಾಂತಿಕಂ ವೈಶ್ವದೇವಂ ಚ ಪೂರ್ಣಾಹುತಿರಿಹೋಚ್ಯತೇ ॥ ೮೧ ॥
ಯಃ ಸಮ್ಯಕ್ ಶ್ರದ್ಧಯಾ ಯುಕ್ತೋ ವಸೋರ್ಧಾರಾಂ ಪ್ರದಾಸ್ಯತಿ ।
ಸ ಕಾಮಂ ಮನಸಾ ಧ್ಯಾತಂ ಸಮವಾಪ್ಸ್ಯತಿ ಕೃತ್ಸ್ನಶಃ ॥ ೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಸೋರ್ಧಾರಾಮಾಹಾತ್ಮ್ಯವರ್ಣನಂ"
ನಾಮ ನವತಿತಮೋಽಧ್ಯಾಯಃ

---

೭೮. ಅದರಿಂದ ನೀನು ಸಂತುಷ್ಟನಾಗಿ ಅವನಿಯಲ್ಲಿ ವೇದಜ್ಞರಲ್ಲಿ ಉತ್ತಮರಾದ ಬ್ರಾಹ್ಮಣರಿಂದ ಪೂಜಿಸಲ್ಪಡುತ್ತ ಪುಷ್ಟನಾಗುವೆ.

೭೯. ಈ ಲೋಕದಲ್ಲಿ ಇದು ಮೊದಲ್ಗೊಂಡು ವಸುಧಾರಾ ದಾನಪೂರ್ವಕವಾಗಿ ನಡೆಯುವ ಶಾಂತಿಕ ಪೌಷ್ಟಿಕ ಕರ್ಮಗಳು ನಿನಗೆ ತೃಪ್ತಿಯನ್ನುಂಟು ಮಾಡುವುವು.

೮೦. ಬ್ರಾಹ್ಮಣರು ಮಾಡುವ ವೈಶ್ವದೇವವೂ ವಸುಧಾರಾ ದಾನದಿಂದ ರಹಿತವಾದರೆ ನಿಷ್ಫಲವಾಗುವುದು.

೮೧. ಈ ವಸುಧಾರೆಯಿಂದ ಶಾಂತಿಕ ವೈಶ್ವದೇವ ಕರ್ಮಗಳು ಸಂಪೂರ್ಣವಾಗುವುದರಿಂದ ಇದು ಪೂರ್ಣಾಹುತಿಯೆನ್ನಿಸಿಕೊಳ್ಳುವುದು.

೮೨. ಶ್ರದ್ಧೆಯಿಂದ ಪೂರ್ಣಾಹುತಿಯನ್ನು ಕೊಡುವವನು ಮನಸ್ಸಿನಲ್ಲಿ ಚಿಂತಿಸಿದ್ದನ್ನು ಸಂಪೂರ್ಣವಾಗಿ ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಹಾತ್ಮ್ಯದಲ್ಲಿ "ವಸೋರ್ಧಾರಾಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕನವತಿತಮೋಽಧ್ಯಾಯಃ

### ಅಗ್ನಿತೀರ್ಥೋತ್ಪತ್ತಿವರ್ಣನಂ

ಸೂತ ಉವಾಚ :—

ಏವಮುಕ್ತ್ವಾ ಸ ಭಗವಾನ್ ವಿರರಾಮ ಪಿತಾಮಹಃ ।
ಸಂತೋಷ್ಯ ಪಾವಕಂ ಕ್ರುದ್ಧಂ ಸ್ವಯಮೇವ ದ್ವಿಜೋತ್ತಮಾಃ ॥ ೧ ॥
ತತಃ ಸರ್ವೈಃ ಸುರೈಃ ಸಾರ್ಧಂ ಶಕ್ರವಿಷ್ಣುಶಿವಾದಿಭಿಃ ।
ಜಗಾಮ ಬ್ರಹ್ಮಲೋಕಂ ಚ ದೇವಾಸ್ತೇ ಚ ನಿಜಂ ಪದಂ ॥ ೨ ॥
ಪಾವಕೋಽಪಿ ದ್ವಿಜೇಂದ್ರಾಣಾಮಗ್ನಿಹೋತ್ರೇಷು ಸಂಸ್ಥಿತಃ ।
ಹವಿರ್ಜಗ್ರಾಹ ವಿಧಿವದ್ವಸೋರ್ಧಾರೋದ್ಭವಂ ತಥಾ ॥ ೩ ॥
ಏವಂ ತತ್ರ ಸಮುದ್ಭೂತಮಗ್ನಿತೀರ್ಥಮನುತ್ತಮಂ ।
ಯತ್ರ ಸ್ನಾತೋ ನರಃ ಪ್ರಾತರ್ಮುಚ್ಯತೇ ದಿನಜಾದಘಾತ್ ॥ ೪ ॥
ಅಥ ಸಂಪ್ರಸ್ಥಿತಾನ್ ದೃಷ್ಟ್ವಾ ತಾನ್ ದೇವಾನ್ ಸ್ವಾಶ್ರಮಂ ಪ್ರತಿ ।
ಗಜೇಂದ್ರಶುಕಮಂಡೂಕಾಸ್ತೇ ಪ್ರೋಚುರ್ದುಃಖಸಂಯುತಾಃ ॥ ೫ ॥
ಯುಷ್ಮತ್ಕೃತೇ ವಯಂ ಶಪ್ತಾಃ ಪಾವಕೇನ ಸುರೇಶ್ವರಾಃ ।
ತಸ್ಮಾಜ್ಜಿಹ್ವಾಕೃತೇಽಸ್ಮಾಕಮುಪಾಯಶ್ಚಿಂತ್ಯತಾಮಪಿ ॥ ೬ ॥

---

## ಕನ್ನಡದ ಅನುವಾದ

### ಅಗ್ನಿತೀರ್ಥೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಬ್ರಹ್ಮನು ಹೀಗೆ ಹೇಳಿ ಕುಪಿತನಾದ ಅಗ್ನಿಯನ್ನು ತಾನೇ ಸಂತೋಷಗೊಳಿಸಿ ಸುಮ್ಮನಾದನು.

೨. ಅನಂತರ ಬ್ರಹ್ಮನು ಇಂದ್ರ, ವಿಷ್ಣು, ಶಿವ ಮೊದಲಾದವರೊಡನೆ ಬ್ರಹ್ಮಲೋಕಕ್ಕೆ ತೆರಳಿದನು. ಆ ದೇವತೆಗಳು ತಮ್ಮ ಸ್ಥಾನಕ್ಕೆ ಹೋದರು.

೩. ಅಗ್ನಿಯೂ ಬ್ರಾಹ್ಮಣರ ಅಗ್ನಿಹೋತ್ರಗಳಲ್ಲಿ ನೆಲೆಸಿ ವಿಧಿಯಂತೆ ವಸುಧಾರೆಯ ಹವಿಸ್ಸನ್ನು ಸ್ವೀಕರಿಸಿದನು.

೪. ಹೀಗೆ ಅಲ್ಲಿ ಉತ್ತಮವಾದ ಅಗ್ನಿತೀರ್ಥವುಂಟಾಯಿತು. ಇಲ್ಲಿ ಬೆಳಗಿನಿಂದ ಮಾನವನು ಒಂದು ದಿನದಲ್ಲಿ ಮಾಡಿದ ಪಾಪದಿಂದ ಮುಕ್ತನಾಗುವನು.

೫. ಬಳಿಕ ತಮ್ಮ ಆಶ್ರಮಕ್ಕೆ ಹೊರಟ ಆ ದೇವತೆಗಳನ್ನು ಕುರಿತು ಆನೆ, ಕಪ್ಪೆ, ಗಿಳಿಗಳು ದುಃಖಗೊಂಡು ಇಂತೆಂದುವು.

೬. "ಎಲೈ ದೇವತೆಗಳೆ! ನಿಮಗಾಗಿ ಪ್ರಯತ್ನಿಸಿದ ನಮ್ಮನ್ನು ಅಗ್ನಿಯು ಶಪಿಸಿರುವನು. ಆದುದರಿಂದ ನಮ್ಮ ನಾಲಿಗೆಗಾಗಿ ಉಪಾಯವನ್ನು ಆಲೋಚಿಸಿರಿ."

ದೇವಾ ಊಚುಃ:—

ವಿಪರೀತಾಽಪಿ ತೇ ಜಿಹ್ವಾ ಯಥಾಽನ್ಯೇಷಾಂ ಗಜೋತ್ತಮ ।
ಕಾರ್ಯಕ್ಷಮಾ ನ ಸಂದೇಹೋ ಭವಿಷ್ಯತಿ ವಿಶೇಷತಃ ॥ ೭ ॥
ತಥಾ ಯೂಯಂ ನರೇಂದ್ರಾಣಾಂ ಮಂದಿರೇಷು ವ್ಯವಸ್ಥಿತಾಃ ।
ಬಹುಮಾನಸಮಾಯುಕ್ತಾ ಮೃಷ್ಟಾನ್ನಂ ಭಕ್ಷಯಿಷ್ಯಥ ॥ ೮ ॥
ಯಥಾ ಚ ಶುಕ ತೇ ಜಿಹ್ವಾ ಕೃತಾ ಮಂದಾ ಹವಿರ್ಭುಜಾ ।
ತಥಾಽಪಿ ಭೂಮಿಪಾಲಾನಾಂ ಶಂಸನೀಯಾ ಭವಿಷ್ಯತಿ ॥ ೯ ॥
ಶ್ರೀಮತಾಂ ಚ ತಥಾಽನ್ಯೇಷಾಮಸ್ಮದೀಯಪ್ರಸಾದತಃ ।
ತ್ವಂ ಚ ಮಂಡೂಕ ಯತ್ತೇನ ವಿಜಿಹ್ವೋ ವಹ್ನಿನಾ ಕೃತಃ ।
ತದ್ಭವಿಷ್ಯತಿ ತೇ ಶಬ್ದೋ ವಿಜಿಹ್ವಸ್ಯಾಽಪಿ ದೀರ್ಘಗಃ ॥ ೧೦ ॥
ಏವಮುಕ್ತ್ವಾಽಥ ತೇ ದೇವಾಃ ಸ್ವಂಸ್ಥಾನಂ ಪ್ರಸ್ಥಿತಾಸ್ತತಃ ।
ತೇಷಾಮನುಗ್ರಹಂ ಕೃತ್ವಾ ಕೃಪಯಾ ಪರಯಾ ಯುತಾಃ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಗ್ನಿತೀರ್ಥೋತ್ಪತ್ತಿವರ್ಣನಂ"ನಾಮೈಕನವತಿತಮೋಽಧ್ಯಾಯಃ

---

೭. ದೇವತೆಗಳು ಹೇಳುತ್ತಾರೆ:—ಗಜೋತ್ತಮನೆ! ನಿನ್ನ ನಾಲಿಗೆಯು ವ್ಯತ್ಯಾಸಗೊಂಡಿದ್ದರೂ ಇತರ ಪ್ರಾಣಿಗಳಂತೆಯೇ ಅತಿಶಯವಾಗಿ ಕಾರ್ಯಕ್ಕೆ ಯೋಗ್ಯವಾಗುವುದು.

೮. ಹಾಗೆಯೇ ನೀವು ರಾಜರ ಅರಮನೆಗಳಲ್ಲಿ ವಾಸಿಸುತ್ತ ಮಾನ್ಯರಾಗಿ ಮೃಷ್ಟಾನ್ನವನ್ನು ಭುಂಜಿಸುವಿರಿ.

೯. ಗಿಳಿಯೆ! ಅಗ್ನಿಯು ನಿನ್ನ ನಾಲಿಗೆಯನ್ನು ಮಂದವಾಗಿ ಮಾಡಿದ್ದರೂ ಅದು ರಾಜರ ಸ್ತೋತ್ರಕ್ಕೆ ಅರ್ಹವಾಗುವುದು.

೧೦. ಕಪ್ಪೆಯೆ! ಅಗ್ನಿಯು ನಿನ್ನನ್ನು ನಾಲಿಗೆಯಿಲ್ಲದವನನ್ನಾಗಿ ಮಾಡಿದ್ದರೂ ನಿನ್ನ ಶಬ್ದವು ದೊಡ್ಡದಾಗುವುದು.

೧೧. ದೇವತೆಗಳು ಹೀಗೆ ದಯೆಗೊಂಡು ಆ ಆನೆ ಮೊದಲಾದುವುಗಳಿಗೆ ಅನುಗ್ರಹಮಾಡಿ ತಮ್ಮ ಸ್ಥಳಕ್ಕೆ ತೆರಳಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಗ್ನಿತೀರ್ಥೋತ್ಪತ್ತಿವರ್ಣನ"ವೆಂಬ
ತೊಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿನವತಿತಮೋಽಧ್ಯಾಯಃ

### ಬ್ರಹ್ಮಕುಂಡಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಗ್ನಿತೀರ್ಥಸ್ಯ ಮಾಹಾತ್ಮ್ಯಮೇತದ್ವಃ ಪರಿಕೀರ್ತಿತಂ ।
ಬ್ರಹ್ಮಕುಂಡಸಮುತ್ಪತ್ತಿರಧುನಾ ಶ್ರೂಯತಾಂ ದ್ವಿಜಾಃ ॥ ೧ ॥
ಯದಾ ಸಂಸ್ಥಾಪಿತೋ ಬ್ರಹ್ಮಾ ಮಾರ್ಕಂಡೇನ ಮಹಾತ್ಮನಾ ।
ತದಾ ವಿನಿರ್ಮಿತಂ ತತ್ರ ಕುಂಡಂ ಶುಚಿ ಜಲಾನ್ವಿತಂ ॥ ೨ ॥
ಪ್ರೋಕ್ತಂ ಚ ಕಾರ್ತಿಕೇ ಮಾಸಿ ಕೃತ್ತಿಕಾಸ್ಥೇ ನಿಶಾಕರೇ ।
ಸಮ್ಯಗ್ಭೀಷ್ಮವ್ರತಂ ಕೃತ್ವಾ ಸ್ನಾತ್ವಾತ್ರ ಸಲಿಲೇ ಶುಭೇ ॥ ೩ ॥
ಪೂಜಯಿಷ್ಯತಿ ಯೋ ದೇವಂ ಪದ್ಮಯೋನಿಂ ತತಃ ಪರಂ ।
ಸ ಶೂದ್ರೋಽಪಿ ತನುಂ ತ್ಯಕ್ತ್ವಾ ಬ್ರಹ್ಮಯೋನೌ ಪ್ರಯಾಸ್ಯತಿ ॥ ೪ ॥
ಬ್ರಾಹ್ಮಣೋಽಪಿ ಯದಿ ಸ್ನಾನಂ ತತ್ರ ಕುಂಡೇ ಕರಿಷ್ಯತಿ ।
ಕೃತ್ವಾ ಭೀಷ್ಮವ್ರತಂ ಸಮ್ಯಗ್ಬ್ರಹ್ಮಲೋಕಂ ಪ್ರಯಾಸ್ಯತಿ ॥ ೫ ॥
ಏವಂ ಪ್ರವದತಸ್ತಸ್ಯ ಮಾರ್ಕಂಡೇಯಸ್ಯ ಸನ್ಮುನೇಃ ।
ಶ್ರುತಂ ತತ್ಸಕಲಂ ವಾಕ್ಯಂ ಪಶುಪಾಲೇನ ಕೇನಚಿತ್ ॥ ೬ ॥

---

## ಕನ್ನಡದ ಅನುವಾದ

### ಬ್ರಹ್ಮಕುಂಡಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಎಲೈ ದ್ವಿಜರೆ! ನಿಮಗೆ ಈ ಅಗ್ನಿತೀರ್ಥದ ಮಾಹಾತ್ಮ್ಯವನ್ನು ಹೇಳಿರುವೆನು. ಈಗ ಬ್ರಹ್ಮಕುಂಡದ ಉತ್ಪತ್ತಿಯ ಕ್ರಮ ವನ್ನು ಕೇಳಿರಿ.

೨. ಮಹಾತ್ಮನಾದ ಮಾರ್ಕಂಡನು ಬ್ರಹ್ಮನನ್ನು ಅಲ್ಲಿ ಸ್ಥಾಪಿಸಿದಾಗ ಶುದ್ಧ ಜಲದಿಂದ ಕೂಡಿದ ಒಂದು ಕುಂಡವನ್ನು ನಿರ್ಮಿಸಿದನು.

೩–೫. ಕಾರ್ತಿಕಮಾಸದಲ್ಲಿ ಚಂದ್ರನು ಕೃತ್ತಿಕಾನಕ್ಷತ್ರದಿಂದ ಕೂಡಿರು ವಾಗ ಇದರ ಶುಭಜಲದಲ್ಲಿ ಮಿಂದು ಭೀಷ್ಮವ್ರತವನ್ನಾಚರಿಸಿ ಬ್ರಹ್ಮನನ್ನು ಪೂಜಿಸಿದರೆ ಅವನು ಶೂದ್ರನಾಗಿದ್ದರೂ ಮರಣಾನಂತರ ಬ್ರಾಹ್ಮಣ ಜಾತಿಯಲ್ಲಿ ಜನಿಸುವನು. ಬ್ರಾಹ್ಮಣನೂ ಭೀಷ್ಮವ್ರತವನ್ನಾಚರಿಸಿ ಆ ಕುಂಡದಲ್ಲಿ ಮಿಂದರೆ ಬ್ರಹ್ಮಲೋಕಕ್ಕೆ ತೆರಳುವನು.

೬–೯. ಆ ಮಾರ್ಕಂಡೇಯ ಮುನಿಯು ಹೀಗೆ ಹೇಳುತ್ತಿರಲು, ಅವನ ಮಾತನ್ನೆಲ್ಲ ಒಬ್ಬ ದನ ಕಾಯುವವನು ಕೇಳಿ ಶ್ರದ್ಧೆಯಿಂದ ಕಾರ್ತಿಕ ಮಾಸದಲ್ಲಿ

ತತಃ ಶ್ರದ್ಧಾಪ್ರಯುಕ್ತೇನ ತೇನ ತದ್ಭೀಷ್ಮಪಂಚಕಂ ।
ಯಥಾವದ್ವಿಹಿತಂ ಸಮ್ಯಕ್ಕಾರ್ತಿಕೇ ಮಾಸಿ ಸಂಸ್ಥಿತೇ ॥ ೭ ॥
ತತಶ್ಚ ಕೃತ್ತಿಕಾಯೋಗೇ ಪೂರ್ಣಿಮಾಯಾಂ ಯಥಾವಿಧಿ ।
ಸಂಪೂಜ್ಯ ಪದ್ಮಜಂ ಪಶ್ಚಾತ್ಪೂಜಿತಃ ಪುರುಷೋತ್ತಮಃ ॥ ೮ ॥
ತತಃ ಕಾಲವಿಪಾಕೇನ ಸ ಪಂಚತ್ವಮುಪಾಗತಃ ।
ಬ್ರಾಹ್ಮಣಸ್ಯ ಗೃಹೇ ಜಾತಃ ಪುರೇಽತ್ರೈವ ದ್ವಿಜೋತ್ತಮಾಃ ।
ಜಾತಿಸ್ಮರಃ ಪ್ರಭಾಯುಕ್ತಃ ಪಿತೃಮಾತೃಪ್ರತುಷ್ಟಿದಃ ॥ ೯ ॥
ಏವಂ ಪ್ರಗಚ್ಛತಸ್ತಸ್ಯ ವೃದ್ಧಿಂ ತತ್ರ ಪುರೋತ್ತಮೇ ।
ಪಿತೃಮಾತೃಸಮುದ್ಭೂತೋ ಯಾದೃಕ್ ಸ್ನೇಹೋ ವ್ಯವಸ್ಥಿತಃ ॥ ೧೦ ॥
ಅನ್ಯದೇಹೋದ್ಭವಂ ವಾಽಪಿ ತಸ್ಯ ಶೂದ್ರೇ ಪರಿಸ್ಥಿತಃ ।
ಸ ತಸ್ಯ ಧನಸಂಪನ್ನಃ ಸದೈವ ಕುರುತೇ ದ್ವಿಜಃ ॥ ೧೧ ॥
ಉಪಕಾರಪ್ರದಾನಂ ಚ ಯತ್ಕಿಂಚಿತ್ತಸ್ಯ ಸಮ್ಮತಂ ।
ಅನ್ಯಸ್ಮಿನ್ದಿವಸೇ ಶೂದ್ರಃ ಸ ಪಿತಾ ಪೂರ್ವಜನ್ಮನಃ ।
ತಸ್ಯ ಪಂಚತ್ವಮಾಪನ್ನಃ ಸಂಪ್ರಾಪ್ತೇ ಚಾಯುಷಃ ಕ್ಷಯೇ ॥ ೧೨ ॥
ಅಥ ತಸ್ಯ ಮಹಾಶೋಕಂ ಸಕೃತ್ವಾ ತದನಂತರಂ ।
ಚಕಾರ ಪ್ರೇತಕಾರ್ಯಾಣಿ ನಿಃಶೇಷಾಣಿ ಪ್ರಭಕ್ತಿತಃ ॥ ೧೩ ॥
ಅಥ ತಸ್ಯ ಸಮಾಲೋಕ್ಯ ತಾದೃಶಂ ತದ್ವಿಚೇಷ್ಟಿತಂ ।
ಪೃಷ್ಟಃ ಸ ಕೌತುಕಾವಿಷ್ಟೈಃ ಪಿತೃಮಾತೃಸುತಾದಿಭಿಃ ॥ ೧೪ ॥

---

ವಿಧಿಯಂತೆ ಹುಣ್ಣಿಮೆಯ ದಿನ ಮಿಂದು ಬ್ರಹ್ಮನನ್ನೂ, ವಿಷ್ಣುವನ್ನೂ ಪೂಜಿಸಿ ಕಾಲಕ್ರಮದಿಂದ ಮೃತನಾಗಿ ಈ ಪಟ್ಟಣದಲ್ಲಿಯೇ ಓರ್ವ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿ ಹಿಂದಿನ ಜನ್ಮಸ್ಮರಣೆಯುಳ್ಳವನೂ, ಕಾಂತಿಯಿಂದ ಕೂಡಿದವನೂ, ಮಾತಾಪಿತೃಗಳಿಗೆ ಸಂತೋಷವನ್ನುಂಟುಮಾಡುವವನೂ ಆದನು.

೧೦–೧೨. ಆ ಉತ್ತಮ ನಗರಿಯಲ್ಲಿ ಹೀಗೆ ವೃದ್ಧಿಯನ್ನು ಹೊಂದುತ್ತಿರುವ ಅವನಿಗೆ ಹಿಂದಿನ ಜನ್ಮದ ತಂದೆಯಾದ ಶೂದ್ರನಲ್ಲಿ ಮೊದಲಿನಂತೆಯೇ ತಂದೆಯ ಪ್ರೀತಿಯಿದ್ದಿತು. ಆ ತಂದೆಗೆ ಇಷ್ಟವಾದ ಉಪಕಾರವನ್ನೂ, ಧನದಾನವನ್ನೂ ಮಾಡುತ್ತಿದ್ದನು. ಇನ್ನೊಂದು ದಿನ ಆ ಹಿಂದಿನ ಜನ್ಮದ ತಂದೆಯು ಆಯುಸ್ಸಿನ ಅವಸಾನದಲ್ಲಿ ಮಡಿದನು.

೧೩. ಅನಂತರ ಆ ಬ್ರಾಹ್ಮಣನು ಆ ಶೂದ್ರ ತಂದೆಯ ವಿಷಯದಲ್ಲಿ ಅತ್ಯಂತ ಮರುಗಿ ಪ್ರೇತಕಾರ್ಯಗಳನ್ನೆಲ್ಲ ಭಕ್ತಿಯಿಂದ ಮಾಡಿದನು.

೧೪. ಬಳಿಕ ಅವನ ತಂದೆ, ತಾಯಿ, ಮಕ್ಕಳು ಮೊದಲಾದವರು ಕೌತೂಹಲದಿಂದ ಅವನ ಅಂತಹ ಕೆಲಸಗಳನ್ನು ನೋಡಿ ಹೀಗೆ ಪ್ರಶ್ನಿಸಿದರು.

ಕಸ್ಮಾತ್ತ್ವಮಸ್ಯ ನೀಚಸ್ಯ ಪಶುಪಾಲಸ್ಯ ಸರ್ವದಾ ।
ಅತಿಸ್ನೇಹಸಮಾಯುಕ್ತೋ ನಿಃಸ್ಪೃಹಸ್ಯಾಽಪಿ ಶಂಸ ನಃ ॥ ೧೫ ॥
ತಸ್ಯಾಽಪಿ ಪ್ರೇತಕಾರ್ಯಾಣಿ ಮೃತಸ್ಯಾಽಪಿ ಕರೋಷಿ ಕಿಂ ।
ಏತನ್ನಃ ಸರ್ವಮಾಚಕ್ಷ್ವ ನಚೇದ್ಗುಹ್ಯಂ ವ್ಯವಸ್ಥಿತಂ ॥ ೧೬ ॥
ತೇಷಾಂ ತದ್ವಚನಂ ಶ್ರುತ್ವಾ ಕಿಂಚಿಲ್ಲಜ್ಜಾಸಮನ್ವಿತಃ ।
ತಾನಬ್ರವೀಚ್ಛೃಣುಧ್ವಂ ಚ ಕಥಯಿಷ್ಯಾಮ್ಯಸಂಶಯಂ ॥ ೧೭ ॥
ಅಹಮಸ್ಯಾನ್ಯದೇಹತ್ವೇ ಪುತ್ರ ಆಸಂ ಸುಸಂಮತಃ ।
ಪಶುಪಾಲನಕರ್ಮಜ್ಞಃ ಪ್ರಾಣೇಭ್ಯೋ ವಲ್ಲಭಃ ಸದಾ ॥ ೧೮ ॥
ಕಸ್ಯಚಿತ್ತ್ವಥ ಕಾಲಸ್ಯ ಮಾರ್ಕಂಡಸ್ಯ ಮಹಾಮುನೇಃ ।
ಶ್ರುತಂ ಪ್ರವದತೋ ವಾಕ್ಯಂ ಬ್ರಹ್ಮಕುಂಡಸಮುದ್ಭವಂ ॥ ೧೯ ॥
ಕಾರ್ತಿಕ್ಯಾಂ ಕೃತ್ತಿಕಾಯೋಗೇ ಭೀಷ್ಮಪಂಚಕಕೃನ್ನರಃ ।
ಸಮ್ಯಕ್ಛ್ರದ್ಧಾಸಮುತ್ಪನ್ನೋ ಯೋಽತ್ರ ಸ್ನಾನಂ ಕರಿಷ್ಯತಿ ॥ ೨೦ ॥
ದೃಷ್ಟ್ವಾ ಪಿತಾಮಹಂ ದೇವಂ ಪೂಜಯಿತ್ವಾ ಜನಾರ್ದನಂ ।
ಸ ಭವಿಷ್ಯತಿ ಶೂದ್ರೋಽಪಿ ಬ್ರಾಹ್ಮಣಶ್ಚಾಽನ್ಯಜನ್ಮನಿ ॥ ೨೧ ॥
ತನ್ಮಯಾ ವಿಹಿತಂ ಸಮ್ಯಕ್ಸ್ನಾತ್ವಾ ತತ್ರ ಶುಭಾವಹೇ ।
ಸುಕುಂಡೇ ಕಾರ್ತಿಕೇ ಮಾಸಿ ತೇನ ಜಾತೋಽಸ್ಮಿ ಸದ್ದ್ವಿಜಃ ॥ ೨೨ ॥

---

೧೫–೧೬. ನೀನು ಮಡಿದ ನೀಚನಾದ ಈ ಪಶುಪಾಲಕನಲ್ಲಿ ಅತಿ ಪ್ರೀತಿಯಿಂದ ಉತ್ತರಕ್ರಿಯೆಗಳನ್ನು ಏಕೆ ಮಾಡುತ್ತಿರುವೆ? ಇದು ಗುಟ್ಟಾಗಿಲ್ಲದಿದ್ದರೆ ನಮಗೆ ಎಲ್ಲವನ್ನೂ ಹೇಳು.

೧೭. ಆ ಶೂದ್ರನು ಅವರ ಆ ಮಾತನ್ನು ಕೇಳಿ ಸ್ವಲ್ಪ ಲಜ್ಜಿತನಾಗಿ, "ಎಲ್ಲವನ್ನೂ ಹೇಳುವೆನು ಕೇಳಿರಿ" ಎಂದು ಈ ರೀತಿ ಹೇಳತೊಡಗಿದನು.

೧೮. "ನಾನು ಜನ್ಮಾಂತರದಲ್ಲಿ ಇವನಿಗೆ ದನ ಕಾಯುವುದನ್ನರಿತ ಪ್ರಿಯ ಪುತ್ರನಾಗಿದ್ದೆನು.

೧೯. ಕೆಲವು ಕಾಲದ ಮೇಲೆ ಮಾರ್ಕಂಡೇಯ ಮುನಿಯು ಹೇಳುತ್ತಿರುವ ಬ್ರಹ್ಮಕುಂಡ ವಿಷಯಕವಾದ ಈ ರೀತಿಯಾದ ಮಾತನ್ನು ಕೇಳಿದೆನು.

೨೦–೨೧. ಮಾನವನು ಕೃತ್ತಿಕಾ ನಕ್ಷತ್ರ ಯೋಗವಿರುವ ಕಾರ್ತಿಕ ಶುದ್ಧ ಪೂರ್ಣಿಮಾ ದಿನ ಈ ಕುಂಡದಲ್ಲಿ ಮಿಂದು ಭೀಷ್ಮಪಂಚಕ ಮಾಡಿ ಬ್ರಹ್ಮವಿಷ್ಣುಗಳನ್ನು ಪೂಜಿಸಿದರೆ ಅವನು ಶೂದ್ರನಾಗಿದ್ದರೂ ಇನ್ನೊಂದು ಜನ್ಮದಲ್ಲಿ ಬ್ರಾಹ್ಮಣನಾಗುವನು.

೨೨–೨೩. ನಾನು ಕಾರ್ತಿಕ ಮಾಸದಲ್ಲಿ ಶುಭಕರವಾದ ಈ ಕುಂಡದಲ್ಲಿ ಮಿಂದು ಈ ವ್ರತವನ್ನಾಚರಿಸಿದ್ದರಿಂದ ಭೂಮಿಯಲ್ಲಿ ಪ್ರಸಿದವಾದ ಚಂದ್ರೋ

ಚಂದ್ರೋದಯಸ್ಯ ವಿಪ್ರರ್ಷೇರನ್ವಯೇ ಭುವಿ ವಿಶ್ರುತೇ ।
ಸಂಸ್ಮರನ್ಪೂರ್ವಿಕಾಂ ಜಾತಿಂ ತೇನ ಸ್ನೇಹೋ ಮಮ ಸ್ಥಿತಃ ।
ತಸ್ಯೋಪರಿ ಮಹಾನ್ನಿತ್ಯಂ ಶೂದ್ರಸ್ಯಾಽಪಿ ನಿರರ್ಗಲಃ ॥ ೨೩ ॥
ಅತೋಽಹಂ ಕೃತ್ತಿಕಾಯೋಗೇ ಕಾರ್ತಿಕ್ಯಾಂ ಭಕ್ತಿಸಂಯುತಃ ।
ಜ್ಞಾತ್ವಾ ಕರೋಮಿ ಭೀಷ್ಮಸ್ಯ ಪಂಚಕಂ ವ್ರತಮುತ್ತಮಂ ॥ ೨೪ ॥

ಸೂತ ಉವಾಚ :—

ಏವಂ ತಸ್ಯ ವಚಃ ಶ್ರುತ್ವಾ ತೇ ಚಾಽನ್ಯೇ ಚ ದ್ವಿಜೋತ್ತಮಾಃ ।
ಭೀಷ್ಮಸ್ಯ ಪಂಚಕಂ ಚಕ್ರುಃ ಸಮ್ಯಕ್ಶ್ರದ್ಧಾಸಮನ್ವಿತಾಃ ॥ ೨೫ ॥
ತತಃ ಪ್ರಭೃತಿ ತತ್ಕುಂಡಂ ವಿಖ್ಯಾತಂ ಧರಣೀತಲೇ ।
ಸ್ಥಿತಮುತ್ತರದಿಗ್ಭಾಗೇ ಬ್ರಹ್ಮಕುಂಡಮಿತಿ ಸ್ಮೃತಂ ॥ ೨೬ ॥
ಯಃ ಸ್ನಾನಂ ಸರ್ವದಾ ತತ್ರ ಬ್ರಾಹ್ಮಣಃ ಪ್ರಕರೋತಿ ವೈ ।
ಸ ಸಂಭವತಿ ವಿಪ್ರೇಂದ್ರೋ ಜಾಯಮಾನಃ ಪುನಃ ಪುನಃ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬ್ರಹ್ಮಕುಂಡಮಾಹಾತ್ಮ್ಯವರ್ಣನಂ" ನಾಮ
ದ್ವಿನವತಿತಮೋಽಧ್ಯಾಯಃ

---

ದಯವೆಂಬ ಬ್ರಾಹ್ಮಣನ ವಂಶದಲ್ಲಿ ಪೂರ್ವಜನ್ಮಸ್ಮರಣೆಯುಳ್ಳ ಬ್ರಾಹ್ಮಣನಾಗಿ ಜನಿಸಿದೆನು. ಆದುದರಿಂದ ಶೂದ್ರನಾಗಿದ್ದರೂ ಅವನ ಮೇಲೆ ಅತಿಶಯ ಪ್ರೀತಿಯುಂಟಾಯಿತು.

೨೪. ಆದುದರಿಂದ ನಾನು ಕಾರ್ತಿಕ ಮಾಸದಲ್ಲಿ ಕೃತ್ತಿಕಾ ಯೋಗವಿರುವ ಹುಣ್ಣಿಮೆಯ ದಿನ ಉತ್ತಮವಾದ ಭೀಷ್ಮಪಂಚಕ ವ್ರತವನ್ನಾಚರಿಸುವೆನು."

೨೫. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣರೂ, ಇತರರೂ ಅವನ ಈ ರೀತಿಯಾದ ಮಾತನ್ನು ಕೇಳಿ ಅತ್ಯಂತ ಶ್ರದ್ಧೆಯಿಂದ ಭೀಷ್ಮಪಂಚಕ ವ್ರತವನ್ನಾಚರಿಸಿದರು.

೨೬. ಅದು ಮೊದಲ್ಗೊಂಡು ಉತ್ತರದಿಕ್ಕಿನಲ್ಲಿರುವ ಆ ಕುಂಡವು ಬ್ರಹ್ಮಕುಂಡವೆಂದು ವಿಖ್ಯಾತವಾಯಿತು.

೨೭. ಅಲ್ಲಿ ಯಾವಾಗಲೂ ಸ್ನಾನ ಮಾಡುವ ಬ್ರಾಹ್ಮಣನು ಪ್ರತಿ ಜನ್ಮದಲ್ಲಿಯೂ ಬ್ರಾಹ್ಮಣೋತ್ತಮನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬ್ರಹ್ಮಕುಂಡಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಣವತಿತಮೋಽಧ್ಯಾಯಃ

### ಗೋಮುಖತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಥಾಽನ್ಯದಪಿ ತತ್ರಾಽಸ್ತಿ ಗೋಮುಖಾಖ್ಯಂ ಸುಶೋಭನಂ ।
ಯದ್ಗೋವಕ್ತ್ರಾತ್ಪುರಾ ಲಬ್ಧಂ ಸರ್ವಪಾತಕನಾಶನಂ ॥ ೧ ॥
ಪುರಾಽಽಸೀದತ್ರ ಗೋಪಾಲಃ ಕಶ್ಚಿತ್ತುಷ್ಟಸ್ಸಮಾವೃತಃ ।
ಚಮತ್ಕಾರಪುರೇ ವಿಪ್ರ ಅತೀವ ಕ್ಶಾನುತಾಂ ಗತಃ ॥ ೨ ॥
ಕಸ್ಯಚಿತ್ತ್ವಥ ಕಾಲಸ್ಯ ತೇನ ಮಾರ್ಗೇಣ ಗೋಕುಲಂ ।
ಮಧ್ಯಾಹ್ನಸಮಯೇ ಪ್ರಾಪ್ತಂ ಚಂದ್ರೇ ಚಿತ್ರಾಸಮನ್ವಿತೇ ॥ ೩ ॥
ಏಕಾದಶ್ಯಾಂ ತೃಷಾರ್ತಂ ಚ ಭಾಸ್ಕರೇ ವೃಷಸಂಸ್ಥಿತೇ ।
ಏಕಯಾಽಪಿ ತತೋ ಧೇನ್ವಾ ತೃಣಸ್ತಂಭಮತೀವ ಹಿ ।
ನೀಲಮಾಲೋಕಿತಂ ತತ್ರ ದೂರಾದೇತ್ಯ ಪ್ರಹರ್ಷಿತಾ ॥ ೪ ॥
ದಂತೈರ್ದ್ರುತಂ ಸಮುತ್ಪಾಟ್ಯ ಯಾವದಾಕರ್ಷತಿ ದ್ವಿಜಾಃ ।
ತಾವತ್ತಜ್ಜಡಮಾರ್ಗೇಣ ತೋಯಧಾರಾ ವಿನಿರ್ಗತಾ ॥ ೫ ॥
ಅಥಾಸ್ವಾದ್ಯ ತೃಣಂ ತಸ್ಮಾತ್ತೃಷಾರ್ತಾ ಚ ಶನೈಃ ಶನೈಃ ।
ಪಪೌ ತೋಯಂ ಸುವಿಶ್ರಬ್ಧಾ ಸುಸ್ವಾದು ಕ್ಷೀರಸನ್ನಿಭಂ ॥ ೬ ॥

---

### ಕನ್ನಡದ ಅನುವಾದ

#### ಗೋಮುಖತೀರ್ಥಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಬ್ರಹ್ಮಕುಂಡದ ಅನಂತರ ಸಕಲ ಪಾಪಗಳನ್ನೂ ನಾಶಗೊಳಿಸುವ ಹಿಂದೆ ಗೋವಿನ ಮುಖದಿಂದ ಉಂಟಾದ ಗೋಮುಖವೆಂಬ ಮಂಗಳಕರವಾದ ತೀರ್ಥವಿದೆ.

೨. ಹಿಂದೆ ಈ ಚಮತ್ಕಾರಪುರದಲ್ಲಿ ಕುಷ್ಠರೋಗಿಯೂ, ಕೃಶನೂ ಆದ ಗೋಪಾಲನೊಬ್ಬನಿದ್ದನು.

೩–೫. ಒಂದಾನೊಂದು ಚೈತ್ರ ಮಾಸದ ಮಧ್ಯಾಹ್ನದ ವೇಳೆಯಲ್ಲಿ ಆ ದಾರಿಯಿಂದ ಬಾಯಾರಿದ ಗೋವುಗಳು ಬಂದುವು. ಸೂರ್ಯನು ವೃಷಭರಾಶಿಯಲ್ಲಿರಲು ಒಂದು ಹಸುವು ದೂರದಿಂದ ನೀಲವರ್ಣದ ಹುಲ್ಲಿನರಾಶಿಯನ್ನು ನೋಡಿ ಸಂತೋಷದಿಂದ ಹಲ್ಲುಗಳಿಂದ ಆ ಹುಲ್ಲನ್ನು ಕಿತ್ತು ಎಳೆಯಲು ಅದರ ಬುಡದಿಂದ ನೀರಿನ ಧಾರೆಯು ಹೊರಟಿತು.

೬. ಬಳಿಕ ಬಾಯಾರಿಕೆಗೊಂಡ ಆ ಹಸುವು ಮೆಲ್ಲಮೆಲ್ಲನೆ ಹುಲ್ಲನ್ನು ತಿಂದು ಹಾಲಿನಂತೆ ರುಚಿಯಾದ ಆ ನೀರನ್ನು ಕುಡಿಯಿತು.

ತಸ್ಯಾ ವೇಗೇನ ತತ್ತೋಯಂ ಪಿಬಂತ್ಯಾಸ್ತತ್ರ ಭೂತಲೇ ।
ಗರ್ತಾ ಜಾತಾ ಸುವಿಸ್ತೀರ್ಣಾ ಸಲಿಲೇನ ಸಮಾವೃತಾ ॥ ೭ ॥
ತತೋಽನ್ಯಾಃ ಶತಶೋ ಗಾವಃ ಪಪುಸ್ತೋಯಂ ಸುನಿರ್ಮಲಂ ।
ತೃಷಾರ್ತಾಸ್ತದ್ದ್ವಿಜಶ್ರೇಷ್ಠಾಃ ಪೀಯೂಷರಸಸನ್ನಿಭಂ ॥ ೮ ॥
ಯಥಾ ಯಥಾ ಗತಾ ಗಾವಸ್ತತ್ರ ತೋಯಂ ಪಿಬಂತಿ ತಾಃ ।
ಸಾ ಗರ್ತಾ ವಕ್ತ್ರಸಂಸ್ಪರ್ಶಾದ್ವೃದ್ಧಿಂ ಯಾತಿ ತಥಾ ತಥಾ ॥ ೯ ॥
ತತಶ್ಚ ಗೋಕುಲೇ ಕೃತ್ಸ್ನೇ ಜಾತೇ ತೃಷ್ಣಾವಿವರ್ಜಿತೇ ।
ಗೋಪಾಲೋಽಪಿ ತೃಷಾರ್ತಸ್ತು ತಸ್ಮಿಂಸ್ತೋಯೇ ವಿವೇಶ ಚ ॥ ೧೦ ॥
ಅಂಗಂ ಪ್ರಕ್ಷಾಲ್ಯ ಪೀತ್ವಾಪೋ ಯಾವನ್ನಿಷ್ಕ್ರಾಮತಿ ದ್ರುತಂ ।
ತಾವತ್ಪಶ್ಯತಿ ಗಾತ್ರಂ ಸ್ವಂ ದ್ವಾದಶಾರ್ಕಸಮಪ್ರಭಂ ॥ ೧೧ ॥
ತತೋ ವಿಸ್ಮಯಮಾಪನ್ನೋ ಗತ್ವಾ ಸ್ವೀಯಂ ನಿಕೇತನಂ ।
ವೃತ್ತಾಂತಂ ಕಥಯಾಮಾಸ ಲೋಕಾನಾಂ ಪುರತೋಽಖಿಲಂ ॥ ೧೨ ॥
ತೃಣಸ್ತಂಭಂ ಯಥಾ ಧೇನ್ವಾ ತತ್ರೋತ್ಪಾಟ್ಯ ಪ್ರಶಕ್ತಿತಃ ।
ಯಥಾ ವಿನಿರ್ಗತಂ ತೋಯಂ ತಥಾ ತೇನಾಽವಗಾಹಿತಂ ॥ ೧೩ ॥
ತದ್ದೃಷ್ಟ್ವಾ ಮಾನವಾಃ ಸರ್ವೇ ಗತ್ವಾ ದಿವ್ಯಂ ಜಲಂ ಚ ತತ್ ।
ವ್ಯಾಧಿಗ್ರಸ್ತಾ ವಿಶೇಷೇಣ ಸ್ನಾನಂ ಚಕ್ರುಃ ಸಮಾಹಿತಾಃ ॥ ೧೪ ॥

---

೭. ಆ ಹಸುವು ನೀರನ್ನು ಕುಡಿಯುತ್ತಿರಲು, ಅಲ್ಲಿಯ ಭೂಮಿಯಲ್ಲಿ ನೀರಿನಿಂದ ತುಂಬಿದ ವಿಶಾಲವಾದ ಕುಣಿಯುಂಟಾಯಿತು.

೮. ಅನಂತರ ಬಾಯಾರಿಕೆಗೊಂಡ ಇತರ ನೂರಾರು ಗೋವುಗಳು ಅಮೃತದಂತಿರುವ ಆ ನೀರನ್ನು ಕುಡಿದುವು.

೯. ಆ ಗೋವುಗಳು ನೀರನ್ನು ಕುಡಿದ ಹಾಗೆಲ್ಲ ಅವುಗಳ ಬಾಯಿಯ ಸ್ಪರ್ಶದಿಂದ ಕುಣಿಯು ದೊಡ್ಡದಾಗುತ್ತ ಬಂದಿತು.

೧೦. ತರುವಾಯ ಆ ಗೋವುಗಳೆಲ್ಲ ಬಾಯಾರಿಕೆಯಿಲ್ಲದವುಗಳಾಗಲು ಗೋಪಾಲನೂ ಬಾಯಾರಿಕೆಗೊಂಡು ಆ ನೀರಿನಲ್ಲಿ ಇಳಿದನು.

೧೧. ಅವನು ಅವಯವಗಳನ್ನು ತೊಳೆದುಕೊಂಡು ನೀರನ್ನು ಕುಡಿದು ಹೊರಗೆ ಹೊರಡುವಷ್ಟರಲ್ಲಿ ತನ್ನ ಶರೀರವು ದ್ವಾದಶಾದಿತ್ಯರಂತೆ ಹೊಳೆಯುತ್ತಿರುವುದನ್ನು ಕಂಡನು.

೧೨–೧೩. ಅನಂತರ ಅವನು ಆಶ್ಚರ್ಯಗೊಂಡು ತನ್ನ ಮನೆಗೆ ಹೋಗಿ ಜನರ ಮುಂದೆ ಹಸುವು ಹುಲ್ಲನ್ನು ಕಿತ್ತುದನ್ನೂ, ಅದರಿಂದ ನೀರು ಹೊರಟಿರುವುದನ್ನೂ, ಅದರಲ್ಲಿ ತಾನು ಮಿಂದುದನ್ನೂ ಹೇಳಿದನು.

೧೪. ಅದನ್ನು ನೋಡಿ ವ್ಯಾಧಿಪೀಡಿತರಾದ ಸಕಲ ಮಾನವರೂ ಸಾವಧಾನ ಮನಸ್ಸಿನಿಂದ ಆ ದಿವ್ಯ ಜಲದಲ್ಲಿ ಮಿಂದರು.

ಭವಂತಿ ಚ ವಿನಿರ್ಮುಕ್ತಾ ರೋಗೈಃ ಪಾಪೈಶ್ಚ ತತ್ಕ್ಷಣಾತ್ ।
ಅಪಾಪಾಶ್ಚ ಪುನರ್ಯಾಂತಿ ತತ್ಕ್ಷಣಾತ್ತ್ರಿದಿವಾಲಯಂ ॥ ೧೫ ॥
ತತಃ ಪ್ರಭೃತಿ ತತ್ ಖ್ಯಾತಂ ತೀರ್ಥಂ ಗೋಮುಖಸಂಜ್ಞಿತಂ ।
ಗೋಮುಖಾದ್ಭೂತಲೇ ಜಾತಂ ಯತಶ್ಚೈವ ದ್ವಿಜೋತ್ತಮಾಃ ॥ ೧೬ ॥
ಅಥ ಭೀತಃ ಸಹಸ್ರಾಕ್ಷಸ್ತದ್ದೃಷ್ಟ್ವಾ ಸ್ವರ್ಗದಾಯಕಂ ।
ಅಕ್ಲೇಶೇನ ಮನುಷ್ಯಾಣಾಂ ಪೂರಯಾಮಾಸ ಪಾಂಸುಭಿಃ ॥ ೧೭ ॥

ಋಷಯ ಊಚುಃ:—

ಕಿಂ ತತ್ಕಾರಣಮಾದಿಷ್ಟಂ ಯೇನ ತತ್ತಾದೃಶಂ ಜಲಂ ।
ತಸ್ಮಾತ್ಸ್ಥಾನಾದ್ವಿನಿಷ್ಕ್ರಾಂತಂ ಸೂತಪುತ್ರ ವದಸ್ವ ನಃ ॥ ೧೮ ॥

ಸೂತ ಉವಾಚ:—

ಅತ್ರ ಪೂರ್ವಂ ತಪಸ್ತಪ್ತಮಂಬರೀಷೇಣ ಭೂಭುಜಾ ।
ಪುತ್ರಶೋಕಾಭಿಭೂತೇನ ತೋಷಿತೋ ಗರುಡಧ್ವಜಃ ॥ ೧೯ ॥
ತಸ್ಯ ಪುತ್ರಃ ಸುವಿಖ್ಯಾತಃ ಸುವರ್ಚಾ ಇತಿ ವಿಶ್ರುತಃ ।
ಏಕೋ ಬಭೂವ ವೃದ್ಧತ್ವೇ ಕಥಂಚಿದ್ದ್ವಿಜಸತ್ತಮಾಃ ॥ ೨೦ ॥
ಪೂರ್ವಕರ್ಮವಿಪಾಕೇನ ಸ ಬಾಲೋಽಪಿ ಚ ತತ್ಸುತಃ ।
ಕುಷ್ಠವ್ಯಾಧಿ ಸಮಾಕ್ರಾಂತಃ ಪಿತೃಮಾತೃಸುದುಃಖದಃ ॥ ೨೧ ॥

---

೧೫. ಕೂಡಲೆ ರೋಗಗಳಿಂದಲೂ, ಪಾಪಗಳಿಂದಲೂ ಮುಕ್ತರಾಗಿ ದೇವ ಲೋಕಕ್ಕೆ ಹೋದರು.

೧೬. ಅದು ಮೊದಲ್ಗೊಂಡು ಆ ತೀರ್ಥವು ಗೋಮುಖದಿಂದ ಹುಟ್ಟಿದ ಕಾರಣ ಗೋಮುಖವೆಂದು ಪ್ರಸಿದ್ಧವಾಯಿತು.

೧೭. ತರುವಾಯ ಇಂದ್ರನು ಮನುಷ್ಯರಿಗೆ ಕಷ್ಟವಿಲ್ಲದೆ ಸ್ವರ್ಗವನ್ನು ಕೊಡುವ ಆ ಕುಂಡವನ್ನು ನೋಡಿ ಧೂಳಿನಿಂದ ಅದನ್ನು ತುಂಬಿದನು.

೧೮. ಋಷಿಗಳು ಹೇಳುತ್ತಾರೆ:—ಸೂತ! ಆ ಸ್ಥಳದಿಂದ ಅಂತಹ ನೀರು ಹೊರಡಲು ಕಾರಣವೇನು ? ನಮಗೆ ಹೇಳು.

೧೯. ಸೂತನು ಹೇಳುತ್ತಾನೆ:—ಹಿಂದೆ ಇಲ್ಲಿ ಅಂಬರೀಷ ರಾಜನು ಪುತ್ರ ಶೋಕದಿಂದ ಪೀಡಿತನಾಗಿ ತಪವನ್ನಾಚರಿಸಿ ವಿಷ್ಣುವನ್ನು ಸಂತೋಷಗೊಳಿಸಿದನು.

೨೦. ದ್ವಿಜವರ್ಯರೆ! ಅವನಿಗೆ ಮುಪ್ಪಿನಲ್ಲಿ ಕಷ್ಟದಿಂದ ಸುವರ್ಚಾ ಎಂಬ ಓರ್ವ ಪುತ್ರನು ಜನಿಸಿದನು.

೨೧. ಅವನು ಬಾಲಕನಾಗಿರುವಾಗಲೇ ಪೂರ್ವಕರ್ಮದ ಪರಿಣಾಮದಿಂದ ಕುಷ್ಠವ್ಯಾಧಿಗ್ರಸ್ತನಾಗಿ ತಾಯಿ ತಂದೆಗಳಿಗೆ ಅತ್ಯಂತ ದುಃಖವನ್ನುಂಟು ಮಾಡಿದನು.

ಅಥ ತತ್ಕಾನಿಕಂ ಕ್ಷೇತ್ರಂ ಸ ಗತ್ವಾ ಪೃಥಿವೀಪತಿಃ ।
ಚಕಾರ ರೋಗನಾಶಾಯ ಸ್ವಪುತ್ರಾರ್ಥಂ ಮಹತ್ತಪಃ ॥ ೨೨ ॥
ತತಸ್ತುಷ್ಟಿಂಗತಸ್ತಸ್ಯ ಸ್ವಯಮೇವ ಜನಾರ್ದನಃ ।
ಪ್ರದಾಯ ದರ್ಶನಂ ವಾಕ್ಯಂ ತತಃ ಪ್ರೋವಾಚ ಸಾದರಂ ॥ ೨೩ ॥
ಪರಿತುಷ್ಟೋಽಸ್ಮಿ ತೇ ವತ್ಸ ತಸ್ಮಾಚ್ಚಿತ್ತೇಽಭಿವಾಂಛಿತಂ ।
ಪ್ರಾರ್ಥಯಸ್ವ ಪ್ರಯಚ್ಛಾಮಿ ವರಂ ಪುತ್ರ ನ ಸಂಶಯಃ ॥ ೨೪ ॥

ರಾಜೋವಾಚ :—

ಮಮಾಽಯಂ ಸಮ್ಮತಃ ಪುತ್ರೋ ಗ್ರಸ್ತಃ ಕುಷ್ಠೇನ ಕೇಶವ ।
ಬಾಲೋಽಪಿ ತತ್ಕುರುಷ್ವಾಽಸ್ಯ ಕುಷ್ಠವ್ಯಾಧಿ ಪರಿಕ್ಷಯಂ ॥ ೨೫ ॥

ಶ್ರೀ ಭಗವಾನುವಾಚ :—

ಏಷ ಆಸೀತ್ಪುರಾ ರಾಜಾ ಮೇಘವಾಹನ ಸಂಜ್ಞಿತಃ ।
ಬ್ರಹ್ಮಣ್ಯಶ್ಚ ಕೃತಜ್ಞಶ್ಚ ಸರ್ವಶಾಸ್ತ್ರಾರ್ಥಪಾರಗಃ ॥ ೨೬ ॥
ಕಸ್ಯಚಿತ್ತ್ವಥ ಕಾಲಸ್ಯ ಬ್ರಾಹ್ಮಣೋಽನೇನ ಘಾತಿತಃ ।
ಅಂತಃಪುರೇ ನಿಶಾಕಾಲೇ ಪ್ರವಿಷ್ಟೋ ಜಾರಕರ್ಮಕೃತ್ ॥ ೨೭ ॥
ಅಥಪಶ್ಯತಿ ಯಾವತ್ಸ ಪ್ರಭಾತೇಽಭ್ಯುದಿತೇ ರವೌ ।
ಯಜ್ಞೋಪವೀತ ಸಂಯುಕ್ತಸ್ತಾವತ್ಸದ್ವಿಜರೂಪಧೃಕ್ ॥ ೨೮ ॥

---

೨೨. ಬಳಿಕ ಆ ರಾಜನು ಇಷ್ಟಾರ್ಥವನ್ನೀಯುವ ಆ ಕ್ಷೇತ್ರಕ್ಕೆ ಹೋಗಿ ಮಗನ ರೋಗಪರಿಹಾರಕ್ಕಾಗಿ ಮಹಾ ತಪಸ್ಸನ್ನಾಚರಿಸಿದನು.

೨೩. ವಿಷ್ಣುವು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಪ್ರೀತಿಯಿಂದ ಇಂತೆಂದನು.

೨೪. "ವತ್ಸ! ನಿನ್ನಲ್ಲಿ ಸಂತುಷ್ಟನಾಗಿರುವೆನು. ಇಷ್ಟಾರ್ಥವನ್ನು ಕೇಳಿಕೊ. ಅದನ್ನು ನಿಶ್ಚಯವಾಗಿಯೂ ಕೊಡುವೆನು."

೨೫. ರಾಜನು ಹೇಳುತ್ತಾನೆ:—ವಿಷ್ಣುವೆ! ನನಗೆ ಪ್ರಿಯನಾದ ಈ ಮಗನು ಬಾಲ್ಯದಲ್ಲಿಯೇ ಕುಷ್ಠವ್ಯಾಧಿಗ್ರಸ್ತನಾಗಿರುವನು. ಇವನ ವ್ಯಾಧಿಯನ್ನು ನೀಗಿಸು.

೨೬. ಭಗವಂತನು ಹೇಳುತ್ತಾನೆ:—ಹಿಂದೆ ಇವನು ಬ್ರಾಹ್ಮಣಪ್ರಿಯನೂ, ಕೃತಜ್ಞನೂ, ಸಮಸ್ತ ಶಾಸ್ತ್ರಾರ್ಥಪಾರಂಗತನೂ ಆದ ಮೇಘವಾಹನನೆಂಬ ರಾಜನಾಗಿದ್ದನು.

೨೭. ಒಂದಾನೊಂದು ಕಾಲದಲ್ಲಿ ಇವನು ಅಂತಃಪುರವನ್ನು ರಾತ್ರಿವೇಳೆ ಹೊಕ್ಕು ಜಾರಕರ್ಮದಲ್ಲಿ ನಿರತನಾದ ಓರ್ವ ಬ್ರಾಹ್ಮಣನನ್ನು ಕೊಂದನು.

೨೮. ಬೆಳಗ್ಗೆ ಸೂರ್ಯೋದಯಾನಂತರ ಇವನು ನೋಡಲು ಅವನು ಯಜ್ಞೋಪವೀತವನ್ನು ಧರಿಸಿದ ಬ್ರಾಹ್ಮಣನಂತಿದ್ದನು.

ಅಥ ತಂ ಬ್ರಾಹ್ಮಣಂ ಮತ್ವಾ ಘೃಣಾವಿಷ್ಟಃ ಸುದುಃಖಿತಃ ।
ಗತ್ವಾ ಕಾಶೀಪುರೀಂ ಪಶ್ಚಾತ್ತಪಶ್ಚಕ್ರೇ ಸಮಾಹಿತಃ ॥ ೨೯ ॥
ರಾಜ್ಯೇ ಪುತ್ರಂ ಸಮಾಧಾಯ ವೈರಾಗ್ಯಂ ಪರಮಂ ಗತಃ ।
ನಿಯತೋ ನಿಯತಾಹಾರೋ ಭಿಕ್ಷಾನ್ನಕೃತಭೋಜನಃ ॥ ೩೦ ॥
ತತಃ ಕಾಲೇನ ಸಂಪ್ರಾಪ್ತೋ ಯಮಸ್ಯ ಸದನಂ ಪ್ರತಿ ।
ವಿಪಾಪ್ಮಾಽಪಿ ಚ ಚಿಹ್ನೇನ ಯುಕ್ತೋಽಯಂ ಪೃಥಿವೀಪತಿಃ ॥ ೩೧ ॥
ಬ್ರಹ್ಮಘಾತೋದ್ಭವೇನೈವ ಬಾಲಭಾವೇಽಪಿ ಸಂಸ್ಥಿತೇ ।
ಯೇಽತ್ರ ಕುಷ್ಠ ಸಮಾಯುಕ್ತಾ ದೃಶ್ಯಂತೇ ಮಾನವಾ ಭುವಿ ।
ತೈರ್ನೂನಂ ಬ್ರಾಹ್ಮಣಾಘಾತೋ ವಿಹಿತಶ್ಚಾಽನ್ಯ ಜನ್ಮನಿ ॥ ೩೨ ॥
ಹಾಟಕೇಶ್ವರಜೇ ಕ್ಷೇತ್ರೇ ಯೋ ಗತ್ವಾ ಶ್ರಾದ್ಧಮಾಚರೇತ್ ।
ಪಿತೄಣಾಂ ಚೈವ ಸರ್ವೇಷಾಮನೃಣಃ ಸ ಪ್ರಜಾಯತೇ ॥ ೩೩ ॥
ನ ಬ್ರಾಹ್ಮಣವಧಾದ್ಬಾಹ್ಯಂ ಕುಷ್ಠವ್ಯಾಧಿಃ ಪ್ರಜಾಯತೇ ।
ಏತತ್ಸತ್ಯಂ ವಿಜಾನೀಹಿ ವದತೋ ಮಮ ಭೂಪತೇ ॥ ೩೪ ॥

ಅಂಬರೀಷ ಉವಾಚ :—

ಏತದರ್ಥಂ ಸುರಾಽಧೀಶ ಮಯಾಽತ್ವಂ ಪೂಜಿತಃ ಪ್ರಭೋ ।
ಪ್ರಸನ್ನೇ ತ್ವಯಿ ದೇವೇಶ ನಾಽಸಾಧ್ಯಂ ವಿದ್ಯತೇ ಭುವಿ ॥ ೩೫ ॥

---

೨೯—೩೦. ರಾಜನು ಅವನು ಬ್ರಾಹ್ಮಣನೆಂದರಿತು ದಯೆಗೊಂಡು ದುಃಖದಿಂದ ಅತ್ಯಂತ ವೈರಾಗ್ಯಗೊಂಡು ರಾಜ್ಯದಲ್ಲಿ ಮಗನನ್ನಿರಿಸಿ ಕಾಶಿಗೆ ಹೋಗಿ ಜಿತೇಂದ್ರಿಯನೂ, ಮಿತಾಹಾರಿಯೂ, ಭಿಕ್ಷಾನ್ನವನ್ನು ತಿನ್ನುವವನೂ ಆಗಿ ತಪವನ್ನಾಚರಿಸಿದನು.

೩೧—೩೨. ಅವನು ಕಾಲಾಂತರದಲ್ಲಿ ಮಡಿದು ಪಾಪವಿಲ್ಲದವನಾದರೂ ಬ್ರಹ್ಮಹತ್ಯೆಯಿಂದ ಬಾಲ್ಯದಲ್ಲಿಯೇ ಕುಷ್ಠರೋಗದ ಚಿಹ್ನೆಯುಳ್ಳವನಾದನು. ಲೋಕದಲ್ಲಿ ಕುಷ್ಠವ್ಯಾಧಿಯುಳ್ಳವರೆಲ್ಲ ಹಿಂದಿನ ಜನ್ಮದಲ್ಲಿ ಬ್ರಹ್ಮಹತ್ಯೆಯನ್ನು ಮಾಡಿರುವರು.

೩೩. ಹಾಟಕೇಶ್ವರಕ್ಷೇತ್ರಕ್ಕೆ ಹೋಗಿ ಸಕಲ ಪಿತೃಗಳಿಗೆ ಶ್ರಾದ್ಧಮಾಡುವವನು ಋಣಮುಕ್ತನಾಗುವನು.

೩೪. ಬ್ರಹ್ಮಹತ್ಯೆಯನ್ನು ಮಾಡದಿದ್ದರೆ ಕುಷ್ಠರೋಗವುಂಟಾಗುವುದಿಲ್ಲ. ರಾಜನೆ! ನೀನು ನನ್ನಿಂದ ಇದು ಸತ್ಯವೆಂದು ತಿಳಿ.

೩೫. ಅಂಬರೀಷನು ಹೇಳುತ್ತಾನೆ:—ವಿಷ್ಣುವೆ! ಇದಕ್ಕಾಗಿ ನಾನು ನಿನ್ನನ್ನು ಪೂಜಿಸಿರುವೆನು. ನೀನು ಪ್ರಸನ್ನನಾದರೆ ಭೂಮಿಯಲ್ಲಿ ಅಸಾಧ್ಯವಾದುದಿಲ್ಲ.

ಏವಮುಕ್ತಸ್ತತಸ್ತೇನ ಭಗವಾನ್ ಮಧುಸೂದನಃ ।
ಪಾತಾಲಜಾಹ್ನವೀತೋಯಂ ಸ ಸಸ್ಮಾರ ಸಮಾಧಿನಾ ॥ ೩೬ ॥
ಸಾ ಧ್ಯಾತಾ ಸಹಸಾ ತೇನ ವಿಷ್ಣುನಾ ಪ್ರಭವಿಷ್ಣುನಾ ।
ಕೃತ್ವಾತು ವಿವರಂ ಸೂಕ್ಷ್ಮಂ ವಿನಿಷ್ಕ್ರಾಂತಾಽಥ ತತ್ಕ್ಷಣಾತ್ ॥ ೩೭ ॥
ತತಃ ಪ್ರೋವಾಚ ವಚನಮಂಬರೀಷಂ ಚತುರ್ಭುಜಃ ।
ನಿಮಜ್ಜತು ಸುತಸ್ತೇಽತ್ರ ಸುಪುಣ್ಯೇ ಜಾಹ್ನವೀಜಲೇ ॥ ೩೮ ॥
ಯೇನ ಕುಷ್ಠವಿನಿರ್ಮುಕ್ತಸ್ತತ್ಕ್ಷಣಾದೇವ ಜಾಯತೇ ।
ತಥಾ ಬ್ರಹ್ಮವಧೋದ್ಭೂತೈಃ ಪಾತಕೈರುಪಪಾತಕೈಃ ॥ ೩೯ ॥
ಏತಸ್ಮಿನ್ನೇವ ಕಾಲೇತು ಸಮಾನೀಯ ಸುತಂ ನೃಪಃ ।
ಸ್ನಾಪಯಾಮಾಸ ತತ್ತೋಯೈಃ ಪ್ರತ್ಯಕ್ಷಂ ಶಾರ್ಙ್ಗಧನ್ವನಃ ॥ ೪೦ ॥
ತತಃ ಸ ಬಾಲಕಃ ಸದ್ಯಃ ಸ್ನಾತಮಾತ್ರೋ ದ್ವಿಜೋತ್ತಮಾಃ ।
ಕುಷ್ಠವ್ಯಾಧಿವಿನಿರ್ಮುಕ್ತೋ ಜಾತೋ ಬಾಲಾರ್ಕಸನ್ನಿಭಃ ॥ ೪೧ ॥
ತತಃ ಪ್ರಣಮ್ಯ ತಂ ದೇವಂ ಹರ್ಷೇಣ ಮಹತಾನ್ವಿತಃ ।
ಪಿತ್ರಾ ಸಮಂ ಜಗಾಮಾಽಥ ಸ್ವಕೀಯಂ ಭವನಂ ದ್ವಿಜಾಃ ॥ ೪೨ ॥

---

೩೬. ಅಂಬರೀಷನು ಹೀಗೆ ಹೇಳಲು, ವಿಷ್ಣುವು ಧ್ಯಾನದಿಂದ ಪಾತಾಳಗಂಗೆಯನ್ನು ಸ್ಮರಿಸಿದನು.

೩೭. ಪ್ರಭುವಾದ ವಿಷ್ಣುವು ಸ್ಮರಿಸಲು ಆ ಗಂಗೆಯು ಸೂಕ್ಷ್ಮವಾದ ರಂಧ್ರವನ್ನು ಮಾಡಿ ಕೂಡಲೆ ಮೇಲಕ್ಕೆ ಬಂದಳು.

೩೮. ಅನಂತರ ವಿಷ್ಣುವು ಅಂಬರೀಷ ರಾಜನನ್ನು ಕುರಿತು, ನಿನ್ನ ಮಗನು ಪುಣ್ಯಕರವಾದ ಈ ಗಂಗೆಯ ನೀರಿನಲ್ಲಿ ಸ್ನಾನಮಾಡಲಿ.

೩೯. ಅದರಿಂದ ಕೂಡಲೆ ಬ್ರಹ್ಮಹತ್ಯವೆಂಬ ಮಹಾಪಾತಕಗಳಿಂದಲೂ, ಉಪಪಾತಕಗಳಿಂದಲೂ ಮುಕ್ತನಾಗಿ ಕುಷ್ಠರೋಗವಿಲ್ಲದವನಾಗುವನು.

೪೦. ಆ ರಾಜನು ಈ ಸಮಯದಲ್ಲಿಯೇ ತನ್ನ ಮಗನನ್ನು ಕರೆತಂದು ವಿಷ್ಣುವಿನ ಮುಂದೆ ಆ ನೀರಿನಿಂದ ಸ್ನಾನ ಮಾಡಿಸಿದನು.

೪೧. ದ್ವಿಜವರ್ಯರೆ! ಆ ಹುಡುಗನು ಮಿಂದ ಕೂಡಲೆ ಕುಷ್ಠವ್ಯಾಧಿಮುಕ್ತನಾಗಿ ಬಾಲಸೂರ್ಯನಂತಾದನು.

೪೨. ಬಳಿಕ ಅವನು ಆ ನಾರಾಯಣನನ್ನು ವಂದಿಸಿ ಅತ್ಯಂತ ಸಂತೋಷದಿಂದ ಕೂಡಿದವನಾಗಿ ತಂದೆಯೊಡನೆ ತನ್ನ ಮನೆಗೆ ಹೋದನು.

ತಸ್ಮಿನ್ಗತೇ ಮಹೀಪಾಲೇ ಸಪುತ್ರೇ ತತ್ಕ್ಷಣಾದ್ಧರಿಃ ।
ತದ್ರಂಧ್ರಂ ಪೂರಯಾಮಾಸ ಯಥಾ ನೋ ವೇತ್ತಿ ಕಶ್ಚನ ॥ ೪೩ ॥
ಏತಸ್ಮಾತ್ಕಾರಣಾತ್ಪೂರ್ವಂ ತತ್ತೋಯಂ ಸರ್ವಪಾಪಹೃತ್ ।
ಯದ್ಗೋಮುಖೇನ ಭೂಯೋಽಪಿ ಭೂತಲೇ ಪ್ರಕಟೀಕೃತಂ ॥ ೪೪ ॥
ಅದ್ಯಾಽಪಿ ತಜ್ಜಲಸ್ಪರ್ಶಾತ್ಸುಪವಿತ್ರೋ ಧರಾತಲೇ ।
ಯಃ ಸ್ನಾನಂ ಸೂರ್ಯವಾರೇಣ ಕುರುತೇಽರ್ಕೋದಯಂ ಪ್ರತಿ ।
ತಸ್ಯನಾಶಂ ದ್ರುತಂ ಯಾಂತಿ ಗಲಗಂಡಾದಿಕಾ ಇಹ ॥ ೪೫ ॥
ವ್ಯಾಧಯೋಽಪಿ ಮಹಾರೌದ್ರಾ ದದ್ರುಪಾಮಾ ಸಮುದ್ಭವಾಃ ।
ಉಪಸರ್ಗೋದ್ಭವಾಶ್ಚೈವ ವಿಸ್ಫೋಟಕ ವಿಚರ್ಚಿಕಾಃ ॥ ೪೬ ॥
ನಿಷ್ಕಾಮಸ್ತು ಪುನರ್ಮರ್ತ್ಯೋ ಯಃ ಸ್ನಾನಂ ತತ್ರಭಕ್ತಿತಃ ।
ಕುರುತೇ ಯಾತಿ ಲೋಕಂ ಸ ದೇವದೇವಸ್ಯ ಚಕ್ರಿಣಃ ॥ ೪೭ ॥
ಯಸ್ಮಿನ್ದಿನೇ ಸಮಾನೀತಾ ಸಾ ಗಂಗಾ ತತ್ರ ವಿಷ್ಣುನಾ ।
ತಸ್ಮಿನ್ದಿನೇ ವೃಷೇ ಸೂರ್ಯಃ ಸ್ಥಿತಶ್ಚಿತ್ರಾಸುಚಂದ್ರಮಾಃ ॥ ೪೮ ॥
ತಿಥಿಶ್ಚೈಕಾದಶೀ ಚೈವ ದೇವದೇವಸ್ಯ ಶಾರ್ಙ್ಗಿಣಃ ।
ಗೋವಕ್ತ್ರೇಣ ತೃಣಸ್ತಂಭಂ ಯಸ್ಮಿಂಶ್ಚೈವ ತು ವಾಸರೇ ।
ಸಮಾಕೃಷ್ಟಂ ಚ ತತ್ರೈವ ಯೋಗ ಏವಂ ವ್ಯವಸ್ಥಿತಃ ॥ ೪೯ ॥

---

೪೩. ಆ ಅಂಬರೀಷನು ಪುತ್ರನೊಡನೆ ಹೊರಟುಹೋಗಲು ಕೂಡಲೆ ವಿಷ್ಣುವು ಆ ರಂಧ್ರವನ್ನು ಯಾರೂ ಕಾಣದಂತೆ ಮುಚ್ಚಿದನು.

೪೪. ಈ ಕಾರಣದಿಂದ ಹಿಂದೆ ಆ ನೀರು ಸಕಲ ಪಾಪನಿವಾರಕವಾಯಿತು. ಗೋಮುಖವು ಅದನ್ನೇ ಮರಳಿ ಭೂಮಿಯಲ್ಲಿ ಪ್ರಕಟಿಸಿತು.

೪೫–೪೬. ಮಾನವನು ಈಗಲೂ ಅದರ ನೀರಿನ ಸ್ಪರ್ಶದಿಂದ ಪವಿತ್ರನಾಗುವನು. ಆದಿತ್ಯವಾರ ಸೂರ್ಯೋದಯ ಕಾಲದಲ್ಲಿ ಅಲ್ಲಿ ಮಿಂದ ಮಾನವನ ಭಯಂಕರವಾದ ಗಲಗಂಡ, ಕಜ್ಜಿ, ತುರಿ ಮೊದಲಾದ ರೋಗಗಳೂ, ವಿಸ್ಫೋಟಕ, ವಿಚರ್ಚಿಕಗಳೂ ನಾಶವಾಗುವುವು.

೪೭. ನಿಷ್ಕಾಮನಾದ ಮಾನವನು ಅಲ್ಲಿ ಭಕ್ತಿಯಿಂದ ಮಿಂದರೆ ಆವನು ವಿಷ್ಣುಲೋಕಕ್ಕೆ ತೆರಳುವನು.

೪೮–೪೯. ವಿಷ್ಣುವು ಪಾತಾಳದಿಂದ ಗಂಗೆಯನ್ನು ತಂದ ದಿನ ಸೂರ್ಯನು ವೃಷಭದಲ್ಲಿಯೂ, ಚಂದ್ರನು ಚಿತ್ರಾ ನಕ್ಷತ್ರದಲ್ಲಿಯೂ ಇದ್ದರು. ತಿಥಿಯು ವಿಷ್ಣುವಿನ ಸಂಬಂಧವಾದ ಏಕಾದಶೀ ತಿಥಿಯಾಗಿದ್ದಿತು. ಗೋವು ಹುಲ್ಲಿನ ಬುಡವನ್ನು ಎಳೆದ ದಿನವೂ ಇದೇ ಯೋಗವಿದ್ದಿತು.

ತಥಾಽನ್ಯೇಽಪಿ ದಿನೇ ತಸ್ಮಿನ್ಯದಿ ತೋಯಮವಾಪ್ಯ ಚ ।
ಸ್ನಾನಂ ಕರೋತಿ ಸದ್ಭಕ್ತ್ಯಾ ತತ್ಫಲಂ ಸೋಽಪಿ ಚಾಽಽಪ್ನುಯಾತ್ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗೋಮುಖತೀರ್ಥಮಾಹಾತ್ಮ್ಯವರ್ಣನಂ"
ನಾಮ ತ್ರಿಣವತಿತಮೋಽಧ್ಯಾಯಃ

---

೫೦. ಇತರರೂ ಇಂತಹ ಯೋಗವಿರುವ ಯಾವುದಾದರೂ ಒಂದು ದಿನ ನೀರನ್ನು ಪಡೆದು ಭಕ್ತಿಯಿಂದ ಮಿಂದರೆ ಆ ಫಲವನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗೋಮುಖತೀರ್ಥಮಾಹಾತ್ಮ್ಯವರ್ಣನ" ವೆಂಬ
ತೊಂಬತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಣವತಿತಮೋಽಧ್ಯಾಯಃ

### ಲೋಹಯಷ್ಟಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾಽನ್ಯಾ ಲೋಹಯಷ್ಟಿಸ್ತು ತಸ್ಮಿನ್ ಕ್ಷೇತ್ರೇಽತಿಶೋಭನಾ ।
ಮುಕ್ತಾ ಪರಶುರಾಮೇಣ ಭಂಕ್ತ್ವಾ ನಿಜಕುಠಾರಕಂ ॥ ೧ ॥
ತಾಂ ದೃಷ್ಟ್ವಾ ಮಾನವಃ ಸಮ್ಯಗುಪವಾಸ ಪರಾಯಣಃ ।
ಮುಚ್ಯತೇಹಿ ಸ್ವಕಾತ್ಪಾಪಾತ್ತತ್ಕ್ಷಣಾದ್ದ್ವಿಜಸತ್ತಮಾಃ ॥ ೨ ॥

ಋಷಯ ಊಚುಃ :—

ಕುತಃ ಪರಶುರಾಮೇಣ ಭಂಕ್ತ್ವಾ ನಿಜಕುಠಾರಕಂ ।
ನಿರ್ಮಿತಾ ಲೋಹಯಷ್ಟಿಃ ಸಾ ತತ್ರೋತ್ಸೃಷ್ಟಾ ಚ ಸಾ ಕುತಃ ॥ ೩ ॥

ಸೂತ ಉವಾಚ :—

ಯದಾ ರಾಮೋ ಹ್ರದಂ ಕೃತ್ವಾ ತರ್ಪಯಿತ್ವಾ ನಿಜಾನ್ ಪಿತೄನ್ ।
ಗತಾಮರ್ಷೋಽ ದ್ವಿಜೇಂದ್ರಾಣಾಂ ದತ್ವಾ ಯಜ್ಞೇ ವಸುಂಧರಾಂ ॥ ೪ ॥
ತತಃ ಸಂಪ್ರಸ್ಥಿತೋ ಹೃಷ್ಟೋ ಧೃತ್ವಾ ಮನಸಿ ಸಾಗರಂ ।
ಸ್ನಾನಾರ್ಥಂ ತಂ ಸಮಾದಾಯ ಕುಠಾರಂ ಭಾಸ್ಕರಪ್ರಭಂ ॥ ೫ ॥

---

## ಕನ್ನಡದ ಅನುವಾದ

### ಲೋಹಯಷ್ಟಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಆ ಕ್ಷೇತ್ರದಲ್ಲಿ ಪರಶುರಾಮನು ತನ್ನ ಕೊಡಲಿಯನ್ನು ತುಂಡುಮಾಡಿ ಮನೋಹರವಾದ ಕಬ್ಬಿಣದ ಯಷ್ಟಿಯನ್ನಿಟ್ಟಿರುವನು.

೨. ದ್ವಿಜೋತ್ತಮರೆ! ಮಾನವನು ಆ ಯಷ್ಟಿಯನ್ನು ನೋಡಿ ಉಪವಾಸ ಮಾಡಿದರೆ ಕೂಡಲೆ ತನ್ನ ಪಾಪದಿಂದ ಮುಕ್ತನಾಗುವನು.

೩. ಋಷಿಗಳು ಹೇಳುತ್ತಾರೆ:—ಪರಶುರಾಮನು ತನ್ನ ಕೊಡಲಿಯನ್ನು ತುಂಡುಮಾಡಿ ಲೋಹಯಷ್ಟಿಯನ್ನು ಏಕೆ ನಿರ್ಮಿಸಿದನು? ಮತ್ತು ಅದನ್ನು ಅಲ್ಲಿ ಏಕೆ ಬಿಟ್ಟನು?

೪-೬. ಸೂತನು ಹೇಳುತ್ತಾನೆ:—ಪರಶುರಾಮನು ರಕ್ತದ ಸರೋವರವನ್ನು ನಿರ್ಮಿಸಿ ತನ್ನ ಪಿತೃಗಳಿಗೆ ತರ್ಪಣಮಾಡಿ ಕೋಪರಹಿತನಾಗಿ ಬ್ರಾಹ್ಮಣರಿಗೆ ಭೂಮಿಯನ್ನಿತ್ತು ಸೂರ್ಯನಂತೆ ಪ್ರಕಾಶಿಸುವ ಕೊಡಲಿಯನ್ನು ತೆಗೆದುಕೊಂಡು

ತದಾ ಸ ಮುನಿಭಿಃ ಪ್ರೋಕ್ತಃ ಸರ್ವೈಸ್ತತ್ಕ್ಷೇತ್ರವಾಸಿಭಿಃ ।
ವಾಂಛದ್ಭಿಸ್ತು ಹಿತಂ ತಸ್ಯ ಸದಾ ಶಮುಪರಾಯಣೈಃ ॥ ೬ ॥
ರಾಮರಾಮ ಮಹಾಭಾಗ ಯದ್ಧಾರಯಸಿ ಪಾಣಿನಾ ।
ಶಸ್ತ್ರಂ ಪೂರ್ಣಪ್ರತಿಜ್ಞೋಽಪಿ ತನ್ನಯುಕ್ತಂ ಭವೇತ್ತವ ॥ ೭ ॥
ಅನೇನ ಕರಸಂಸ್ಥೇನ ತವ ಕೋಪಃ ಕಥಂಚನ ।
ನ ಯಾಸ್ಯತಿ ಶರೀರಸ್ಥಸ್ತಸ್ಮಾದೇನಂ ಪರಿತ್ಯಜ ॥ ೮ ॥
ತೇಷಾಂ ತದ್ವಚನಂ ಶ್ರುತ್ವಾ ತತೋ ರಾಮಃ ಕೃತಾಂಜಲಿಃ ।
ಪ್ರೋವಾಚ ವಿನಯೋಪೇತಃ ಪ್ರಹಸಂಸ್ತಾನ್ದ್ವಿಜೋತ್ತಮಾನ್ ॥ ೯ ॥
ಕುಠಾರಶ್ಚೈವ ವಿಪ್ರೇಂದ್ರಾ ರುದ್ರತೇಜೋದ್ಭವೇನ ಚ ।
ಲೋಹೇನ ನಿರ್ಮಿತಃ ಪೂರ್ವಮಸ್ಮಯೋ ವಿಶ್ವಕರ್ಮಣಾ ॥ ೧೦ ॥
ತದಹಂ ಸಂಪರಿತ್ಯಜ್ಯ ಕಥಮೇನಂ ದ್ವಿಜೋತ್ತಮಾಃ ।
ಕ್ಷತ್ರಧರ್ಮಪರೋಽಪ್ಯೇವಂ ಪ್ರಗಚ್ಛಾಮಿ ದಿಗಂತರಂ ॥ ೧೧ ॥
ಯದಿ ಚೈನಂ ಮಯಾ ಮುಕ್ತಂ ಕುಠಾರಂ ಚ ದ್ವಿಜೋತ್ತಮಾಃ ।
ಗ್ರಹೀಷ್ಯತಿ ಪರಃ ಕಶ್ಚಿನ್ಮಮ ವಧ್ಯೋ ಭವಿಷ್ಯತಿ ॥ ೧೨ ॥
ನಾಽಪರಾಧಮಿಮಂ ಶಕ್ತಃ ಸೋಢುಂ ಚಾಽಹಂ ಕಥಂಚನ ।
ಅಪಿ ಬ್ರಾಹ್ಮಣಮುಖ್ಯಸ್ಯ ಜನಸ್ಯಾಽನ್ಯಸ್ಯ ಕಾ ಕಥಾ ॥ ೧೩ ॥

---

ಸಂತೋಷದಿಂದ ಸ್ನಾನಕ್ಕಾಗಿ ಸಮುದ್ರಕ್ಕೆ ಪ್ರಯಾಣಮಾಡಲು ಆ ಕ್ಷೇತ್ರದಲ್ಲಿ ವಾಸಿಸುವ ಅವನಿಗೆ ಕ್ಷೇಮವನ್ನು ಬಯಸುವ ಮುನಿಗಳೆಲ್ಲ ಹೀಗೆಂದರು.

೭. "ಅತಿ ಪುಣ್ಯವಂತನಾದ ಪರಶುರಾಮನೆ! ನೀನು ನೆರವೇರಿದ ಪ್ರತಿಜ್ಞೆಯುಳ್ಳವನಾದರೂ ಆಯುಧವನ್ನು ಧರಿಸಿರುವೆ. ಇದು ಯುಕ್ತವಲ್ಲ.

೮. ಈ ಕೊಡಲಿಯು ಕೈಯಲ್ಲಿರುವುದರಿಂದ ನಿನ್ನ ಶರೀರದಲ್ಲಿರುವ ಕೋಪವು ನೀಗುವುದಿಲ್ಲ. ಆದುದರಿಂದ ಇದನ್ನು ತ್ಯಜಿಸು."

೯. ಅವರ ಆ ಮಾತನ್ನು ಕೇಳಿ ಪರಶುರಾಮನು ಕೈಮುಗಿದುಕೊಂಡು, ವಿನಯದಿಂದ ನಗುತ್ತ ಆ ಋಷಿಗಳನ್ನು ಕುರಿತು ಇಂತೆಂದನು.

೧೦. "ವಿಪ್ರರೆ! ನನ್ನೀ ಕುಠಾರವನ್ನು ಹಿಂದೆ ವಿಶ್ವಕರ್ಮನು ರುದ್ರನ ತೇಜಸ್ಸಿನಿಂದುಂಟಾದ ಲೋಹದಿಂದ ನಿರ್ಮಿಸಿದನು.

೧೧. ಆದುದರಿಂದ ಕ್ಷತ್ರಧರ್ಮನಿರತನಾದ ನಾನು ಈ ಕೊಡಲಿಯನ್ನು ಬಿಟ್ಟು ಹೇಗೆ ದಿಗಂತಕ್ಕೆ ಹೋಗಲಿ.

೧೨–೧೩. ನಾನು ಬಿಟ್ಟ ಕೊಡಲಿಯನ್ನು ಇತರರು ತೆಗೆದುಕೊಂಡರೆ ಅವನು ನನಗೆ ವಧ್ಯನಾಗುವನು. ನಾನು ಬ್ರಾಹ್ಮಣವರ್ಯನ ಇಂತಹ ಅಪರಾಧವನ್ನೂ ಸಹಿಸಲು ಶಕ್ತನಲ್ಲ. ಇತರರ ವಿಷಯವಿನ್ನೇನು.

ತಥಾಽಪಿ ನಾಸ್ತಿ ಮೇ ಶಾಂತಿರ್ಮುಕ್ತೇಽಪ್ಯಸ್ಮಿನ್ ದ್ವಿಜೋತ್ತಮಾಃ ।
ಗೃಹೀತೇಽಪಿ ಚ ಯುಷ್ಮಾಭಿಸ್ತಸ್ಮಾದ್ರಕ್ಷ್ಯಃ ಪ್ರಯತ್ನತಃ ॥ ೧೪ ॥

ಬ್ರಾಹ್ಮಣಾ ಊಚುಃ:—

ಯದ್ಯೇವಂ ತ್ವಂ ಮಹಾಭಾಗ ರಕ್ಷಾರ್ಥಂ ಸಂಪ್ರಯಚ್ಛಸಿ ।
ಅಸ್ಮಾಕಂ ತತ್ರ ಭಂಕ್ತ್ವಾಽಶು ಪಿಂಡಂ ಕೃತ್ವಾ ಸಮರ್ಪಯ ॥ ೧೫ ॥
ಯೇನ ರಕ್ಷಾಮಹೇ ಸರ್ವೇ ಪರಮಂ ಯತ್ನಮಾಶ್ರಿತಾಃ ।
ನ ಚ ಗೃಹ್ಣಾತಿ ವಾ ಕಶ್ಚಿದ್ಗತೇ ಕಾಲಾಂತರೇಽಪಿ ಚ ॥ ೧೬ ॥
ತೇಷಾಂ ತದ್ವಚನಂ ಶ್ರುತ್ವಾ ರಾಮಃ ಶಸ್ತ್ರಭೃತಾಂ ವರಃ ।
ಚಕ್ರೇ ಲೋಹಮಯೀಂ ಯಷ್ಟಿಂ ತಂ ಭಂಕ್ತ್ವಾ ಸ ಕುಠಾರಕಂ ॥ ೧೭ ॥
ತತಃ ಸ ಬ್ರಾಹ್ಮಣೇಂದ್ರಾಣಾಮರ್ಪಯಾಮಾಸ ಸಾದರಂ ।
ರಕ್ಷಾರ್ಥಂ ಭಾರ್ಗವಶ್ರೇಷ್ಠೋ ವಿನಯಾಽವನತಃ ಸ್ಥಿತಃ ॥ ೧೮ ॥

ಬ್ರಾಹ್ಮಣಾ ಊಚುಃ:—

ಲೋಹಯಷ್ಟಿಮಿಮಾಂ ರಾಮ ತ್ವತ್ಕುಠಾರಸಮುದ್ಭವಾಂ ।
ವಯಂ ಸಂರಕ್ಷಯಿಷ್ಯಾಮಃ ಪೂಜಯಿಷ್ಯಾಮ ಏವ ಹಿ ॥ ೧೯ ॥

---

೧೪. ಬ್ರಾಹ್ಮಣವರ್ಯರೆ! ಆದುದರಿಂದ ಈ ಕೊಡಲಿಯನ್ನು ನಾನು ಹಿಡಿದುಕೊಂಡರೂ, ತ್ಯಜಿಸಿದರೂ ನನ್ನ ಮನಸ್ಸು ಶಾಂತವಾಗುವುದಿಲ್ಲ. ಆದುದರಿಂದ ಪ್ರಯತ್ನದಿಂದ ಇದನ್ನು ಕಾಪಾಡಿರಿ.

೧೫. ಬ್ರಾಹ್ಮಣರು ಹೇಳುತ್ತಾರೆ:—ಮಹಾನುಭಾವನೆ! ನೀನು ಕಾಪಾಡುವುದಕ್ಕಾಗಿ ನಮಗೆ ಕೊಡುವುದಾದರೆ ಅದನ್ನು ಮುರಿದು ಉಂಡೆಯನ್ನು ಮಾಡಿ ಒಪ್ಪಿಸು.

೧೬. ಅದರಿಂದ ನಾವು ಅತ್ಯಂತ ಯತ್ನವುಳ್ಳವರಾಗಿ ಅದನ್ನು ರಕ್ಷಿಸುತ್ತೇವೆ. ಕಾಲಾಂತರದಲ್ಲಿಯೂ ಅದನ್ನು ಯಾವನೂ ತೆಗೆದುಕೊಳ್ಳುವುದಿಲ್ಲ.

೧೭. ಧನುರ್ಧಾರಿಗಳಲ್ಲಿ ಮೊದಲನೆಯವನಾದ ಆ ಬಲರಾಮನು ಆ ಬ್ರಾಹ್ಮಣರ ಆ ಮಾತನ್ನು ಕೇಳಿ ಆ ಕೊಡಲಿಯನ್ನು ಮುರಿದು ಕಬ್ಬಿಣದ ದೊಣ್ಣೆಯನ್ನಾಗಿ ಮಾಡಿದನು.

೧೮. ಬಳಿಕ ಅದನ್ನು ರಕ್ಷಣೆಗಾಗಿ ಬ್ರಾಹ್ಮಣರಿಗೆ ಒಪ್ಪಿಸಿ ವಿನಯದಿಂದ ಬಗ್ಗಿ ನಿಂತನು.

೧೯. ಬ್ರಾಹ್ಮಣರು ಹೇಳುತ್ತಾರೆ:— ಪರಶುರಾಮ! ನಾವು ನಿನ್ನ ಕೊಡಲಿಯಿಂದಾದ ಈ ಲೋಹಯಷ್ಟಿಯನ್ನು ಕಾಪಾಡುವೆವು ಮತ್ತು ಪೂಜಿಸುವೆವು.

ಯಥಾ ಶಕ್ತಿಮಯೀ ಕೀರ್ತಿಃ ಸ್ಕಂದಸ್ಯಾಽತ್ರ ಪ್ರತಿಷ್ಠಿತಾ ।
ಲೋಹಯಷ್ಟಿಮಯೀ ತದ್ವತ್ತವ ರಾಮ ಭವಿಷ್ಯತಿ ॥ ೨೦ ॥
ಭ್ರಷ್ಟರಾಜ್ಯಸ್ತು ಯೋ ರಾಜಾ ಏನಾಮಾರಾಧಯಿಷ್ಯತಿ ।
ಸ್ವಂ ರಾಜ್ಯಮಚಿರಾತ್ಪ್ರಾಪ್ಯ ಸ ಪ್ರತಾಪೀ ಭವಿಷ್ಯತಿ ॥ ೨೧ ॥
ವಿದ್ಯಾಕೃತೇ ದ್ವಿಜೋ ವಾ ಯಃ ಸದೈನಾಂ ಪೂಜಯಿಷ್ಯತಿ ।
ಸ ವಿದ್ಯಾಂ ಪರಮಾಂ ಪ್ರಾಪ್ಯ ಸರ್ವಜ್ಞತ್ವಂ ಪ್ರಪತ್ಸ್ಯತೇ ॥ ೨೨ ॥
ಅಪುತ್ರೋ ವಾ ನರೋ ಯೋಽಥ ನಾರೀ ವಾ ಪೂಜಯಿಷ್ಯತಿ ।
ಏತಾಂ ಯಷ್ಟಿಂ ತ್ವದೀಯಾಂ ಚ ಪುತ್ರವಾನ್ ಸ ಭವಿಷ್ಯತಿ ॥ ೨೩ ॥
ಉಪವಾಸಪರೋ ಭೂತ್ವಾ ಯಷ್ಟಿನಾಂ ಪೂಜಯಿಷ್ಯತಿ ।
ಆಶ್ವಿನಸ್ಯಾಽಸಿತೇ ಪಕ್ಷೇ ಚತುರ್ದಶ್ಯಾಂ ವಿಶೇಷತಃ ।
ಸ ಪ್ರಾಪ್ಸ್ಯತಿ ಸದಾ ಕಾಮಾನಭೀಷ್ಟಾನ್ ಮನಸಿ ಸ್ಥಿತಾನ್ ॥ ೨೪ ॥
ಏವಂ ಶ್ರುತ್ವಾ ತತೋ ರಾಮಸ್ತೇಷಾಮೇವ ದ್ವಿಜನ್ಮನಾಂ ।
ಪ್ರಣಮ್ಯ ಪ್ರಯಯೌ ತೂರ್ಣಂ ಸಮುದ್ರಸದನಂ ಪ್ರತಿ ॥ ೨೫ ॥
ತೇಽಪಿ ವಿಪ್ರಾಸ್ತತಸ್ತಸ್ಯಾಶ್ಚಕ್ರುಃ ಪ್ರಾಸಾದಮುತ್ತಮಂ ।
ತತ್ರ ಸಂಸ್ಥಾಪ್ಯ ತಾಂ ಚಕ್ರುಸ್ತತಃ ಪೂಜಾಂ ಸಮಾಹಿತಾಃ ॥ ೨೬ ॥

---

೨೦. ರಾಮ! ಸ್ಕಂದನ ಶಕ್ತಿರೂಪವಾದ ಕೀರ್ತಿಯು ಇಲ್ಲಿ ಸ್ಥಾಪಿತವಾಗಿರುವಂತೆ ನಿನ್ನ ಲೋಹಯಷ್ಟಿರೂಪವಾದ ಕೀರ್ತಿಯು ಶಾಶ್ವತವಾಗಿರುವುದು.

೨೧. ರಾಜ್ಯಭ್ರಷ್ಟನಾದ ರಾಜನು ಈ ಲೋಹಯಷ್ಟಿಯನ್ನು ಪೂಜಿಸಿದರೆ ಮರಳಿ ತನ್ನ ರಾಜ್ಯವನ್ನು ಪಡೆದು ಪ್ರತಾಪಶಾಲಿಯಾಗುವನು.

೨೨. ಅಥವಾ ಬ್ರಾಹ್ಮಣನು ವಿದ್ಯೆಗಾಗಿ ಯಾವಾಗಲೂ ಈ ಯಷ್ಟಿಯನ್ನು ಅರ್ಚಿಸಿದರೆ ಅವನು ಉತ್ತಮವಾದ ವಿದ್ಯೆಯನ್ನು ಹೊಂದಿ ಸರ್ವಜ್ಞನಾಗುವನು.

೨೩. ಮಕ್ಕಳಿಲ್ಲದ ಹೆಂಗಸಾಗಲಿ, ಗಂಡಸಾಗಲಿ ಈ ನಿನ್ನ ಯಷ್ಟಿಯನ್ನು ಆರಾಧಿಸಿದರೆ ಪುತ್ರವಂತರಾಗುವರು.

೨೪. ಆಶ್ವಿನ ಕೃಷ್ಣ ಪಕ್ಷ ಚತುರ್ದಶೀ ದಿನ ಉಪವಾಸ ಮಾಡಿ ಈ ಯಷ್ಟಿಯನ್ನು ಅರ್ಚಿಸಿದವನು ಯಾವಾಗಲೂ ಮನೋಭೀಷ್ಟವನ್ನು ಪಡೆಯುವನು.

೨೫. ಪರಶುರಾಮನು ಇದನ್ನು ಕೇಳಿ ಆ ಬ್ರಾಹ್ಮಣರನ್ನು ವಂದಿಸಿ ಬೇಗನೆ ಸಮುದ್ರರೂಪವಾದ ಮನೆಗೆ ತೆರಳಿದನು.

೨೬. ಆ ಬ್ರಾಹ್ಮಣರು ಆ ಯಷ್ಟಿಗೆ ಉತ್ತಮ ಪ್ರಾಸಾದವನ್ನು ನಿರ್ಮಿಸಿ ಅಲ್ಲಿ ಅದನ್ನು ಸ್ಥಾಪಿಸಿ ಸಾವಧಾನ ಮನಸ್ಸಿನಿಂದ ಪೂಜಿಸಿದರು.

ಪ್ರಾಪ್ನುವಂತಿ ಚ ತತ್ಪಾರ್ಶ್ವಾತ್ಕಾಮಾನೇವ ಹೃದಿಸ್ಥಿತಾನ್ ।
ಸುಸ್ತೋಕೇನಾಽಪಿ ಕಾಲೇನ ದುರ್ಲಭಾಂ ತ್ರಿದಶೈರಪಿ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಲೋಹಯಷ್ಟಿಮಾಹಾತ್ಮ್ಯವರ್ಣನಂ" ನಾಮ
ಚತುರ್ಣವತಿತಮೋಽಧ್ಯಾಯಃ

---

೨೭. ಅದರಿಂದ ಅವರು ಸ್ವಲ್ಪಕಾಲದಲ್ಲಿಯೇ ದೇವದುರ್ಲಭವಾದ ಮನೋಭೀಷ್ಟಗಳನ್ನು ಹೊಂದಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಲೋಹಯಷ್ಟಿಮಾಹಾತ್ಮ್ಯವರ್ಣನ"ವೆಂಬ
ತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚನವತಿತಮೋಽಧ್ಯಾಯಃ

### ಅಜಾಪಾಲೇಶ್ವರೀಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಥಾಽನ್ಯಾಽಪಿ ಚ ತತ್ರಾಽಸ್ತಿ ದೇವೀ ಕಾಮಪ್ರದಾ ನೃಣಾಂ ।
ಅಜಾಪಾಲೇನ ಭೂಪೇನ ಸ್ಥಾಪಿತಾ ಪಾಪನಾಶನೀ ॥ ೧ ॥
ತಾಂ ಚ ಶುಕ್ಲಚತುರ್ದಶ್ಯಾಮಜಾಪಾಲೇಶ್ವರೀಂ ನರಃ ।
ಯೋ ವೈ ಪೂಜಯತೇ ಭಕ್ತ್ಯಾ ಧೂಪಪುಷ್ಪಾನುಲೇಪನೈಃ ।
ಸ ಪ್ರಾಪ್ನೋತೀಪ್ಸಿತಾನ್ ಕಾಮಾನ್ ದುರ್ಲಭಾನ್ ಸರ್ವಮಾನವೈಃ ॥ ೨ ॥
ತಸ್ಯಾ ದೇವ್ಯಾಃ ಪ್ರಸಾದೇನ ಸತ್ಯಮೇತನ್ಮಯೋದಿತಂ ।
ಅಜಾಪಾಲೋ ಮಹೀಪಾಲಃ ಪುರಾಽಽಸೀತ್ಸಂಮತಃ ಸತಾಂ ॥ ೩ ॥
ಹಿತಕೃತ್ಸರ್ವಲೋಕಸ್ಯ ಯಥಾ ಮಾತಾ ಯಥಾ ಪಿತಾ ।
ತೇನ ರಾಜ್ಯಂ ಸಮಾಸಾದ್ಯ ಪಿತೃಪೈತಾಮಹಂ ಶುಭಂ ॥ ೪ ॥
ಚಿಂತಿತಂ ಮನಸಾ ಪಶ್ಚಾತ್ಸ್ವಯಮೇವ ಮಹಾತ್ಮನಾ ।
ಮಯಾ ತತ್ಕರ್ಮ ಕರ್ತವ್ಯಂ ಯದನ್ಯೈರಿಹ ಭೂಮಿಪೈಃ ।
ನ ಕೃತಂ ನ ಕರಿಷ್ಯಂತಿ ಯೇ ಭವಿಷ್ಯಂತ್ಯತಃ ಪರಂ ॥ ೫ ॥

---

### ಕನ್ನಡದ ಅನುವಾದ

#### ಅಜಾಪಾಲೇಶ್ವರೀಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:— ಅಲ್ಲಿ ಪಾಪವನ್ನು ನಿವಾರಿಸುವವಳೂ, ಅಜಾಪಾಲ ರಾಜನಿಂದ ಸ್ಥಾಪಿತಳಾಗಿರುವವಳೂ, ಇಷ್ಟಪ್ರದಳೂ ಆದ ದೇವಿ ಇರುವಳು.

೨–೫. ಶುಕ್ಲ ಚತುರ್ದಶೀ ದಿನ ಭಕ್ತಿಯಿಂದ ಧೂಪ, ಪುಷ್ಪಾನುಲೇಪನಗಳಿಂದ ಆ ಅಜಾಪಾಲಿಯನ್ನು ಪೂಜಿಸುವ ಮಾನವನು ಆ ದೇವಿಯ ಅನುಗ್ರಹದಿಂದ ಸಕಲ ಮಾನವ ದುರ್ಲಭವಾದ ಇಷ್ಟಾರ್ಥಗಳನ್ನು ಹೊಂದುವನು. ನಾನು ಹೇಳಿರುವುದು ನಿಜ. ಹಿಂದೆ ಸಜ್ಜನರಿಗೆ ಸಮ್ಮತನೂ, ಸಮಸ್ತ ಜನರಿಗೆ ತಂದೆ ತಾಯಿಗಳಂತೆ ಹಿತವನ್ನುಂಟುಮಾಡುವವನೂ ಆದ ಅಜಾಪಾಲನೆಂಬ ರಾಜನಿದ್ದನು. ಅವನು ಪಿತೃಪಿತಾಮಹ ಸಂಬಂಧವಾದ ರಾಜ್ಯವನ್ನು ಹೊಂದಿ ಹೀಗೆ ಆಲೋಚಿಸಿ ಹಿಂದಿನ ಇತರ ರಾಜರು ಮಾಡದಿರುವುದೂ, ಮುಂದಿನ ರಾಜರು ಮುಂದೆ ಮಾಡದಿರುವುದೂ ಆದ ಕಾರ್ಯವನ್ನು ನಾನು ಮಾಡಬೇಕು.

ಏಷ ಏವ ಪರೋಧರ್ಮೋ ಭೂಪತೀನಾಮುದಾಹೃತಃ ।
ಯತ್ಪ್ರಜಾಪಾಲನಂ ಶಶ್ವತ್ತಾಸಾಂ ಚ ಸುಖಸಂಸ್ಥಿತಿಃ ॥ ೬ ॥
ಯಥಾ ಯಥಾ ಕರಂ ಭೂಪಾಸ್ತಾಸಾಂ ಗೃಹ್ಣಂತಿ ಲೋಲುಪಾಃ ।
ತಥಾ ತಥಾ ಮನಃ ಕ್ಷೋಭೋ ಹೃದಯೇ ಸಂಪ್ರಜಾಯತೇ ॥ ೭ ॥
ನ ಕರೇಣ ವಿನಾ ಭೂಪಾ ಹಸ್ತ್ಯಶ್ವಾದಿ ಬಲಂ ಚ ಯತ್ ।
ಶಕ್ನುವಂತಿ ಪರಿತ್ರಾತುಂ ಪಾದಾತಂ ಚ ವಿಶೇಷತಃ ॥ ೮ ॥
ವಿನಾ ತೇನ ಸ ಗಮ್ಯಃ ಸ್ಯಾನ್ನೀಚಾನಾಮಪಿ ಸತ್ವರಂ ।
ಏತಸ್ಮಾತ್ಕಾರಣಾದ್ಭೂಪಾಃ ಕರಂ ಗೃಹ್ಣಂತಿ ಲೋಕತಃ ॥ ೯ ॥
ತಸ್ಮಾನ್ಮಯಾ ವಿನಾಪ್ಯಾಶು ನಾಗೈಶ್ಚೈವ ನರೈಸ್ತಥಾ ।
ತಪಃ ಶಕ್ತ್ಯಾ ಪ್ರಕರ್ತವ್ಯಂ ರಾಜ್ಯಂ ನಿಹತಕಂಟಕಂ ॥ ೧೦ ॥
ಕರಾನಗೃಹ್ಣತಾ ತೇನ ಲೋಕಾನ್ರಂಜಯತಾ ಸದಾ ।
ಅನ್ಯೇಷಾಂ ಭೂಮಿಪಾಲಾನಾಂ ವಿಶೇಷೇಣ ಮಹಾತ್ಮನಾಂ ॥ ೧೧ ॥
ಏವಂ ಚಿತ್ತೇ ಸಮಾಧಾಯ ವಸಿಷ್ಠಂ ಮುನಿಪುಂಗವಂ ।
ಪುರೋಧಸಂ ಸಮಾಹೂಯ ತತಃ ಪ್ರೋವಾಚ ಸಾದರಂ ॥ ೧೨ ॥

---

೬. ಯಾವಾಗಲೂ ಪ್ರಜೆಗಳನ್ನು ಕಾಪಾಡುವುದೂ, ಅವರನ್ನು ಸುಖಗೊಳಿಸುವುದೂ ರಾಜರಿಗೆ ಉತ್ತಮವಾದ ಧರ್ಮವಾಗಿರುವುದು.

೭. ರಾಜರು ಹಣದ ಆಶೆಯಿಂದ ಕಪ್ಪವನ್ನು ತೆಗೆದುಕೊಂಡ ಹಾಗೆಲ್ಲ ಅವರ ಮನಸ್ಸು ಕ್ಷೋಭೆಗೊಳ್ಳುವುದು.

೮. ದೊರೆಗಳು ಕಪ್ಪವನ್ನು ತೆಗೆದುಕೊಳ್ಳದೆ ಆನೆ, ಕುದುರೆ ಮೊದಲಾದ ಬಲವನ್ನೂ, ವಿಶೇಷವಾಗಿ ಕಾಲಾಳುಗಳನ್ನೂ ಕಾಪಾಡಲು ಸಮರ್ಥರಾಗುವುದಿಲ್ಲ.

೯. ಆ ಆನೆ ಮೊದಲಾದ ಬಲಗಳಿಲ್ಲದಿದ್ದರೆ ಅವರನ್ನು ಅಲ್ಪ ಜನರೂ ಸೋಲಿಸುವರು. ಆದುದರಿಂದ ರಾಜರು ಜನರಿಂದ ಕಪ್ಪವನ್ನು ತೆಗೆದುಕೊಳ್ಳುತ್ತಾರೆ. ।

೧೦–೧೧. ಆದುದರಿಂದ ನಾನು ಆನೆ, ಮನುಷ್ಯರನ್ನುಳಿದು ಇತರ ಮಹಾತ್ಮರಾದ ರಾಜರಿಂದ ಕಪ್ಪವನ್ನು ತೆಗೆದುಕೊಳ್ಳದೆ ಪ್ರಜೆಗಳನ್ನು ಸಂತೋಷಗೊಳಿಸುತ್ತ ತಪಸ್ಸಿನ ಶಕ್ತಿಯಿಂದ ರಾಜ್ಯದಲ್ಲಿ ಶತ್ರುಗಳಿಲ್ಲದಂತೆ ಮಾಡುವೆನು.

೧೨. ಅವನು ಹೀಗೆ ಆಲೋಚಿಸಿ ಪುರೋಹಿತನಾದ ವಸಿಷ್ಠ ಮುನಿಯನ್ನು ಕರೆಯಿಸಿ ಪ್ರೀತಿಯಿಂದ ಇಂತೆಂದನು.

ಅತ್ರಭೂಮಿತಲೇ ವಿಪ್ರ ಸರ್ವೇಷಾಂ ತೀರ್ಥಮುತ್ತಮಂ ।
ಅಲ್ಪಕಾಲೇನ ಸಂತುಷ್ಟಿಂ ಯತ್ರ ಯಾತಿ ಮಹೇಶ್ವರಃ ।
ವಾಸುದೇವೋಽಥವಾ ಬ್ರಹ್ಮಾ ಹ್ಯೇತಚ್ಛೀಘ್ರಂ ವದಸ್ವಮೇ ॥ ೧೩ ॥
ಯೇನಾಽಹಂ ಸರ್ವಲೋಕಸ್ಯ ಹಿತಾರ್ಥಂ ತಪ ಆದದೇ ।
ನ ಸ್ವಾರ್ಥಂ ಬ್ರಾಹ್ಮಣಶ್ರೇಷ್ಠ ಸತ್ಯೇನಾತ್ಮಾನಮಾಲಭೇ ॥ ೧೪ ॥

ವಸಿಷ್ಠ ಉವಾಚ :—

ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಮಿಹ ಭೂತಲೇ ।
ಸಂತಿ ಪಾರ್ಥಿವಶಾರ್ದೂಲ ಪ್ರಭಾವಸಹಿತಾನಿ ಚ ॥ ೧೫ ॥
ಅಷ್ಟಷಷ್ಟಿಸ್ತಥಾ ರಾಜನ್ ಕ್ಷೇತ್ರಾಣಾಮಸ್ತಿ ಭೂತಲೇ ।
ಯೇಷಾಂ ಸಾನ್ನಿಧ್ಯಮಭ್ಯೇತಿ ಸರ್ವದೈವ ಮಹೇಶ್ವರಃ ॥ ೧೬ ॥
ತಥಾ ಸರ್ವೇ ಸುರಾಸ್ತುಷ್ಟಾ ಬ್ರಹ್ಮವಿಷ್ಣುಶಿವಾದಯಃ ।
ಪರಂ ಸಿದ್ಧಿಪ್ರದಂ ಶೀಘ್ರಂ ಮಾನುಷಾಣಾಂ ಮಹೀಪತೇ ॥ ೧೭ ॥
ಹಾಟಕೇಶ್ವರದೇವಸ್ಯ ಕ್ಷೇತ್ರಂ ಪಾತಕನಾಶನಂ ।
ದೇವಾನಾಮಪಿ ಸರ್ವೇಷಾಂ ತುಷ್ಟಿಂ ಗಚ್ಛತಿ ಚಂಡಿಕಾ ॥ ೧೮ ॥
ಶೀಘ್ರಮಾರಾಧಿತಾ ಸಮ್ಯಕ್ಶ್ರದ್ಧಾಯುಕ್ತೈರ್ನರೈರ್ಭುವಿ ।
ತಸ್ಮಾತ್ತತ್ಕ್ಷೇತ್ರಮಾಸಾದ್ಯ ತಾಂ ದೇವೀಂ ಶ್ರದ್ಧಯಾನ್ವಿತಃ ।
ಆರಾಧಯ ಮಹಾಭಾಗ ದ್ರುತಂ ಸಿದ್ಧಿಮವಾಪ್ಸ್ಯಸಿ ॥ ೧೯ ॥

---

೧೩–೧೪. ಮುನಿಯೆ! ಈ ಭೂಲೋಕದಲ್ಲಿ ಬ್ರಹ್ಮನಾಗಲಿ, ವಿಷ್ಣುವಾಗಲಿ, ಮಹೇಶ್ವರನಾಗಲಿ ಬೇಗನೆ ಸಂತೋಷಗೊಳ್ಳುವ ಸಮಸ್ತ ತೀರ್ಥಗಳಲ್ಲಿ ಉತ್ತಮವಾದ ತೀರ್ಥವಾವುದು? ಬ್ರಾಹ್ಮಣೋತ್ತಮನೆ! ನಾನು ಅದನ್ನರಿತು ಸಕಲ ಲೋಕಗಳ ಹಿತಕ್ಕಾಗಿ ತಪವನ್ನು ಆಚರಿಸುವೆನು. ನನ್ನ ಪ್ರಯೋಜನಕ್ಕಾಗಿ ಅಲ್ಲ. ಸತ್ಯವಾಗಿ ಆಣೆಯಿಡುವೆನು.

೧೫. ವಸಿಷ್ಠನು ಹೇಳುತ್ತಾನೆ:—ಮಹಾರಾಜ! ಈ ಭೂಲೋಕದಲ್ಲಿ ಮಾಹಾತ್ಮ್ಯವುಳ್ಳ ಮೂರೂವರೆಕೋಟಿ ತೀರ್ಥಗಳಿರುವುವು.

೧೬–೧೯. ಹಾಗೆಯೇ ಅರವತ್ತೆಂಟು ಕ್ಷೇತ್ರಗಳಿವೆ. ಅವುಗಳಲ್ಲಿ ಮಹೇಶ್ವರನು ಯಾವಾಗಲೂ ಸನ್ನಿಹಿತನಾಗಿರುವನು. ಹಾಗೆಯೇ ಬ್ರಹ್ಮ, ವಿಷ್ಣು, ಶಿವ ಮೊದಲಾದ ಸುರರೂ ಸಂತುಷ್ಟರಾಗುವರು. ಅವುಗಳಲ್ಲಿ ಬೇಗನೆ ಸಿದ್ಧಿಯನ್ನೀಯುವ ಸಕಲ ಪಾಪಗಳನ್ನು ನಾಶಗೊಳಿಸುವ ಹಾಟಕೇಶ್ವರ ಕ್ಷೇತ್ರವಾಗಿರುವುದು. ಭೂಮಿಯಲ್ಲಿ ಶ್ರದ್ಧೆಯಿಂದ ಪೂಜಿಸಿದ ಮಾನವರಿಗೂ, ದೇವತೆಗಳಿಗೂ ಚಂಡಿಕೆಯು ಬೇಗನೆ ಪ್ರಸನ್ನಳಾಗುವಳು. ಆದುದರಿಂದ ಮಹಾರಾಜ! ನೀನು ಆ ಕ್ಷೇತ್ರವನ್ನು ಹೊಂದಿ ಆ ದೇವಿಯನ್ನು ಶ್ರದ್ಧೆಯಿಂದ ಆರಾಧಿಸು. ಅದರಿಂದ ಬೇಗನೆ ಸಿದ್ಧಿಯನ್ನು ಪಡೆಯುವೆ.

ಏವಮುಕ್ತಃ ಸ ತೇನಾಽಥ ಗತ್ವಾ ತತ್ಕ್ಷೇತ್ರಮುತ್ತಮಂ ।
ಪ್ರತಿಷ್ಠಾಪ್ಯ ಚ ದೇವೀಂ ತಾಂ ಪೂಜಯಾಮಾಸ ಭಕ್ತಿತಃ ॥ ೨೦ ॥
ಬ್ರಹ್ಮಚರ್ಯಪರೋ ಭೂತ್ವಾ ಶುಚಿರ್ವ್ರತಪರಾಯಣಃ ।
ನಿಯತೋ ನಿಯತಾಹಾರ ಸ್ತ್ರಿಕಾಲಂ ಸ್ನಾನಮಾಚರನ್ ॥ ೨೧ ॥
ಏವಮಾರಾಧ್ಯತಸ್ತತ್ರ ಗಂಧಪುಷ್ಪಾನುಲೇಪನೈಃ ।
ಪೂಜಾಪರಸ್ಯ ಸಾ ದೇವೀ ತಸ್ಯ ತುಷ್ಟಿಂ ತತೋ ಗತಾ ॥ ೨೨ ॥

ದೇವ್ಯುವಾಚ:—

ಪರಿತುಷ್ಟಾಽಸ್ಮಿ ತೇ ವತ್ಸ ವ್ರತೇನಾಽನೇನ ನಿತ್ಯಶಃ ।
ಬಲಿಪೂಜಾವಿಧಾನೇನ ವಿಹಿತೇನಾಽಮುನಾ ಸ್ವಯಂ ॥ ೨೩ ॥
ತದ್ಬ್ರೂಹಿ ಯೇನ ತೇ ಸರ್ವಂ ಪ್ರಕರೋಮಿ ಹೃದಿ ಸ್ಥಿತಂ ।
ಸದ್ಯ ಏವ ಮಹೀಪಾಲ ತ್ರಿದಶೈರಪಿ ದುರ್ಲಭಂ ॥ ೨೪ ॥

ರಾಜೋವಾಚ:—

ಲೋಕಾನಾಂ ಹಿತಕಾಮೇನ ಮಯೈತದ್ವ್ರತಮಾಹೃತಂ ।
ಯೇನ ತೇಷಾಂ ಭವೇತ್ಸೌಖ್ಯಂ ಮತ್ಪ್ರಸಾದಾದನುತ್ತಮಂ ॥ ೨೫ ॥
ತಸ್ಮಾದ್ದೇಹಿ ಮಹಾಭಾಗೇ ಜ್ಞಾನ ಯುಕ್ತಾನಿ ಭೂರಿಶಃ ।
ಮಮಾಽಸ್ತ್ರಾಣಿ ವಿಚಿತ್ರಾಣಿ ಸ್ವೈರಗಾಣಿ ಸಮಂತತಃ ॥ ೨೬ ॥

---

೨೦–೨೧. ವಸಿಷ್ಠನು ಹೀಗೆ ಹೇಳಲು ಆ ರಾಜನು ಶೀಘ್ರವಾಗಿ ಆ ಕ್ಷೇತ್ರಕ್ಕೆ ಹೋಗಿ ಆ ದೇವಿಯನ್ನು ಪ್ರತಿಷ್ಠೆಮಾಡಿ ಬ್ರಹ್ಮಚರ್ಯನಿರತನೂ, ಶುದ್ಧನೂ, ವ್ರತಾಸಕ್ತನೂ, ಮಿತಾಹಾರಿಯೂ, ಜಿತೇಂದ್ರಿಯನೂ, ತ್ರಿಕಾಲ ಸ್ನಾನಮಾಡುವವನೂ ಆಗಿ ಭಕ್ತಿಯಿಂದ ಪೂಜಿಸಿದನು.

೨೨. ಅಲ್ಲಿ ಹೀಗೆ ಗಂಧ ಪುಷ್ಪಾದಿಗಳಿಂದ ಆರಾಧಿಸುತ್ತಿರುವ ಅವನಿಗೆ ದೇವಿಯು ಸಂತುಷ್ಟಳಾದಳು.

೨೩. ದೇವಿಯು ಹೇಳುತ್ತಾಳೆ:—ಮಗು! ನಿನ್ನೀ ವ್ರತದಿಂದಲೂ, ಪೂಜಾ ಕ್ರಮದಿಂದಲೂ ನಾನು ಸಂತುಷ್ಟಳಾಗಿರುವೆನು.

೨೪. ಆದುದರಿಂದ ಹೇಳು. ನಿನ್ನ ಮನೋಭೀಷ್ಟವು ದೇವದುರ್ಲಭವಾಗಿದ್ದರೂ ಅದನ್ನು ಕೊಡುವೆನು.

೨೫. ರಾಜನು ಹೇಳುತ್ತಾನೆ:—ನಾನು ಪ್ರಜೆಗಳ ಹಿತಕ್ಕಾಗಿ ಈ ವ್ರತವನ್ನು ಮಾಡಿರುವೆನು. ಇದರಿಂದ ನನ್ನ ಪ್ರಜೆಗಳಿಗೆ ಅತಿಶಯ ಸೌಖ್ಯವುಂಟಾಗಬೇಕು.

೨೬. ಆದುದರಿಂದ ನನಗೆ ಜ್ಞಾನವುಳ್ಳವೂ, ವಿಚಿತ್ರಗಳೂ, ಸ್ವೇಚ್ಛೆಯಾಗಿ ಹೋಗುವುವೂ ಆದ ಅಸ್ತ್ರಗಳನ್ನು ಕೊಡು.

ಯಾನಿ ಜಾನಂತಿ ಭೂಪೃಷ್ಠೇ ಮಮ ಪಾರ್ಶ್ವೇ ಸ್ಥಿತಾನ್ಯಪಿ ।
ಅಪರಾಧಂ ಸದಾ ಲೋಕೇ ಪರದಾರಾದಿ ಯತ್ಕೃತಂ ॥ ೨೭ ॥
ಅನುರೂಪಂ ತತಸ್ತಸ್ಯ ಪಾತಕಸ್ಯ ವಿನಿಗ್ರಹಂ ।
ಪ್ರಕುರ್ವಂತಿ ಮಿಥೋ ಯೇನ ನ ತೇಷಾಂ ಸಂಕರೋ ಭವೇತ್ ॥ ೨೮ ॥
ಮಂತ್ರಗ್ರಾಮಂ ತಥಾ ದೇವಿ ಮಮ ದೇಹಿ ಪೃಥಗ್ವಿಧಂ ।
ನಿಗ್ರಹಂ ವ್ಯಾಧಿಸತ್ವಾನಾಂ ಯೇನ ಶೀಘ್ರಂ ಕರೋಮ್ಯಹಂ ॥ ೨೯ ॥
ಯೇನ ಸ್ಯುರ್ಮನುಜಾಃ ಸರ್ವೇ ಮಮ ರಾಜ್ಯೇ ಸುಖಾನ್ವಿತಾಃ ।
ನೀರೋಗಾಃ ಪುಷ್ಟಿಸಂಪನ್ನಾ ಭಯಶೋಕವಿವರ್ಜಿತಾಃ ॥ ೩೦ ॥
ನಾಽಹಂ ದೇವಿ ಕರಿಷ್ಯಾಮಿ ಹಸ್ತ್ಯಶ್ವರಥ ಸಂಗ್ರಹಂ ।
ಯತಸ್ತೇಷಾಂ ಭವೇತ್ಪುಷ್ಟಿರ್ವಿತ್ತೈರ್ವಿತ್ತಂ ಕರೈರ್ಭವೇತ್ ।
ಗೃಹೀತೈಃ ಸರ್ವಲೋಕಾನಾಂ ತಸ್ಮಾತ್ತತ್ರ ಮಮೇಪ್ಸಿತಂ ॥ ೩೧ ॥

ಶ್ರೀ ದೇವ್ಯುವಾಚ :—

ಅತ್ಯದ್ಭುತತರಂ ಕರ್ಮ ತ್ವಯೈತತ್ಪೃಥಿವೀಪತೇ ।
ಪ್ರಾರಬ್ಧಂ ಯನ್ನ ಕೇನಾಽಪಿ ಕೃತಂ ನ ಚ ಕರಿಷ್ಯತಿ ॥ ೩೨ ॥
ತಥಾಪ್ಯೇವಂ ಕರಿಷ್ಯಾಮಿ ತವ ದಾಸ್ಯಾಮಿ ಕೃತ್ಸ್ನಶಃ ।
ಜ್ಞಾನಯುಕ್ತಾನಿ ಶಸ್ತ್ರಾಣಿ ಮಂತ್ರಗ್ರಾಮಂ ಚ ತಾದೃಶಂ ॥ ೩೩ ॥

---

೨೭. ಅದರಿಂದ ಅಸ್ತ್ರಗಳು ನನ್ನ ಹತ್ತಿರವಿದ್ದಾಗ್ಗೂ ಭೂಲೋಕದಲ್ಲಿ ಜನರು ಮಾಡುವ ಪರದಾರಗಮನಾದಿ ಪಾಪಗಳನ್ನು ತಿಳಿಯಲಿ.

೨೮. ಅವು ಪಾಪಗಳಿಗೆ ಅನುರೂಪವಾದ ಶಿಕ್ಷೆಯನ್ನು ಮಾಡಲಿ. ಅವು ಪರಸ್ಪರ ಮಿಶ್ರವಾಗದಿರಲಿ.

೨೯. ದೇವಿ! ಹಾಗೆಯೇ ನನಗೆ ನಾನಾ ವಿಧವಾದ ಮಂತ್ರಗಳನ್ನು ಕೊಡು. ಅದರಿಂದ ನಾನು ಬೇಗನೆ ವ್ಯಾಧಿಗಳನ್ನು ನಿಗ್ರಹಿಸುವೆನು.

೩೦. ನನ್ನ ರಾಜ್ಯದಲ್ಲಿ ಪ್ರಜೆಗಳೆಲ್ಲ ಸುಖಿಗಳೂ, ರೋಗವಿಲ್ಲದವರೂ, ಪುಷ್ಟರೂ, ಭಯ ದುಃಖವಿಲ್ಲದವರೂ ಆಗುವರು.

೩೧. ದೇವಿ! ಪ್ರಜೆಗಳಿಂದ ತೆಗೆದುಕೊಂಡ ಕಂದಾಯದಿಂದ ದ್ರವ್ಯವೂ, ಆ ದ್ರವ್ಯದಿಂದ ಆನೆ, ಕುದುರೆ ಮೊದಲಾದುವುಗಳ ಪೋಷಣೆಯೂ ಆಗಬೇಕಾಗಿರುವುದರಿಂದ ನಾನು ಆ ಆನೆ ಮೊದಲಾದುವನ್ನು ಸಂಗ್ರಹಿಸುವುದಿಲ್ಲ. ಅದು ನನಗೆ ಇಷ್ಟವಾದುದಲ್ಲ.

೩೨. ಶ್ರೀದೇವಿಯು ಹೇಳುತ್ತಾಳೆ:—ದೊರೆಯೆ! ನೀನು ಅತ್ಯದ್ಭುತವಾದ ಕಾರ್ಯವನ್ನು ಆರಂಭಿಸಿರುವೆ. ಇದನ್ನು ಯಾರೂ ಮಾಡಲಿಲ್ಲ. ಮಾಡುವುದೂ ಇಲ್ಲ.

೩೩. ಆದರೂ ನಾನು ನಿನಗೆ ಜ್ಞಾನದಿಂದ ಸಹಿತವಾದ ಆಯುಧಗಳನ್ನೂ, ಮಂತ್ರಗಳನ್ನೂ ಕೊಡುವೆನು.

ಗೃಹ್ಯಂತೇ ಯೇನ ತೇ ಸರ್ವೇ ವ್ಯಾಧಯೋಽಪಿ ಸುದಾರುಣಾಃ ।
ಪರಂ ಸದೈವ ತೇ ರಕ್ಷ್ಯಾ ಮನ್ಮಂತ್ರೈರಪಿ ಸಂಯುತಾಃ ॥ ೩೪ ॥
ಯದಿ ದೃಷ್ಟಿಪಥಾತ್ತುಭ್ಯಂ ಕ್ವಚಿದ್ಯಾಸ್ಯಂತಿ ದೂರತಃ ।
ಮಾನವಾನ್ ಪೀಡಯಿಷ್ಯಂತಿ ಚಿರಾತ್ಪ್ರಾಪ್ಯಾಧಿಕಂ ತತಃ ॥ ೩೫ ॥
ಯದಾ ತ್ವಂ ಪೃಥಿವೀಪಾಲ ಸ್ವರ್ಗಂ ಯಾಸ್ಯಸಿ ಭೂತಲಾತ್ ।
ತದಾಽತ್ರ ಸಲಿಲೇ ಸ್ಥಾಪ್ಯಾ ಮದಗ್ರೇ ಯದ್ವ್ಯವಸ್ಥಿತಂ ॥ ೩೬ ॥
ಸರ್ವೇ ಮಂತ್ರಾಸ್ತಥಾಽಸ್ತ್ರಾಣಿ ಮಮ ವಾಕ್ಯಾದಸಂಶಯಂ ।
ಯೇನ ಸ್ಯಾತ್ಪೂರ್ವವತ್ಸರ್ವೋ ವ್ಯವಹಾರೋ ನೃಪೋದ್ಭವಃ ॥ ೩೭ ॥

ಸೂತ ಉವಾಚ :—

ಬಾಢಮಿತ್ಯೇವ ತೇನೋಕ್ತೇ ತತ್ಕ್ಷಣಾದ್ದ್ವಿಜಸತ್ತಮಾಃ ।
ಪ್ರಾದುರ್ಭೂತಾನಿ ದಿವ್ಯಾನಿ ತಸ್ಯಾಸ್ತ್ರಾಣಿ ಬಹೂನಿ ಚ ॥ ೩೮ ॥
ಜ್ಞಾನಸಂಪತ್ಪ್ರಯುಕ್ತಾನಿ ಯಾದೃಶಾನಿ ಮಹಾತ್ಮನಾ ।
ತೇನ ಸಂಯಾಚಿತಾನ್ಯೇವ ವ್ಯಾಧಿಮಂತ್ರಾಸ್ತಥೈವ ಚ ॥ ೩೯ ॥
ವ್ಯಾಧಯೋ ಯೈಶ್ಚ ಗೃಹ್ಯಂತೇ ಮುಚ್ಯಂತೇ ಸ್ವೇಚ್ಛಯಾ ಸದಾ ।
ಸುಖೇನ ಪರಿಪಾಲ್ಯಂತೇ ದೃಷ್ಟಿಗೋಚರಸಂಸ್ಥಿತಾಃ ॥ ೪೦ ॥
ತತಸ್ತಂ ಸಕಲಂ ಪ್ರಾಪ್ಯ ಪ್ರಸಾದಂ ಚಂಡಿಕೋದ್ಭವಂ ।
ತಚ್ಚ ಹಸ್ತ್ಯಾದಿಕಂ ಸರ್ವಂ ಬ್ರಾಹ್ಮಣೇಭ್ಯೋ ದದೌ ನೃಪಃ ॥ ೪೧ ॥

---

೩೪. ಅವು ದಾರುಣವ್ಯಾಧಿಗಳನ್ನೂ ನಿಗ್ರಹಿಸುವುವು. ಆದರೆ ನೀನು ಯಾವಾಗಲೂ ನನ್ನ ಮಂತ್ರಗಳಿಂದ ಸಹಿತವಾದ ಅವುಗಳನ್ನು ಕಾಪಾಡಬೇಕು.

೩೫. ಆ ಮಂತ್ರಗಳು ನಿನ್ನ ದೃಷ್ಟಿಯಿಂದ ದೂರವಾದರೆ ಅವು ಮನುಷ್ಯರನ್ನು ಹೊಂದಿ ಅವರನ್ನು ಅಧಿಕವಾಗಿ ಪೀಡಿಸುವುವು.

೩೬–೩೭. ನೀನು ಭೂಲೋಕದಿಂದ ಸ್ವರ್ಗಕ್ಕೆ ಹೋಗುವಾಗ ಆ ಮಂತ್ರಗಳನ್ನೂ, ಅಸ್ತ್ರಗಳನ್ನೂ ನನ್ನ ಮುಂದಿರುವ ನೀರಿನಲ್ಲಿ ಸ್ಥಾಪಿಸು. ಅದರಿಂದ ರಾಜನ ವ್ಯವಹಾರವು ಮೊದಲಿನಂತೆಯೇ ನಡೆಯುವುವು.

೩೮–೩೯. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ರಾಜನು ಹಾಗೆಯೇ ಆಗಲೆಂದ ಕೂಡಲೆ ಅವನು ಬೇಡಿದ ಜ್ಞಾನಸಹಿತವಾದ ಅನೇಕ ದಿವ್ಯಾಸ್ತ್ರಗಳೂ, ವ್ಯಾಧಿಮಂತ್ರಗಳೂ ಸನ್ನಿಹಿತವಾದುವು.

೪೦. ಅವುಗಳಿಂದ ವ್ಯಾಧಿಗಳನ್ನು ಸ್ವೇಚ್ಛೆಯಾಗಿ ನಿಗ್ರಹಿಸಿ ದೃಷ್ಟಿಗೋಚರರಾದ ಪ್ರಜೆಗಳು ಕಾಪಾಡಲ್ಪಡುವರು.

೪೧–೪೬. ಅನಂತರ ಅವನು ಆ ಚಂಡಿಕೆಯ ಅನುಗ್ರಹದಿಂದ ಆ ಮಂತ್ರಾಸ್ತ್ರಗಳನ್ನೆಲ್ಲ ಪಡೆದು ತನ್ನ ಪತ್ನಿಯನ್ನೂ, ದಶರಥನೆಂಬ ಮಗನನ್ನೂ ಬಿಟ್ಟು,

ಏಕಾಂ ಮುಕ್ತ್ವಾ ನಿಜಾಂ ಭಾರ್ಯಾಮೇಕಂ ದಶರಥಂ ಸುತಂ ।
ತಾಂಶ್ಚಾಽಪಿ ಸಕಲಾನ್ವ್ಯಾಧೀನ್ಮಂತ್ರೈಃ ಸಂಯಮ್ಯ ಯತ್ನತಃ ॥ ೪೨ ॥
ಅಜಾರೂಪಾನ್ ಸ್ವಯಂ ಪಶ್ಚಾದ್ಯಷ್ಟಿಮಾದಾಯ ರಕ್ಷತಿ ।
ಏವಂ ತಸ್ಯ ನರೇಂದ್ರಸ್ಯ ವರ್ತಮಾನಸ್ಯ ಭೂತಲೇ ॥ ೪೩ ॥
ಗುಪ್ತೋಽಪಿ ನಾಽಪರಾಧಃ ಸ್ಯಾತ್ಕಸ್ಯಚಿತ್ಪ್ರಕಟಃ ಕುತಃ ।
ಪ್ರಮಾದಾದ್ಯದಿ ಭೂಲೋಕೇ ಕಶ್ಚಿತ್ಪಾಪಂ ಸಮಾಚರೇತ್ ॥ ೪೪ ॥
ತದ್ರೂಪೋ ನಿಗ್ರಹಸ್ತಸ್ಯ ತತ್ಕ್ಷಣಾದೇವ ಜಾಯತೇ ।
ವಧಂ ವಾ ಯದಿ ವಾ ಬಂಧಂ ಕ್ಲೇಶಂ ಚಾಽರಾತಿಸಂಭವಂ ॥ ೪೫ ॥
ಅದೃಷ್ಟಾನ್ಯಪಿ ಶಸ್ತ್ರಾಣಿ ತಾನಿ ಕುರ್ವಂತಿ ತತ್ಕ್ಷಣಾತ್ ।
ಅನ್ಯೇಷಾಂ ಚ ಮಹೀಪಾನಾಂ ರಾಜ್ಯೇ ಗುಪ್ತಾನ್ಯನೇಕಶಃ ।
ಕುರ್ವಂತಿ ಮನುಜಾಸ್ತೇಷಾಂ ಚಕ್ರೇ ವೈವಸ್ವತೋ ಗ್ರಹಂ ॥ ೪೬ ॥
ನ ತತ್ರ ಭಯಸಂತ್ರಸ್ತಸ್ತತಃ ಪಾಪಂ ಸಮಾಚರೇತ್ ।
ಪ್ರತ್ಯಕ್ಷಂ ವಾ ವಿಶೇಷೇಣ ಜ್ಞಾತ್ವಾ ಶಸ್ತ್ರಭಯಂ ಚ ತತ್ ॥ ೪೭ ॥
ತತಸ್ತೇ ಪಾಪನಿರ್ಮುಕ್ತಾ ಲೋಕಾಃ ಸಂಶುದ್ಧಗಾತ್ರಕಾಃ ।
ರೋಗೇಷು ನಿಗೃಹೀತೇಷು ಪ್ರಾಪ್ತಾಃ ಸುಖಮನುತ್ತಮಂ ॥ ೪೮ ॥
ಏವಂ ಸ್ಥಿತೇಷು ಲೋಕೇಷು ಗತಪಾಪಾಮಯೇಷು ಚ ।
ಪ್ರಯಾತಾಃ ಶೂನ್ಯತಾಂ ಸರ್ವೇ ನರಕಾ ಯೇ ಯಮಾಲಯೇ ॥ ೪೯ ॥

---

ಉಳಿದ ಆನೆ ಮೊದಲಾದುವುಗಳನ್ನು ಬ್ರಾಹ್ಮಣರಿಗಿತ್ತನು. ಆ ಎಲ್ಲ ವ್ಯಾಧಿಗಳನ್ನು ಮಂತ್ರಗಳಿಂದ ತಡೆದು ಮೇಕೆಯಾಗಿರುವ ಅವುಗಳನ್ನು ದೊಣ್ಣೆಯಿಂದ ಕಾಯುತ್ತಿದ್ದನು. ಆ ರಾಜನು ಹೀಗಿರಲು ಭೂಲೋಕದಲ್ಲಿ ಯಾವನೂ ಗುಟ್ಟಾಗಿಯೂ ಅಪರಾಧ ಮಾಡುತ್ತಿರಲಿಲ್ಲ. ಪ್ರಕಟವಾಗಿನ್ನೇನು? ಯಾವನಾದರೂ ಪ್ರಮಾದದಿಂದ ಪಾಪವನ್ನೆಸಗಿದರೆ ಅವನಿಗೆ ಅದಕ್ಕೆ ತಕ್ಕ ಶಿಕ್ಷೆಯಾಗುತ್ತಿದ್ದಿತು. ಶಸ್ತ್ರಗಳು ಅದೃಶ್ಯವಾಗಿಯೇ ಶತ್ರುಗಳಿಗೆ ವಧೆ, ಬಂಧನ ಅಥವಾ ದುಃಖವನ್ನುಂಟುಮಾಡುತ್ತಿದ್ದುವು. ಇತರ ರಾಜರ ರಾಜ್ಯದಲ್ಲಿಯೂ ಪ್ರಜೆಗಳು ಗುಪ್ತವಾಗಿ ಅಪರಾಧವನ್ನು ಮಾಡಿದರೆ ಅವರನ್ನೂ ಕೊಲ್ಲುತ್ತಿದ್ದುವು.

೪೭. ಆದುದರಿಂದ ಅವನ ರಾಜ್ಯದಲ್ಲಿ ಯಾವ ಮನುಷ್ಯನೂ ಪ್ರತ್ಯಕ್ಷವಾಗಿ ಶಸ್ತ್ರಭಯವನ್ನರಿತು ಪಾಪಕಾರ್ಯವನ್ನೆಸಗುತ್ತಿರಲಿಲ್ಲ.

೪೮. ಅನಂತರ ಅಲ್ಲಿರುವ ಪ್ರಜೆಗಳು ರೋಗವಿಲ್ಲದಿರುವುದರಿಂದ ಪಾಪರಹಿತರೂ, ಶುದ್ಧಶರೀರರೂ ಆಗಿ ಉತ್ತಮವಾದ ಸೌಖ್ಯವನ್ನು ಪಡೆದರು.

೪೯. ಹೀಗೆ ಜನರು ಪಾಪರೋಗಗಳಿಲ್ಲದವರಾಗಲು ಯಮಲೋಕದಲ್ಲಿರುವ ನರಕಗಳೆಲ್ಲ ಶೂನ್ಯವಾದುವು.

ನ ಕಶ್ಚಿನ್ನರಕಂ ಯಾತಿ ನ ಚ ಮೃತ್ಯುಪಥಂ ನರಃ ।
ಯಥಾ ಕೃತಯುಗಂ ತಾದೃಕ್ತ್ರೇತಾಯಾಮಪಿ ಸಂಸ್ಥಿತಂ ॥ ೫೦ ॥
ವ್ಯವಹಾರೇ ತತೋ ನಷ್ಟೇ ಯಮಲೋಕಸಮುದ್ಭವೇ ।
ಸ್ವರ್ಗೇಣ ತುಲ್ಯತಾಂ ಪ್ರಾಪ್ತೇ ಪ್ರಾಣಿಭಿರ್ಮೃತ್ಯುವರ್ಜಿತೈಃ ॥ ೫೧ ॥
ತತೋ ವೈವಸ್ವತೋ ಗತ್ವಾ ಬ್ರಹ್ಮಣಃ ಸದನಂ ಪ್ರತಿ ।
ಪ್ರೋವಾಚ ದುಃಖಸಂಪನ್ನಃ ಪ್ರಣಿಪತ್ಯ ಪಿತಾಮಹಂ ॥ ೫೨ ॥
ಅಹಂ ಪುರಾ ತ್ವಯಾ ದೇವ ಧರ್ಮಾಽಧರ್ಮದಿದೃಕ್ಷಯಾ ।
ಮಾನುಷಾಣಾಂ ಸಮಾದಿಷ್ಟೋ ನಿಗ್ರಹಾಽನುಗ್ರಹಂ ಪ್ರತಿ ॥ ೫೩ ॥
ಅಜಾಪಾಲೇನ ಭೂಪೇನ ತತ್ಸರ್ವಂ ವಿಫಲೀಕೃತಂ ।
ತಪಃ ಶಕ್ತ್ಯಾ ಸುರಶ್ರೇಷ್ಠ ದೇವೀಮಾರಾಧ್ಯ ಚಂಡಿಕಾಂ ॥ ೫೪ ॥
ನಾಽಧಯೋ ವ್ಯಾಧಯಸ್ತತ್ರ ನ ಪಾಪಾನಿ ಮಹೀತಲೇ ।
ಕಸ್ಯಚಿದ್ದೇವ ಜಾಯಂತೇ ಯಥಾ ಕೃತಯುಗೇ ತಥಾ ॥ ೫೫ ॥
ತಸ್ಮಾತ್ಕುರು ಸುರಶ್ರೇಷ್ಠ ಪುನರೇವ ಯಥಾ ಪುರಾ ।
ಮದೀಯಭವನೇ ಕೃತ್ಸ್ನೋ ವ್ಯವಹಾರಃ ಪ್ರಜಾಯತೇ ॥ ೫೬ ॥
ತಸ್ಯ ತದ್ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಸಮೀಪ ಉಪವಿಷ್ಟಸ್ಯ ಶಿವಸ್ಯಾಸ್ಯಂ ವ್ಯಲೋಕಯತ್ ॥ ೫೭ ॥

---

೫೦. ಒಬ್ಬ ಮನುಷ್ಯನೂ ನರಕಕ್ಕೆ ಹೋಗಲಿಲ್ಲ. ಮತ್ತು ಸಾಯಲಿಲ್ಲ. ಕೃತಯುಗದಂತೆ ಆ ತ್ರೇತಾಯುಗವಿದ್ದಿತು.

೫೧—೫೨. ಅನಂತರ ವ್ಯವಹಾರವು ನಷ್ಟವಾಗಿ ಮರಣವಿಲ್ಲದ ಪ್ರಾಣಿಗಳಿಂದ ಯಮಲೋಕವು ಸ್ವರ್ಗದಂತಾಗಲು ಯಮನು ಸತ್ಯಲೋಕಕ್ಕೆ ಹೋಗಿ ಪಿತಾಮಹನನ್ನು ವಂದಿಸಿ ದುಃಖದಿಂದ ಇಂತೆಂದನು.

೫೩. "ಸ್ವಾಮಿ! ನೀನು ಹಿಂದೆ ನನ್ನನ್ನು ಧರ್ಮಾಧರ್ಮಗಳನ್ನು ನೋಡಲೋಸುಗ ಮನುಷ್ಯರ ನಿಗ್ರಹಾನುಗ್ರಹಕ್ಕಾಗಿ ನೇಮಿಸಿರುವೆ.

೫೪. ಅಜಾಪಾಲ ರಾಜನು ತಪಸ್ಸಿನ ಶಕ್ತಿಯಿಂದ ಚಂಡಿಕೆಯನ್ನು ಸಂತೋಷಗೊಳಿಸಿ ಅದನ್ನೆಲ್ಲ ವ್ಯರ್ಥಗೊಳಿಸಿದನು.

೫೫. ಭೂಲೋಕದಲ್ಲಿ ಯಾವನೊಬ್ಬನಿಗೂ ಕೃತಯುಗದಲ್ಲಿ ಹೇಗೋ ಹಾಗೆ ವ್ಯಾಧಿಗಳೂ, ಪಾಪಗಳೂ ಉಂಟಾಗುತ್ತಿಲ್ಲ.

೫೬. ಸುರೋತ್ತಮ! ಆದುದರಿಂದ ನನ್ನ ಮನೆಯಲ್ಲಿ ಮೊದಲಿನಂತೆ ಸಂಪೂರ್ಣ ವ್ಯವಹಾರವುಂಟಾಗುವಂತೆ ಮಾಡು.

೫೭. ಬ್ರಹ್ಮನು ಆ ಯಮನ ಆ ಮಾತನ್ನು ಕೇಳಿ ಸಮೀಪದಲ್ಲಿ ಕುಳಿತಿರುವ ಶಿವನ ಮುಖವನ್ನು ನೋಡಿದನು.

ಅಥಾಽಬ್ರವೀತ್ಪ್ರಹಸ್ಯೋಽಚ್ಚೈಸ್ತ್ರಿಣೇತ್ರಶ್ಚತುರಾನನಂ ।
ಅತ್ಯದ್ಭುತತಮಾಂ ಶ್ರುತ್ವಾ ತಾಂ ವಾರ್ತಾಂ ಯಮಸಂಭವಾಂ ॥ ೫೮ ॥
ಮಹೇಶ್ವರ ಉವಾಚ:—
ಧರ್ಮಮಾರ್ಗಪ್ರವೃತ್ತಸ್ಯ ಸದಾಚಾರಸ್ಯ ಭೂಪತೇಃ ।
ಕಥಂ ನಿವಾರಣಂ ತತ್ರ ಕ್ರಿಯತೇ ಕಶ್ಚ ನಿಗ್ರಹಃ ॥ ೫೯ ॥
ತಸ್ಮಾತ್ತೇನ ಮಹೀಪೇನ ಯಸ್ಮಾನ್ಮಾರ್ಗಃ ಪ್ರದರ್ಶಿತಃ ।
ಅಪೂರ್ವೋ ಧರ್ಮಸಂಭೂತಃ ಕೃತಃ ಸನ್ಮಹಾತ್ಮನಾ ॥ ೬೦ ॥
ತನ್ಮಯಾಽಪಿ ಯಥಾ ಚಾಽಸ್ಯ ಪ್ರಸಾದಃ ಸುರಸತ್ತಮ ।
ಅಪೂರ್ವಃ ಕರಣೀಯಶ್ಚ ಯಥಾ ಧರ್ಮೋ ನ ದುಷ್ಯತಿ ॥ ೬೧ ॥
ಏವಮುಕ್ತ್ವಾ ಚತುರ್ವಕ್ತ್ರಂ ಯಮಂ ಪ್ರಾಹ ತತಃ ಶಿವಃ ।
ವರ್ದಾಽಯುಷೋಽಸ್ಯ ಯಚ್ಛೇಷಮಜಾಪಾಲಸ್ಯ ಭೂಪತೇಃ ।
ಯೇನ ತತ್ಸಮಯೇ ಪ್ರಾಪ್ತೇ ತಂ ನಯಾಮಿ ನಿಜಾಲಯಂ ॥ ೬೨ ॥
ಯಮ ಉವಾಚ:—
ಪಂಚ ವರ್ಷ ಸಹಸ್ರಾಣಿ ತಸ್ಯಾತೀತಾನಿ ಚಾಯುಷಃ ।
ತಿಷ್ಠಂತಿ ಪಂಚಪಂಚಾಶತ್ಪ್ರತೀಕ್ಷ್ಯೇಽಹಂ ತತಃ ಕಥಂ ॥ ೬೩ ॥

---

೫೮. ಬಳಿಕ ಶಿವನು ಆಶ್ಚರ್ಯಕರವಾದ ಯಮನ ವಾರ್ತೆಯನ್ನು ಕೇಳಿ ಗಟ್ಟಿಯಾಗಿ ನಕ್ಕು ಬ್ರಹ್ಮನನ್ನು ಕುರಿತು ಇಂತೆಂದನು.

೫೯. ಮಹೇಶ್ವರನು ಹೇಳುತ್ತಾನೆ:—ಧರ್ಮಮಾರ್ಗನಿರತನೂ, ಸದಾಚಾರಿಯೂ ಆಗಿರುವ ರಾಜನನ್ನು ನಾನು ಹೇಗೆ ತಡೆಯಲಿ. ಹೇಗೆ ನಿಗ್ರಹಿಸಲಿ.

೬೦. ಮಹಾತ್ಮನಾದ ಆ ರಾಜನು ಹೊಸದಾದ ಧರ್ಮಮಾರ್ಗವನ್ನು ತೋರಿಸಿರುವನು.

೬೧. ಆದುದರಿಂದ ನಾನೂ ಅವನ ಧರ್ಮವು ನಷ್ಟವಾಗದಂತೆ ಅಪೂರ್ವವಾದ ಅನುಗ್ರಹವನ್ನು ಮಾಡಬೇಕು.

೬೨. ಶಿವನು ಬ್ರಹ್ಮನನ್ನು ಕುರಿತು ಹೀಗೆ ಹೇಳಿ ಯಮನನ್ನು ಕುರಿತು ಈ ಅಜಾಪಾಲ ರಾಜನಿಗೆ ಎಷ್ಟು ಆಯುಸ್ಸು ಉಳಿದಿರುವುದು? ಅವನ ಆಯುಸ್ಸು ಅವಸಾನಗೊಂಡಿದ್ದರೆ ಅವನನ್ನು ನನ್ನ ಆಲಯಕ್ಕೆ ಒಯ್ಯುವೆನು ಎಂದನು.

೬೩. ಯಮನು ಹೇಳುತ್ತಾನೆ:—ಈಗ ಅವನಿಗೆ ಐದುಸಾವಿರ ವರ್ಷಗಳು ಕಳೆದಿರುವುವು. ಇನ್ನು ಐವತ್ತೈದುಸಾವಿರ ವರ್ಷಗಳು ಉಳಿದಿರುವುವು. ನಾನು ಅಷ್ಟು ದಿನಗಳವರೆಗೆ ಹೇಗೆ ನಿರೀಕ್ಷಿಸಲಿ.

ಯಾವತ್ಕಾಲಂ ಸುರಶ್ರೇಷ್ಠ ಶೂನ್ಯೇ ಜಾತೇ ಸ್ವ ಆಶ್ರಯೇ ।
ತಸ್ಮಾತ್ಕುರು ದ್ರುತಂ ಕಂಚಿದುಪಾಯಂ ತದ್ವಿನಾಶನೇ ॥ ೧೪ ॥
ಏವಮುಕ್ತೇ ಯಮೇನಾಽಥ ತಂ ವಿಸೃಜ್ಯ ಗೃಹಂಪ್ರತಿ ।
ವ್ಯಾಘ್ರರೂಪಂ ಸಮಾಸ್ಥಾಯ ಸ್ವಯಂ ತತ್ಸಂನಿಧೌ ಯಯೌ ॥ ೧೫ ॥
ಯತ್ರಸಂಸ್ಥೋ ಮಹೀಪಃ ಸ ಪ್ರಜಾಪಾಲನತತ್ಪರಃ ।
ಮೇಘಗಂಭೀರನಿರ್ಘೋಷಂ ಗರ್ಜಮಾನೋ ಮುಹುರ್ಮುಹುಃ ॥ ೧೬ ॥
ಅಜಾಸ್ತ್ರಾಸಂಚ ಸಂವೀಕ್ಷ್ಯ ವ್ಯಾಘ್ರಂ ರೌದ್ರವಪುರ್ಧರಂ ।
ಅಜಾಪಾಲಂ ಸಮುದ್ದಿಶ್ಯ ಸಂತ್ರಸ್ತಾಃ ಶರಣಂ ಗತಾಃ ॥ ೧೭ ॥
ತಸ್ಯ ಯತ್ನಪರಸ್ಯಾಽಪಿ ರಕ್ಷಮಾಣಸ್ಯ ಭೂಪತೇಃ ।
ಅಜಾಸ್ತಾ ವ್ಯಾಘ್ರರೂಪೇಣ ಶಂಕರೇಣ ಪ್ರಭಕ್ಷಿತಾಃ ॥ ೧೮ ॥
ಅಜಾನಾಂ ಕದನಂ ದೃಷ್ಟ್ವಾ ತತಃ ಸ ಪೃಥಿವೀಪತಿಃ ।
ಸಹಸ್ತಾದ್ಯಷ್ಟಿಮುತ್ಸೃಜ್ಯ ಜಗ್ರಾಹ ನಿಶಿತಾಯುಧಂ ॥ ೧೯ ॥
ಯತ್ತಸ್ಯ ತುಷ್ಟಯಾ ದತ್ತಂ ಚಂಡಂ ಚಂಡಾರ್ಚಿಷಾ ಸಮಂ ।
ತಚ್ಛಸ್ತ್ರಂ ಚ ತಥಾಽಸ್ತ್ರಾನಿ ದೇವೀದತ್ತಾನಿ ಶಂಕರಃ ।
ಶನೈಃ ಶನೈಃ ಪ್ರಜಗ್ರಾಹ ಸ್ವವಕ್ತ್ರೇಣ ಮಹೇಶ್ವರಃ ॥ ೨೦ ॥
ಅಸ್ತ್ರಾಭಾವಾತ್ತತಸ್ತೂರ್ಣಂ ಧ್ರಿಯಮಾಣೋಽಪಿ ಕಾಂತಯಾ ।
ದ್ವಂದ್ವಯುದ್ಧೇನ ತಂ ವ್ಯಾಘ್ರಂ ಯೋಧಯಾಮಾಸ ಭೂಪತಿಃ ॥ ೨೧ ॥

---

೧೪. ಅಷ್ಟರಲ್ಲಿ ನನ್ನ ಆಲಯವೇ ಶೂನ್ಯವಾಗುವುದು. ಆದುದರಿಂದ ಬೇಗನೆ ಅವನನ್ನು ನಾಶಗೊಳಿಸಲು ಒಂದು ಉಪಾಯವನ್ನು ಮಾಡು.

೧೫-೧೬. ಯಮನು ಹೀಗೆನ್ನಲು ಮಹೇಶ್ವರನು ಅವನನ್ನು ಮನೆಗೆ ಕಳುಹಿಸಿ ತಾನೊಂದು ಹುಲಿಯ ರೂಪವನ್ನು ತಾಳಿ ಮೇಘದಂತೆ ಗಂಭೀರಧ್ವನಿಯಿಂದ ಗರ್ಜಿಸುತ್ತ ಪ್ರಜಾಪಾಲನೆಯಲ್ಲಿ ನಿರತನಾದ ಆ ಅಜಾಪಾಲನೆಡೆಗೆ ಹೋದನು.

೧೭. ಆಗ ಆಡುಗಳು ಭಯಂಕರ ರೂಪವನ್ನು ಧರಿಸಿರುವ ಆ ಹುಲಿಯನ್ನು ಕಂಡು ಭಯದಿಂದ ಅಜಾಪಾಲನನ್ನು ಮರೆಹೊಕ್ಕುವು.

೧೮. ಅಜಾಪಾಲನು ಅವುಗಳನ್ನು ಕಾಪಾಡಲು ಪ್ರಯತ್ನಿಸುತ್ತಿದ್ದರೂ ವ್ಯಾಘ್ರರೂಪನಾದ ಶಂಕರನು ಅವುಗಳನ್ನೆಲ್ಲ ಭಕ್ಷಿಸಿದನು.

೧೯. ಬಳಿಕ ಅಜಾಪಾಲನು ಆಡುಗಳು ನಾಶವಾಗುತ್ತಿರುವುದನ್ನು ನೋಡಿ ಕೈಯಲ್ಲಿರುವ ದೊಣ್ಣೆಯನ್ನು ಬಿಟ್ಟು ಹರಿತವಾದ ಆಯುಧವನ್ನು ತೆಗೆದುಕೊಂಡನು.

೨೦. ಶಂಕರನು ತುಷ್ಟಳಾದ ದೇವಿಯೂ, ಸೂರ್ಯನೂ ಕೊಟ್ಟಿರುವ ಅವನ ಆಯುಧಗಳನ್ನೆಲ್ಲ ಮೆಲ್ಲಮೆಲ್ಲನೆ ತನ್ನ ಬಾಯಿಯಿಂದ ನುಂಗಿದನು.

೨೧. ಅನಂತರ ಅಸ್ತ್ರಗಳಿಲ್ಲದಿರುವುದರಿಂದ ಪತ್ನಿಯು ತಡೆದರೂ ಆ ರಾಜನು ಬೇಗನೆ ಹುಲಿಯೊಡನೆ ಮಲ್ಲಯುದ್ಧವನ್ನು ಮಾಡಿದನು.

ತತಸ್ತಸ್ಯಾಂಗಸಂಸ್ಪರ್ಶಾನ್ಮುಕ್ತ್ವಾ ವ್ಯಾಘ್ರತನುಂ ಚ ತಾಂ ।
ದಧಾರ ಭಸ್ಮಸಂದಿಗ್ಧಾಂ ತನುಂ ಚಂದ್ರವಿಭೂಷಿತಾಂ ॥ ೭೨ ॥
ರುಂಡಮಾಲಾಧರಾಂ ದಿವ್ಯಾಂ ಸ ಖಟ್ವಾಂಗಾಂ ಸ ಪನ್ನಗಾಂ ।
ತಾಂ ದೃಷ್ಟ್ವಾ ಸ ಮಹೀಪಾಲಃ ಸಭಾರ್ಯಃ ಪ್ರಣತಸ್ತತಃ ॥ ೭೩ ॥
ಪ್ರೋವಾಚಾಽಥ ಸ್ತುತಿಂ ಕೃತ್ವಾ ವಿನಯಾಽವನತಃ ಸ್ಥಿತಃ ।
ಆನಂದಾಶ್ರುಪರಿಕ್ಲಿನ್ನೋ ಹರ್ಷಗದ್ಗದಯಾ ಗಿರಾ ॥ ೭೪ ॥

ರಾಜೋವಾಚ :—

ಅಜ್ಞಾನಾದ್ಯನ್ಮಯಾ ದೇವ ಪ್ರಹಾರಾಸ್ತವ ನಿರ್ಮಿತಾಃ ।
ತಿರಸ್ಕಾರಸ್ತಥಾ ದತ್ತಸ್ತತ್ಸರ್ವಂ ಕ್ಷಮ್ಯತಾಂ ವಿಭೋ ॥ ೭೫ ॥

ಶ್ರೀ ಭಗವಾನುವಾಚ :—

ಕ್ಷಾಂತ ಏಷ ಮಯಾ ಪುತ್ರ ತವ ಸರ್ವಃ ಪರಾಭವಃ ।
ಪರಿತುಷ್ಟೇನ ತೇ ಕರ್ಮ ದೃಷ್ಟ್ವಾ ಚೈವಾಽತಿಮಾನುಷಂ ॥ ೭೬ ॥
ಯಥಾ ಕೃತಂ ತ್ವಯಾ ರಾಜ್ಯಂ ಪ್ರಜಾಃ ಸಂರಕ್ಷಿತಾ ನೃಪ ।
ತಥಾಽನ್ಯೋ ಭೂಪತಿಃ ಕಶ್ಚಿನ್ನಕರ್ತಾ ನ ಕರಿಷ್ಯತಿ ॥ ೭೭ ॥
ತಸ್ಮಾದ್ಗಚ್ಛ ಮಯಾ ಸಾರ್ಧಂ ಪಾತಾಲೇ ಪಾರ್ಥಿವೋತ್ತಮ ।
ಅನೇನೈವ ಶರೀರೇಣ ಧರ್ಮಪತ್ನ್ಯಾಽನಯಾ ಸಹ ॥ ೭೮ ॥

---

೭೨–೭೩. ಶಿವನು ಆ ರಾಜನ ಅವಯುವದ ಸ್ಪರ್ಶದಿಂದ ಹುಲಿಯ ಶರೀರವನ್ನು ತ್ಯಜಿಸಿ ಭಸ್ಮಲಿಪ್ತವೂ, ಚಂದ್ರಮೌಲಿಯೂ, ರುಂಡಮಾಲೆಯನ್ನು ಧರಿಸಿರುವುದೂ, ಖಟ್ವಾಂಗದಿಂದ ಸಹಿತವೂ, ನಾಗಭೂಷಣವೂ ಆಗಿರುವ ಶರೀರವನ್ನು ಧರಿಸಿದನು. ಆ ರಾಜನು ಅದನ್ನು ನೋಡಿ ಪತ್ನಿಯೊಡನೆ ನಮಸ್ಕಾರ ಮಾಡಿದನು.

೭೪. ವಿನಯದಿಂದ ಆತನನ್ನು ಸ್ತುತಿಸಿ ಆನಂದಭಾಷ್ಪವನ್ನು ಸುರಿಸುತ್ತ ಸಂತೋಷದಿಂದ ಗದ್ಗದಧ್ವನಿಯಿಂದ ಇಂತೆಂದನು.

೭೫. ರಾಜನು ಹೇಳುತ್ತಾನೆ:—ಸ್ವಾಮಿ! ನಾನು ತಿಳಿಯದೆ ನಿನ್ನನ್ನು ಹೊಡೆದೆನು; ತಿರಸ್ಕಾರ ಮಾಡಿದೆನು. ಅದನ್ನೆಲ್ಲ ಕ್ಷಮಿಸು.

೭೬. ಶ್ರೀ ಭಗವಂತನು ಹೇಳುತ್ತಾನೆ:—ವತ್ಸ! ನಾನು ನಿನ್ನ ಮಾನುಷಾತೀತವಾದ ಈ ಕರ್ಮವನ್ನು ನೋಡಿ ಸಂತೋಷಗೊಂಡು ನಿನ್ನಿಂದಾದ ಅಪಕಾರವನ್ನು ಕ್ಷಮಿಸಿರುವೆನು.

೭೭. ನೀನು ರಾಜ್ಯವನ್ನಾಳಿದಂತೆಯೂ, ಪ್ರಜೆಗಳನ್ನು ಕಾಪಾಡಿದಂತೆಯೂ ಇತರ ಯಾವ ರಾಜನೂ ಆಳಲಾರನು ಮತ್ತು ಕಾಪಾಡಲಾರನು.

೭೮. ಆದುದರಿಂದ ನೀನು ಈ ಶರೀರದಿಂದಲೇ ಈ ನಿನ್ನ ಧರ್ಮಪತ್ನಿಯಿಂದ ಸಹಿತನಾಗಿ ನನ್ನೊಡನೆ ಪಾತಾಳಕ್ಕೆ ಬಾ.

ನಾಽತಃ ಪರಂ ತ್ವಯಾ ಸ್ಥೇಯಂ ಮರ್ತ್ಯಲೋಕೇ ಕಥಂಚನ ।
ವಿರುದ್ಧಂ ಸರ್ವದೇವಾನಾಂ ಯತಃ ಕರ್ಮ ತ್ವದುದ್ಭವಂ ॥ ೭೯ ॥

ರಾಜೋವಾಚ :—

ಏವಂ ದೇವ ಕರಿಷ್ಯಾಮಿ ಗತ್ವಾಽಯೋಧ್ಯಾಂ ಮಹಾಪುರೀಂ ।
ಪುತ್ರಂ ರಾಜ್ಯೇ ಪ್ರತಿಷ್ಠಾಪ್ಯ ಮಂತ್ರಿಣಾಂ ಸನ್ನಿವೇದ್ಯ ಚ ॥ ೮೦ ॥
ತಥಾಽಹಂ ದೇವದೇವ್ಯಾ ಚ ಪ್ರೋಕ್ತಃ ಸಂತುಷ್ಟಯಾ ಪುರಾ ।
ಮಂತ್ರಗ್ರಾಮೋ ಯಯಾ ದತ್ತಃ ಶಸ್ತ್ರಾಣಿ ವಿವಿಧಾನಿ ಚ ॥ ೮೧ ॥
ಯದಾ ತ್ವಂ ತ್ಯಜಸಿ ಪ್ರಾಜ್ಞ ಮರ್ತ್ಯಲೋಕಂ ಸುದುಸ್ತ್ಯಜಂ ।
ತದಾಽತ್ರ ಮಾಮಕೇ ಕುಂಡೇ ಪ್ರಕ್ಷೇಪ್ತವ್ಯಾನಿ ಕೃತ್ಸ್ನಶಃ ॥ ೮೨ ॥
ತಾನಿ ಚಾರ್ಪಯ ಮೇ ಭೂಯೋ ಯೇನಾನೃಣ್ಯಂ ವ್ರಜಾಮ್ಯಹಂ ।
ತಸ್ಯಾ ದೇವ್ಯಾಃ ಸುರಾಧೀಶ ತ್ವತ್ಪ್ರಸಾದೇನ ಸಾಂಪ್ರತಂ ॥ ೮೩ ॥
ಏವಮುಕ್ತಸ್ತತಸ್ತೇನ ಭಗವಾಂಸ್ತ್ರಿಪುರಾಂತಕಃ ।
ಆಜ್ಞಾಪ್ಯ ತಾನಿ ಸರ್ವಾಣಿ ದದೌ ತತ್ರ ದ್ರುತಂ ಗತಃ ॥ ೮೪ ॥
ಅಬ್ರವೀಚ್ಚ ಸುತಸ್ತತ್ರ ಸ್ವಯಂ ರಾಜಾ ಭವಿಷ್ಯತಿ ।
ವೀರ್ಯೌದಾರ್ಯಸಮೋಪೇತೋ ವಂಶಸ್ಯೋದ್ಧರಣಕ್ಷಮಃ ॥ ೮೫ ॥

---

೭೯. ನಿನ್ನ ಕಾರ್ಯವು ಸಕಲ ದೇವತೆಗಳಿಗೂ ವಿರುದ್ಧವಾಗಿರುವುದರಿಂದ ನೀನು ಇನ್ನುಮುಂದೆ ಭೂಲೋಕದಲ್ಲಿರಬಾರದು.

೮೦. ರಾಜನು ಹೇಳುತ್ತಾನೆ:—ಸ್ವಾಮಿ! ನಾನು ಅಯೋಧ್ಯೆಗೆ ಹೋಗಿ ರಾಜ್ಯದಲ್ಲಿ ಮಗನನ್ನು ಸ್ಥಾಪಿಸಿ ಮಂತ್ರಿಗಳಿಗೆ ತಿಳಿಸಿ ನೀನು ಹೇಳಿದಂತೆಯೇ ಮಾಡುವೆನು.

೮೧. ಹಿಂದೆ ನನ್ನ ವಿಷಯದಲ್ಲಿ ಸಂತುಷ್ಟಳಾದ ದೇವಿಯು ನನಗೆ ಮಂತ್ರಗಳನ್ನೂ, ವಿವಿಧಾಯುಧಗಳನ್ನೂ ಕೊಡುವಾಗ ಹೀಗೆ ಹೇಳಿರುವಳು.

೮೨. "ಮಹಾರಾಜ! ನೀನು ಭೂಲೋಕವನ್ನು ತ್ಯಜಿಸುವಾಗ ಈ ಮಂತ್ರಗಳನ್ನೆಲ್ಲ ನನ್ನ ಕುಂಡದಲ್ಲಿರಿಸು."

೮೩. ಆದುದರಿಂದ ಮಹೇಶ್ವರ! ಆ ಅಸ್ತ್ರಗಳನ್ನೆಲ್ಲ ನನಗೆ ಮರಳಿ ಕೊಡು. ನಿನ್ನ ಅನುಗ್ರಹದಿಂದ ಅವುಗಳನ್ನು ದೇವಿಗೆ ಒಪ್ಪಿಸಿ ಋಣವಿಲ್ಲದವನಾಗುವೆನು.

೮೪-೮೫. ಅಜಾಪಾಲನು ಹೀಗೆ ಹೇಳಲು ಪೂಜ್ಯನಾದ ಶಂಕರನು ಆಜ್ಞೆ ಮಾಡಿ ಆ ಅಸ್ತ್ರಗಳನ್ನು ಮರಳಿ ಆತನಿಗಿತ್ತು ಹೀಗೆಂದನು. "ವೀರ್ಯೌದಾರ್ಯದಿಂದ ಕೂಡಿದವನೂ, ವಂಶೋದ್ಧಾರದಲ್ಲಿ ಸಮರ್ಥನೂ ಆದ ನಿನ್ನ ಮಗನು ಸ್ವಯಂ ರಾಜನಾಗುವನು.

ತ್ವಂಚಾಽಽಗಚ್ಛ ಮಯಾ ಸಾರ್ಧಮದ್ಯೈವ ಮಮ ಮಂದಿರೇ ।
ಪ್ರವಿಶ್ಯಾಽತ್ರ ಜಲೇ ಪುಣ್ಯೇ ದೇವೀಕುಂಡಸಮುದ್ಭವೇ ॥ ೮೬ ॥
ಅದ್ಯ ಮಾಘಚತುರ್ದಶ್ಯಾಂ ಶುಕ್ಲಾಯಾಮಪರೋಽಪಿ ಯಃ ।
ದೇವೀಮಿಮಾಂ ಚ ಸಂಪೂಜ್ಯ ಜಲೇಽಸ್ಮಿನ್ ಭಕ್ತಿಸಂಯುತಃ ॥ ೮೭ ॥
ಕರಿಷ್ಯತಿ ಪ್ರವೇಶೇನ ಪ್ರಾಣತ್ಯಾಗಂ ನೃಪೋತ್ತಮ ।
ಸ ಚ ಯಾಸ್ಯತಿ ಯತ್ರಾಸ್ತೇ ಪಾತಾಲೇ ಹಾಟಕೇಶ್ವರಃ ॥ ೮೮ ॥
ಸ್ನಾನಂ ವಾ ಪಾರ್ಥಿವಶ್ರೇಷ್ಠ ಯಃ ಕರಿಷ್ಯತಿ ಮಾನವಃ ।
ಅಷ್ಟೋತ್ತರಶತಂ ತಸ್ಯ ವ್ಯಾಧೀನಾಂ ನ ಭವಿಷ್ಯತಿ ॥ ೮೯ ॥
ಏವಮುಕ್ತ್ವಾ ತಮಾದಾಯ ನೃಪಂ ಭಾರ್ಯಾಸಮನ್ವಿತಂ ।
ಅಜಾಭಿಸ್ತಾಭಿರಸ್ತ್ರೈಶ್ಚ ತೈಶ್ಚಾಽಪಿ ಪರಮೇಶ್ವರಃ ।
ಪ್ರವಿವೇಶ ಜಲೇ ತಸ್ಮಿನ್ ದೇವೀಕುಂಡಸಮುದ್ಭವೇ ॥ ೯೦ ॥
ತತಶ್ಚ ಮಂದಿರಂ ನೀತಃ ಸ್ವಕೀಯಂ ದ್ವಿಜಸತ್ತಮಾಃ ।
ತೇನೈವ ನರದೇಹೇನ ಸ ಕಲತ್ರಸಮನ್ವಿತಃ ॥ ೯೧ ॥
ಅದ್ಯಾಽಪಿ ತಿಷ್ಠತೇ ತತ್ರ ಜರಾಮರಣವರ್ಜಿತಃ ।
ಪೂಜಯಾನಶ್ಚ ತಂ ದೇವಂ ಪಾತಾಲೇ ಹಾಟಕೇಶ್ವರಂ ॥ ೯೨ ॥

---

೮೬. ನೀನು ಈ ದಿನವೇ ಪುಣ್ಯಕರವಾದ ದೇವೀಕುಂಡದ ಜಲವನ್ನು ಪ್ರವೇಶಿಸಿ ನನ್ನೊಡನೆ ನನ್ನ ಆಲಯಕ್ಕೆ ಬಾ.

೮೭–೮೮. ಈ ಮಾಘ ಶುಕ್ಲ ಚತುರ್ದಶೀ ದಿನ ಈ ದೇವಿಯನ್ನು ಪೂಜಿಸಿ ಈ ಜಲದಲ್ಲಿ ಭಕ್ತಿಯಿಂದ ಪ್ರವೇಶಿಸಿ ಪ್ರಾಣವನ್ನು ತ್ಯಜಿಸುವವನು ಪಾತಾಳದಲ್ಲಿರುವ ಹಾಟಕೇಶ್ವರನ ಸನ್ನಿಧಿಗೆ ಹೋಗುವನು.

೮೯. ಇಲ್ಲಿ ಮಿಂದವನಿಗೆ ನೂರೆಂಟು ವ್ಯಾಧಿಗಳ ಕೋಟಲೆ ಇರುವುದಿಲ್ಲ."

೯೦. ಪರಮೇಶ್ವರನು ಹೀಗೆ ನುಡಿದು ಪತ್ನಿಯಿಂದ ಸಹಿತನಾದ ಆ ಅಜಾಪಾಲ, ಆ ಆಡುಗಳು, ಅಸ್ತ್ರಗಳು ಇವುಗಳೊಡನೆ ದೇವೀಕುಂಡದ ನೀರಿನಲ್ಲಿ ಪ್ರವೇಶಿಸಿದನು.

೯೧. ದ್ವಿಜವರ್ಯರೆ! ಅನಂತರ ಅವನು ಮನುಷ್ಯದೇಹದಿಂದಲೇ ಪತ್ನೀ ಸಹಿತನಾದ ರಾಜನನ್ನು ತನ್ನ ಮನೆಗೆ ಕರೆದುಕೊಂಡು ಹೋದನು.

೯೨. ಈಗಲೂ ಆ ಅಜಾಪಾಲನು ಜರಾಮರಣಗಳಿಲ್ಲದೆ ಪಾತಾಳದಲ್ಲಿರುವ ಹಾಟಕೇಶ್ವರನನ್ನು ಪೂಜಿಸುತ್ತಿರುವನು.

ಏವಂ ತತ್ರ ಸಮುದ್ಭೂತಾ ಸಾ ದೇವೀ ಪರಮೇಶ್ವರೀ ।
ಸ್ಥಾಪಿತಾ ತೇನ ಭೂಪೇನ ಶ್ರದ್ಧಾಪೂತೇನ ಚೇತಸಾ ॥ ೯೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಜಾಪಾಲೇಶ್ವರೀಮಾಹಾತ್ಮ್ಯವರ್ಣನಂ"
ನಾಮ ಪಂಚನವತಿತಮೋಽಧ್ಯಾಯಃ

---

೯೩. ಹೀಗೆ ಆ ದೇವಿಯು ಅಲ್ಲಿ ಉದ್ಭವಿಸಿದಳು. ಆ ರಾಜನೂ ಶ್ರದ್ಧೆಗೊಂಡ ಮನಸ್ಸಿನಿಂದ ಅವಳನ್ನು ಅಲ್ಲಿ ಪ್ರತಿಷ್ಠೆಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಜಾಪಾಲೇಶ್ವರೀಮಾಹಾತ್ಮ್ಯವರ್ಣನ" ವೆಂಬ
ತೊಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಣ್ಣವತಿತಮೋಽಧ್ಯಾಯಃ

### ದಶರಥಶನೈಶ್ಚರಸಂವಾದವರ್ಣನಂ

ಸೂತ ಉವಾಚ :—

ಏವಂ ತಸ್ಮಿನ್ ಗತೇ ಭೂಪೇ ಹ್ಯಜಾಪಾಲೇ ರಸಾತಲಂ ।
ತತ್ಪುತ್ರಶ್ಚಾಽಭವದ್ರಾಜಾ ಮಂತ್ರಿಭಿಸ್ತು ಪುರಸ್ಕೃತಃ ॥ ೧ ॥
ಯೋ ನಿತ್ಯಮಗಮತ್ಸ್ವರ್ಗೇ ವಾಸವಂ ರಮತೇ ಸದಾ ।
ಶನೈಶ್ಚರೋ ಜಿತೋ ಯೇನ ರೋಹಿಣೀಂ ಪರಿಭೇದಯನ್ ॥ ೨ ॥
ಗೃಹೇ ಯಸ್ಯ ಸ್ವಯಂ ವಿಷ್ಣುರ್ಭೂತ್ವಾ ಚೈವ ಚತುರ್ವಿಧಃ ।
ರಾವಣಸ್ಯ ವಿನಾಶಾರ್ಥಂ ಜನ್ಮ ಚಕ್ರೇ ಪ್ರಹರ್ಷಿತಃ ॥ ೩ ॥
ತೇನಾಽಽಗತ್ಯಾಽತ್ರ ಸತ್ಕ್ಷೇತ್ರೇ ತೋಷಿತೋ ಮಧುಸೂದನಃ ।
ಪ್ರಾಸಾದಂ ಶೋಭನಂ ಕೃತ್ವಾ ತತಶ್ಚೈವ ಪ್ರತಿಷ್ಠಿತಃ ॥ ೪ ॥
ತಸ್ಯಾಽಪಿ ವಿಶ್ರುತಾ ವಾಪೀ ಸ್ವಯಂ ತೇನ ವಿನಿರ್ಮಿತಾ ।
ರಾಜವಾಪೀತಿ ಲೋಕೇಽಸ್ಮಿನ್ವಿಖ್ಯಾತಿಂ ಪರಮಂ ಗತಾ ॥ ೫ ॥

---

### ಕನ್ನಡದ ಅನುವಾದ

#### ದಶರಥಶನೈಶ್ಚರಸಂವಾದವರ್ಣನ

೧. ಸೂತನು ಹೇಳುತ್ತಾನೆ:—ಹೀಗೆ ಆ ಅಜಾಪಾಲನು ಪಾತಾಳಕ್ಕೆ ಹೋಗಲು ಅವನ ಮಗನನ್ನು ಮಂತ್ರಿಗಳು ರಾಜನನ್ನಾಗಿ ಮಾಡಿದರು.

೨. ಅವನು ಯಾವಾಗಲೂ ಸ್ವರ್ಗಕ್ಕೆ ಹೋಗಿ ಇಂದ್ರನನ್ನು ಸಂತೋಷಗೊಳಿಸುತ್ತಿದ್ದನು. ಮತ್ತು ರೋಹಿಣಿಯ ಮಾರ್ಗವನ್ನು ಭೇದಿಸುವ ಶನಿಯನ್ನು ಜಯಿಸಿದನು.

೩. ಅವನ ಮನೆಯಲ್ಲಿ ವಿಷ್ಣುವು ರಾವಣನ ವಧೆಗಾಗಿ ನಾಲ್ಕು ವಿಧವಾಗಿ ಶ್ರೀ ರಾಮ ಲಕ್ಷ್ಮಣ ಭರತ ಶತ್ರುಘ್ನರೆಂಬುದಾಗಿ ಅವತಾರ ಮಾಡಿದನು.

೪. ಅವನು ಇಲ್ಲಿಗೆ ಬಂದು ಮಂಗಳಕರವಾದ ದೇವಾಲಯವನ್ನು ನಿರ್ಮಿಸಿ ಅದರಲ್ಲಿ ವಿಷ್ಣುವನ್ನು ಪ್ರತಿಷ್ಠೆಮಾಡಿ ಆ ಹರಿಯನ್ನು ಸಂತೋಷಗೊಳಿಸಿದನು.

೫. ಅವನು ನಿರ್ಮಿಸಿದ ವಾಪಿಯು ಈ ಲೋಕದಲ್ಲಿ ರಾಜವಾಪಿಯೆಂದು ಪ್ರಸಿದ್ಧಿಗೊಂಡಿತು.

ತಸ್ಯಾಂ ಯಃ ಕುರುತೇ ಶ್ರಾದ್ಧಂ ಸಂಪ್ರಾಪ್ತೇ ಪಂಚಮೀದಿನೇ ।
ಪ್ರೇತಪಕ್ಷೇ ವಿಶೇಷೇಣ ಸ ನರಃ ಸ್ಯಾತ್ಸತಾಂ ಪ್ರಿಯಃ ॥ ೬ ॥

ಋಷಯ ಊಚುಃ:—

ಕಥಂ ತೇನ ಜಿತಃ ಸೌರೀ ರೋಹಿಣೀ ಶಕಟಂ ಚ ಯತ್ ।
ಭಿಂದಾನಸ್ತೋಷಿತಸ್ತೇನ ಕಥಂ ನಾರಾಯಣೋ ವದ ॥ ೭ ॥

ಸೂತ ಉವಾಚ:—

ತಸ್ಮಿಂಛಾಸತಿ ಧರ್ಮಜ್ಞೇ ಸ್ವಧರ್ಮೇಣ ವಸುಂಧರಾಂ ।
ಅತಿ ಸೌಖ್ಯಾನ್ವಿತೋ ಲೋಕಃ ಸರ್ವದೈವ ವ್ಯಜಾಯತ ॥ ೮ ॥
ಬಹುಕ್ಷೀರಪ್ರದಾ ಗಾವಃ ಸಸ್ಯಾನಿ ಗುಣವಂತಿ ಚ ।
ಕಾಮವರ್ಷೀ ಚ ಪರ್ಜನ್ಯೋ ಯಥರ್ತುಫಲಿತಾ ದ್ರುಮಾಃ ॥ ೯ ॥
ಕಸ್ಯಚಿತ್ತ್ವಥ ಕಾಲಸ್ಯ ದೈವಜ್ಞೈಸ್ತಸ್ಯ ಭೂಪತೇಃ ।
ಕಥಿತಂ ರೋಹಿಣೀಭೇದಂ ರವಿಪುತ್ರಃ ಕರಿಷ್ಯತಿ ॥ ೧೦ ॥
ತಸ್ಯಾನಂತರ ಮೇವಾಽಽಶು ದುರ್ಭಿಕ್ಷಂ ಸಂಭವಿಷ್ಯತಿ ।
ಅನಾವೃಷ್ಟಿಶ್ಚ ಭವಿತಾ ರೌದ್ರಾ ದ್ವಾದಶವಾರ್ಷಿಕೀ ।
ಯಯಾ ಸಂಪತ್ಸ್ಯತೇ ಸರ್ವಂ ಭೂತಲಂ ಗತಮಾನವಂ ॥ ೧೧ ॥

---

೬. ಆ ವಾಪಿಯಲ್ಲಿ ಪ್ರೇತಪಕ್ಷದ ಪಂಚಮೀ ದಿನ ಶ್ರಾದ್ಧಮಾಡಿದ ಮಾನವನು ಸಜ್ಜನರಿಗೆ ಪ್ರಿಯನಾಗುವನು.

೭. ಋಷಿಗಳು ಹೇಳುತ್ತಾರೆ:—ಸೂತ! ಆ ದಶರಥನು ರೋಹಿಣೀಶಕಟವನ್ನು ಭೇದಿಸುವ ಶನಿಯನ್ನು ಹೇಗೆ ಜಯಿಸಿದನು? ನಾರಾಯಣನನ್ನು ಹೇಗೆ ಸಂತೋಷಗೊಳಿಸಿದನು. ಹೇಳು.

೮. ಸೂತನು ಹೇಳುತ್ತಾನೆ:—ಧರ್ಮಜ್ಞನಾದ ಆ ರಾಜನು ಭೂಮಿಯನ್ನು ಧರ್ಮದಿಂದ ಆಳುತ್ತಿರಲು ಜನರು ಯಾವಾಗಲೂ ಸುಖಿಗಳಾದರು.

೯. ಗೋವುಗಳು ಅತಿಶಯವಾಗಿ ಹಾಲನ್ನು ಕೊಡುತ್ತಿದ್ದುವು. ಸಸ್ಯಗಳು ಗುಣವುಳ್ಳವಾಗಿದ್ದುವು. ಮೋಡವು ಚೆನ್ನಾಗಿ ಮಳೆಯನ್ನು ಸುರಿಸುತ್ತಿದ್ದಿತು. ವೃಕ್ಷಗಳು ಋತುಗಳಿಗನುಗುಣವಾಗಿ ಫಲಿಸುತ್ತಿದ್ದುವು.

೧೦. ಒಂದಾನೊಂದು ಕಾಲದಲ್ಲಿ ಜೋಯಿಸರು ಆ ರಾಜನನ್ನು ಕುರಿತು ಹೀಗೆಂದರು. "ಶನಿಯು ರೋಹಿಣೀಶಕಟವನ್ನು ಭೇದಿಸುವನು.

೧೧. ಅದರ ಅನಂತರವೇ ದುರ್ಭಿಕ್ಷವುಂಟಾಗುವುದು. ಹನ್ನೆರಡು ವರ್ಷ ಕಾಲ ಅನಾವೃಷ್ಟಿಯಾಗುವುದು. ಅದರಿಂದ ಭೂಮಿಯಲ್ಲಿ ಮಾನವರು ನಾಶವಾಗುವರು.

ತೇಷಾಂ ತದ್ವಚನಂ ಶ್ರುತ್ವಾ ಸ ರಾಜಾ ಕುಪಿತೋಽಭ್ಯಗಾತ್ ।
ಶನೈಶ್ಚರಂ ಸಮುದ್ದಿಶ್ಯ ವಿಮಾನಮಧಿರುಹ್ಯ ಚ ॥ ೧೨ ॥
ತಸ್ಯ ತುಷ್ಟೇನ ಸಂದತ್ತಂ ವಿಮಾನಂ ಕಾಮಗಂ ಪುರಾ ।
ಶಕ್ರೇಣ ತತ್ರ ಸಂತಿಷ್ಠಂಛನೈಶ್ಚರಮುಪಾದ್ರವತ್ ॥ ೧೩ ॥
ತತಃ ಸೂರ್ಯಪಥಂ ಮುಕ್ತ್ವಾ ತತಶ್ಚಂದ್ರಸ್ಯ ಪಾರ್ಥಿವಃ ।
ನಕ್ಷತ್ರರಸಣಿಂ ಪ್ರಾಪ್ಯ ಸಜ್ಯಂ ಕೃತ್ವಾ ಮಹದ್ಧನುಃ ॥ ೧೪ ॥
ತತ್ರ ಬಾಣಂ ಸಮಾರೋಪ್ಯ ಶನೈಶ್ಚರಮುಪಾದ್ರವತ್ ।
ಪ್ರೋವಾಚ ಪುರತಃ ಸ್ಥಿತ್ವಾ ಸೂರ್ಯಪುತ್ರಮಧೋಮುಖಂ ॥ ೧೫ ॥
ತ್ಯಜ್ಯೈನಂ ರೋಹಿಣೀ ಮಾರ್ಗಂ ಸಾಂಪ್ರತಂ ತ್ವಂ ಶನೈಶ್ಚರ ।
ಮದ್ವಾಕ್ಯಾದನ್ಯಥಾಽಹಂ ತ್ವಾಂ ನಯಿಷ್ಯಾಮಿ ಯಮಕ್ಷಯಂ ॥ ೧೬ ॥
ಏತೇನ ನಿಶಿತಾಗ್ರೇಣ ಶರೇಣಾನತಪರ್ವಣಾ ।
ದಿವ್ಯಾಸ್ತ್ರಮಂತ್ರಯುಕ್ತೇನ ಸತ್ಯಮೇತದ್ಬ್ರವೀಮ್ಯಹಂ ॥ ೧೭ ॥
ತಸ್ಯ ತದ್ವಚನಂ ಶ್ರುತ್ವಾ ತಾದೃಗ್ರೌದ್ರತಮಂ ಮಹತ್ ।
ಮಂದೋ ವಿಸ್ಮಯಮಾಪನ್ನಸ್ತತಶ್ಚೇದಮಭಾಷತ ॥ ೧೮ ॥
ಕಸ್ತ್ವಂ ಬ್ರೂಹಿ ಮಹಾಭಾಗ ಮಮ ಮಾರ್ಗಂ ರುಣತ್ಸಿ ಯಃ ।
ಅಗಮ್ಯಂ ಕೇನಚಿಲ್ಲೋಕೇ ಸರ್ವೈರಪಿ ಸುರಾಽಸುರೈಃ ॥ ೧೯ ॥

---

೧೨. ಆ ದಶರಥನು ಜೋಯಿಸರ ಮಾತನ್ನು ಕೇಳಿ ಕುಪಿತನಾಗಿ ವಿಮಾನವನ್ನೇರಿ ಶನೈಶ್ಚರನನ್ನು ಉದ್ದೇಶಿಸಿ ಹೋದನು.

೧೩. ಹಿಂದೆ ಇಂದ್ರನು ಸಂತುಷ್ಟನಾಗಿ ಅವನಿಗೆ ಸ್ವೇಚ್ಛೆಯಾಗಿ ಹೋಗುವ ವಿಮಾನವನ್ನು ಕೊಟ್ಟಿದ್ದನು. ದಶರಥನು ಅದರಲ್ಲಿ ಕುಳಿತು ಶನಿಯನ್ನು ಕುರಿತು ಹೋದನು.

೧೪–೧೫. ಅವನು ಸೂರ್ಯಚಂದ್ರರ ಮಾರ್ಗಗಳನ್ನು ಬಿಟ್ಟು ನಕ್ಷತ್ರ ಮಾರ್ಗವನ್ನು ಹೊಂದಿ ಬಿಲ್ಲನ್ನು ಸಿದ್ಧಮಾಡಿಕೊಂಡು ಅದರಲ್ಲಿ ಬಾಣವನ್ನು ಜೋಡಿಸಿ ಶನೈಶ್ಚರನ ಬಳಿಗೋಡಿ ಕೆಳಮುಖನಾಗಿರುವ ಅವನ ಮುಂದೆ ನಿಂತು ಇಂತೆಂದನು.

೧೬–೧೭. "ಶನೈಶ್ಚರ! ನೀನು ಈಗ ನನ್ನ ಮಾತಿನಿಂದ ರೋಹಿಣೀ ಮಾರ್ಗವನ್ನು ತ್ಯಜಿಸು. ಹಾಗಿಲ್ಲದಿದ್ದರೆ ನಿನ್ನನ್ನು ಹರಿತವಾದ ಕೊನೆಯುಳ್ಳುದೂ, ಬಗ್ಗಿದ ಪರ್ವವುಳ್ಳುದೂ, ದಿವ್ಯಾಸ್ತ್ರಮಂತ್ರಗಳಿಂದ ಕೂಡಿರುವುದೂ ಆದ ಈ ಬಾಣದಿಂದ ಕೊಲ್ಲುವೆನು. ನಾನು ನಿಜವಾಗಿಯೂ ಈ ಮಾತನ್ನು ಹೇಳುವೆನು."

೧೮–೧೯. ಶನೈಶ್ಚರನು ಭಯಂಕರವಾದ ಅವನ ಆ ಮಾತನ್ನು ಕೇಳಿ ಆಶ್ಚರ್ಯಗೊಂಡು ಇಂತೆಂದನು. "ಅಯ್ಯಾ ಮಹಾತ್ಮನೆ! ಸಕಲ ಸುರಾಸುರರಿಗೂ ಅಗಮ್ಯವಾದ ನನ್ನ ದಾರಿಯನ್ನು ತಡೆಯುತ್ತಿರುವ ನೀನಾರು?

ರಾಜೋವಾಚ :—
ಅಹಂ ದಶರಥೋ ನಾಮ ಸೂರ್ಯವಂಶೋದ್ಭವೋ ನೃಪಃ ।
ಅಜಸ್ಯ ತನಯಃ ಪ್ರಾಪ್ತಃ ಕಾಮಂ ವಾರಯಿತುಂ ಕ್ರುಧಾ ॥ ೨೦ ॥
ಮಂದ ಉವಾಚ :—
ನ ತ್ವಯಾ ಸಹ ಸಂಬಂಧಃ ಕಶ್ಚಿದಸ್ತಿ ಮಹೀಪತೇ ।
ಮಮ ಯತ್ತ್ವಂ ಪ್ರಕೋಪಾಢ್ಯೋ ಮನ್ಮಾರ್ಗಂ ಹಂತುಮಿಚ್ಛಸಿ ॥ ೨೧ ॥
ರಾಜೋವಾಚ :—
ರೋಹಿಣೀ ಸಂಭವಂ ತ್ವಂ ಹಿ ಶಕಟಂ ಭೇದಯಿಷ್ಯಸಿ ।
ಸಾಂಪ್ರತಂ ಮಮ ದೈವಜ್ಞೈರ್ವಾಕ್ಯಮೇತದುದಾಹೃತಂ ॥ ೨೨ ॥
ತಸ್ಮಿನ್ಮಂದ ತ್ವಯಾ ಭಿನ್ನೇ ನ ವರ್ಷತಿ ಶತಕ್ರತುಃ ।
ಏತದ್ವದಂತಿ ದೈವಜ್ಞಾ ಜ್ಯೋತಿಃಶಾಸ್ತ್ರವಿಚಕ್ಷಣಾಃ ॥ ೨೩ ॥
ಜಾತೇ ವೃಷ್ಟಿನಿರೋಧೇಽಥ ಜಾಯಂತೇಽನ್ನಾನಿ ನ ಕ್ಷಿತೌ ।
ಅನ್ನಾಭಾವಾತ್ಕ್ಷಯಂ ಯಾಂತಿ ತತೋ ಭೂಮಿತಲೇ ಜನಾಃ ॥ ೨೪ ॥
ಜನೋಚ್ಛೇದೇ ತತೋ ಜಾತೇ ಅಗ್ನಿಷ್ಟೋಮಾದಿಕಾಃ ಕ್ರಿಯಾಃ ।
ನ ಭವಂತಿ ಧರಾಪೃಷ್ಠೇ ತತಃ ಸ್ಯಾದೇವ ಸಂಕ್ಷಯಃ ॥ ೨೫ ॥

---

೨೦. ರಾಜನು ಹೇಳುತ್ತಾನೆ:—ಸೂರ್ಯವಂಶದಲ್ಲಿ ಹುಟ್ಟಿದ ಅಜನ ಮಗನಾದ ದಶರಥನೆಂಬ ರಾಜನೇ ನಾನು. ಕೋಪದಿಂದ ನಿನ್ನನ್ನು ತಡೆಯಲು ಬಂದಿರುವೆನು.

೨೧. ಮಂದನು ಹೇಳುತ್ತಾನೆ:—ದೊರೆಯೆ! ನನಗೆ ನಿನ್ನೊಡನೆ ಯಾವ ಸಂಬಂಧವೂ ಇಲ್ಲ. ನೀನು ಕೋಪದಿಂದ ನನ್ನ ಮಾರ್ಗವನ್ನು ಏಕೆ ತಡೆಯ ಬಯಸುವೆ?

೨೨. ರಾಜನು ಹೇಳುತ್ತಾನೆ:—ಈಗ ನೀನು ರೋಹಿಣಿಯ ಶಕಟವನ್ನು ಭೇದಿಸುವೆ ಎಂದು ನನಗೆ ಜೋಯಿಸರು ಹೇಳಿದರು.

೨೩. ಶನೈಶ್ಚರನೆ! ನೀನು ಆ ರೋಹಿಣೀಶಕಟವನ್ನು ಭೇದಿಸಿದರೆ ಇಂದ್ರನು ಮಳೆ ಸುರಿಸುವುದಿಲ್ಲವೆಂದು ಜ್ಯೋತಿಶ್ಶಾಸ್ತ್ರನಿಪುಣರಾದ ಜೋಯಿಸರು ಹೇಳುತ್ತಾರೆ.

೨೪. ಮಳೆ ಸುರಿಯದಿದ್ದರೆ ಭೂಮಿಯಲ್ಲಿ ಅನ್ನವುಂಟಾಗುವುದಿಲ್ಲ. ಅನ್ನವಿಲ್ಲದಿದ್ದರೆ ಜನರು ನಾಶವಾಗುವರು.

೨೫. ಜನರು ನಾಶವಾದರೆ ಭೂಮಿಯಲ್ಲಿ ಅಗ್ನಿಷ್ಟೋಮಾದಿ ಕಾರ್ಯಗಳು ನಡೆಯುವುದಿಲ್ಲ. ಆದುದರಿಂದ ಎಲ್ಲವೂ ನಾಶವಾಗುವುವು.

ಏತಸ್ಮಾತ್ಕಾರಣಾದ್ರುದ್ಧೋ ಮಾರ್ಗಸ್ತೇ ಸೂರ್ಯಸಂಭವ ।
ರೋಹಿಣೀಂ ಗಂತುಕಾಮಸ್ಯ ಸತ್ಯಮೇತನ್ಮಯೋದಿತಂ ॥ ೨೬ ॥

ಶನಿರುವಾಚ :—

ಗಚ್ಛ ಪುತ್ರ ನಿಜಂ ಗೇಹಂ ಮಮಾಽಪಿ ತ್ವಂಚ ರೋಚಸೇ ।
ತುಷ್ಟೋಽಹಂ ತವ ವೀರ್ಯೇಣ ಸ ತ್ವನ್ಯೇನ ಮಹೀಪತೇ. ॥ ೨೭ ॥
ನ ಕೇನಚಿತ್ಕೃತಂ ಕರ್ಮ ಯದೇತದ್ಭವತಾ ಕೃತಂ ।
ನ ಕರಿಷ್ಯತಿ ಚೈವಾಽನ್ಯೋ ದೇವೋ ವಾ ಮಾನವೋಽಥ ವಾ ॥ ೨೮ ॥
ನಾಽಹಂ ಪಶ್ಯಾಮಿ ಭೂಪಾಲ ಕಥಂಚಿದಪಿ ತೂರ್ಧ್ವತಃ ।
ಯತೋ ದೃಷ್ಟಿವಿನಿರ್ದಗ್ಧಂ ಭಸ್ಮಸಾಜ್ಜಾಯತೇಽಖಿಲಂ ॥ ೨೯ ॥
ಜಾತಮಾತ್ರೇಣ ಬಾಲೇನ ಮಯಾ ಪಾದೌ ನಿರೀಕ್ಷಿತೌ ।
ತಾತಸ್ಯ ಸಹಸಾ ದಗ್ಧೌ ತತೋಽಹಂ ವಾರಿತೋಽಂಬಯಾ ॥ ೩೦ ॥
ನ ತ್ವಯಾ ಪುತ್ರ ದ್ರಷ್ಟವ್ಯಂ ಕಿಂಚಿದೇವ ಕಥಂಚನ ।
ಪ್ರಮಾಣಃ ಯದಿ ತೇ ಧರ್ಮೋ ಮಾತೃವಾಕ್ಯಸಮುದ್ಭವಃ ॥ ೩೧ ॥
ತಸ್ಮಾತ್ತ್ವಯಾ ಮಹತ್ಕರ್ಮ ಕೃತಮೀದೃಕ್ ಸುದುಷ್ಕರಂ ।
ಪ್ರಜಾನಾಂ ಪಾರ್ಥಿವಶ್ರೇಷ್ಠ ತ್ಯಕ್ತ್ವಾ ದೂರಾದ್ಭಯಂ ಮಮ ॥ ೩೨ ॥

---

೨೬. ಶನೈಶ್ಚರ! ಈ ಕಾರಣದಿಂದ ನಾನು ರೋಹಿಣಿಯನ್ನು ಹೊಂದಲು ಅಪೇಕ್ಷಿಸುವ ನಿನ್ನ ದಾರಿಯನ್ನು ತಡೆದಿರುವೆನು. ನಾನು ಹೇಳಿರುವ ಈ ಮಾತು ನಿಜ.

೨೭. ಶನಿಯು ಹೇಳುತ್ತಾನೆ:—ವತ್ಸ! ನೀನು ಮನೆಗೆ ಹೋಗು. ನನಗೂ ನೀನು ಇಷ್ಟನಾಗಿರುವೆ. ನಾನು ನಿನ್ನ ಸಾಮರ್ಥ್ಯದಿಂದ ಸಂತುಷ್ಟನಾಗಿದ್ದೇನೆ. ಬೇರೆ ಯಾವುದರಿಂದಲೂ ಅಲ್ಲ.

೨೮. ನೀನು ಮಾಡಿದ ಕೆಲಸವನ್ನು ಯಾವನೂ ಮಾಡಲಿಲ್ಲ. ಇತರ ಮನುಷ್ಯನಾಗಲಿ, ದೇವತೆಯಾಗಲಿ ಮಾಡುವುದಿಲ್ಲ.

೨೯. ದೊರೆಯೆ! ನಾನು ಮೇಲಕ್ಕೆ ನೋಡುವುದಿಲ್ಲ. ಸಕಲ ಜಗತ್ತು ನನ್ನ ದೃಷ್ಟಿಯಿಂದ ಸುಟ್ಟು ಬೂದಿಯಾಗುವುದು.

೩೦—೩೧. ನಾನು ಜನಿಸಿದ ಕೂಡಲೆ ತಂದೆಯ ಪಾದವನ್ನು ನೋಡಲು ಅವು ಸುಟ್ಟುಹೋದುವು. ಅದರಿಂದ ನನ್ನ ತಾಯಿಯು, 'ಮಗು! ನಿನಗೆ ತಾಯಿಯ ವಾಕ್ಯವು ಪ್ರಮಾಣವಾಗಿದ್ದರೆ ಯಾವುದನ್ನೂ ನೋಡಬೇಡ' ಎಂದು ಆಜ್ಞೆ ಮಾಡಿದಳು.

೩೨. ಮಹಾರಾಜ! ನೀನು ನನ್ನ ಭಯವನ್ನು ತ್ಯಜಿಸಿ ಪ್ರಜೆಗಳಿಗಾಗಿ ಇಂತಹ ದುಷ್ಕರವಾದ ಮಹಾಕಾರ್ಯವನ್ನೆಸಗಿರುವೆ.

ತಸ್ಮಾತ್ತ್ವತ್ಕೃತೇ ನಾಽಹಂ ಭೇದಯಿಷ್ಯಾಮಿ ರೋಹಿಣೀಂ ।
ಕಥಂಚಿದಪಿ ಭೂಪಾಲ ಯುಗಾಂತರಶತೇಷ್ವಪಿ ॥ ೩೩ ॥
ವರಂ ವರಯ ಚಾಸ್ಮಾಕಂ ತಸ್ಮಾದದ್ಯ ಭವಿಷ್ಯತಿ ।
ಹೃತ್ಸ್ಥಿತಂ ದುರ್ಲಭಂ ಭೂಪ ಸರ್ವೇಷಾಮಿಹ ದೇಹಿನಾಂ ॥ ೩೪ ॥

ರಾಜೋವಾಚ :—

ತವ ಯೋ ವಾಸರೇ ಪ್ರಾಪ್ತೇ ತೈಲಾಽಭ್ಯಂಗಂ ಕರೋತಿ ವೈ ।
ತಸ್ಯಾಽನ್ಯದಿವಸಂ ಯಾವತ್ಪೀಡಾ ಕಾರ್ಯಾ ನ ಚ ತ್ವಯಾ ॥ ೩೫ ॥
ತಿಲದಾನಂ ಕರೋತ್ಯೇವಂ ಲೋಹದಾನಂ ಚ ಯಸ್ತವ ।
ಕರೋತಿ ದಿವಸೇ ಶಕ್ತ್ಯಾ ಯಾವದ್ವರ್ಷಂ ತ್ವಯಾ ಹಿ ಸಃ ॥ ೩೬ ॥
ರಕ್ಷಣೀಯಃ ಸುಕೃಚ್ಛ್ರೇಷು ಸಂಕಟೇಷು ಸದೈವ ಹಿ ।
ತ್ವಯಿ ಗೋಚರಪೀಡಾಯಾಂ ಸಂಸ್ಥಿತೇ ಚಾರ್ಕಸಂಭವ ॥ ೩೭ ॥
ಯಃ ಕುರ್ಯಾಚ್ಛಾಂತಿಕಂ ಸಮ್ಯಕ್ತಿಲಹೋಮಂ ಚ ಭಕ್ತಿತಃ ।
ವಾಸರೇ ತವ ಸಂಪ್ರಾಪ್ತೇ ಸಮಿದ್ಭಿಶ್ಚ ತಥಾಽಕ್ಷತೈಃ ॥ ೩೮ ॥
ತಸ್ಯ ಸಾರ್ಧಾನಿ ವರ್ಷಾಣಿ ಸಪ್ತ ಕಾರ್ಯಾ ಪ್ರಯತ್ನತಃ ।
ತ್ವಯಾ ರಕ್ಷಾ ಮಹಾಭಾಗ ವರಂ ಚೇನ್ಮಮ ಯಚ್ಛಸಿ ॥ ೩೯ ॥

ಸೂತ ಉವಾಚ :—

ಏವಮಿತ್ಯೇವ ಸಂಪ್ರೋಚ್ಯ ವಿರರಾಮ ತತಃ ಪರಂ ।
ಶನೈಶ್ಚರೋ ಮಹೀಪಾಲ ವಚನಾದ್ದ್ವಿಜಸತ್ತಮಾಃ ॥ ೪೦ ॥

---

೩೩. ದೊರೆಯೆ! ನಾನು ನಿನಗಾಗಿ ಅನೇಕ ಯುಗಗಳಲ್ಲಿಯೂ ರೋಹಿಣೀ ಮಾರ್ಗವನ್ನು ಭೇದಿಸುವುದಿಲ್ಲ.

೩೪. ಆದುದರಿಂದ ನೀನು ಸಕಲಪ್ರಾಣಿಗಳಿಗೆ ದುರ್ಲಭವೂ, ಮನೋಭೀಷ್ಟವೂ ಆದ ವರವನ್ನು ಕೇಳಿಕೊ. ಅದು ನಿನಗಾಗುವುದು.

೩೫. ರಾಜನು ಹೇಳುತ್ತಾನೆ:—ನಿನ್ನ ವಾರದಲ್ಲಿ ತೈಲಾಭ್ಯಂಗವನ್ನು ಮಾಡುವವನಿಗೆ ನೀನು ಮತ್ತೊಂದು ಶನಿವಾರದವರೆಗೆ ಪೀಡೆಯನ್ನುಂಟುಮಾಡಕೂಡದು.

೩೬–೩೯. ನಿನ್ನ ವಾರದಲ್ಲಿ ತಿಲ, ಲೋಹಗಳನ್ನು ದಾನ ಮಾಡುವವನನ್ನು ಒಂದು ವರ್ಷದವರೆಗೆ ಕಷ್ಟಕಾಲಗಳಲ್ಲಿ ರಕ್ಷಿಸಬೇಕು. ನೀನು ವರವನ್ನು ಕೊಡುವುದಾದರೆ ನಿನ್ನ ಗೋಚರಕಾಲದಲ್ಲಿ ಶನಿವಾರದ ದಿನ ಸಮಿತ್ತುಗಳಿಂದಲೂ, ಅಕ್ಷತೆಗಳಿಂದಲೂ ಶಾಂತಿಕರ್ಮವನ್ನೂ, ತಿಲಹೋಮವನ್ನೂ ಮಾಡುವವನನ್ನು ಏಳು ವರ್ಷಗಳ ಕಾಲ ರಕ್ಷಿಸು.

೪೦. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಶನೈಶ್ಚರನು ರಾಜನ ಮಾತಿನಿಂದ ಹಾಗೆಯೇ ಆಗಲೆಂದು ಒಪ್ಪಿ ಸುಮ್ಮನಾದನು.

ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ಸುವಿಸ್ತರಾತ್ ।
ಭವದ್ಭಿಃ ಸೂರ್ಯಪುತ್ರಸ್ಯ ರಾಜ್ಞಾ ದಶರಥೇನ ಹಿ ।
ಸಂವಾದಂ ರೋಹಿಣೀಭೇದೇ ಸಂಜಾತಂ ಸಮುಪಸ್ಥಿತೇ ॥ ೪೧ ॥
ಯಶ್ಚೈತತ್ಪಠತೇ ನಿತ್ಯಂ ಶೃಣುಯಾದ್ವೋ ವಿಶೇಷತಃ ।
ಶನೈಶ್ಚರಕೃತಾ ಪೀಡಾ ತಸ್ಯ ನಾಶಂ ಪ್ರಗಚ್ಛತಿ ॥ ೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದಶರಥಶನೈಶ್ಚರಸಂವಾದವರ್ಣನಂ" ನಾಮ
ಷಣ್ಣವತಿತಮೋಽಧ್ಯಾಯಃ

---

೪೧. ನೀವು ಕೇಳಿದ ರೋಹಿಣೀಭೇದ ವಿಷಯಕವಾದ ಶನಿ ದಶರಥ ಸಂವಾದವನ್ನು ನಿಮಗೆ ಹೇಳಿರುವೆನು.

೪೨. ಇದನ್ನು ಹೇಳಿದವನಿಗೂ, ಕೇಳಿದವನಿಗೂ ಶನಿಪೀಡೆಯು ಪರಿಹಾರವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದಶರಥಶನೈಶ್ಚರಸಂವಾದವರ್ಣನ"ವೆಂಬ
ತೊಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತನವತಿತಮೋಽಧ್ಯಾಯಃ

### ದಶರಥಕೃತತಪಸ್ಸಮುದ್ಯೋಗವರ್ಣನಂ

ಸೂತ ಉವಾಚ :—

ತತಃ ಪ್ರಭೃತಿ ನೋ ಮಂದೋ ರೋಹಿಣೀಶಕಟಂ ದ್ವಿಜಾಃ ।
ಭಿನತ್ತಿ ವಚನಾತ್ತಸ್ಯ ರಾಜ್ಞೋ ದಶರಥಸ್ಯ ಚ ॥ ೧ ॥
ತದ್ವೃತ್ತಾಂತಂ ಸಮಾಕರ್ಣ್ಯ ತಸ್ಯ ಶಕ್ರಃ ಪ್ರಹರ್ಷಿತಃ ।
ಭೂಪಾಲಂ ತಂ ಸಮಭ್ಯೇತ್ಯ ತತಶ್ಚೋವಾಚ ಸಾದರಂ ॥ ೨ ॥
ಅತ್ಯದ್ಭುತತರಂ ಕರ್ಮ ತ್ವಯೈತತ್ಪೃಥಿವೀಪತೇ ।
ಸಂಸಾಧಿತಂ ಯದನ್ಯೇನ ಮನಸಾಽಪಿ ನ ಚಿಂತ್ಯತೇ ॥ ೩ ॥
ಅತ ಏವ ಹಿ ಸಂತುಷ್ಟಿಃ ಸಂಜಾತಾಽದ್ಯ ತವೋಪರಿ ।
ವರಂ ಮತ್ತೋ ಗೃಹಾಣಾಽದ್ಯ ತ್ವದಭೀಷ್ಟಂ ಹೃದಿ ಸ್ಥಿತಂ ॥ ೪ ॥

ರಾಜೋವಾಚ :—

ತ್ವಯಾ ಸಹ ಸುರಶ್ರೇಷ್ಠ ಮೈತ್ರೀಂ ಸಂಪ್ರಾರ್ಥಯಾಮ್ಯಹಂ ।
ಶಾಶ್ವತೀ ಸರ್ವಕೃತ್ಯೇಷು ಪರಮಾಂ ಲೋಕಸಂಸ್ಥಿತಾಂ ॥ ೫ ॥

---

## ಕನ್ನಡದ ಅನುವಾದ

### ದಶರಥಕೃತತಪಸ್ಸಮುದ್ಯೋಗವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜರೆ! ಅದು ಮೊದಲ್ಗೊಂಡು ಶನಿಯು ದಶರಥನಿಗಿತ್ತ ಮಾತಿನಂತೆ ರೋಹಿಣೀಶಕಟವನ್ನು ಭೇದಿಸುವುದಿಲ್ಲ.

೨. ಇಂದ್ರನು ಆ ದಶರಥನ ವೃತ್ತಾಂತವನ್ನು ಕೇಳಿ ಸಂತೋಷಗೊಂಡವನಾಗಿ ಆ ರಾಜನ ಬಳಿಗೆ ಬಂದು ಪ್ರೀತಿಯಿಂದ ಇಂತೆಂದನು!

೩. ಮಹಾರಾಜ! ನೀನು ಇತರ ಮಾನವನು ಮನಸ್ಸಿನಿಂದಲೂ ಚಿಂತಿಸದ ಆಶ್ಚರ್ಯಕರವಾದ ಕಾರ್ಯವನ್ನು ಮಾಡಿರುವೆ.

೪. ಆದುದರಿಂದ ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನ್ನ ಮನೋಭೀಷ್ಟವಾದ ವರವನ್ನು ನನ್ನಿಂದ ಪಡೆದುಕೊ.

೫. ರಾಜನು ಹೇಳುತ್ತಾನೆ:—ಸುರವರ್ಯನೆ! ನಾನು ನಿನ್ನೊಡನೆ ಎಲ್ಲಾ ಕಾರ್ಯಗಳಲ್ಲಿಯೂ ಉತ್ತಮವಾದ ಸ್ನೇಹವನ್ನು ಬೇಡುವೆನು.

ಇಂದ್ರ ಉವಾಚ:—

ಏವಂ ಭವತು ರಾಜೇಂದ್ರ ತ್ವಯಾ ಸಹ ಸದಾ ಮಮ ।
ಸಂಪತ್ಸ್ಯತೇ ಸದಾ ಮೈತ್ರೀ ವಸೋರಿವ ಚ ಶಾಶ್ವತೀ ॥ ೬ ॥
ತ್ವಯಾ ಸದೈವ ಮೇ ಪಾರ್ಶ್ವೇ ಸಭಾಯಾಂ ದೇವಸನ್ನಿಧೌ ।
ಆಗಂತವ್ಯಂ ವಿಶೇಷೇಣ ಯೇನ ಮೈತ್ರೀ ಪ್ರವರ್ಧತೇ ॥ ೭ ॥
ಏವಮುಕ್ತ್ವಾ ಸಹಸ್ರಾಕ್ಷೋ ಜಗಾಮ ತ್ರಿದಿವಾಲಯಂ ।
ರಾಜಾಽಪಿ ಚಾಽಗತೋ ಹರ್ಮ್ಯೇ ಸ್ವಕೀಯೇ ಹರ್ಷಸಂಯುತಃ ॥ ೮ ॥
ರಕ್ಷಯಿತ್ವಾ ಜಗತ್ಸರ್ವಂ ಶನೈಶ್ಚರಕೃತಾದ್ಭಯಾತ್ ।
ಅಪ್ರಾಪ್ಯಾಂ ಪ್ರಾಪ್ಯ ಸಂಕೀರ್ತಿಂ ಸ್ತೂಯಮಾನಸ್ತು ಬಂದಿಭಿಃ ॥ ೯ ॥
ತತಃ ಪ್ರಭೃತಿ ನಿತ್ಯಂ ಸ ಸಂಧ್ಯಾಕಾಲ ಉಪಸ್ಥಿತೇ ।
ಸಾಯಾಹ್ನಂ ಸಂವಿಧಾಯಾಽಥ ಯಾತಿ ಶಕ್ರಸ್ಯ ಮಂದಿರೇ ॥ ೧೦ ॥
ತತ್ರ ಸ್ಥಿತ್ವಾ ಚಿರಂ ಶ್ರುತ್ವಾ ಗಂಧರ್ವಾಣಾಂ ಮನೋಹರಂ ।
ಗೀತಂ ದೃಷ್ಟ್ವಾ ಚ ನೃತ್ಯಂ ಚ ತಾನಾದಿವಿಹಿತಂ ಶುಭಂ ॥ ೧೧ ॥
ವಿಚಿತ್ರಾರ್ಥಾಃ ಕಥಾಃ ಶ್ರುತ್ವಾ ದೇವರ್ಷೀಣಾಂ ಮುಖಾಚ್ಚ್ಯುತಾಃ ।
ಸ್ವಯಂ ಚ ಕೀರ್ತಯಿತ್ವಾಽಥ ಪ್ರಯಾತಿ ನಿಜಮಂದಿರಂ ॥ ೧೨ ॥

---

೬. ಇಂದ್ರನು ಹೇಳುತ್ತಾನೆ:—ಮಹಾರಾಜ! ಹಾಗೆಯೇ ಆಗಲಿ. ನನಗೆ ನಿನ್ನೊಡನೆ ವಸುವಿನಂತೆ ಶಾಶ್ವತವಾದ ಮೈತ್ರಿಯುಂಟಾಗಲಿ.

೭. ನೀನು ಯಾವಾಗಲೂ ದೇವಸಭೆಯಲ್ಲಿ ನನ್ನ ಬಳಿಗೆ ಬರಬೇಕು. ಅದರಿಂದ ಸ್ನೇಹವು ಹೆಚ್ಚುವುದು.

೮–೯. ಇಂದ್ರನು ಹಾಗೆಯೇ ಆಗಲೆಂದು ಹೇಳಿ ದೇವಲೋಕಕ್ಕೆ ತೆರಳಿದನು. ದಶರಥನೂ ಪ್ರಪಂಚವನ್ನು ಶನೈಶ್ಚರನಿಂದ ರಕ್ಷಿಸಿ ಅಪ್ರಾಪ್ಯವಾದ ಕೀರ್ತಿಯನ್ನು ಪಡೆದು ಸ್ತುತಿಪಾಠಕರಿಂದ ಸ್ತುತಿಸಲ್ಪಡುತ್ತ ಸಂತೋಷದಿಂದ ತನ್ನ ಅರಮನೆಗೆ ಬಂದನು.

೧೦. ಆ ದಶರಥನು ಅದು ಮೊದಲ್ಗೊಂಡು ನಿತ್ಯವೂ ಸಂಧ್ಯಾಕಾಲದಲ್ಲಿ ಇಂದ್ರನ ಮನೆಗೆ ಹೋಗುತ್ತಿದ್ದನು.

೧೧–೧೨. ಅಲ್ಲಿ ಅವನು ಬಹಳ ಹೊತ್ತು ಇದ್ದು ಗಂಧರ್ವರ ಮನೋಹರವಾದ ಸಂಗೀತವನ್ನು ಕೇಳಿ ವಾದ್ಯಗಳಿಂದ ಕೂಡಿದ ನೃತ್ಯವನ್ನು ನೋಡಿ ದೇವರ್ಷಿಗಳ ಮುಖದಿಂದ ಆಶ್ಚರ್ಯಕರವಾದ ಕಥೆಗಳನ್ನು ಕೇಳಿ ತಾನೂ ಹೇಳಿ ತನ್ನ ಮನೆಗೆ ತೆರಳುತ್ತಿದ್ದನು.

ವಿಮಾನವರಮಾರುಹ್ಯ ಹಂಸಬರ್ಹಿಣನಾದಿತಂ ।
ಮನೋಹರಪತಾಕಾಭಿಃ ಸಮಂತಾಚ್ಚ ವಿಭೂಷಿತಂ ॥ ೧೩ ॥
ಯದಾ ಯದಾ ಸ ನಿರ್ಯಾತಿ ಶಕ್ರಸ್ಥಾನಾನ್ನಿಜಾಲಯಂ ।
ತದಾ ತದಾಽಽಸನೇ ತಸ್ಯ ಕ್ರಿಯತೇಽಭ್ಯುಕ್ಷಣಂ ಸದಾ ॥ ೧೪ ॥
ಶಕ್ರಾದೇಶಾತ್ತದಾ ವೇತ್ತಿ ನ ಸ ಭೂಪಃ ಕಥಂಚನ ।
ಅನ್ಯಸ್ಮಿನ್ ದಿವಸೇ ತಸ್ಯ ನಾರದೋ ಮುನಿಸತ್ತಮಃ ।
ಕಥಯಾಮಾಸ ತತ್ಸರ್ವಮಭ್ಯುಕ್ಷಣಸಮುದ್ಭವಂ ॥ ೧೫ ॥
ವೃತ್ತಾಂತಂ ತಸ್ಯ ರಾಜರ್ಷೇಸ್ತಸ್ಯೈವ ಗೃಹಮಾಗತಃ ।
ತೀರ್ಥಯಾತ್ರಾಪ್ರಸಂಗೇನ ವಿದ್ವೇಷಪರಿವೃದ್ಧಯೇ ॥ ೧೬ ॥
ತಚ್ಛ್ರುತ್ವಾ ನಾರದೇನೋಕ್ತಂ ಶ್ರದ್ಧೇಯಮಪಿ ಭೂಪತಿಃ ।
ನ ಚಕ್ರೇ ಹೃದಯೇಽಧರ್ಮಮಾತ್ಮಾನಂ ಪರಿಚಿಂತಯನ್ ॥ ೧೭ ॥
ತಥಾಽಪಿ ಕೌತುಕಾವಿಷ್ಟೋ ಗತ್ವಾ ಶಕ್ರನಿವೇಶನಂ ।
ಅನ್ಯಸ್ಮಿನ್ ದಿವಸೇ ಸ್ಥಿತ್ವಾ ಚಿರಂ ತತ್ರ ಸಮುತ್ಥಿತಃ ॥ ೧೮ ॥
ಅಲಕ್ಷ್ಯಂ ವೀಕ್ಷಯಾಮಾಸ ಸ್ವಾಸನಂ ದೂರಮಾಸ್ಥಿತಃ ।
ಕಿಂಚಿತ್ಸದ್ಮಾಂತರಂ ಪ್ರಾಪ್ಯ ಕೌತೂಹಲಸಮನ್ವಿತಃ ॥ ೧೯ ॥
ತತಃ ಶಕ್ರಸಮಾದೇಶಾದುತ್ಥಾಯ ಸುರಕಿಂಕರಃ ।
ಪ್ರೋಕ್ಷಯಾಮಾಸ ತೋಯೇನ ಪಾರ್ಥಿವಸ್ಯ ತದಾಽಽಸನಂ ॥ ೨೦ ॥

---

೧೩–೧೬. ಅವನು ಹಂಸಮಯೂರಗಳಿಂದ ಶಬ್ದಗೊಂಡುದೂ, ಮನೋಹರ ಪತಾಕೆಗಳಿಂದ ಸುತ್ತಲೂ ಅಲಂಕಾರಗೊಂಡುದೂ ಆದ ಉತ್ತಮ ವಿಮಾನವನ್ನೇರಿ ಇಂದ್ರನ ಆಸ್ಥಾನದಿಂದ ಹೊರಟಕೂಡಲೆ ಇಂದ್ರನ ಅಪ್ಪಣೆಯಿಂದ ಅವನು ಕುಳಿತ ಆಸನದಲ್ಲಿ ಪ್ರೋಕ್ಷಣೆ ಮಾಡಲ್ಪಡುತ್ತಿದ್ದಿತು. ಆ ದಶರಥನು ಅದನ್ನರಿಯಲಿಲ್ಲ. ಇನ್ನೊಂದು ದಿನ ನಾರದ ಮುನಿವರ್ಯನು ತೀರ್ಥಯಾತ್ರಾ ನಿಮಿತ್ತದಿಂದ ದ್ವೇಷವನ್ನು ಹೆಚ್ಚಿಸುವುದಕ್ಕಾಗಿ ಆ ದಶರಥನ ಮನೆಗೆ ಬಂದು ಪ್ರೋಕ್ಷಣೆಯ ಸಮಾಚಾರವನ್ನು ಹೇಳಿದನು.

೧೭. ದಶರಥನು ಮುನಿಯ ಮಾತನ್ನು ನಂಬಲರ್ಹವಾಗಿದ್ದರೂ ತನ್ನ ಅಧರ್ಮಗಳನ್ನು ಚಿಂತಿಸುತ್ತ ಅದನ್ನು ಮನಸ್ಸಿಗೆ ತೆಗೆದುಕೊಳ್ಳಲಿಲ್ಲ.

೧೮. ಹಾಗಾದರೂ ಕುತೂಹಲಗೊಂಡು ಇನ್ನೊಂದು ದಿನ ಇಂದ್ರನ ಮನೆಗೆ ಹೋಗಿ ಬಹಳ ಹೊತ್ತು ಅಲ್ಲಿದ್ದು ಮೇಲಕ್ಕೆದ್ದನು.

೧೯. ಅನಂತರ ಕೌತೂಹಲದಿಂದ ಮತ್ತೊಂದು ಮನೆಯನ್ನು ಸೇರಿ ದೂರದಿಂದ ಯಾರೂ ನೋಡದಂತೆ ತನ್ನ ಆಸನವನ್ನು ಕಂಡನು.

೨೦. ಬಳಿಕ ಇಂದ್ರನ ಅಪ್ಪಣೆಯಿಂದ ಅವನ ಸೇವಕನು ನೀರಿನಿಂದ ದಶರಥನ ಆಸನವನ್ನು ಪ್ರೋಕ್ಷಿಸಿದನು.

ತದ್ದೃಷ್ಟ್ವಾ ಕೋಪಸಂಪನ್ನಃ ಸರಾಜಾಽಭ್ಯೇತ್ಯ ವಾಸವಂ ।
ಪ್ರೋವಾಚ ಕಿಮಿದಂ ಶಕ್ರ ಪ್ರೋಕ್ಷ್ಯತೇ ಯನ್ಮಮಾಸನಂ ॥ ೨೧ ॥
ಕಿಂ ಮಯಾ ನಿಹತಾ ವಿಪ್ರಾಃ ಕಿಂವಾ ವಿಪ್ರಸಮುದ್ಭವಂ ।
ಶಾಸನಂ ಲೋಪಿತಂ ಕಿಂಚಿತ್ಕಿಂವಾ ವಿಪ್ರಾ ವಿನಿಂದಿತಾಃ ॥ ೨೨ ॥
ಕಿಂವಾ ನಷ್ಟೋಽಸ್ಮಿ ಸಂಗ್ರಾಮೇ ದೃಷ್ಟ್ವಾ ಶತ್ರೂನ್ ಸಮಾಗತಾನ್ ।
ದೈನ್ಯಂ ವಾ ಜಲ್ಪಿತಂ ತೇಷಾಂ ಭಯತ್ರಸ್ತೇನ ಚೇತಸಾ ॥ ೨೩ ॥
ಮಮ ರಾಜ್ಯೇಽಥ ವಾ ಶಕ್ರ ದುರ್ಬಲೋ ಬಲವತ್ತರೈಃ ।
ಪೀಡ್ಯತೇ ವಾಽಥ ಚೌರಾದ್ಯೈರ್ಮುಷ್ಯತೇ ವಂಚಕೈಸ್ತಥಾ ॥ ೨೪ ॥
ಕಿಂವಾ ರಾಜ್ಯೇ ಮದೀಯೇ ಚ ಜಾಯತೇ ಯೋನಿವಿಪ್ಲವಃ ।
ಸಂಕರೋ ವಾಽಥ ವರ್ಣಾನಾಂ ಪರಿತ್ಯಕ್ತವಿಧಿಕ್ರಮಃ ॥ ೨೫ ॥
ಕಿಂವಾ ದುರ್ಜನ ವಾಕ್ಯೇನ ದೂಷಿತೋ ದೋಷವರ್ಜಿತಃ ।
ದಂಡ್ಯತೇ ಮಮ ರಾಜ್ಯೇ ಚ ಕೇನಚಿತ್ತ್ರಿದಶೇಶ್ವರ ॥ ೨೬ ॥
ಕಿಂವಾ ಚೌರೋಽಥ ಪಾಪೋವಾ ಗೃಹೀತೋ ದೋಷವಾನ್ ಸ್ವಯಂ ।
ಮುಚ್ಯತೇ ದ್ರವ್ಯಲೋಭೇನ ತಥಾಽನ್ಯೋವಾ ಜುಗುಪ್ಸಿತಃ ॥ ೨೭ ॥
ಕಿಂಸ್ವಿನ್ಮಯಾ ಪರಿತ್ಯಕ್ತಃ ಕೋಽಪ್ಯತ್ರ ಶರಣಾಗತಃ ।
ಭಯತ್ರಸ್ತಃ ಸುಭೀತೇನ ಪ್ರಾಣಾನಾಂ ತ್ರಿದಶಾಧಿಪ ॥ ೨೮ ॥

---

೨೧. ಅದರಿಂದ ಕುಪಿತನಾದ ರಾಜನು ಇಂದ್ರನ ಬಳಿಗೆ ಹೋಗಿ ಕೇಳಿದನು. "ನನ್ನ ಆಸನವನ್ನು ಸೇವಕನು ಏಕೆ ಪ್ರೋಕ್ಷಿಸುತ್ತಾನೆ?

೨೨. ನಾನು ಬ್ರಾಹ್ಮಣರನ್ನು ಕೊಂದಿರುವೆನೆ? ಅಥವಾ ಅವರ ಶಾಸನವನ್ನು ಹಾಳುಮಾಡಿದೆನೆ? ಅಥವಾ ಅವರನ್ನು ಬೈದೆನೊ?

೨೩. ಅಥವಾ ಸಮರದಲ್ಲಿ ಬಂದ ಶತ್ರುಗಳನ್ನು ನೋಡಿ ಅಡಗಿಕೊಂಡೆನೊ? ಅಥವಾ ಭಯಗೊಂಡ ಮನಸ್ಸಿನಿಂದ ಅವರನ್ನು ಕುರಿತು ದೈನ್ಯದಿಂದ ಮಾತಾಡಿದೆನೊ?

೨೪. ಅಥವಾ ನನ್ನ ರಾಜ್ಯದಲ್ಲಿ ಬಲಿಷ್ಠನು ದುರ್ಬಲನನ್ನು ಪೀಡಿಸುವನೊ? ಅಥವಾ ಕಳ್ಳರೇ ಮೊದಲಾದ ವಂಚಕರು ಕದಿಯುತ್ತಿರುವರೊ?

೨೫. ಅಥವಾ ನನ್ನ ರಾಜ್ಯದಲ್ಲಿ ಜಾತಿವ್ಯತ್ಯಯವುಂಟಾಗಿದೆಯೊ? ಅಥವಾ ಶಾಸ್ತ್ರನಿಯಮವನ್ನುಲ್ಲಂಘಿಸಿ ವರ್ಣಸಾಂಕರ್ಯವುಂಟಾಗಿದೆಯೊ?

೨೬–೨೭. ಅಥವಾ ದುಷ್ಟನ ಮಾತಿನಿಂದ ಯಾರಾದರೂ ದೋಷವಿಲ್ಲದವನನ್ನು ಶಿಕ್ಷಿಸುವರೊ? ಅಥವಾ ಪಾಪಿಯನ್ನಾಗಲಿ, ಕಳ್ಳನನ್ನಾಗಲಿ ಹಿಡಿದು ದ್ರವ್ಯದ ಆಶೆಯಿಂದ ಬಿಡುತ್ತಿರುವರೊ?

೨೮. ಪ್ರಾಣದ ಭಯದಿಂದ ಮರೆಹೊಕ್ಕವರನ್ನು ನಾನು ಬಿಟ್ಟಿರುವೆನೊ?

ಕಸ್ಯ ವಾ ಪೃಷ್ಠಮಾಂಸಾನಿ ಭಕ್ಷಿತಾನಿ ಮಯಾ ಕ್ವಚಿತ್ ।
ಕಚ್ಚಿಚ್ಚ ತ್ರಿದಶಾಧೀಶ ಬ್ರಾಹ್ಮಣಸ್ಯ ವಿಶೇಷತಃ ॥ ೨೯ ॥
ಕಿಂವಾ ದಾನಂ ಮಯಾ ದತ್ವಾ ಬ್ರಾಹ್ಮಣಾಯ ಮಹಾತ್ಮನೇ ।
ಪಶ್ಚಾತ್ತಾಪಃ ಕೃತಃ ಪಶ್ಚಾದ್ವೃತ್ತಂ ಚೋಪೇಕ್ಷಿತಂ ಚ ವಾ ॥ ೩೦ ॥
ಕಿಂವಾ ರಾಜ್ಯೇ ಮದೀಯೇ ಚ ದೀನಾನಾಂ ಪ್ರಪತಂತಿ ಚ ।
ಅಶ್ರುಪಾತಾ ದಿವಾರಾತ್ರಂ ದುಃಖಿತಾನಾಂ ಸಮಂತತಃ ॥ ೩೧ ॥
ದೈವಂ ವಾ ಪೈತೃಕಂ ವಾಽಪಿ ಕಿಂವಾ ಕರ್ಮಗೃಹೇ ಮಮ ।
ಲೋಪಂ ಗಚ್ಛತಿ ದೇವೇಂದ್ರ ಕ್ರಿಯತೇ ವಾ ವಿಧಿಚ್ಯುತಂ ॥ ೩೨ ॥
ಯತ್ತ್ವಯಾ ಕ್ರಿಯತೇ ನಿತ್ಯಂ ತೋಯೈರಭ್ಯುಕ್ಷಣಂ ಮಮ ।
ಆಸನಸ್ಯ ದ್ರುತಂ ಬ್ರೂಯಾ ಯತ್ಪಾಪಂ ವಿಹಿತಂ ಮಯಾ ॥ ೩೩ ॥

ಇಂದ್ರ ಉವಾಚ:—

ನ ವಿದ್ಯತೇ ಮಹಾರಾಜ ಶರೀರೇ ತವ ಪಾತಕಂ ।
ನ ರಾಷ್ಟ್ರೇ ಚ ಕುಲೇ ಗೇಹೇ ಭೃತ್ಯವರ್ಗೇ ವಿಶೇಷತಃ ॥ ೩೪ ॥
ಪರಂ ಶೃಣು ಪ್ರವಕ್ಷ್ಯಾಮಿ ಯತ್ತೇ ಪಾಪಂ ಭವಿಷ್ಯತಿ ।
ತೇನ ಸಂಪ್ರೋಕ್ಷ್ಯತೇ ಚೈವ ಆಸನಂ ಸರ್ವದೈವ ತು ॥ ೩೫ ॥

---

೨೯. ನಾನು ಯಾವ ಬ್ರಾಹ್ಮಣನ ಬೆನ್ನಿನ ಮಾಂಸಗಳನ್ನು ತಿಂದಿರುವೆನು?

೩೦. ನಾನು ಮಹಾತ್ಮನಾದ ಬ್ರಾಹ್ಮಣನಿಗೆ ದಾನವನ್ನಿತ್ತು ಪಶ್ಚಾತ್ತಾಪಗೊಂಡಿರುವೆನೊ? ಅಥವಾ ನಡತೆಯನ್ನು ಉಪೇಕ್ಷಿಸಿರುವೆನೊ?

೩೧. ಅಥವಾ ನನ್ನ ರಾಜ್ಯದಲ್ಲಿ ದುಃಖಗೊಂಡ ದೀನರ ಕಣ್ಣೀರು ಹಗಲು ರಾತ್ರಿ ಸುತ್ತಲೂ ಬೀಳುತ್ತಿರುವುದೆ?

೩೨. ಅಥವಾ ನನ್ನ ಮನೆಯಲ್ಲಿ ದೇವಪಿತೃಕಾರ್ಯಗಳು ಲೋಪವಾಗುತ್ತಿರುವುವೊ? ಅಥವಾ ಆ ಕಾರ್ಯಗಳನ್ನು ವಿಧಿಬಾಹ್ಯವಾಗಿ ಮಾಡುತ್ತಿರುವೆನೊ?

೩೩. ನೀನು ನಿತ್ಯವೂ ನನ್ನ ಆಸನವನ್ನು ನೀರಿನಿಂದ ಪ್ರೋಕ್ಷಿಸುತ್ತಿರುವೆಯಷ್ಟೆ. ನಾನು ಯಾವ ಪಾಪವನ್ನು ಮಾಡಿದ್ದೇನೆ?'' ಹೇಳು.

೩೪. ಇಂದ್ರನು ಹೇಳುತ್ತಾನೆ:—ಮಹಾರಾಜ! ನಿನ್ನ ಶರೀರದಲ್ಲಿಯೂ, ದೇಶದಲ್ಲಿಯೂ, ಕುಲದಲ್ಲಿಯೂ, ಮನೆಯಲ್ಲಿಯೂ, ಸೇವಕರಲ್ಲಿಯೂ ಪಾಪವಿಲ್ಲ.

೩೫. ಆದರೆ ಹೇಳುವೆನು ಕೇಳು. ನಿನ್ನಲ್ಲಿ ಪಾಪವುಂಟಾಗುವುದರಿಂದ ನಿನ್ನ ಆಸನವನ್ನು ಯಾವಾಗಲೂ ಪ್ರೋಕ್ಷಣೆ ಮಾಡಿಸುವೆನು.

ಅಪುತ್ರಸ್ಯ ಗತಿರ್ನಾಸ್ತಿ ನ ಚ ಸ್ವರ್ಗಂ ಪ್ರಪದ್ಯತೇ ।
ಪೈತೃಕೇಣ ನರೋ ಗ್ರಸ್ತೋ ಯ ಋಣೇನ ಸದಾ ನೃಪ ॥ ೩೬ ॥
ದ್ವೇಷ್ಯತಾಂ ಯಾತಿ ದೇವಾನಾಂ ಪಿತೄಣಾಂ ಚ ವಿಶೇಷತಃ ।
ಯದಾ ಪಶ್ಯತಿ ಪುತ್ರಸ್ಯ ವದನಂ ಪುರುಷೋ ನೃಪ ॥ ೩೭ ॥
ಆನೃಣ್ಯಂ ಸಮವಾಪ್ನೋತಿ ಪಿತೄಣಾಂ ಸ ತದಾ ಧ್ರುವಂ ।
ಸ ತ್ವಂ ನೈವ ಗತೋ ರಾಜನ್ನಾನೃಣ್ಯಂ ಯನ್ಮಯೋದಿತಂ ॥ ೩೮ ॥
ಪಿತೄಣಾಂ ತೇನ ತೇ ನಿತ್ಯಮಾಸನೇಽಭ್ಯುಕ್ಷಣಂ ಕೃತಂ ।
ತಸ್ಮಾದ್ಯತಸ್ವ ಪುತ್ರಾರ್ಥಂ ಯದೀಚ್ಛಸಿ ಪರಾಂ ಗತಿಂ ॥ ೩೯ ॥
ಆತ್ಮಾನಂ ನರಕಾತ್ತ್ರಾತುಂ ಪುಂ ಸಂಜ್ಞಾಚ್ಚ ತಥಾ ನೃಪ ।
ಏವಮುಕ್ತಃ ಸ ಶಕ್ರೇಣ ರಾಜಾ ದಶರಥಸ್ತದಾ ॥ ೪೦ ॥
ದುಃಖೇನ ಮಹತಾ ಯುಕ್ತೋ ಲಜ್ಜಯಾಽಧೋಮುಖಃ ಸ್ಥಿತಃ ।
ಆಮಂತ್ರ್ಯಾಽಥ ಸಹಸ್ರಾಕ್ಷಂ ಗತ್ವಾಽಯೋಧ್ಯಾಂ ನಿಜಾಂ ಪುರೀಂ ।
ಅಮಾತ್ಯಾನಾಂ ನಿಜಂ ರಾಜ್ಯಮರ್ಪಯಾಮಾಸ ಸತ್ವರಃ ॥ ೪೧ ॥
ತತಃ ಪ್ರೋವಾಚ ತಾನ್ ಸರ್ವಾಂಸ್ತಪಃ ಕಾರ್ಯಂ ಮಯಾಽಧುನಾ ।
ಯಾವತ್ಪುತ್ರಸ್ಯ ಸಂಪ್ರಾಪ್ತಿಸ್ತಾವದೇವ ನ ಸಂಶಯಃ ॥ ೪೨ ॥
ಏತದ್ರಾಜ್ಯಂ ಪ್ರಯತ್ನೇನ ರಕ್ಷಣೀಯಂ ಯಥಾವಿಧಿ ।
ಯುಷ್ಮಾಭಿರ್ಮಮ ವಾಕ್ಯೇನ ಯಾವದಾಗಮನಂ ಮಮ ॥ ೪೩ ॥

---

೩೬. ಪುತ್ರನಿಲ್ಲದವನು ಪಿತೃಋಣದಿಂದ ಗ್ರಸ್ತನಾಗುವುದರಿಂದ ಅವನಿಗೆ ಸ್ವರ್ಗರೂಪವಾದ ಉತ್ತಮ ಗತಿಯಿಲ್ಲ.

೩೭–೪೧. ಅವನು ದೇವಪಿತೃಗಳಿಗೆ ದ್ವೇಷ್ಯನಾಗುವನು. ಮಾನವನು ಪುತ್ರನ ಮುಖವನ್ನು ನೋಡಿದಾಗ ಪಿತೃಋಣದಿಂದ ಮುಕ್ತನಾಗುವನು. ನೀನು ಪಿತೃಋಣದಿಂದ ಮುಕ್ತನಾಗದಿರುವುದರಿಂದ ನಿನ್ನಆಸನದಲ್ಲಿ ಪ್ರೋಕ್ಷಣೆ ಮಾಡಿಸುವೆನು. ಆದುದರಿಂದ ನೀನು ಉತ್ತಮ ಗತಿಯನ್ನು ಇಚ್ಛಿಸುವುದಾದರೆ ನಿನ್ನನ್ನು ಪುಂಸಂಜ್ಞಕ ನರಕದಿಂದ ರಕ್ಷಿಸುವುದಕ್ಕಾಗಿ ಮಗನಿಗೋಸ್ಕರ ಪ್ರಯತ್ನಿಸು. ಇಂದ್ರನು ಹೀಗೆ ಹೇಳಲು ದಶರಥರಾಜನು ಅತ್ಯಂತ ದುಃಖಿತನಾಗಿ ನಾಚಿಕೆಯಿಂದ ಮುಖವನ್ನು ತಗ್ಗಿಸಿಕೊಂಡನು. ಬಳಿಕ ಇಂದ್ರನನ್ನು ಕೇಳಿಕೊಂಡು ತನ್ನ ನಗರಿಯಾದ ಅಯೋಧ್ಯೆಗೆ ತೆರಳಿ ಬೇಗನೆ ರಾಜ್ಯವನ್ನು ಮಂತ್ರಿಗಳಿಗೆ ಒಪ್ಪಿಸಿದನು.

೪೨–೪೩. ಅನಂತರ ಅವರೆಲ್ಲರನ್ನು ಕುರಿತು ಇಂತೆಂದನು. "ನನಗೆ ಪುತ್ರನು ಜನಿಸುವವರೆಗೆ ನಾನು ತಪಸ್ಸನ್ನು ಮಾಡಬೇಕು. ಇದು ಅನಿವಾರ್ಯವಾದುದು." ನೀವು ನಾನು ಬರುವವರೆಗೆ ರಾಜ್ಯವನ್ನು ನನ್ನ ಮಾತಿನಿಂದ ವಿಧಿಯಂತೆ ಕಾಪಾಡಬೇಕು."

ಮಂತ್ರಿಣ ಊಚುಃ:—

ಯುಕ್ತಮೇತನ್ಮಹಾರಾಜ ಪುತ್ರಾರ್ಥಂ ಯತ್ಸಮುದ್ಯಮಃ ।
ಕ್ರಿಯತೇ ಪುತ್ರಹೀನಸ್ಯ ಕಿಂ ರಾಜ್ಯೇನ ಧನೇನ ವಾ ॥ ೪೪ ॥
ವಯಂ ರಕ್ಷಾಂ ಕರಿಷ್ಯಾಮಸ್ತವರಾಜ್ಯೇ ಸಮಂತತಃ ।
ನಿರ್ವೃತಿಂ ತ್ವಂ ಸಮಾಸ್ಥಾಯ ಕುರು ಪುತ್ರಕೃತೇ ತಪಃ ॥ ೪೫ ॥
ಕಾರ್ತಿಕೇಯಪುರಂ ಗತ್ವಾ ಯತ್ರಪಿತ್ರಾ ಪುರಾತವ ।
ತಪಸ್ತಪ್ತಂ ಯಥಾ ಲಬ್ಧ್ವಾ ಸಿದ್ಧಿಶ್ಚ ಮನಸೇಪ್ಸಿತಾ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದಶರಥಕೃತತಪಸ್ಸಮುದ್ಯೋಗವರ್ಣನಂ"
ನಾಮ ಸಪ್ತನವತಿತಮೋಽಧ್ಯಾಯಃ

---

೪೪. ಮಂತ್ರಿಗಳು ಹೇಳುತ್ತಾರೆ:—ಮಹಾರಾಜ! ನೀನು ಪುತ್ರನಿಗಾಗಿ ಪ್ರಯತ್ನಿಸುತ್ತಿರುವುದು ಯುಕ್ತವಾದುದು. ಪುತ್ರನಿಲ್ಲದವನಿಗೆ ರಾಜ್ಯದಿಂದಾಗಲಿ, ಹಣದಿಂದಾಗಲಿ ಏನು ಪ್ರಯೋಜನ?

೪೫—೪೬. ನಾವು ನಿನ್ನ ರಾಜ್ಯವನ್ನು ರಕ್ಷಿಸುವೆವು. ನೀನು ಸುಖಚಿತ್ತನಾಗಿ ಮಗನಿಗೋಸ್ಕರ ನಿನ್ನ ತಂದೆಯು ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದ ಕಾರ್ತಿಕೇಯಪುರಕ್ಕೆ ಹೋಗಿ ತಪವನ್ನಾಚರಿಸು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದಶರಥಕೃತತಪಸ್ಸಮುದ್ಯೋಗವರ್ಣನ"ವೆಂಬ
ತೊಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟನವತಿತಮೋಽಧ್ಯಾಯಃ

### ರಾಜವಾಪೀಮಾಹಾತ್ಮ್ಯವರ್ಣನಂ

ಸೂತ ಉವಾಚ:—

ತತೋ ದಶರಥೋ ರಾಜಾ ಮಂತ್ರಿಭಿಸ್ತೈರ್ವಿಸರ್ಜಿತಃ ।
ಹಾಟಕೇಶ್ವರಜಂ ಕ್ಷೇತ್ರಂ ಸಂಪ್ರಾಪ್ತೋ ಹರ್ಷಸಂಯುತಃ ॥ ೧ ॥
ತತ್ರಾಽಽಗತ್ಯ ತತೋ ದೇವೀಂ ಪಿತ್ರಾ ಸಂಸ್ಥಾಪಿತಾಂ ಪುರಾ ।
ಪೂಜಯಿತ್ವಾಽಥ ಸದ್ಭಕ್ತ್ಯಾ ಸ್ನಾತ್ವಾ ಕುಂಡೇ ಶುಭೋದಕೇ ॥ ೨ ॥
ತತೋಽನ್ಯಾನಿ ಚ ಮುಖ್ಯಾನಿ ದೃಷ್ಟ್ವಾ ಚಾಯತನಾನಿ ಸಃ ।
ಸ್ನಾತ್ವಾ ತೀರ್ಥೇಷ್ವನೇಕೇಷು ದತ್ವಾ ದಾನಾನ್ಯನೇಕಶಃ ॥ ೩ ॥
ಪ್ರಾಸಾದಂ ಕಾರಯಾಮಾಸ ದೇವದೇವಸ್ಯ ಚಕ್ರಿಣಃ ।
ತತ್ರ ಸಂಸ್ಥಾಪಯಾಮಾಸ ಪ್ರತಿಮಾಂ ವೈಷ್ಣವೀಂ ಶುಭಾಂ ॥ ೪ ॥
ತಸ್ಯಾಽಗ್ರೇ ಕಾರಯಾಮಾಸ ವಾಪೀಂ ಸ್ವಚ್ಛೋದಕಾನ್ವಿತಾಂ ।
ಸೋಪಾನಪಂಕ್ತಿಭಿರ್ಯುಕ್ತಾಂ ಸಾಧುಭಿಃ ಸಂಪ್ರಶಂಸಿತಾಂ ॥ ೫ ॥
ಉದಕೇನ ತತಸ್ತಸ್ಯಾ ದೇವಾಽಽರಾಧನತತ್ಪರಃ ।
ಪ್ರಕಾರೈರ್ಬಹುಭಿಸ್ತೀವ್ರಂ ಚಕಾರ ಸುಮಹತ್ತಪಃ ॥ ೬ ॥

---

## ಕನ್ನಡದ ಅನುವಾದ

### ರಾಜವಾಪೀಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಮಂತ್ರಿಗಳು ಹೀಗೆ ಹೇಳಿ ಕಳುಹಿಸಲು ದಶರಥ ರಾಜನು ಸಂತೋಷದಿಂದ ಹಾಟಕೇಶ್ವರ ಕ್ಷೇತ್ರಕ್ಕೆ ಬಂದನು.

೨–೪. ಅಲ್ಲಿ ಮಂಗಳಕರವಾದ ನೀರುಳ್ಳ ಕುಂಡದಲ್ಲಿ ಮಿಂದು ತನ್ನ ತಂದೆಯು ಹಿಂದೆ ಸ್ಥಾಪಿಸಿದ್ದ ದೇವಿಯನ್ನು ಪೂಜಿಸಿ ಇತರ ಮುಖ್ಯ ದೇವಾಲಯಗಳನ್ನು ನೋಡಿ ಅನೇಕ ತೀರ್ಥಗಳಲ್ಲಿ ಮಿಂದು ಬಹುವಾಗಿ ದಾನಗಳನ್ನಿತ್ತು ದೇವೋತ್ತಮನಾದ ವಿಷ್ಣುವಿನ ದೇವಾಲಯವನ್ನು ನಿರ್ಮಿಸಿ ಅದರಲ್ಲಿ ವಿಷ್ಣುವಿನ ಪ್ರತಿಮೆಯನ್ನು ಪ್ರತಿಷ್ಠೆ ಮಾಡಿದನು.

೫. ಆ ದೇವಾಲಯದ ಮುಂದೆ ನಿರ್ಮಲವಾದ ನೀರುಳ್ಳದೂ, ಮೆಟ್ಟಲುಗಳ ಸಾಲುಳ್ಳದೂ, ಸಜ್ಜನರಿಂದ ಶ್ಲಾಘಿಸಲ್ಪಟ್ಟುದೂ ಆದ ವಾಪಿಯನ್ನು ಮಾಡಿಸಿದನು.

೬. ಬಳಿಕ ಆ ವಾಪಿಯ ಜಲದಿಂದ ದೇವತಾರಾಧನೆಯಲ್ಲಿ ನಿರತನಾಗಿ ಅನೇಕ ಪ್ರಕಾರವಾಗಿ ಕಠಿನವಾದ ತಪವನ್ನಾಚರಿಸಿದನು.

ತತೋ ವರ್ಷಶತೇಽತೀತೇ ತಸ್ಯ ತುಷ್ಟೋ ಜನಾರ್ದನಃ ।
ವಿಲೋಕ್ಯ ಚ ತಪಸ್ತೀವ್ರಂ ವಿಹಿತಂ ತೇನ ಭೂಭುಜಾ ॥ ೭ ॥
ಪ್ರೋವಾಚ ದರ್ಶನಂ ಗತ್ವಾ ಪಕ್ಷಿರಾಜಂ ಸಮಾಶ್ರಿತಃ ।
ಮೇಘಗಂಭೀರಯಾ ವಾಚಾ ಬಹುದೇವಗಣೈರ್ವೃತಃ ॥ ೮ ॥

ಶ್ರೀ ವಿಷ್ಣುರುವಾಚ :—

ಪರಿತುಷ್ಟೋಽಸ್ಮಿ ತೇ ವತ್ಸ ವರಂ ವರಯ ಸುವ್ರತ ।
ಅಪಿ ತೇ ದುರ್ಲಭಂ ಕಾಮಮಹಂ ದಾಸ್ಯಾಮಿ ಕೃತ್ಸ್ನಶಃ ॥ ೯ ॥

ರಾಜೋವಾಚ :—

ಪುತ್ರಾರ್ಥೋಽಯಂ ಸಮಾರಂಭೋ ಮಯಾ ದೇವ ಕೃತೋಽಖಿಲಃ ।
ತಪಸೋ ದೇಹಿ ಮೇ ಪುತ್ರಾಂಸ್ತಸ್ಮಾದ್ವಂಶವಿವೃದ್ಧಿದಾನ್ ॥ ೧೦ ॥
ಅನ್ಯತ್ಸರ್ವಂ ಸುರಾಧೀಶ ಧ್ರುವಮಸ್ತಿ ಗೃಹೇಸ್ಥಿತಂ ।
ಪ್ರಸಾದಾತ್ತವ ಯತ್ಕಿಂಚಿದ್ವೈಭವಂ ವಿದ್ಯತೇ ಮಮ ॥ ೧೧ ॥

ವಿಷ್ಣುರುವಾಚ :—

ಅಹಂ ತವ ಗೃಹೇ ರಾಜನ್ ಸ್ವಯಮೇವ ನ ಸಂಶಯಃ ।
ಅವತಾರಂ ಕರಿಷ್ಯಾಮಿ ಕೃತ್ವಾ ರೂಪಚತುಷ್ಟಯಂ ॥ ೧೨ ॥
ದೇವಕಾರ್ಯಾಯ ತಸ್ಮಾತ್ತ್ವಂ ಗೃಹಂ ಗತ್ವಾ ಮಹೀಪತೇ ।
ಕುರು ರಾಜ್ಯಂ ಯಥಾನ್ಯಾಯಂ ಪಿತೃಪೈತಾಮಹಂ ಮಹತ್ ॥ ೧೩ ॥

---

೭. ಬಳಿಕ ನೂರು ವರ್ಷಗಳು ಕಳೆಯಲು ಅವನು ಮಾಡಿದ ಕಠಿನ ತಪಸ್ಸನ್ನು ನೋಡಿ ವಿಷ್ಣುವು ಸಂತುಷ್ಟನಾದನು.

೮. ಗರುಡನನ್ನೇರಿದ ಅವನು ಅನೇಕ ದೇವತೆಗಳಿಂದ ಸಹಿತನಾಗಿ ಮೇಘದಂತೆ ಗಂಭೀರವಾದ ಮಾತಿನಿಂದ ಇಂತೆಂದನು.

೯. ಶ್ರೀ ವಿಷ್ಣುವು ಹೇಳುತ್ತಾನೆ:—ವತ್ಸ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನು.

೧೦. ರಾಜನು ಹೇಳುತ್ತಾನೆ:—ಸ್ವಾಮಿ! ನಾನು ಪುತ್ರನಿಗಾಗಿ ಈ ತಪಸ್ಸನ್ನು ಮಾಡಿರುವೆನು. ಆದುದರಿಂದ ನೀನು ವಂಶವನ್ನು ವೃದ್ಧಿಗೊಳಿಸುವ ಪುತ್ರನನ್ನು ಕೊಡು.

೧೧. ನಿನ್ನ ಅನುಗ್ರಹದಿಂದ ಮನೆಯಲ್ಲಿ ಇತರ ಎಲ್ಲ ವೈಭವಗಳೂ ಇವೆ.

೧೨—೧೩. ವಿಷ್ಣುವು ಹೇಳುತ್ತಾನೆ:—ಮಹಾರಾಜ! ನಾನು ದೇವತೆಗಳ ಕಾರ್ಯಕ್ಕಾಗಿ ನಾಲ್ಕು ರೂಪಗಳಿಂದ ನಿನ್ನ ಮನೆಯಲ್ಲಿ ಅವತರಿಸುತ್ತೇನೆ. ನೀನು ಮನೆಗೆ ಹೋಗಿ ವಂಶಪಾರಂಪರ್ಯದಿಂದ ಬಂದ ರಾಜ್ಯವನ್ನಾಳು.

ತಥೇಯಂ ಯಾ ತ್ವಯಾ ವಾಪೀ ನಿರ್ಮಿತಾ ವಿಮಲೋದಕಾ ।
ರಾಜವಾಪೀತಿ ವಿಖ್ಯಾತಾ ಲೋಕೇ ಸೇಯಂ ಭವಿಷ್ಯತಿ ॥ ೧೪ ॥
ಅಸ್ಯಾಂ ಸ್ನಾತ್ವಾ ನರೋ ಭಕ್ತ್ಯಾ ಯ ಏನಾಂ ಪೂಜಯಿಷ್ಯತಿ ।
ಶ್ರದ್ಧಯಾ ಪರಯಾ ಯುಕ್ತಃ ಸಂಪ್ರಾಪ್ತೇ ಪಂಚಮೀ ದಿನೇ ॥ ೧೫ ॥
ತತಃ ಕರಿಷ್ಯತಿ ಶ್ರಾದ್ಧಂ ಯಾವತ್ಸಂವತ್ಸರಂ ನೃಪ ।
ಅಪುತ್ರಃ ಪ್ರಾಪ್ಸ್ಯತೇ ಪುತ್ರಾನ್ ವಂಶವೃದ್ಧಿಕರಾನ್ ಸ ಹಿ ॥ ೧೬ ॥
ಏವಮುಕ್ತ್ವಾ ಸ ಭಗವಾಂಸ್ತತಶ್ಚಾದರ್ಶನಂ ಗತಃ ।
ಪ್ರಹೃಷ್ಟವದನೋ ಭೂತ್ವಾ ಸೋಽಪಿ ರಾಜಾ ಯಯೌ ಗೃಹಂ ॥ ೧೭ ॥
ತತಃ ಸ್ತೋಕೇನ ಕಾಲೇನ ತಸ್ಯ ಪುತ್ರಚತುಷ್ಟಯಂ ।
ಸಂಜಾತಂ ಲೋಕವಿಖ್ಯಾತಂ ಕಲತ್ರತ್ರಿತಯಸ್ಯ ಚ ॥ ೧೮ ॥
ಕೌಶಲ್ಯಾನಾಮ ವಿಖ್ಯಾತಾ ತಸ್ಯ ಭಾರ್ಯಾ ಸುಶೋಭನಾ ।
ಜ್ಯೇಷ್ಠಾ ತಸ್ಯಾಂ ಸುತೋ ಜಜ್ಞೇ ರಾಮಾಖ್ಯಃ ಪ್ರಥಮಃ ಸುತಃ ॥ ೧೯ ॥
ತಥಾಽನ್ಯಾ ಕೈಕಯೀನಾಮ ತಸ್ಯ ಭಾರ್ಯಾ ಕನಿಷ್ಠಿಕಾ ।
ಭರತೋ ನಾಮ ವಿಖ್ಯಾತಸ್ತಸ್ಯಾಃ ಪುತ್ರೋಽಭವತ್ತ್ವಸೌ ॥ ೨೦ ॥
ಸುಮಿತ್ರಾಖ್ಯಾ ತಥಾ ಚಾಽನ್ಯಾ ಪತ್ನೀ ಯಾ ಮಧ್ಯಮಾ ಸ್ಥಿತಾ ।
ಶತ್ರುಘ್ನಲಕ್ಷ್ಮಣೌ ಪುತ್ರೌ ತಸ್ಯಾಂ ಜಾತೌ ಮಹಾಬಲೌ ॥ ೨೧ ॥

---

೧೪. ನೀನು ನಿರ್ಮಿಸಿರುವ ಶುದ್ಧವಾದ ನೀರುಳ್ಳ ಈ ವಾಪಿಯು ರಾಜವಾಪಿ ಎಂದು ಲೋಕದಲ್ಲಿ ಪ್ರಸಿದ್ಧವಾಗುವುದು.

೧೫–೧೬. ಪಂಚಮೀ ದಿನ ಈ ವಾಪಿಯಲ್ಲಿ ಮಿಂದು ಈ ದೇವಿಯನ್ನು ಅತಿಶಯ ಶ್ರದ್ಧೆಯಿಂದ ಪೂಜಿಸಿ ಒಂದು ವರ್ಷಕಾಲ ಶ್ರಾದ್ಧವನ್ನು ಮಾಡುವ ಅಪುತ್ರವಂತನು ವಂಶವನ್ನು ವೃದ್ಧಿಗೊಳಿಸುವ ಪುತ್ರರನ್ನು ಪಡೆಯುವನು.

೧೭. ಆ ವಿಷ್ಣುವು ಹೀಗೆ ನುಡಿದು ಅದೃಶ್ಯನಾದನು. ಆ ರಾಜನು ಸಂತೋಷಗೊಂಡ ಮುಖವುಳ್ಳವನಾಗಿ ಮನೆಗೆ ತೆರಳಿದನು.

೧೮. ಅನಂತರ ಕೆಲವು ಕಾಲದಮೇಲೆ ಅವನ ಮೂವರು ಮಂದಿ ಹೆಂಡತಿಯರಲ್ಲಿ ಪ್ರಪಂಚ ವಿಖ್ಯಾತರಾದ ನಾಲ್ಕು ಮಂದಿ ಮಕ್ಕಳು ಜನಿಸಿದರು.

೧೯. ಅವನ ಜ್ಯೇಷ್ಠ ಪತ್ನಿಯಾದ ಕೌಸಲ್ಯೆಯಲ್ಲಿ ರಾಮನೆಂಬ ಮಗನು ಹುಟ್ಟಿದನು.

೨೦. ಹಾಗೆಯೇ ಚಿಕ್ಕ ಹೆಂಡತಿಯಾದ ಕೈಕಯಿಯಲ್ಲಿ ಭರತನೆಂಬ ಸುತನು ಜನಿಸಿದನು.

೨೧. ಸುಮಿತ್ರೆಯೆಂಬ ಮಧ್ಯಮ ಭಾರ್ಯೆಯಲ್ಲಿ ಶತ್ರುಘ್ನ ಲಕ್ಷ್ಮಣರು ಹುಟ್ಟಿದರು.

ತಥಾಽನ್ಯಾ ಕನ್ಯಕಾ ಚೈಕಾ ಬಭೂವ ವರವರ್ಣಿನೀ ।
ದದೌ ಯಾಂ ಪುತ್ರಹೀನಸ್ಯ ಲೋಮಪಾದಸ್ಯ ಭೂಪತೇಃ ॥ ೨೨ ॥
ಆನೃಣ್ಯಂ ಭೂಪತಿಃ ಪ್ರಾಪ್ಯ ಏವಂ ದಶರಥಸ್ತದಾ ।
ಪಿತೄಣಾಂ ಪ್ರಯಯೌ ಸ್ವರ್ಗಂ ಕೃತಕೃತ್ಯಸ್ತಥಾ ದ್ವಿಜಾಃ ॥ ೨೩ ॥
ಅಥ ರಾಜಾಽಭವದ್ರಾಮಃ ಸಾರ್ವಭೌಮಸ್ತತಃಪರಂ ।
ರಾವಣೋ ಯೇನ ದುರ್ಧರ್ಷೋ ನಿಹತೋ ದೇವಕಂಟಕಃ ॥ ೨೪ ॥
ಯೇನ ರಾಮೇಶ್ವರಶ್ಚಾಽತ್ರ ನಿರ್ಮಿತೋ ಲಕ್ಷ್ಮಣೇಶ್ವರಃ ।
ಸೀತಾದೇವೀ ತಥಾ ಮೂರ್ತಾ ಯೇನ ಚಾಽತ್ರ ಪ್ರತಿಷ್ಠಿತಾ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರಾಜವಾಪೀಮಾಹಾತ್ಮ್ಯವರ್ಣನಂ"
ನಾಮಾಷ್ಟನವತಿತಮೋಽಧ್ಯಾಯಃ

---

೨೨. ಹಾಗೆಯೇ ಓರ್ವ ಕನ್ಯೆಯೂ ಜನಿಸಿದಳು. ಅವಳನ್ನು ರಾಜನು ಸಂತತಿಯಿಲ್ಲದ ಲೋಮಪಾದ ರಾಜನಿಗಿತ್ತನು.

೨೩. ದ್ವಿಜರೆ! ಆ ದಶರಥ ರಾಜನು ಹೀಗೆ ಪಿತೃಋಣಮುಕ್ತನಾದುದರಿಂದ ಧನ್ಯನಾಗಿ ಸ್ವರ್ಗಕ್ಕೆ ಹೋದನು.

೨೪. ಅನಂತರ ರಾಮನು ಚಕ್ರವರ್ತಿಯಾಗಿ ದೇವಕಂಟಕನಾದ ರಾವಣನನ್ನು ಕೊಂದನು.

೨೫. ಆ ರಾಮನು ಇಲ್ಲಿ ರಾಮೇಶ್ವರ, ಲಕ್ಷ್ಮಣೇಶ್ವರ, ಸೀತಾದೇವಿ ಇವರ ಮೂರ್ತಿಗಳನ್ನು ಪ್ರತಿಷ್ಠೆಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರಾಜವಾಪೀಮಾಹಾತ್ಮ್ಯವರ್ಣನ" ವೆಂಬ
ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕೋನಶತತಮೋಽಧ್ಯಾಯಃ

### ಶ್ರೀರಾಮಂಪ್ರತಿ ದುರ್ವಾಸಃ ಸಮಾಗಮನ ವೃತ್ತಾಂತವರ್ಣನಂ

ಋಷಯ ಊಚುಃ:—

ಯದೇತದ್ಭವತಾ ಪ್ರೋಕ್ತಂ ತತ್ರ ರಾಮೇಣ ನಿರ್ಮಿತಃ ।
ರಾಮೇಶ್ವರಸ್ತಥಾ ಸೀತಾ ತೇನ ತತ್ರ ವಿನಿರ್ಮಿತಾ ॥ ೧ ॥
ತಥಾ ಚ ಲಕ್ಷ್ಮಣಾರ್ಥಾಯ ನಿರ್ಮಿತಸ್ತೇನ ಸಂಶ್ರಯಃ ।
ಏತನ್ಮಹದ್ವಿರುದ್ಧಂ ತೇ ಪ್ರತಿಭಾತಿ ವಚೋಽಖಿಲಂ ॥ ೨ ॥
ತ್ವಯಾ ಸೂತ ಪುರಾ ಪ್ರೋಕ್ತಂ ರಾಮೋ ಲಕ್ಷ್ಮಣಸಂಯುತಃ ।
ಸೀತಯಾ ಸಹಿತಃ ಪ್ರಾಪ್ತಃ ಕ್ಷೇತ್ರೇಽತ್ರ ಪ್ರಸ್ಥಿತೋ ವನೇ ॥ ೩ ॥
ಶ್ರಾದ್ಧಂ ಕೃತ್ವಾ ಗಯಾಶೀರ್ಷೇ ಲಕ್ಷ್ಮಣೇನ ವಿರುಧ್ಯ ಚ ।
ಪುನಃ ಸಂಪ್ರಸ್ಥಿತೋಽರಣ್ಯಂ ಕ್ರೋಧಾವಿಷ್ಟಶ್ಚ ತಂ ಪ್ರತಿ ॥ ೪ ॥
ಯತ್ತ್ವಯೋಕ್ತಂ ತದಾ ತೇನ ನಿರ್ಮಿತೋಽತ್ರ ಮಹೇಶ್ವರಃ ।
ಏತಚ್ಚ ಸರ್ವಮಾಚಕ್ಷ್ವ ಸಂದೇಹಂ ಸೂತನಂದನ ॥ ೫ ॥

ಸೂತ ಉವಾಚ:—

ಅತ್ರ ಮೇ ನಾಸ್ತಿ ಸಂದೇಹೋ ಯುಷ್ಮಾಕಂ ಚ ಪುನಃ ಸ್ಥಿತಃ ।
ತತೋ ವಕ್ಷ್ಯಾಮ್ಯಶೇಷೇಣ ಶ್ರೂಯತಾಂ ದ್ವಿಜಸತ್ತಮಾಃ ।
ಏತತ್ಕ್ಷೇತ್ರಂ ಪುನಶ್ಚಾಽದ್ಯಂ ನಕ್ಷಯಂ ಯಾತಿ ಕುತ್ರಚಿತ್ ॥ ೬ ॥

---

### ಕನ್ನಡದ ಅನುವಾದ

#### ಶ್ರೀರಾಮದುರ್ವಾಸಸಮಾಗಮವೃತ್ತಾಂತವರ್ಣನ

೧–೨. ಋಷಿಗಳು ಹೇಳುತ್ತಾರೆ:—ಸೂತ! ನೀನು ಅಲ್ಲಿ ರಾಮನು ರಾಮೇಶ್ವರ, ಲಕ್ಷ್ಮಣೇಶ್ವರ, ಸೀತೆ ಇವರನ್ನು ಪ್ರತಿಷ್ಠೆ ಮಾಡಿರುವನೆಂದು ಹೇಳಿರುವೆ. ಈ ಮಾತೆಲ್ಲ ನನಗೆ ಅತ್ಯಂತ ವಿರುದ್ಧವಾಗಿ ತೋರುವುವು.

೩–೪. ನೀನು ಹಿಂದೆ ರಾಮನು ಸೀತಾ ಲಕ್ಷ್ಮಣರೊಡನೆ ಈ ಕ್ಷೇತ್ರಕ್ಕೆ ಹೊರಟು ಗಯಾಶೀರ್ಷದಲ್ಲಿ ಶ್ರಾದ್ಧಮಾಡಿ ಲಕ್ಷ್ಮಣನೊಡನೆ ದ್ವೇಷವನ್ನು ಹೊಂದಿ ಕುಪಿತನಾಗಿ ಮರಳಿ ಕಾಡಿಗೆ ಹೊರಟನು ಎಂದಿರುವೆ.

೫. ಈಗ ಈ ಕ್ಷೇತ್ರದಲ್ಲಿ ಮಹೇಶ್ವರನನ್ನು ಸ್ಥಾಪಿಸಿರುವನೆಂದು ಹೇಳಿರುವೆ. ಈ ವಿಷಯದಲ್ಲಿ ನನಗೆ ಸಂದೇಹವುಂಟಾಗಿದೆ. ಇದನ್ನೆಲ್ಲ ಹೇಳು.

೬. ಸೂತನು ಹೇಳುತ್ತಾನೆ:—ದ್ವಿಜರೆ! ಈ ವಿಷಯದಲ್ಲಿ ನನಗೆ ಸಂದೇಹವಿಲ್ಲ. ನಿಮಗೆ ಸಂದೇಹವುಂಟಾಗಿದೆ. ಆದುದರಿಂದ ಎಲ್ಲವನ್ನೂ ಸಂಪೂರ್ಣವಾಗಿ ಹೇಳುವೆನು ಕೇಳಿರಿ. ಈ ಕ್ಷೇತ್ರವು ಯಾವಾಗಲೂ ನಾಶವಾಗುವುದಿಲ್ಲ.

ಅನ್ಯಸ್ಮಿನ್ ದಿವಸೇ ಪ್ರಾಪ್ತೇ ಸ ತದಾ ರಘುನಂದನಃ ।
ಯದಾ ವಿರೋಧಮಾಪನ್ನಃ ಸಾರ್ಧಂ ಸೌಮಿತ್ರಿಣಾ ಸಹ ॥ ೭ ॥
ಏತತ್ಪ್ರಸರ್ದಿನಂ ಚಾಽನ್ಯದ್ಯತ್ರ ತೇನ ಪ್ರತಿಷ್ಠಿತಃ ।
ರಾಮೇಶ್ವರಃ ಸ್ವಯಂ ಭಕ್ತ್ಯಾ ದುಃಖಿತೇನ ಮಹಾತ್ಮನಾ ॥ ೮ ॥

ಋಷಯ ಊಚುಃ:—

ಅನ್ಯಸ್ಮಿನ್ ದಿವಸೇ ತತ್ರ ಕಸ್ಮಿನ್ ಕಾಲೇ ರಘೂತ್ತಮಃ ।
ಸಂಪ್ರಾಪ್ತಸ್ತಸ್ಯ ಕಿಂ ದುಃಖಂ ಸಂಜಾತಂ ತತ್ಪ್ರಕೀರ್ತಯ ॥ ೯ ॥

ಸೂತ ಉವಾಚ:—

ಕೃತ್ವಾ ಸೀತಾಪರಿತ್ಯಾಗಂ ರಾಮೋ ರಾಜೀವಲೋಚನಃ ।
ಲೋಕಾಽಪವಾದಸಂತ್ರಸ್ತಸ್ತತೋ ರಾಜ್ಯಂ ಚಕಾರ ಸಃ ॥ ೧೦ ॥
ಕೃತ್ವಾ ಸ್ವರ್ಣಮಯೀಂ ಸೀತಾಂ ಪತ್ನೀಂ ಯಜ್ಞ ಪ್ರಸಿದ್ಧಯೇ ।
ನ ಸ ಚಕ್ರೇ ಮಹಾಭಾಗೋ ಭಾರ್ಯಾಮನ್ಯಾಂ ಕಥಂಚನ ॥ ೧೧ ॥
ದಶವರ್ಷ ಸಹಸ್ರಾಣಿ ದಶವರ್ಷ ಶತಾನಿ ಚ ।
ಬ್ರಹ್ಮಚರ್ಯೇಣ ಚಕ್ರೇ ಸ ರಾಜ್ಯಂ ನಿಹತಕಂಟಕಂ ॥ ೧೨ ॥
ತತೋ ವರ್ಷ ಸಹಸ್ರಾಂತೇ ಪ್ರಾಪ್ತೇ ಚೈಕಾದಶೇ ದ್ವಿಜಾಃ ।
ದೇವದೂತಃ ಸಮಾಯಾತೋ ರಾಮಸ್ಯ ಸದನಂ ಪ್ರತಿ ॥ ೧೩ ॥

---

೭. ಶ್ರೀರಾಮಚಂದ್ರನು ಲಕ್ಷ್ಮಣನೊಡನೆ ವಿರೋಧಗೊಂಡ ದಿನವು ಬೇರೆಯಾಗಿರುವುದು.

೮. ದುಃಖಗೊಂಡ ಮಹಾತ್ಮನಾದ ರಾಮನು ರಾಮೇಶ್ವರನನ್ನು ಪ್ರತಿಷ್ಠೆ ಮಾಡಿದ ದಿನವು ಬೇರೆಯಾಗಿರುವುದು.

೯. ಋಷಿಗಳು ಹೇಳುತ್ತಾರೆ:—ಇನ್ನೊಂದು ದಿನ ರಾಮಚಂದ್ರನು ಯಾವಾಗ ಇಲ್ಲಿಗೆ ಬಂದನು? ಅವನಿಗೆ ಯಾವ ದುಃಖವುಂಟಾಯಿತು. ಅದನ್ನು ಹೇಳು.

೧೦–೧೧. ಸೂತನು ಹೇಳುತ್ತಾನೆ:—ತಾವರೆಯಂತೆ ಕಣ್ಣುಳ್ಳ ಆ ಶ್ರೀರಾಮಚಂದ್ರನು ಲೋಕಾಪವಾದದಿಂದ ಭಯಗೊಂಡು ಸೀತೆಯನ್ನು ತ್ಯಜಿಸಿ ರಾಜ್ಯವಾಳಿದನು. ಅವನು ಯಜ್ಞವನ್ನು ಮಾಡುವುದಕ್ಕಾಗಿ ಸ್ವರ್ಣದಿಂದ ಸೀತಾ ಪ್ರತಿಮೆಯನ್ನು ನಿರ್ಮಿಸಿ ಅದನ್ನು ಮತ್ತೊಬ್ಬ ಪತ್ನಿಯನ್ನಾಗಿ ಮಾಡಿಕೊಂಡನು.

೧೨. ಹೀಗೆ ಅವನು ಬ್ರಹ್ಮಚರ್ಯದಿಂದ ಹನ್ನೊಂದುಸಾವಿರ ವರ್ಷಕಾಲ ಶತ್ರುಗಳಿಲ್ಲದೆ ರಾಜ್ಯವನ್ನಾಳಿದನು.

೧೩. ಹನ್ನೊಂದುಸಾವಿರ ವರ್ಷದ ಅಂತ್ಯದಲ್ಲಿ ರಾಮನ ಅರಮನೆಗೆ ದೇವದೂತನು ಬಂದನು.

ತೇನೋಕ್ತಂ ದೇವರಾಜೇನ ಪ್ರೇಷಿತೋಽಹಂ ತವಾಂತಿಕಂ ।
ತಸ್ಮಾತ್ಕುರು ಸಮಾಲೋಕಂ ವಿಜನೇ ತ್ವಂ ಮಯಾ ಸಹ ॥ ೧೪ ॥
ಏವಮುಕ್ತಸ್ತದಾ ತೇನ ದೂತೇನ ರಘುನಂದನಃ ।
ಪರಂ ರಹಃ ಸಮಾಸಾದ್ಯ ಮಂತ್ರಂ ಚಕ್ರೇ ತತಃ ಪರಂ ॥ ೧೫ ॥
ತಸ್ಯೈವಮುಪವಿಷ್ಟಸ್ಯ ಮಂತ್ರಸ್ಥಾನೇ ಮಹಾತ್ಮನಃ ।
ಬಹುತ್ವಾದಿಷ್ಟಲೋಕಸ್ಯ ನ ರಹಸ್ಯಂ ಪ್ರಜಾಯತೇ ॥ ೧೬ ॥
ತತಃ ಕೋಪಪರೀತಾತ್ಮಾ ದೂತಃ ಪ್ರೋವಾಚ ಸಾದರಂ ।
ವಿಹಸ್ಯ ಜನಸಂಸರ್ಗಂ ದೃಷ್ಟ್ವೈಕಾಂತೇಽಪಿ ಸಂಸ್ಥಿತೇ ॥ ೧೭ ॥
ಯಥಾ ದಂಷ್ಟ್ರಾಚ್ಚ್ಯುತಃ ಸರ್ಪೋ ನಾಗೋವಾ ಮದವರ್ಜಿತಃ ।
ಆಜ್ಞಾಹೀನಸ್ತಥಾ ರಾಜಾ ಮಾನವೈಃ ಪರಿಭೂಯತೇ ॥ ೧೮ ॥
ಸೇಯಂ ತವ ರಘುಶ್ರೇಷ್ಠ ನಾಽಽಜ್ಞಾಽಸ್ತಿ ಪ್ರತಿವೇದ್ಮ್ಯಹಂ ।
ಶಕ್ರಾಲಾಪಮಪಿ ತ್ವಂಚ ನೈಕಾಂತೇ ಶ್ರೋತುಮರ್ಹಸಿ ॥ ೧೯ ॥
ತಸ್ಯ ತದ್ವಚನಂ ಶ್ರುತ್ವಾ ಕೋಪಸಂರಕ್ತಲೋಚನಃ ।
ತ್ರಿಶಾಖಾಂ ಭ್ರುಕುಟೀಂ ಕೃತ್ವಾ ತತಃ ಸ ಪ್ರಾಹ ಲಕ್ಷ್ಮಣಂ ॥ ೨೦ ॥

---

೧೪. ಅವನು ಇಂದ್ರನು ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ. ಆದುದರಿಂದ ನೀನು ರಹಸ್ಯದಲ್ಲಿ ನನ್ನೊಡನೆ ಸಮಾಲೋಚಿಸು ಎಂದನು.

೧೫. ದೇವದೂತನು ಹೀಗೆ ಹೇಳಲು ರಾಘವನು ರಹಸ್ಯದಲ್ಲಿ ಅವನೊಡನೆ ಮಂತ್ರಾಲೋಚನೆ ನಡೆಸಿದನು.

೧೬. ಅವನು ಹೀಗೆ ಮಂತ್ರಾಲೋಚನೆಗೆ ಕುಳಿತಿರಲು ಅವನಿಗೆ ಪ್ರೀತಿಪಾತ್ರರಾದವರನೇಕಮಂದಿಗಳಿರುವುದರಿಂದ ಅದು ರಹಸ್ಯಸ್ಥಾನವಾಗಲಿಲ್ಲ.

೧೭. ಆದರಿಂದ ಕುಪಿತನಾದ ದೇವದೂತನು ರಹಸ್ಯದಲ್ಲಿಯೂ ಜನರ ಗುಂಪನ್ನು ನೋಡಿ ನಕ್ಕು ಪ್ರೀತಿಯಿಂದ ಇಂತೆಂದನು.

೧೮. "ಹಲ್ಲಿಲ್ಲದ ಸರ್ಪದಂತೆಯೂ, ಮದವಿಲ್ಲದ ಆನೆಯಂತೆಯೂ, ಆಜ್ಞಾಹೀನನಾದ ರಾಜನು ಪ್ರಜೆಗಳ ತಿರಸ್ಕಾರಕ್ಕೆ ವಿಷಯನಾಗುವನು.

೧೯. ಶ್ರೀರಾಮಚಂದ್ರ! ನಿನ್ನ ಅಪ್ಪಣೆಯು ನಡೆಯುವುದಿಲ್ಲವೆಂದು ತಿಳಿಯುತ್ತೇನೆ. ನೀನು ಇಂದ್ರನ ಆಜ್ಞೆಯನ್ನೂ ರಹಸ್ಯದಲ್ಲಿ ಕೇಳಲರ್ಹನಾಗಿಲ್ಲ."

೨೦. ಆ ರಾಮನು ಅವನ ಆ ಮಾತನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಹುಬ್ಬನ್ನು ಗಂಟುಹಾಕಿ ಲಕ್ಷ್ಮಣನನ್ನು ಕುರಿತು ಇಂತೆಂದನು.

ಮಮಾತ್ರ ಸನ್ನಿವಿಷ್ಟಸ್ಯ ಸಹಾಽನೇನ ಪ್ರಜಲ್ಪತಃ ।
ಯದಿಕಶ್ಚಿನ್ನರೋ ಮೋಹಾದಾಗಮಿಷ್ಯತಿ ಲಕ್ಷ್ಮಣ ।
ಸ್ವಹಸ್ತೇನ ನಸಂದೇಹಃ ಸೂದಯಿಷ್ಯಾಮಿ ತಂ ದ್ರುತಂ ॥ ೨೧ ॥
ನ ಹನ್ಮಿ ಯದಿ ತಂ ಪ್ರಾಪ್ತಮತ್ರ ಮೇ ದೃಷ್ಟಿಗೋಚರಂ ।
ತಸ್ಮಾಭೂನ್ಮೇ ಗತಿಃ ಶ್ರೇಷ್ಠಾ ಧರ್ಮಿಣಾಂ ಯಾ ಪ್ರಪದ್ಯತೇ ॥ ೨೨ ॥
ಏವಂ ಜ್ಞಾತ್ವಾ ಪ್ರಯತ್ನೇನ ತ್ವಯಾ ಭಾವ್ಯಮಸಂಶಯಂ ।
ರಾಜದ್ವಾರಿ ಯಥಾಕಶ್ಚಿನ್ನ ಮಯಾ ವಧ್ಯತೇಽಧುನಾ ॥ ೨೩ ॥
ತಥೇತ್ಯೇವ ಸಂಪ್ರೋಚ್ಯ ಲಕ್ಷ್ಮಣಃ ಶುಭಲಕ್ಷಣಃ ।
ರಾಜದ್ವಾರಂ ಸಮಾಸಾದ್ಯ ಚಕಾರ ವಿಜನಂ ತತಃ ॥ ೨೪ ॥
ದೇವದೂತೋಽಪಿ ರಾಮೇಣ ಸಮಂಚಕ್ರೇ ತತಃ ಪರಂ ।
ಮಂತ್ರಂ ಶಕ್ರಸಮಾದಿಷ್ಟಂ ತಥಾಽನ್ಯೈಃ ಸ್ವರ್ಗವಾಸಿಭಿಃ ॥ ೨೫ ॥

ದೇವದೂತ ಉವಾಚ :—

ತ್ವಂ ರಾವಣವಿನಾಶಾರ್ಥಮವತೀರ್ಣೋ ಧರಾತಲೇ ।
ಸಚವ್ಯಾಪಾದಿತೋ ದುಷ್ಟಃ ಪಾಪಸ್ತ್ರೈಲೋಕ್ಯಕಂಟಕಃ ॥ ೨೬ ॥
ಕೃತಂ ಸರ್ವಂ ಮಹಾಭಾಗ ದೇವಕೃತ್ಯಂ ತ್ವಯಾಽಧುನಾ ।
ತಸ್ಮಾತ್ಸಂತು ಸನಾಥಾಸ್ತೇ ದೇವಾಃ ಶಕ್ರಪುರೋಗಮಾಃ ॥ ೨೭ ॥

---

೨೧. "ಲಕ್ಷ್ಮಣ! ನಾನು ಇವನೊಡನೆ ಇಲ್ಲಿ ಕುಳಿತಿರಲು ಅಜ್ಞಾನದಿಂದ ಯಾವ ಮನುಷ್ಯನಾದರೂ ಬಂದರೆ ನನ್ನ ಕೈಯಿಂದಲೇ ಅವನನ್ನು ಕೊಲ್ಲುವೆನು.

೨೨. ನನ್ನ ದೃಷ್ಟಿಗೆ ವಿಷಯನಾದ ಅವನನ್ನು ನಾನು ಕೊಲ್ಲದಿದ್ದರೆ ನನಗೆ ಧರ್ಮಿಷ್ಠರಿಗಾಗುವ ಉತ್ತಮ ಗತಿಯು ಲಭಿಸದಿರಲಿ.

೨೩. ನೀನು ಇದನ್ನರಿತು ನನ್ನಿಂದ ಯಾರೂ ಮಡಿಯದಂತೆ ರಾಜದ್ವಾರದಲ್ಲಿ ನಿಂತಿರಬೇಕು."

೨೪. ಬಳಿಕ ಲಕ್ಷ್ಮಣನು ರಾಮನನ್ನು ಕುರಿತು ಹಾಗೆಯೇ ಆಗಲೆಂದು ಹೇಳಿ ರಾಜದ್ವಾರವನ್ನು ಹೊಂದಿ ಜನರಿಲ್ಲದಂತೆ ಮಾಡಿದನು.

೨೫. ಅನಂತರ ದೇವದೂತನು ಇಂದ್ರನೂ, ಇತರ ದೇವತೆಗಳೂ ಹೇಳಿದ ಮಾತನ್ನು ರಾಮನಿಗೆ ಹೇಳಿದನು.

೨೬. ದೇವದೂತನು ಹೇಳುತ್ತಾನೆ:—"ನೀನು ರಾವಣನ ನಾಶಕ್ಕಾಗಿ ಭೂಮಿಯಲ್ಲಿ ಅವತಾರ ಮಾಡಿರುವೆ. ಪಾಪಿಯೂ, ತ್ರಿಭುವನಕಂಟಕನೂ, ದುಷ್ಟನೂ ಆದ ಆ ರಾವಣನನ್ನು ಕೊಂದಿರುವೆ.

೨೭. ಸ್ವಾಮಿ! ನೀನು ಈಗ ದೇವಕಾರ್ಯವನ್ನು ಮಾಡಿದ್ದರಿಂದ ಇಂದ್ರಾದಿ ದೇವತೆಗಳು ಸನಾಥರಾಗಲಿ.

ಯದಿತೇ ರೋಚತೇ ಚಿತ್ತೇ ನೋಪರೋಧೇನ ಸಾಂಪ್ರತಂ ।
ಪ್ರಸಾದಂ ಕುರು ದೇವಾನಾಂ ತಸ್ಮಾದಾಗಚ್ಛ ಸತ್ವರಂ ।
ಸ್ವರ್ಗಲೋಕಂ ಪರಿತ್ಯಜ್ಯ ಮರ್ತ್ಯಲೋಕಂ ಸುನಿಂದಿತಂ ॥ ೨೮ ॥

ಸೂತ ಉವಾಚ :—

ಏತಸ್ಮಿನ್ನಂತರೇ ಪ್ರಾಪ್ತೋ ದುರ್ವಾಸಾ ಮುನಿಸತ್ತಮಃ ।
ಪ್ರೋವಾಚಾಽಥ ಕ್ಷುಧಾವಿಷ್ಟಃ ಕ್ವಾಽಸೌ ಕ್ವಾಸೌ ರಘೂತ್ತಮಃ ॥ ೨೯ ॥

ಲಕ್ಷ್ಮಣ ಉವಾಚ :—

ವ್ಯಗ್ರಃ ಸ ಪಾರ್ಥಿವಶ್ರೇಷ್ಠೋ ದೇವಕಾರ್ಯೇಣ ಕೇನಚಿತ್ ।
ತಸ್ಮಾದತ್ರೈವ ವಿಪ್ರೇಂದ್ರ ಮುಹೂರ್ತಂ ಪರಿಪಾಲಯ ॥ ೩೦ ॥
ಯಾವತ್ಸಾಂತ್ವಯತೇ ರಾಮೋ ದೂತಂ ಶಕ್ರಸಮುದ್ಭವಂ ।
ಮಮೋಪರಿ ದಯಾಂ ಕೃತ್ವಾ ವಿನಯಾಽವನತಸ್ಯ ಹಿ ॥ ೩೧ ॥

ದುರ್ವಾಸಾ ಉವಾಚ :—

ಯದಿ ಯಾಸ್ಯತಿ ನೋ ದೃಷ್ಟಿಂ ಮಮದ್ಯಾಕ್ಷ ರಘೂತ್ತಮಃ ।
ಶಾಪಂದತ್ವಾ ಕುಲಂ ಸರ್ವಂ ತದ್ಧಕ್ಷ್ಯಾಮಿ ನ ಸಂಶಯಃ ॥ ೩೨ ॥
ಮಮಾಽಪಿ ದರ್ಶನಾದನ್ಯನ್ನ ಕಿಂಚಿದ್ವಿದ್ಯತೇ ಗುರು ।
ಕೃತ್ಯಂ ಲಕ್ಷ್ಮಣ ಯಾವತ್ತ್ವಮನ್ಯನ್ಮಾಂ ಪ್ರಕಥ್ಥಸೇ ॥ ೩೩ ॥
ತಚ್ಛ್ರುತ್ವಾ ಲಕ್ಷ್ಮಣಶ್ಚಿತ್ತೇ ಚಿಂತಯಾಮಾಸ ದುಃಖಿತಃ ।
ವರಂ ಮೇ ಮೃತ್ಯುರೇಕಸ್ಯ ಮಾಭೂಯಾತ್ಕುಲಸಂಕ್ಷಯಃ ॥ ೩೪ ॥

---

೨೮. ನಮ್ಮ ಬಲಾತ್ಕಾರದಿಂದಲ್ಲ. ನಿನಗೆ ಇಷ್ಟವಿದ್ದರೆ ದೇವತೆಗಳಿಗೆ ಅನುಗ್ರಹ ಮಾಡು. ಈ ನಿಂದಿತವಾದ ಮನುಷ್ಯಲೋಕವನ್ನು ತ್ಯಜಿಸಿ ಸ್ವರ್ಗಲೋಕಕ್ಕೆ ಬಾ."

೨೯. ಸೂತನು ಹೇಳುತ್ತಾನೆ:—ಇಷ್ಟರಲ್ಲಿ ಹಸಿವುಗೊಂಡ ದುರ್ವಾಸನೆಂಬ ಮುನಿವರ್ಯನು ಬಂದು ರಾಮಚಂದ್ರನೆಲ್ಲಿ ಎಂದು ಕೇಳಿದನು.

೩೦–೩೧. ಲಕ್ಷ್ಮಣನು ಹೇಳುತ್ತಾನೆ:—ಮುನಿವರ್ಯನೆ! ಆ ರಾಮನು ಯಾವುದೋ ಒಂದು ದೇವಕಾರ್ಯದಲ್ಲಿ ಆಸಕ್ತನಾಗಿರುವನು. ಆದುದರಿಂದ ರಾಮನು ದೇವದೂತನನ್ನು ಸಮಾಧಾನಗೊಳಿಸುವವರೆಗೆ ವಿನೀತನಾದ ನನ್ನಲ್ಲಿ ದಯೆಗೊಂಡು ಸ್ವಲ್ಪಹೊತ್ತು ಇಲ್ಲಿಯೇ ನಿರೀಕ್ಷಿಸು.

೩೨. ದುರ್ವಾಸನು ಹೇಳುತ್ತಾನೆ:—ರಾಘವನು ಈಗ ನನ್ನನ್ನು ನೋಡದಿದ್ದರೆ ನಾನು ಶಾಪವನ್ನಿತ್ತು ಅವನ ಕುಲವನ್ನೆಲ್ಲ ನಿಶ್ಚಯವಾಗಿಯೂ ಸುಡುವೆನು.

೩೩. ಲಕ್ಷ್ಮಣ! ರಾಮನಿಗೆ ನನ್ನ ದರ್ಶನಕ್ಕಿಂತ ಮಹತ್ತಾದ ಕಾರ್ಯವಾವುದಿರುವುದು. ನೀನು ಬೇರೆ ಕಾರ್ಯವನ್ನು ಹೇಳುತ್ತೀಯೆ.

೩೪. ಲಕ್ಷ್ಮಣನು ಅದನ್ನು ಕೇಳಿ ನಾನೊಬ್ಬನು ಸಾಯುವುದು ಲೇಸು ನಮ್ಮ ವಂಶವು ಕ್ಷಯಿಸದಿರಲಿ ಎಂದು ಮನಸ್ಸಿನಲ್ಲಿ ಚಿಂತಿಸಿದನು.

ಏವಂ ಸ ನಿಶ್ಚಯಂ ಕೃತ್ವಾ ತತೋ ರಾಮಮುಪಾದ್ರವತ್ ।
ಉವಾಚ ದಂಡವದ್ಭೂಮೌ ಪ್ರಣಿಪತ್ಯ ಕೃತಾಂಜಲಿಃ ॥ ೩೫ ॥
ದುರ್ವಾಸಾ ಮುನಿಶಾರ್ದೂಲೋ ದೇವ ತೇ ದ್ವಾರಿ ತಿಷ್ಠತಿ ।
ದರ್ಶನಾರ್ಥೀ ಕ್ಷುಧಾವಿಷ್ಟಃ ಕಿಂ ಕರೋಮಿ ಪ್ರಶಾಧಿ ಮಾಂ ॥ ೩೬ ॥
ತಸ್ಯ ತದ್ವಚನಂ ಶ್ರುತ್ವಾ ತತೋ ದೂತಮುವಾಚ ತಂ ।
ಗತ್ವೇಮಂ ಬ್ರೂಹಿ ದೇವೇಶಂ ಮಮ ವಾಕ್ಯಾದಸಂಶಯಂ ।
ಅಹಂ ಸಂವತ್ಸರಸ್ಯಾಂತ ಆಗಮಿಷ್ಯಾಮಿ ತೇಽಂತಿಕೇ ॥ ೩೭ ॥
ಏವಮುಕ್ತ್ವಾ ವಿಸೃಜ್ಯಾಽಥ ತಂ ದೂತಂ ಪ್ರಾಹ ಲಕ್ಷ್ಮಣಂ ।
ಪ್ರವೇಶಯ ದ್ರುತಂ ವತ್ಸ ತಂ ತ್ವಂ ದುರ್ವಾಸಸಂ ಮುನಿಂ ॥ ೩೮ ॥
ತತಶ್ಚಾಽರ್ಘ್ಯಂ ಚ ಪಾದ್ಯಂ ಚ ಗೃಹೀತ್ವಾ ಸಮ್ಮುಖೋ ಯಯೌ ।
ರಾಮದೇವಃ ಪ್ರಹೃಷ್ಟಾತ್ಮಾ ಸಚಿವೈಃ ಪರಿವಾರಿತಃ ॥ ೩೯ ॥
ದತ್ವಾಽರ್ಘ್ಯಂ ವಿಧಿವತ್ತಸ್ಯ ಪ್ರಣಿಪತ್ಯ ಮುಹುರ್ಮುಹುಃ ।
ಪ್ರೋವಾಚ ರಾಮದೇವೋಽಥ ಹರ್ಷಗದ್ಗದಯಾ ಗಿರಾ ॥ ೪೦ ॥
ಸ್ವಾಗತಂ ತೇ ಮುನಿಶ್ರೇಷ್ಠ ಭೂಯಃ ಸುಸ್ವಾಗತಂ ಚ ತೇ ।
ಏತದ್ರಾಜ್ಯಮಿಮೌ ಪುತ್ರಾ ವಿಭವಶ್ಚ ತವ ಪ್ರಭೋ ॥ ೪೧ ॥

---

೩೫. ಬಳಿಕ ಅವನು ಹೀಗೆ ನಿಶ್ಚಯಿಸಿ ರಾಮನ ಹತ್ತಿರ ಓಡಿ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈಮುಗಿದುಕೊಂಡು ಇಂತೆಂದನು.

೩೬. "ಸ್ವಾಮಿ! ದುರ್ವಾಸನೆಂಬ ಮುನಿವರ್ಯನು ಹಸಿವುಗೊಂಡು ನಿನ್ನನ್ನು ನೋಡಲೋಸುಗ ಬಾಗಿಲಿನಲ್ಲಿ ನಿಂತಿರುವನು. ಏನು ಮಾಡಲಿ, ನನಗೆ ಆಜ್ಞೆ ಮಾಡು."

೩೭. ರಾಮನು ಲಕ್ಷ್ಮಣನ ಮಾತನ್ನು ಕೇಳಿ ದೂತನನ್ನು ಕುರಿತು ನೀನು ಇಂದ್ರನೆಡೆಗೆ ಹೋಗಿ ನನ್ನ ಮಾತಿನಿಂದ ನಾನು ಈ ವರ್ಷದ ಕೊನೆಯಲ್ಲಿ ಅವನ ಹತ್ತಿರಕ್ಕೆ ಬರುವೆನೆಂದು ಹೇಳು.

೩೮. ಹೀಗೆ ಹೇಳಿ ಆ ದೂತನನ್ನು ಕಳುಹಿಸಿ ಲಕ್ಷ್ಮಣನನ್ನು ಕುರಿತು, "ವತ್ಸ! ದುರ್ವಾಸ ಮುನಿಯನ್ನು ಶೀಘ್ರನಾಗಿ ಒಳಗೆ ಕಳುಹಿಸು" ಎಂದನು.

೩೯. ಬಳಿಕ ರಾಮನು ಸಂತೋಷದಿಂದ ಮಂತ್ರಿಗಳೊಡನೆ ಅರ್ಘ್ಯಪಾದ್ಯಗಳನ್ನು ತೆಗೆದುಕೊಂಡು ದುರ್ವಾಸ ಮುನಿಯನ್ನು ಎದುರುಗೊಂಡನು.

೪೦. ಅವನು ವಿಧಿಯಂತೆ ಮುನಿಗೆ ಅರ್ಘ್ಯವನ್ನಿತ್ತು ಅನೇಕಬಾರಿ ವಂದಿಸಿ ಸಂತೋಷದಿಂದ ಗದ್ಗದ ಮಾತಿನಿಂದ ಇಂತೆಂದನು.

೪೧. "ಮುನಿವರ್ಯನೆ! ನಿನಗೆ ಸುಖಾಗಮನವಾಗಲಿ. ಈ ರಾಜ್ಯ, ಮಕ್ಕಳು, ಐಶ್ವರ್ಯ ಇವುಗಳು ನಿನ್ನವು.

ಕೃತ್ವಾ ಮಮ ಪ್ರಸಾದಂ ಚ ಗೃಹಾಣ ಮುನಿಸತ್ತಮ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯತ್ತ್ವಂ ಮೇ ಗೃಹಮಾಗತಃ ।
ಪೂಜ್ಯೋ ಲೋಕತ್ರಯಸ್ಯಾಽಪಿ ನಿಃಶೇಷತಪಸಾಂ ನಿಧಿಃ ॥ ೪೨ ॥

ಮುನಿರುವಾಚ :—

ಚಾತುರ್ಮಾಸ್ಯವ್ರತಂ ಕೃತ್ವಾ ನಿರಾಹಾರೋ ರಘೂತ್ತಮ ।
ಅದ್ಯ ತೇ ಭವನಂ ಪ್ರಾಪ್ಯ ಆಹಾರಾರ್ಥಂ ಬುಭುಕ್ಷಿತಃ ॥ ೪೩ ॥
ತಸ್ಮಾತ್ತ್ವಂ ಯಚ್ಛ ಮೇ ಶೀಘ್ರಂ ಭೋಜನಂ ರಘುನಂದನ ।
ನಾಽನ್ಯೇನ ಕಾರಣಂ ಕಿಂಚಿತ್ಸನ್ಯಸ್ತಸ್ಯ ಧನಾದಿನಾ ॥ ೪೪ ॥
ತತಸ್ತಂ ಭೋಜಯಾಮಾಸ ಶ್ರದ್ಧಾಪೂತೇನ ಚೇತಸಾ ।
ಸ್ವಯಮೇವಾಽಗ್ರತಃ ಸ್ಥಿತ್ವಾ ಮೃಷ್ಟಾನ್ನೈರ್ವಿವಿಧೈಃ ಶುಭೈಃ ॥ ೪೫ ॥
ಲೇಹ್ಯೈಶ್ಚೋಷ್ಯೈಸ್ತಥಾ ಚರ್ವ್ಯೈಃ ಖಾದ್ಯೈರೇವ ಪೃಥಗ್ವಿಧೈಃ ।
ಯಾವದಿಚ್ಛಾ ಮುನೇಸ್ತಸ್ಯ ತಥಾಽನ್ನೈರ್ವಿವಿಧೈರಪಿ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಽಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರೀರಾಮಂಪ್ರತಿ ದುರ್ವಾಸಃ ಸಮಾಗಮನ ವೃತ್ತಾಂತವರ್ಣನಂ"
ನಾಮೈಕೋನಶತತಮೋಽಧ್ಯಾಯಃ

---

೪೨. ಇವುಗಳನ್ನು ನನ್ನಲ್ಲಿ ಅನುಗ್ರಹಮಾಡಿ ತೆಗೆದುಕೊ.' ತ್ರೈಲೋಕ್ಯ ಪೂಜ್ಯನೂ, ಅತಿಶಯ ತಪಸ್ವಿಯೂ ಆದ ನೀನು ನನ್ನ ಮನೆಗೆ ಬಂದುದರಿಂದ ನಾನು ಧನ್ಯನಾದೆನು. ಮತ್ತು ಅನುಗ್ರಹಮಾಡಲ್ಪಟ್ಟೆನು."

೪೩. ಮುನಿಯು ಹೇಳುತ್ತಾನೆ:—ರಾಘವ! ಉಪವಾಸದಿಂದ ಚಾತುರ್ಮಾಸ್ಯವ್ರತವನ್ನಾಚರಿಸಿ ಹಸಿವುಗೊಂಡು ಆಹಾರಕ್ಕಾಗಿ ನಿನ್ನ ಮನೆಗೆ ಬಂದಿರುವೆನು.

೪೪. ಆದುದರಿಂದ ನೀನು ಬೇಗನೆ ನನಗೆ ಆಹಾರವನ್ನು ಕೊಡು. ಸನ್ಯಾಸಿಯಾದ ನನಗೆ ಇತರ ಧನ ಮೊದಲಾದುವುಗಳಿಂದ ಪ್ರಯೋಜನವಿಲ್ಲ.

೪೫—೪೬. ಅನಂತರ ರಾಮನು ಶ್ರದ್ಧೆಗೊಂಡ ಮನಸ್ಸಿನಿಂದ ಮುನಿಯ ಇಚ್ಛೆಯಂತೆ ತಾನೇ ಮುಂದೆ ನಿಂತು ಬಗೆಬಗೆಯ ಮೃಷ್ಟಾನ್ನ, ಲೇಹ್ಯ, ಚೋಷ್ಯ, ಚರ್ವ್ಯ, ಖಾದ್ಯ ಇವುಗಳಿಂದ ಭೋಜನ ಮಾಡಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರೀರಾಮದುರ್ವಾಸಸಮಾಗಮವೃತ್ತಾಂತವರ್ಣನ"ವೆಂಬ
ತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಶತತಮೋಽಧ್ಯಾಯಃ

### ಶ್ರೀರಾಮಸ್ಯ ಸುಗ್ರೀವನಗರೀಂ ಪ್ರತಿಗಮನವರ್ಣನಂ

ಸೂತ ಉವಾಚ :—

ಏವಂ ಭುಕ್ತ್ವಾ ಸವಿಪ್ರರ್ಷಿರ್ವಾಂಛಯಾ ರಾಮಮಂದಿರೇ ।
ದತ್ತಾಶೀರ್ನಿರ್ಗತಃ ಪಶ್ಚಾದಾಮಂತ್ರ್ಯ ರಘುನಂದನಂ ॥ ೧ ॥
ಅಥ ಯಾತೇ ಮುನೌ ತಸ್ಮಿನ್ದುರ್ವಾಸಸಿ ತದಂತಿಕಾತ್ ।
ಲಕ್ಷ್ಮಣಃ ಖಡ್ಗಮಾದಾಯ ರಾಮದೇವಮುವಾಚ ಹ! ॥ ೨ ॥
ಏತತ್ಖಡ್ಗಂ ಗೃಹೀತ್ವಾಽಽಶು ಮಾಂ ಪ್ರಭೋ ವಿನಿಪಾತಯ ।
ಯೇನ ತೇ ಸ್ಯಾದೃತಂ ವಾಕ್ಯಂ ಪ್ರತಿಜ್ಞಾತಂ ಚ ಯತ್ಪುರಾ ॥ ೩ ॥
ತತೋ ರಾಮಶ್ಚಿರಾತ್ ಸ್ಮೃತ್ವಾ ತಾಂ ಪ್ರತಿಜ್ಞಾಂ ಸ್ವಯಂ ಕೃತಾಂ ।
ವಧಾರ್ಥಂ ಸಂಪ್ರವಿಷ್ಟಸ್ಯ ಸಮೀಪೇ ಪುರುಷಸ್ಯ ಚ ॥ ೪ ॥
ತತೋಽತಿಚಿಂತಯಾಮಾಸ ವ್ಯಾಕುಲೇನಾಂತರಾತ್ಮನಾ ।
ಬಾಷ್ಪವ್ಯಾಕುಲ ನೇತ್ರಶ್ಚ ನಿಃಶ್ವಸನ್ ಪನ್ನಗೋ ಯಥಾ ॥ ೫ ॥

---

### ಕನ್ನಡದ ಅನುವಾದ

#### ಶ್ರೀರಾಮಸುಗ್ರೀವನಗರೀಗಮನವರ್ಣನ.

೧. ಸೂತನು ಹೇಳುತ್ತಾನೆ:—ಆ ಮುನಿಯು ಹೀಗೆ ರಾಮನ ಮನೆಯಲ್ಲಿ ಸ್ವೇಚ್ಛೆಯಂತೆ ಭೋಜನಮಾಡಿ ಆಶೀರ್ವಾದವನ್ನಿತ್ತು ರಾಮನನ್ನು ಕೇಳಿಕೊಂಡು ಹೊರಟುಹೋದನು.

೨. ಆ ದುರ್ವಾಸಮುನಿಯು ರಾಮನ ಸನ್ನಿಧಿಯಿಂದ ಹೊರಟುಹೋಗಲು ಲಕ್ಷ್ಮಣನು ಕತ್ತಿಯನ್ನು ತೆಗೆದುಕೊಂಡು ರಾಮನನ್ನು ಕುರಿತು ಇಂತೆಂದನು.

೩. "ಸ್ವಾಮಿ! ನೀನು ಈ ಕತ್ತಿಯನ್ನು ತೆಗೆದುಕೊಂಡು ಬೇಗನೆ ನನ್ನನ್ನು ಕೊಲ್ಲು. ಅದರಿಂದ ನೀನು ಹಿಂದೆ ಪ್ರತಿಜ್ಞೆಮಾಡಿದ ಮಾತು ಸತ್ಯವಾಗುವುದು."

೪–೫. ಬಳಿಕ ರಾಮನು ತಾನು ಒಳಗೆ ಬಂದ ಪುರುಷನನ್ನು ಕೊಲ್ಲುವೆನೆಂದು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಸ್ಮರಿಸಿ ಕಣ್ಣೀರನ್ನು ಸುರಿಸುತ್ತ ಸರ್ಪದಂತೆ ನಿಟ್ಟುಸಿರನ್ನು ಬಿಡುತ್ತ ವ್ಯಾಕುಲಗೊಂಡ ಮನಸ್ಸಿನಿಂದ ಅತಿಯಾಗಿ ಚಿಂತಿಸಿದನು.

ತಂ ದೀನವದನಂ ದೃಷ್ಟ್ವಾ ನಿಃಶ್ವಸಂ ತಂ ಮುಹುರ್ಮುಹುಃ ।
ಭೂಯಃ ಪ್ರೋವಾಚ ಸೌಮಿತ್ರಿರ್ವಿನಯಾವನತಃ ಸ್ಥಿತಃ ॥ ೬ ॥
ಏಷ ಏವ ಪರೋ ಧರ್ಮೋ ಭೂಪತೀನಾಂ ವಿಶೇಷತಃ ।
ಯಥಾತ್ಮೀಯಂ ವಚಸ್ತಥ್ಯಂ ಕ್ರಿಯತೇ ನಿರ್ವಿಕಲ್ಪಿತಂ ॥ ೭ ॥
ತಸ್ಮಾತ್ತ್ವಯಾ ಪ್ರಭೋ ಪ್ರೋಕ್ತಂ ಸ್ವಯಮೇವ ಮಮಾಗ್ರತಃ ।
ತಸ್ಯೈವ ದೇವದೂತಸ್ಯ ತಾರಸಾದೇನ ಕೋಪತಃ ॥ ೮ ॥
ಯೋಽತ್ರಾಗಚ್ಛತಿ ಸೌಮಿತ್ರೇ ಮಮ ದೂತಸ್ಯ ಸನ್ನಿಧೌ ।
ತಂಚೇದ್ಧನ್ಮಿ ಸ್ವಹಸ್ತೇನ ನಾಽಹಂ ತಸ್ಮಾತ್ಸುಪಾಪಕೃತ್ ॥ ೯ ॥
ತದಹಂ ಚಾಽಽಗತಸ್ತಾತ ಭಯಾದ್ದುರ್ವಾಸಸೋ ಮುನೇಃ ।
ನಿಷಿದ್ಧೋಽಪಿ ತ್ವಯಾಽತೀವ ತಸ್ಮಾಚ್ಛೀಘ್ರಂ ತು ಘಾತಯ ॥ ೧೦ ॥
ತತಃ ಸಂಮಂತ್ರ್ಯ ಸುಚಿರಂ ಮಂತ್ರಿಭಿಃ ಸಹಿತೋ ನೃಪಃ ।
ಬ್ರಾಹ್ಮಣೈರ್ಧರ್ಮಶಾಸ್ತ್ರಜ್ಞೈ ಸ್ತಥಾಽನ್ಯೈರ್ವೇದಪಾರಗೈಃ ॥ ೧೧ ॥
ಪ್ರೋವಾಚ ಲಕ್ಷ್ಮಣಂ ಪಶ್ಚಾದ್ವಿನಯಾವನತಂ ಸ್ಥಿತಂ ।
ಬಾಷ್ಪಕ್ಲಿನ್ನಮುಖೋ ರಾಮೋ ಗದ್ಗದಂ ನಿಃಶ್ವಸನ್ ಮುಹುಃ ॥ ೧೨ ॥
ವ್ರಜ ಲಕ್ಷ್ಮಣ ಮುಕ್ತಸ್ತ್ವಂ ಮಯಾ ದೇಶಾಂತರಂ ದ್ರುತಂ ।
ತ್ಯಾಗೋ ವಾಽಥ ವಧೋ ವಾಽಥ ಸಾಧೂನಾಮುಭಯಂ ಸಮಂ ॥ ೧೩ ॥

---

೬. ಲಕ್ಷ್ಮಣನು ದೀನಮುಖನಾಗಿ ನಿಟ್ಟುಸಿರನ್ನು ಬಿಡುತ್ತಿರುವ ರಾಮನನ್ನು ನೋಡಿ ವಿನಯದಿಂದ ಮರಳಿ ಹೀಗೆಂದನು.

೭. "ತನ್ನ ಮಾತನ್ನು ವಿಕಲ್ಪವಿಲ್ಲದೆ ಸತ್ಯಗೊಳಿಸುವುದೇ ರಾಜರಿಗೆ ಉತ್ತಮವಾದ ಧರ್ಮವಾಗಿರುವುದು.

೮-೯. ನೀನೇ ದೇವದೂತನ ಎದುರಿಗೆ, ಉಚ್ಚಧ್ವನಿಯಿಂದ ಕುಪಿತನಾಗಿ, "ಲಕ್ಷ್ಮಣ! ದೂತನ ಹತ್ತಿರಕ್ಕೆ ಬಂದವನನ್ನು ನನ್ನ ಕೈಯಿಂದ ಕೊಲ್ಲದಿದ್ದರೆ ನಾನು ಪಾಪಿಯಾಗುವೆನು" ಎಂದು ನನ್ನ ಮುಂದೆ ಪ್ರತಿಜ್ಞೆಮಾಡಿರುವೆ.

೧೦. ಅಣ್ಣ! ನಾನು ದುರ್ವಾಸಮುನಿಯ ಭಯದಿಂದ ನೀನು ತಡೆದಿದ್ದರೂ ನಿನ್ನ ಹತ್ತಿರಕ್ಕೆ ಬಂದಿರುವುದರಿಂದ ಬೇಗನೆ ನನ್ನನ್ನು ವಧಿಸು."

೧೧-೧೨. ರಾಮನು ಅನಂತರ ಮಂತ್ರಿಗಳು, ಧರ್ಮಶಾಸ್ತ್ರವನ್ನರಿತ ಬ್ರಾಹ್ಮಣರು, ವೇದಪಾರಂಗತರಾದ ಇತರರು ಇವರೊಡನೆ ಬಹಳಹೊತ್ತು ಆಲೋಚಿಸಿ ವಿನಯನಮ್ರನಾದ ಲಕ್ಷ್ಮಣನನ್ನು ಕುರಿತು ಕಣ್ಣೀರನ್ನು ಸುರಿಸುತ್ತ ಬಹುವಾಗಿ ನಿಟ್ಟುಸಿರುಬಿಡುತ್ತ ಹೀಗೆಂದನು.

೧೩. "ಲಕ್ಷ್ಮಣ! ನಾನು ನಿನ್ನನ್ನು ಬಿಟ್ಟಿರುವೆನು. ನೀನು ದೇಶಾಂತರಕ್ಕೆ ಹೋಗು. ಸಜ್ಜನರಿಗೆ ತ್ಯಾಗವಾಗಲಿ, ವಧೆಯಾಗಲಿ ಇವೆರಡೂ ಸಮಾನವಾದುವು.

ನ ಮಯಾ ದರ್ಶನಂ ಭೂಯಸ್ತ್ವ ಕಾರ್ಯಂ ಕಥಂಚನ ।
ನ ಸ್ಥಾತವ್ಯಂ ಚ ದೇಶೇಽಪಿ ಯದಿ ಮೇ ವಾಂಛಸಿ ಪ್ರಿಯಂ ॥ ೧೪ ॥
ತಸ್ಯ ತದ್ವಚನಂ ಶ್ರುತ್ವಾ ಪ್ರಣಿಪತ್ಯ ತತಃ ಪರಂ ।
ನಿರ್ಯಯೌ ನಗರಾತ್ತಸ್ಮಾತ್ತತ್ಕ್ಷಣಾದೇವ ಲಕ್ಷ್ಮಣಃ ॥ ೧೫ ॥
ಅಕೃತ್ವಾಽಪಿ ಸಮಾಲಾಪಂ ಕೇನಚಿನ್ನಿಜಮಂದಿರೇ ।
ಮಾತ್ರಾ ವಾ ಭಾರ್ಯಯಾ ವಾಽಥ ಸುತೇನ ಸುಹೃದಾಽಥ ವಾ ॥ ೧೬ ॥
ತತೋಽಸೌ ಸರಯೂಂ ಗತ್ವಾಽವಗಾಹ್ಯಾಥ ಚ ತಜ್ಜಲಂ ।
ಶುಚಿರ್ಭೂತ್ವಾ ನಿವಿಷ್ಟೋಽಥ ತತ್ತೀರೇ ವಿಜನೇ ಶುಭೇ ॥ ೧೭ ॥
ಪದ್ಮಾಸನಂ ವಿಧಾಯಾಽಥ ನ್ಯಸ್ಯಾತ್ಮಾನಂ ತಥಾತ್ಮನಿ ।
ಬ್ರಹ್ಮದ್ವಾರೇಣ ತಂ ಪಶ್ಚಾತ್ತೇಜೋರೂಪಂ ವ್ಯಸರ್ಜಯತ್ ॥ ೧೮ ॥
ಅಥ ತದ್ರಾಘವೋ ದೃಷ್ಟ್ವಾ ಮಹತ್ತೇಜೋ ವಿಯದ್ಗತಂ ।
ವಿಸ್ಮಯೇನ ಸಮಾಯುಕ್ತೋಽಚಿಂತಯತ್ಕಿಮಿದಂ ತತಃ ॥ ೧೯ ॥
ಅಥಮರ್ತ್ಯೇ ಪರಿತ್ಯಕ್ತೇ ತೇಜಸಾ ತೇನ ತತ್ಕ್ಷಣಾತ್ ।
ವೈಷ್ಣವೇನ ತುರೀಯೇಣ ಭಾಗೇನ ದ್ವಿಜಸತ್ತಮಾಃ ॥ ೨೦ ॥
ಪಪಾತ ಭೂತಲೇ ಕಾಯಂ ಕಾಷ್ಠಲೋಷ್ಟೋಪಮಂ ದ್ರುತಂ ।
ಲಕ್ಷ್ಮಣಸ್ಯ ಗತಶ್ರೀಕಂ ಸರಯ್ವಾಃ ಪುಲನೇ ಶುಭೇ ॥ ೨೧ ॥

---

೧೪. ನಾನು ಮರಳಿ ನಿನ್ನನ್ನು ನೋಡುವುದಿಲ್ಲ. ನೀನು ನನಗೆ ಹಿತವನ್ನು ಬಯಸುವುದಾದರೆ ಈ ದೇಶದಲ್ಲಿರಬಾರದು."

೧೫–೧೬. ಲಕ್ಷ್ಮಣನು ಆ ರಾಮನ ಆ ಮಾತನ್ನು ಕೇಳಿ ಅವನನ್ನು ವಂದಿಸಿ ಕೂಡಲೆ ತನ್ನ ಮನೆಯಲ್ಲಿರುವ ತಾಯಿ, ಪತ್ನಿ, ಪುತ್ರರು, ಮಿತ್ರರು ಇವರಲ್ಲಿ ಯಾರೊಬ್ಬರೊಡನೆಯೂ ಮಾತಾಡದೆ ಆ ಪಟ್ಟಣದಿಂದ ಹೊರಟುಹೋದನು.

೧೭–೧೮. ಬಳಿಕ ಸರಯೂ ನದಿಗೆ ಹೋಗಿ ಅದರ ನೀರಿನಲ್ಲಿ ಮಿಂದು ಶುದ್ಧನಾಗಿ ಅದರ ದಡದ ನಿರ್ಜನಪ್ರದೇಶದಲ್ಲಿ ಪದ್ಮಾಸನದಿಂದ ಕುಳಿತು ತನ್ನ ಆತ್ಮವನ್ನು ಪರಮಾತ್ಮನಲ್ಲಿರಿಸಿ ತೇಜೋರೂಪವಾದ ಪ್ರಾಣವನ್ನು ಬ್ರಹ್ಮದ್ವಾರದಿಂದ ಬಿಟ್ಟನು.

೧೯. ತರುವಾಯ ರಾಮನು ಆಕಾಶವನ್ನು ಸೇರಿದ ಆ ಮಹಾ ತೇಜಸ್ಸನ್ನು ಕಂಡು ಆಶ್ಚರ್ಯದಿಂದ ಇದೇನೆಂದು ಆಲೋಚಿಸಿದನು.

೨೦–೨೧. ದ್ವಿಜವರ್ಯರೆ! ನಾಲ್ಕನೆ ಭಾಗದ ವೈಷ್ಣವ ತೇಜಸ್ಸು ಕೂಡಲೆ ಭೂಲೋಕವನ್ನು ಬಿಡಲು ಲಕ್ಷ್ಮಣನ ಕಟ್ಟಿಗೆ, ಮಣ್ಣಿನ ಉಂಡೆಗಳಂತಿರುವ ಶರೀರವು ಕಾಂತಿಹೀನವಾಗಿ ಸರಯೂ ನದಿಯ ಮಂಗಳಕರವಾದ ತೀರದ ನೆಲದ ಮೇಲೆ ಮರಳಿನಲ್ಲಿ ಬಿದ್ದಿತು.

ತತಸ್ತು ರಾಘವಃ ಶ್ರುತ್ವಾ ಲಕ್ಷ್ಮಣಂ ಗತಜೀವಿತಂ ।
ಪತಿತಂ ಸರಿತಸ್ತೀರೇ ವಿಲಲಾಪ ಸುದುಃಖಿತಃ ॥ ೨೨ ॥
ಸ್ವಯಂ ಗತ್ವಾ ತಮುದ್ದೇಶಂ ಸಾಮಾತ್ಯಃ ಸ ಸುಹೃಜ್ಜನಃ ।
ಲಕ್ಷ್ಮಣಂ ಪತಿತಂ ದೃಷ್ಟ್ವಾ ಕರುಣಂ ಪರ್ಯದೇವಯತ್ ॥ ೨೩ ॥
ಹಾ ವತ್ಸ ಮಾಂ ಪರಿತ್ಯಜ್ಯ ಕಿಂ ತ್ವಂ ಸಂಪ್ರಸ್ಥಿತೋ ದಿವಂ ।
ಪ್ರಾಣೇಷ್ಟಂ ಭ್ರಾತರಂ ಶ್ರೇಷ್ಠಂ ಸದಾ ತವ ಮತೇ ಸ್ಥಿತಂ ॥ ೨೪ ॥
ತಸ್ಮಿನ್ನಪಿ ಮಹಾಽರಣ್ಯೇ ಗಚ್ಛಮಾನಃ ಪುರಾದಹಂ ।
ಅಪಿ ಸಂಧಾರ್ಯಮಾಣೇನ ಅನುಯಾತಸ್ತ್ವಯಾ ತದಾ ॥ ೨೫ ॥
ಸಂಪ್ರಾಪ್ತೇಽಪಿ ಕಬಂಧಾಖ್ಯೇ ರಾಕ್ಷಸೇ ಬಲವತ್ತರೇ ।
ತ್ವಯಾ ರಾತ್ರಿಮುಖೇ ಘೋರೇ ಸಭಾರ್ಯೋಽಹಂ ಪ್ರರಕ್ಷಿತಃ ॥ ೨೬ ॥
ಯೇನೇಂದ್ರಜಿದ್ಧತೋ ಯುದ್ಧೇ ತಾದೃಗ್ರೂಪೋ ನಿಶಾಚರಃ ।
ಸ ಏಷ ಪತಿತಃ ಶೇತೇ ಗತಾಽಸುರ್ಧರಣೀತಲೇ ॥ ೨೭ ॥
ಯೇನ ಶೂರ್ಪಣಖಾ ಧ್ವಸ್ತಾ ರಾಕ್ಷಸೀ ಸಾ ಚ ದಾರುಣಾ ।
ಲೀಲಯಾಽಪಿ ಮಮಾದೇಶಾತ್ಸೋಽಯಮೇವಂ ವಿಧಃ ಸ್ಥಿತಃ ॥ ೨೮ ॥

---

೨೨. ರಾಮನು ಲಕ್ಷ್ಮಣನು ಮಡಿದು ಸರಯೂ ನದಿಯ ದಡದಲ್ಲಿ ಬಿದ್ದಿರುವುದನ್ನು ನೋಡಿ ಅತಿ ದುಃಖದಿಂದ ಗೋಳಾಡಿದನು.

೨೩. ಆ ಸ್ಥಳಕ್ಕೆ ಮಂತ್ರಿ ಮಿತ್ರರೊಡನೆ ತಾನೇ ಹೋಗಿ ಬಿದ್ದಿರುವ ಲಕ್ಷ್ಮಣನನ್ನು ಕಂಡು ದೈನ್ಯದಿಂದ ಶೋಕಿಸಿದನು.

೨೪. "ಎಲೈ ಮಗುವೆ! ಪ್ರಾಣಪ್ರಿಯಸಹೋದರನೂ, ಜ್ಯೇಷ್ಠನೂ, ನಿನ್ನ ಅಭಿಪ್ರಾಯದಂತೆ ನಡೆಯುವವನೂ ಆದ ನನ್ನನ್ನು ತ್ಯಜಿಸಿ ನೀನು ದೇವಲೋಕಕ್ಕೆ ಹೊರಟಿರುವೆಯಾ!

೨೫. ನಾನು ಪಟ್ಟಣದಿಂದ ಮಹಾರಣ್ಯಕ್ಕೆ ಹೋಗುತ್ತಿರುವಾಗ ನೀನು ನನ್ನನ್ನು ರಕ್ಷಿಸುತ್ತ ಅನುಸರಿಸಿರುವೆ!

೨೬. ಸಂಧ್ಯಾಕಾಲದಲ್ಲಿ ಕಬಂಧನೆಂಬ ಬಲಿಷ್ಠರಾಕ್ಷಸನು ಬರಲು ನೀನು ಪತ್ನಿಯಿಂದ ಸಹಿತನಾದ ನನ್ನನ್ನು ಕಾಪಾಡಿರುವೆ!

೨೭. ಅಂತಹ ಇಂದ್ರಜಿತ್ತೆಂಬ ರಾಕ್ಷಸನನ್ನು ಯುದ್ಧದಲ್ಲಿ ಕೊಂದ ನೀನು ಈಗ ಮಡಿದು ಭೂಮಿಯಲ್ಲಿ ಬಿದ್ದಿರುವೆ!

೨೮. ನನ್ನ ಅಪ್ಪಣೆಯಿಂದ ಭಯಂಕರಳಾದ ಶೂರ್ಪಣಖಿಯನ್ನು ಅನಾಯಾಸವಾಗಿ ಕೊಂದ ನೀನು ಹೀಗೆ ಇರುವೆಯಾ?

ಯದ್ಬಾಹುಬಲಮಾಶ್ರಿತ್ಯ ಮಯಾ ಧ್ವಸ್ತಾ ನಿಶಾಚರಾಃ ।
ಸೋಽಯಂ ನಿಪತಿತಃ ಶೇತೇ ಮಮಭ್ರಾತಾ ಹ್ಯನಾಥವತ್ ॥ ೨೯ ॥
ಹಾ ವತ್ಸ ಕ್ವ ಗತೋಽ ಮಾಂ ತ್ವಂ ವಿಮುಚ್ಯ ಭ್ರಾತರಂ ನಿಜಂ ।
ಜ್ಯೇಷ್ಠಂ ಪ್ರಾಣಸಮಂ ಕಿಂ ತೇ ಸ್ನೇಹೋಽದ್ಯ ವಿಗತಃ ಕ್ವಚಿತ್ ॥ ೩೦ ॥

ಸೂತ ಉವಾಚ :—

ಏವಂ ಬಹುವಿಧಾನ್ ಕೃತ್ವಾ ಪ್ರಲಾಪಾನ್ ರಘುನಂದನಃ ।
ಮಾತೃಭಿಃ ಸಹಿತೋ ದೀನಃ ಶೋಕೇನ ಮಹತಾನ್ವಿತಃ ॥ ೩೧ ॥
ತತಸ್ತೇ ಮಂತ್ರಿಣಸ್ತಸ್ಯ ಪ್ರೋಚುಸ್ತಂ ವೀಕ್ಷ್ಯದುಃಖಿತಂ ।
ವಿಲಪಂತಂ ರಘುಶ್ರೇಷ್ಠಂ ಸ್ತ್ರೀಜನೇನ ಸಮನ್ವಿತಂ ॥ ೩೨ ॥

ಮಂತ್ರಿಣ ಊಚುಃ :—

ಮಾ ಶೋಕಂ ಕುರು ರಾಜೇಂದ್ರ ಯಥಾಽನ್ಯಃ ಪ್ರಾಕೃತಃ ಸ್ಥಿತಃ ।
ಕುರುಷ್ವ ಚ ಯಥೇದಂ ಸ್ಯಾತ್ಸಾಂಪ್ರತಂ ಚೌರ್ಧ್ವದೈಹಿಕಂ ॥ ೩೩ ॥
ನಷ್ಟಂ ಮೃತಮತೀತಂ ಚ ಯೇ ಶೋಚಂತಿ ಕುಬುದ್ಧಯಃ ।
ಧೀರಾಣಾಂ ತು ಪುರಾ ರಾಜನ್ನಷ್ಟಂ ನಷ್ಟಂ ಮೃತಂ ಮೃತಂ ॥ ೩೪ ॥

---

೨೯. ನಾನು ಯಾವನ ಬಾಹುಬಲವನ್ನಾಶ್ರಯಿಸಿ ರಾಕ್ಷಸರನ್ನು ಕೊಂದಿರುವೆನೊ, ಅಂತಹ ನನ್ನ ಸಹೋದರನಾದ ಈ ಲಕ್ಷ್ಮಣನು ಅನಾಥನಂತೆ ಭೂಮಿಯಲ್ಲಿ ಮಲಗಿರುವನು.

೩೦. ಮಗು! ನೀನು ನಿನ್ನ ಪ್ರಾಣಸಮನಾದ ಅಣ್ಣನನ್ನು ಬಿಟ್ಟು ಎಲ್ಲಿಗೆ ಹೋಗಿರುವೆ! ನಿನ್ನ ಸ್ನೇಹವು ಈಗ ಎಲ್ಲಿಗೆ ಹೋಗಿರುವುದು!''

೩೧. ಸೂತನು ಹೇಳುತ್ತಾನೆ:—ರಾಘವನು ತಾಯಂದಿರೊಡನೆ ಹೀಗೆ ಅತ್ಯಂತ ದುಃಖದಿಂದ ಅನೇಕ ಪ್ರಕಾರವಾಗಿ ಗೋಳಾಡಿದನು.

೩೨. ಬಳಿಕ ಅವನ ಮಂತ್ರಿಗಳು ಸ್ತ್ರೀಯರೊಡನೆ ದುಃಖದಿಂದ ಗೋಳಾಡುತ್ತಿರುವ ರಾಘವನನ್ನು ನೋಡಿ ಇಂತೆಂದರು.

೩೩. ಮಂತ್ರಿಗಳು ಹೇಳುತ್ತಾರೆ:—ಮಹಾರಾಜ! ನೀನು ಸಾಮಾನ್ಯ ಜನರಂತೆ ದುಃಖಿಸಬೇಡ. ಮೃತನಾದ ಲಕ್ಷ್ಮಣನಿಗೆ ಉತ್ತರಕ್ರಿಯೆಗಳನ್ನು ಮಾಡು.

೩೪. ನಷ್ಟವಾದ್ದುದು, ಮೃತವಾದುದು, ಕಳೆದುಹೋದುದು ಇವುಗಳನ್ನು ಉದ್ದೇಶಿಸಿ ದುಃಖಿಸುವವರು ಮೂಢರು. ಜ್ಞಾನಿಗಳಿಗೆ ನಷ್ಟ, ಮೃತವಾದುವುಗಳು ನಷ್ಟ ಮೃತವಾದುವುಗಳೇ.

ಏವಂ ತೇ ಮಂತ್ರಿಣಃ ಪ್ರೋಚ್ಯ ತತಸ್ತಸ್ಯ ಕಲೇವರಂ ।
ಲಕ್ಷ್ಮಣಸ್ಯ ವಿಲಪ್ಯೋಚ್ಚೈಶ್ಚಂದನೋಶೀರ ಕುಂಕುಮೈಃ ॥ ೩೫ ॥
ಕರ್ಪೂರಾಗುರುಮಿಶ್ರೈಶ್ಚ ತಥಾಽನ್ಯೈಃ ಸು ಸುಗಂಧಿಭಿಃ ।
ಪರಿವೇಷ್ಟ್ಯ ಶುಭೈರ್ವಸ್ತ್ರೈಃ ಪುಷ್ಪೈಃ ಸಂಭೂಷ್ಯ ಶೋಭನೈಃ ॥ ೩೬ ॥
ಚಂದನಾಗುರುಕಾಷ್ಠೈಶ್ಚ ಚಿತಿಂ ಕೃತ್ವಾ ಸುವಿಸ್ತರಾಂ ।
ನ್ಯದಧುಸ್ತಸ್ಯ ತದ್ಗಾತ್ರಂ ತತ್ರ ದಕ್ಷಿಣದಿಙ್ಮುಖಂ ॥ ೩೭ ॥
ಏತಸ್ಮಿನ್ನಂತರೇ ಜಾತಂ ತತ್ರಾಶ್ಚರ್ಯಂ ದ್ವಿಜೋತ್ತಮಾಃ ।
ತನ್ಮೇ ನಿಗದತಃ ಸರ್ವಂ ಶೃಣ್ವಂತು ಸಕಲಂ ದ್ವಿಜಾಃ ॥ ೩೮ ॥
ಯಾವತ್ತೇಽಂತಃ ಸಮಾರೋಪ್ಯ ಚಿತಾಂ ತಸ್ಯ ಕಲೇವರಂ ।
ಪ್ರಯಚ್ಛಂತಿ ಹವಿರ್ವಾಹಂ ತಾವನ್ನಷ್ಟಂ ಕಲೇವರಂ ॥ ೩೯ ॥
ಏತಸ್ಮಿನ್ನಂತರೇ ವಾಣೀ ನಿರ್ಗತಾ ಗಗನಾಂಗಣಾತ್ ।
ನಾದಯಂತೀ ದಿಶಃ ಸರ್ವಾಃ ಪುಷ್ಪವರ್ಷಾದನಂತರಂ ॥ ೪೦ ॥
ರಾಮರಾಮ ಮಹಾಬಾಹೋ ಮಾ ತ್ವಂ ಶೋಕಪರೋ ಭವ ।
ನ ಚಾಽಸ್ಯ ಯುಜ್ಯತೇ ವಹ್ನಿರ್ದಾತುಂ ಚೈವ ಕಥಂಚನ ॥ ೪೧ ॥
ಬ್ರಹ್ಮಜ್ಞಾನಪ್ರಯುಕ್ತಸ್ಯ ಸನ್ಯಸ್ತಸ್ಯ ವಿಶೇಷತಃ ।
ಅಗ್ನಿದಾನಂ ನಯುಕ್ತಂ ಸ್ಯಾತ್ಸರ್ವೇಷಾಮಪಿ ಯೋಗಿನಾಂ ॥ ೪೨ ॥

---

೩೫—೩೭. ಮಂತ್ರಿಗಳು ರಾಮನಿಗೆ ಹೀಗೆ ಹೇಳಿ ಆ ಲಕ್ಷ್ಮಣನ ಶರೀರಕ್ಕೆ ಗಂಧ, ಲಾವಂಚ, ಕುಂಕುಮಗಳಿಂದಲೂ, ಕರ್ಪೂರ, ಅಗುರುಗಳಿಂದ ಮಿಶ್ರವಾದ ಸುಗಂಧ ದ್ರವ್ಯಗಳಿಂದಲೂ ಲೇಪಿಸಿ, ಶುಭವಸ್ತ್ರಗಳನ್ನು ಸುತ್ತಿ, ಒಳ್ಳೆ ಹೂವುಗಳಿಂದ ಅಲಂಕರಿಸಿ ಚಂದನಾಗುರುಕಟ್ಟಿಗೆಗಳಿಂದ ವಿಸ್ತಾರವಾದ ಚಿತಿಯನ್ನು ನಿರ್ಮಿಸಿ ಶವವನ್ನು ದಕ್ಷಿಣಾಭಿಮುಖವಾಗಿ ಅದರಲ್ಲಿಟ್ಟರು.

೩೮. ದ್ವಿಜರೆ! ಇಷ್ಟರಲ್ಲಿ ಅಲ್ಲೊಂದು ಆಶ್ಚರ್ಯವುಂಟಾಯಿತು. ಅದನ್ನೆಲ್ಲ ಹೇಳುತ್ತಿರುವ ನನ್ನಿಂದ ಕೇಳಿರಿ.

೩೯. ಆ ಮಂತ್ರಿಗಳು ಲಕ್ಷ್ಮಣನ ಶರೀರವನ್ನು ಚಿತೆಯಲ್ಲಿರಿಸಿ ಅಗ್ನಿಯನ್ನು ಹಚ್ಚಲು ಅದು ಸುಡಲಿಲ್ಲ.

೪೦. ಇಷ್ಟರಲ್ಲಿ ಆಕಾಶವಾಣಿಯು ಪುಷ್ಪವೃಷ್ಟಿಯನ್ನು ಸುರಿಸಿ ದಿಕ್ಕುಗಳನ್ನು ಧ್ವನಿಗೊಳಿಸುತ್ತ ಉಂಟಾಯಿತು.

೪೧. "ರಾಮ! ನೀನು ದುಃಖಿಸಬೇಡ. ಇವನನ್ನು ಸುಡುವುದು ಉಚಿತವಲ್ಲ.

೪೨. ಬ್ರಹ್ಮಜ್ಞಾನಿಗಳೂ, ಸನ್ಯಾಸಿಗಳೂ ಆದವರಿಗೆ ದಹನವು ಉಚಿತವಲ್ಲ.

ತವಾಽಯಂ ಬಾಂಧವೋ ರಾಮ ಬ್ರಹ್ಮಣಃ ಸದನಂ ಗತಃ ।
ಬ್ರಹ್ಮದ್ವಾರೇಣ ಚಾಽಽತ್ಮಾನಂ ನಿಷ್ಕ್ರಮ್ಯ ಸುಮಹಾಯಶಾಃ ॥ ೪೩ ॥
ಅಥ ತೇ ಮಂತ್ರಿಣಃ ಪ್ರೋಚುಸ್ತಚ್ಛ್ರುತ್ವಾಕಾಶಗಂ ವಚಃ ।
ಅಶೋಚ್ಯೋಽಯಂ ಮಹಾರಾಜ ಸಂಸಿದ್ಧಿಂ ಪರಮಾಂ ಗತಃ ।
ಲಕ್ಷ್ಮಣೋ ಗಮ್ಯತಾಂ ಶೀಘ್ರಂ ತಸ್ಮಾತ್ಸ್ವಭವನಂ ವಿಭೋ ॥ ೪೪ ॥
ಚಿಂತ್ಯಂತಾಂ ರಾಜಕಾರ್ಯಾಣಿ ತಥಾಽನ್ಯಚ್ಚೌರ್ಧ್ವದೈಹಿಕಂ ।
ಕುರು ಸ್ನೇಹೋಚಿತಂ ತಸ್ಯ ಪೃಷ್ಟ್ವಾ ಬ್ರಾಹ್ಮಣಸತ್ತಮಾನ್ ॥ ೪೫ ॥

ರಾಮ ಉವಾಚ :—

ನಾಽಹಂ ಗೃಹಂ ಗಮಿಷ್ಯಾಮಿ ಲಕ್ಷ್ಮಣೇನ ವಿನಾಽಧುನಾ ।
ಪ್ರಾಣಾನತ್ರ ವಿಹಾಸ್ಯಾಮಿ ಯಥಾ ತೇನ ಮಹಾತ್ಮನಾ ॥ ೪೬ ॥
ಏಷ ಪುತ್ರೋ ಮಯಾ ದತ್ತಃ ಕುಶಾಖ್ಯೋ ಮಮ ಸಮ್ಮತಃ ।
ಯುಷ್ಮಭ್ಯಂ ಕ್ರಿಯತಾಂ ರಾಜ್ಯೇ ಮದೀಯೇ ಯದಿ ರೋಚತೇ ॥ ೪೭ ॥
ಏವಮುಕ್ತ್ವಾ ತತೋ ರಾಮೋ ಗಂತುಕಾಮೋ ದಿವಾಲಯಂ ।
ಚಿಂತಯಾಮಾಸ ಭೂಯೋಽಪಿ ಸ್ಮೃತ್ವಾ ಮಿತ್ರಂ ವಿಭೀಷಣಂ ॥ ೪೮ ॥
ಮಯಾ ತಸ್ಯ ತದಾ ದತ್ತಂ ಲಂಕಾಯಾಂ ರಾಜ್ಯಮಕ್ಷಯಂ ।
ಬಹುಭಕ್ತಿಪ್ರತುಷ್ಟೇನ ಯಾವಚ್ಚಂದ್ರಾರ್ಕತಾರಕಾಃ ॥ ೪೯ ॥

---

೪೩. ರಾಮ! ನಿನ್ನ ಬಂಧುವೂ, ಯಶಸ್ವಿಯೂ ಆದ ಈ ಲಕ್ಷ್ಮಣನು ಪ್ರಾಣವನ್ನು ಬ್ರಹ್ಮದ್ವಾರದಿಂದ ಹೊರಡಿಸಿ ಬ್ರಹ್ಮನ ಮನೆಗೆ ತೆರಳಿರುವನು.''

೪೪. ಬಳಿಕ ಆ ಮಂತ್ರಿಗಳು ಆಕಾಶವಾಣಿಯನ್ನು ಕೇಳಿ, ''ಮಹಾರಾಜ! ಉತ್ತಮಸಿದ್ಧಿಯನ್ನು ಹೊಂದಿದ ಈ ಲಕ್ಷ್ಮಣನ ವಿಷಯದಲ್ಲಿ ಮರುಗಬೇಡ. ಆದುದರಿಂದ ಬೇಗನೆ ನಿನ್ನ ಮನೆಗೆ ಹೋಗು.

೪೫. ರಾಜಕಾರ್ಯವನ್ನು ಚಿಂತಿಸು. ಬ್ರಾಹ್ಮಣೋತ್ತಮರನ್ನು ಕೇಳಿ ಅವನಲ್ಲಿರುವ ಸ್ನೇಹಕ್ಕೆ ಉಚಿತವಾಗುವಂತೆ ಉತ್ತರಕ್ರಿಯೆಯನ್ನು ಮಾಡು.''

೪೬. ರಾಮನು ಹೇಳುತ್ತಾನೆ:—ನಾನು ಲಕ್ಷ್ಮಣನನ್ನು ತ್ಯಜಿಸಿ ಈಗ ಮನೆಗೆ ಹೋಗುವುದಿಲ್ಲ. ಅವನಂತೆಯೇ ಇಲ್ಲಿಯೇ ಪ್ರಾಣವನ್ನು ತ್ಯಜಿಸುವೆನು.

೪೭. ನನಗೆ ಇಷ್ಟನಾದ ಕುಶನೆಂಬ ನನ್ನ ಪುತ್ರನನ್ನು ನಿಮಗೆ ಕೊಟ್ಟಿರುವೆನು. ನಿಮಗೆ ಇಷ್ಟವಾದರೆ ಅವನನ್ನು ನನ್ನ ರಾಜ್ಯದಲ್ಲಿ ನೇಮಿಸಿರಿ.

೪೮. ರಾಮನು ಹೀಗೆ ಹೇಳಿ ಸ್ವರ್ಗಕ್ಕೆ ಹೋಗಬಯಸಿ ಮರಳಿ ಮಿತ್ರನಾದ ವಿಭೀಷಣನನ್ನು ಸ್ಮರಿಸಿ ಹೀಗೆ ಚಿಂತಿಸಿದನು.

೪೯. ''ನಾನು ಅತಿಶಯವಾದ ಭಕ್ತಿಯಿಂದ ಸಂತುಷ್ಟನಾಗಿ ವಿಭೀಷಣನಿಗೆ ಚಂದ್ರ, ಸೂರ್ಯ, ನಕ್ಷತ್ರಗಳು ಇರುವವರೆಗೆ ಅಕ್ಷಯವಾದ ಲಂಕಾ ರಾಜ್ಯವನ್ನು ಕೊಟ್ಟಿರುವೆನು.

ಅತಿಕ್ರೂರತರಾ ಜಾತೀ ರಾಕ್ಷಸಾನಾಂ ಯತಃ ಸ್ಮೃತಾ ।
ವಿಶೇಷಾದ್ವರಪುಷ್ಟಾನಾಂ ಜಾಯತೇಽತ್ರ ಧರಾತಲೇ ॥ ೫೦ ॥
ತಚ್ಚೇದ್ರಾಕ್ಷಸಭಾವೇನ ಸ ಮಹಾತ್ಮಾ ವಿಭೀಷಣಃ ।
ಕರಿಷ್ಯತಿ ಸುರೈಃ ಸಾರ್ಧಂ ವಿರೋಧಂ ರಾವಣೋ ಯಥಾ ॥ ೫೧ ॥
ತಂ ದೇವಾಃ ಸೂದಯಿಷ್ಯಂತಿ ಉಪಾಯೈಃ ಸಾಮಪೂರ್ವಕೈಃ ।
ತ್ರೈಲೋಕ್ಯ ಕಂಟಕೋ ಯದ್ವತ್ತಸ್ಯಭ್ರಾತಾ ದಶಾನನಃ ॥ ೫೨ ॥
ತತೋ ಮೇ ಸ್ಯಾನ್ಮೃಷಾ ವಾಣೀ ತಸ್ಮಾದ್ಗತ್ವಾ ತದಂತಿಕಂ ।
ಶಿಕ್ಷಾಂ ದದಾಮಿ ತಸ್ಯಾಽಹಂ ಯಥಾ ದೇವಾನ್ನದೂಷಯೇತ್ ॥ ೫೩ ॥
ತಥಾ ಮೇ ಪರಮಂ ಮಿತ್ರಂ ದ್ವಿತೀಯಂ ವಾನರಃ ಸ್ಥಿತಃ ।
ಸುಗ್ರೀವಾಖ್ಯೋ ಮಹಾಭಾಗೋ ಜಾಂಬವಾಂಶ್ಚ ತಥಾಽಪರಃ ॥ ೫೪ ॥
ಸ ಭೃತ್ಯೋ ವಾಯುಪುತ್ರಶ್ಚ ವಾಲಿಪುತ್ರಸಮನ್ವಿತಃ ।
ಕುಮುದಾಖ್ಯಶ್ಚ ತಾರಶ್ಚ ತಥಾಽನ್ಯೇಽಪಿ ಚ ವಾನರಾಃ ॥ ೫೫ ॥
ತಸ್ಮಾತ್ತಾನಪಿ ಸಂಭಾಷ್ಯ ಸರ್ವಾನ್ ಸಂಮಂತ್ರ್ಯಸಾದರಂ ।
ತತೋ ಗಚ್ಛಾಮಿ ದೇವಾನಾಂ ಕೃತಕೃತ್ಯೋ ಗೃಹಂ ಪ್ರತಿ ॥ ೫೬ ॥
ಏವಂ ಸಂಚಿಂತ್ಯ ಸುಚಿರಂ ಸಮಾಹೂಯ ಚ ಪುಷ್ಪಕಂ ।
ತತ್ರಾರುಹ್ಯ ಯಯೌ ತೂರ್ಣಂ ಕಿಷ್ಕಿಂಧಾಖ್ಯಾಂ ಪುರೀಂ ಪ್ರತಿ ॥ ೫೭ ॥

---

೫೦. ಭೂಮಿಯಲ್ಲಿ ವರದಿಂದ ಕೊಬ್ಬಿದ ರಾಕ್ಷಸಜಾತಿಯು ಅತ್ಯಂತ ಕಠಿನವಾದುದು.

೫೧–೫೨. ಮಹಾತ್ಮನಾದ ವಿಭೀಷಣನು ರಾಕ್ಷಸಸ್ವಭಾವದಿಂದ ರಾವಣನಂತೆ ದೇವತೆಗಳೊಡನೆ ದ್ವೇಷಮಾಡಿದರೆ ಆ ದೇವತೆಗಳು ಸಾಮ ಮೊದಲಾದ ಉಪಾಯಗಳಿಂದ ಅವನ ಸಹೋದರನಾದ ತ್ರಿಲೋಕಕಂಟಕ ರಾವಣನನ್ನಂತೆ ಕೊಲ್ಲುವರು.

೫೩. ಅದರಿಂದ ನನ್ನ ಮಾತು ಸುಳ್ಳಾದೀತು, ಆದುದರಿಂದ ನಾನು ಅವನ ಬಳಿಗೆ ಹೋಗಿ ದೇವತೆಗಳೊಡನೆ ದ್ವೇಷಗೊಳ್ಳದಂತೆ ಉಪದೇಶ ಮಾಡುವೆನು.

೫೪–೫೫. ಹಾಗೆಯೇ ನನಗೆ ಪರಮಮಿತ್ರರಾದ ಸುಗ್ರೀವ, ಜಾಂಬವ, ಭೃತ್ಯರಿಂದ ಸಹಿತನಾದ ಆಂಜನೇಯ, ಅಂಗದ, ಕುಮುದ, ತಾರ ಮತ್ತು ಇತರ ವಾನರರೂ ಇರುವರು.

೫೬. ಆದುದರಿಂದ ಅವರೆಲ್ಲರನ್ನೂ ಪ್ರೀತಿಯಿಂದ ಕೇಳಿಕೊಂಡು ಧನ್ಯನಾಗಿ ದೇವಲೋಕಕ್ಕೆ ತೆರಳುವೆನು.''

೫೭. ರಾಮನು ಹೀಗೆ ಬಹಳಹೊತ್ತು ಆಲೋಚಿಸಿ ಪುಷ್ಪಕ ವಿಮಾನವನ್ನು ಕರೆಯಿಸಿ ಅದನ್ನೇರಿ ಕಿಷ್ಕಿಂಧೆಗೆ ಹೋದನು.

ಅಥ ತೇ ವಾನರಾ ದೃಷ್ಟ್ವಾ ಪ್ರೋದ್ಯೋತಂ ಪುಷ್ಪಕೋದ್ಭವಂ ।
ವಿಜ್ಞಾಯ ರಾಘವಂ ಪ್ರಾಪ್ತಂ ಸತ್ವರಂ ಸಂಮುಖಾ ಯಯುಃ ॥ ೫೮ ॥
ತತಃ ಪ್ರಣಮ್ಯ ತೇ ದೂರಾಜ್ಜಾನುಭ್ಯಾಮವನಿಂ ಗತಾಃ ।
ಜಯೇತಿ ಶಬ್ದಮಾದಾಯ ಮುಹುರ್ಮುಹುರಿತಸ್ತತಃ ॥ ೫೯ ॥
ತತಸ್ತೇನೈವ ಸಂಯುಕ್ತಾಃ ಕಿಷ್ಕಿಂಧಾಂ ತಾಂ ಮಹಾಪುರೀಂ ।
ವಿವಿಶುಃ ಸತ್ಪತಾಕಾಭಿಃ ಸಮಂತಾತ್ಸಮಲಂಕೃತಾಂ ॥ ೬೦ ॥
ಅಥೋತ್ತೀರ್ಯ ವಿಮಾನಾಗ್ರ್ಯಾತ್ಸುಗ್ರೀವಭವನೇ ಶುಭೇ ।
ಪ್ರವಿವೇಶ ದ್ರುತಂ ರಾಮಃ ಸರ್ವತಃ ಸುವಿಭೂಷಿತೇ ॥ ೬೧ ॥
ತತ್ರ ರಾಮಂ ನಿವಿಷ್ಟಂ ತೇ ವಿಶ್ರಾಂತಂ ವೀಕ್ಷ್ಯ ವಾನರಾಃ ।
ಅರ್ಘ್ಯಾದಿಭಿಶ್ಚ ಸಂಪೂಜ್ಯ ಪಪ್ರಚ್ಛುಸ್ತದನಂತರಂ ॥ ೬೨ ॥

ವಾನರಾ ಊಚುಃ :—

ತೇಜಸಾ ತ್ವಾಂ ವಿನಿರ್ಮುಕ್ತೋ ದೃಶ್ಯಸೇऽದ್ಯ ರಘುನಂದನ ।
ಕೃಶೋऽಸ್ಯತೀವ ಚೋದ್ವಿಗ್ನಃ ಕಚ್ಚಿತ್ಕ್ಷೇಮಂ ಗೃಹೇ ತವ ॥ ೬೩ ॥
ಛಾಯೇವಾऽನುಗತೋ ನಿತ್ಯಂ ತಥಾ ತೇ ಲಕ್ಷ್ಮಣೋऽನುಜಃ ।
ನ ದೃಶ್ಯತೇ ಸಮೀಪಸ್ಥಃ ಕಿಮದ್ಯ ತವ ರಾಘವ ॥ ೬೪ ॥

---

೫೮. ಬಳಿಕ ಆ ಕಪಿಗಳು ಪುಷ್ಪಕ ವಿಮಾನದ ಪ್ರಕಾಶವನ್ನು ಕಂಡು ರಾಮನು ಬಂದಿರುವನೆಂದರಿತು ಬೇಗನೆ ಎದುರುಗೊಂಡರು.

೫೯. ಅವರು ಬಹುವಾಗಿ ಇಲ್ಲಿ ಅಲ್ಲಿ ಜಯಜಯಕಾರಮಾಡಿ ದೂರದಿಂದ ಅವನಿಗೆ ನಮಸ್ಕಾರ ಮಾಡಿದರು.

೬೦. ಬಳಿಕ ಅವರು ಆ ರಾಮನೊಡನೆ ಸುತ್ತಲೂ ಪತಾಕೆಗಳಿಂದ ಅಲಂಕಾರಗೊಂಡ ಕಿಷ್ಕಿಂಧಾಪುರಿಯನ್ನು ಪ್ರವೇಶಿಸಿದರು.

೬೧. ರಾಮನು ಉತ್ತಮ ವಿಮಾನದಿಂದ ಇಳಿದು ಸುತ್ತಲೂ ಅಲಂಕರಿಸಲ್ಪಟ್ಟ ಸುಗ್ರೀವನ ಮನೆಯನ್ನು ಪ್ರವೇಶಿಸಿದನು.

೬೨. ಕಪಿಗಳು ಅಲ್ಲಿ ವಿಶ್ರಾಂತಿಗೊಂಡಿರುವ ರಾಮನನ್ನು ನೋಡಿ ಅರ್ಘ್ಯಾದಿಗಳಿಂದ ಪೂಜಿಸಿ ಹೀಗೆ ಪ್ರಶ್ನಿಸಿದರು.

೬೩–೬೪. ಕಪಿಗಳು ಹೇಳುತ್ತಾರೆ:—ರಾಘವ! ನೀನು ತೇಜೋಹೀನನೂ, ಕೃಶನೂ, ವ್ಯಥೆಗೊಂಡವನೂ ಆಗಿ ಕಾಣಿಸುತ್ತೀಯೆ. ನಿನ್ನ ಮನೆಯಲ್ಲಿಯೂ, ಶರೀರದಲ್ಲಿಯೂ ಕ್ಷೇಮವಷ್ಟೆ. ನಿನ್ನ ಅನುಜನಾದ ಲಕ್ಷ್ಮಣನು ಯಾವಾಗಲೂ ನಿನ್ನನ್ನು ಅನುಸರಿಸುತ್ತಿರುವನೊ? ಈಗ ನಿನ್ನ ಹತ್ತಿರದಲ್ಲಿ ಅವನು ಏಕೆ ಕಾಣಿಸುವುದಿಲ್ಲ?

ತಥಾ ಪ್ರಾಣಸಮಾಽಭೀಷ್ಟಾ ಸೀತಾ ಭಾರ್ಯಾ ತವಪ್ರಭೋ ।
ದೃಶ್ಯತೇ ಕಿಂ ನ ಪಾರ್ಶ್ವಸ್ಥಾ ಏತನ್ನಃ ಕೌತುಕಂ ಪರಂ ॥ ೬೫ ॥
ಸೂತ ಉವಾಚ :—
ತೇಷಾಂ ತದ್ವಚನಂ ಶ್ರುತ್ವಾ ಚಿರಂ ನಿಃಶ್ವಸ್ಯ ರಾಘವಃ ।
ಬಾಷ್ಪಪೂರ್ಣೇಕ್ಷಣೋ ಭೂತ್ವಾ ಸರ್ವಂ ತೇಷಾಂ ನ್ಯವೇದಯತ್ ॥ ೬೬ ॥
ಅಥ ಸೀತಾ ಪರಿತ್ಯಕ್ತಾ ತಥಾ ಭ್ರಾತಾ ಸ ಲಕ್ಷ್ಮಣಃ ।
ಯದರ್ಥಂ ತತ್ರ ಸಂಪ್ರಾಪ್ತಃ ಸ್ವಯಮೇವ ದ್ವಿಜೋತ್ತಮಾಃ ॥ ೬೭ ॥
ತಚ್ಛ್ರುತ್ವಾ ವಾನರಾಃ ಸರ್ವೇ ಸುಗ್ರೀವ ಪ್ರಮುಖಾಸ್ತತಃ ।
ರುರುದುಸ್ತೇ ಸುದುಃಖಾರ್ತಾಃ ಸಮಾಲಿಂಗ್ಯ ತತಃ ಪರಂ ॥ ೬೮ ॥
ಏವಂ ಚಿರಂ ಪ್ರಲಪ್ಯೋಚ್ಚೈಸ್ತತಃ ಪ್ರೋಚೂ ರಘೂತ್ತಮಂ ।
ಆದೇಶೋ ದೀಯತಾಂ ರಾಜನ್ ಯೋಽಸ್ಮಾಭಿರಿಹ ಸಿದ್ಧ್ಯತಿ ॥ ೬೯ ॥
ಧನ್ಯಾ ವಯಂ ಧರಾಪೃಷ್ಠೇ ಯೇಷಾಂ ತ್ವಂ ರಘುಸತ್ತಮ ।
ಈದೃಕ್‌ಸ್ನೇಹ ಸಮಾಯುಕ್ತಃ ಸಮಾಗಚ್ಛಸಿ ಮಂದಿರೇ ॥ ೭೦ ॥
ರಾಮ ಉವಾಚ :—
ಉಷಿತ್ವಾ ರಜನೀಮೇಕಾಂ ಸುಗ್ರೀವ ತವ ಮಂದಿರೇ ।
ಪ್ರಾತರ್ಲಂಕಾಂ ಗಮಿಷ್ಯಾಮಿ ಯತ್ರಾಸ್ತೇ ಸ ವಿಭೀಷಣಃ ॥ ೭೧ ॥

---

೬೫. ಹಾಗೆಯೇ ನಿನ್ನ ಪ್ರಾಣಕ್ಕೆ ಸಮಾನಳಾದ ಸೀತೆಯೆಂಬ ಭಾರ್ಯೆಯು ಏಕೆ ಪಾರ್ಶ್ವದಲ್ಲಿ ಕಾಣಿಸುವುದಿಲ್ಲ? ಇದರಿಂದ ನಮಗೆ ಅತ್ಯಂತ ಕುತೂಹಲ ವುಂಟಾಗಿದೆ.

೬೬–೬೭. ಸೂತನು ಹೇಳುತ್ತಾನೆ:—ರಾಮನು ಆ ವಾನರರ ಆ ಮಾತನ್ನು ಕೇಳಿ ಬಹಳ ಹೊತ್ತು ನಿಟ್ಟುಸಿರುಬಿಟ್ಟು ಕಣ್ಣೀರನ್ನು ಸುರಿಸುತ್ತ ಸೀತಾಲಕ್ಷ್ಮಣರ ತ್ಯಾಗವನ್ನೂ, ತಾನು ಅಲ್ಲಿಗೆ ಬಂದಿರುವ ಕಾರಣವನ್ನೂ ಸಮಗ್ರವಾಗಿ ತಾನೇ ತಿಳಿಸಿದನು.

೬೮. ಸುಗ್ರೀವನೇ ಮೊದಲಾದ ಕಪಿಗಳು ಆ ಮಾತನ್ನು ಕೇಳಿ ರಾಮನನ್ನು ತಬ್ಬಿಕೊಂಡು ದುಃಖದಿಂದ ಗೋಳಾಡಿದರು.

೬೯. ಅವರು ಹೀಗೆ ಬಹಳಹೊತ್ತು ಗೋಳಾಡಿ ರಾಮನನ್ನು ಕುರಿತು ಹೀಗೆಂದರು. ನಮ್ಮಿಂದಾಗಬೇಕಾದ ಕಾರ್ಯಕ್ಕಾಗಿ ಅಪ್ಪಣೆ ಮಾಡು.

೭೦. ನೀನು ಇಷ್ಟು ಸ್ನೇಹವುಳ್ಳವನಾಗಿ ನಮ್ಮ ಮನೆಗೆ ಬಂದದ್ದರಿಂದ ನಾವು ಪ್ರಪಂಚದಲ್ಲಿ ಧನ್ಯರು.

೭೧. ರಾಮನು ಹೇಳುತ್ತಾನೆ:—ಸುಗ್ರೀವ! ನಾನು ಒಂದು ರಾತ್ರಿ ನಿನ್ನ ಮನೆಯಲ್ಲಿದ್ದು ಬೆಳಗ್ಗೆ ವಿಭೀಷಣನಿರುವ ಲಂಕೆಗೆ ಹೋಗುವೆನು.

ಪ್ರಧಾನಾಮಾತ್ಯ ಯುಕ್ತೇನ ತ್ವಯಾಽಪಿ ಕಪಿಸತ್ತಮ ।
ಆಗಂತವ್ಯಂ ಮಯಾ ಸಾರ್ಧಂ ವಿಭೀಷಣಗೃಹಂಪ್ರತಿ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರೀರಾಮಸ್ಯ ಸುಗ್ರೀವನಗರೀಂ ಪ್ರತಿಗಮನವರ್ಣನಂ"
ನಾಮ ಶತತಮೋಽಧ್ಯಾಯಃ

---

೭೨. ನೀನೂ ಮುಖ್ಯಮಂತ್ರಿಯೊಡನೆ ನನ್ನ ಜತೆಯಲ್ಲಿ ವಿಭೀಷಣನ ಮನೆಗೆ ಬರಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶ್ರೀರಾಮಸುಗ್ರೀವನಗರೀಗಮನವರ್ಣನ"ವೆಂಬ
ನೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋತ್ತರಶತತಮೋಽಧ್ಯಾಯಃ

### ಸೇತುಮಧ್ಯೇ ಶ್ರೀರಾಮಕೃತ ರಾಮೇಶ್ವರಪ್ರತಿಷ್ಠಾವರ್ಣನಂ

ಸೂತ ಉವಾಚ:—

ಏವಂ ತಾಂ ರಜನೀಂ ತತ್ರ ಸ ಉಷಿತ್ವಾ ರಘೂತ್ತಮಃ ।
ಉಪಾಸ್ಯಮಾನಃ ಸರ್ವೈಸ್ತೈಃ ಸದ್ಭಕ್ತ್ಯಾ ವಾನರೋತ್ತಮೈಃ ॥ ೧ ॥
ತತಃ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ।
ಕೃತ್ವಾ ಪ್ರಾಭಾತಿಕಂ ಕರ್ಮ ಸಮಾಹೂಯಾಽಥ ಪುಷ್ಪಕಂ ॥ ೨ ॥
ಸುಗ್ರೀವೇಣ ಸುಷೇಣೇನ ತಾರೇಣ ಕುಮುದೇನ ಚ ।
ಅಂಗದೇನಾಽಥ ಕುಂಡೇನ ವಾಯುಪುತ್ರೇಣ ಧೀಮತಾ ॥ ೩ ॥
ಗವಾಕ್ಷೇಣ ನಲೇನೈವ ತಥಾ ಜಾಂಬವತಾಽಪಿ ಚ ।
ದಶಭಿರ್ವಾನರೈಃ ಸಾರ್ಧಂ ಸಮಾರೂಢಃ ಸ ಪುಷ್ಪಕೇ ॥ ೪ ॥
ತತಃ ಸಂಪ್ರಸ್ಥಿತಃ ಕಾಲೇ ಲಂಕಾಮುದ್ದಿಶ್ಯ ರಾಘವಃ ।
ಮನೋಜವೇನ ತೇನೈವ ವಿಮಾನೇನ ಸುವರ್ಚಸಾ ॥ ೫ ॥
ಸಂಪ್ರಾಪ್ತಸ್ತತ್ಕ್ಷಣಾದೇವ ಲಂಕಾಖ್ಯಾಂ ಚ ಮಹಾಪುರೀಂ ।
ವೀಕ್ಷಯಂಸ್ತಾನ್ ಪ್ರದೇಶಾಂಶ್ಚ ಯತ್ರ ಯುದ್ಧಂ ಪುರಾಽಭವತ್ ॥ ೬ ॥

---

### ಕನ್ನಡದ ಅನುವಾದ

#### ಸೇತುಮಧ್ಯೇ ಶ್ರೀರಾಮಕೃತರಾಮೇಶ್ವರಪ್ರತಿಷ್ಠಾವರ್ಣನ

೧—೫. ಸೂತನು ಹೇಳುತ್ತಾನೆ:—ಆ ರಾಘವನು ಹೀಗೆ ಆ ರಾತ್ರಿ ಆ ಸುಗ್ರೀವನ ಮನೆಯಲ್ಲಿ ಸಕಲ ವಾನರರಿಂದ ಭಕ್ತಿಯಿಂದ ಸೇವಿಸಲ್ಪಡುತ್ತ ಬೆಳಗ್ಗೆ ಸೂರ್ಯನು ಉದಯಿಸಲು ಬೆಳಗಿನ ಕಾರ್ಯಗಳನ್ನು ಮುಗಿಯಿಸಿ ಪುಷ್ಪಕ ವಿಮಾನವನ್ನು ಕರೆಯಿಸಿ ಅದರಲ್ಲಿ ಸುಗ್ರೀವ, ಸುಷೇಣ, ತಾರ, ಕುಮುದ, ಅಂಗದ, ಕುಂಡ, ಆಂಜನೇಯ, ಗವಾಕ್ಷ, ನಳ, ಜಾಂಬವಂತರೆಂಬ ಹತ್ತುಮಂದಿ ವಾನರರೊಡನೆ ಕುಳಿತು ಲಂಕೆಯನ್ನುದ್ದೇಶಿಸಿ ಮನೋವೇಗವುಳ್ಳ ತೇಜಸ್ವಿಯಾದ ಆ ವಿಮಾನದಿಂದ ಹೊರಟನು.

೬. ಅವನು ಹಿಂದೆ ಯುದ್ಧ ನಡೆದ ಪ್ರದೇಶಗಳನ್ನು ನೋಡುತ್ತ ಕೂಡಲೆ ಆ ಲಂಕಾ ಪಟ್ಟಣವನ್ನು ಸೇರಿದನು.

ತತೋ ವಿಭೀಷಣೋ ದೃಷ್ಟ್ವಾ ಪ್ರೋದ್ಯೋತಂ ಪುಷ್ಪಕೋದ್ಭವಂ ।
ರಾಮಂ ವಿಜ್ಞಾಯ ಸಂಪ್ರಾಪ್ತಂ ಪ್ರಹೃಷ್ಟಃ ಸಂಮುಖೋ ಯಯೌ ।
ಮಂತ್ರಿಭಿಃ ಸಕಲೈಃ ಸಾರ್ಧಂ ತಥಾ ಭೃತ್ಯೈಃ ಸುತೈರಪಿ ॥ ೭ ॥
ಅಥ ದೃಷ್ಟ್ವಾ ಸುದೂರಾತ್ತಂ ರಾಮದೇವಂ ವಿಭೀಷಣಃ ।
ಪಪಾತ ದಂಡವದ್ಭೂಮೌ ಜಯಶಬ್ದಮುದೀರಯನ್ ॥ ೮ ॥
ತಥಾಽಽಗತಂ ಪರಿಷ್ವಜ್ಯ ಸಾದರಂ ಸ ವಿಭೀಷಣಂ ।
ತೇನೈವ ಸಹಿತಃ ಪಶ್ಚಾಲ್ಲಂಕಾಂ ತಾಂ ಪ್ರವಿವೇಶ ಹ ॥ ೯ ॥
ವಿಭೀಷಣಗೃಹಂ ಪ್ರಾಪ್ಯ ತತ್ರ ಸಿಂಹಾಸನೇ ಶುಭೇ ।
ನಿವಿಷ್ಟೋ ವಾನರೈಸ್ತೈಶ್ಚ ಸಮಂತಾತ್ಪರಿವಾರಿತಃ ॥ ೧೦ ॥
ತತೋ ನಿವೇದಯಾಮಾಸ ತಸ್ಮೈ ಸರ್ವಂ ವಿಭೀಷಣಃ ।
ರಾಜ್ಯಂ ಪುತ್ರಕಲತ್ರಾದಿ ಯಚ್ಚಾಽನ್ಯದಪಿ ಕಿಂಚನ ॥ ೧೧ ॥
ತತಃ ಪ್ರೋವಾಚ ವಿನಯಾತ್ಕೃತಾಂಜಲಿಪುಟಃ ಸ್ಥಿತಃ ।
ಆದೇಶೋ ದೀಯತಾಂ ದೇವ ಬ್ರೂಹಿ ಕೃತ್ಯಂ ಕರೋಮಿ ಕಿಂ ॥ ೧೨ ॥
ಅಕಸ್ಮಾದೇವ ಸಂಪ್ರಾಪ್ತಃ ಕಿಮರ್ಥಂ ವದ ಮೇ ಪ್ರಭೋ ।
ಕಿಂ ನಾಽಽಯಾತಃ ಸ ಸೌಮಿತ್ರಿಸ್ತ್ವಯಾ ಸಾರ್ಧಂ ಚ ಜಾನಕೀ ॥ ೧೩ ॥

---

೭. ಅನಂತರ ವಿಭೀಷಣನು ಪುಷ್ಪಕ ವಿಮಾನದ ಕಾಂತಿಯನ್ನು ನೋಡಿ ರಾಮನು ಬಂದಿರುವನೆಂದರಿತು ಸಂತೋಷದಿಂದ ಸಕಲ ಮಂತ್ರಿ, ಭೃತ್ಯ, ಸುತರೊಡನೆ ಅವನನ್ನು ಎದುರುಗೊಂಡನು.

೮. ಬಳಿಕ ದೂರದಿಂದ ಆ ರಾಮನನ್ನು ವಿಭೀಷಣನು ನೋಡಿ ಜಯಕಾರವನ್ನು ಮಾಡುತ್ತ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿದನು.

೯. ಅವನು ಹಾಗೆ ಬಂದ ವಿಭೀಷಣನನ್ನು ಪ್ರೀತಿಯಿಂದ ಆಲಿಂಗಿಸಿ ಅವನೊಡನೆ ಲಂಕೆಯನ್ನು ಹೊಕ್ಕನು.

೧೦. ವಿಭೀಷಣನ ಮನೆಯನ್ನು ಸೇರಿ ಅಲ್ಲಿ ಮಂಗಳಕರವಾದ ಸಿಂಹಾಸನದಲ್ಲಿ ವಾನರ ಪರಿವಾರದಿಂದ ಸಹಿತನಾಗಿ ಕುಳಿತನು.

೧೧. ಅನಂತರ ವಿಭೀಷಣನು ಆ ರಾಮನಿಗೆ ರಾಜ್ಯ, ಪುತ್ರ, ಕಲತ್ರಾದಿಗಳ ವಿಷಯಗಳನ್ನೂ, ಇತರ ವಿಷಯಗಳನ್ನೂ ತಿಳಿಸಿದನು.

೧೨. ವಿನಯದಿಂದ ಕೈಮುಗಿದುಕೊಂಡು ಹೀಗೆಂದನು. "ಯಾವ ಕೆಲಸವನ್ನು ಮಾಡಲಿ. ಅಪ್ಪಣೆಮಾಡು.

೧೩. ಸ್ವಾಮಿ! ಅಕಸ್ಮಾತ್ತಾಗಿ ಇಲ್ಲಿಗೆ ಏಕೆ ಬಂದಿರುವೆ? ನಿನ್ನೊಡನೆ ಆ ಸೀತಾ ಲಕ್ಷ್ಮಣರು ಬರಲಿಲ್ಲವೇಕೆ?"

ಸೂತ ಉವಾಚ :—

ನಿವೇದ್ಯ ರಾಘವಸ್ತಸ್ಮೈ ಸರ್ವಂ ಗದ್ಗದಯಾ ಗಿರಾ ।
ಬಾಷ್ಪಪೂರಪ್ರತಿಚ್ಛನ್ನವಕ್ತ್ರೋ ಭೂಯೋ ವಿನಿಃಶ್ವಸನ್ ॥ ೧೪ ॥
ತತಃ ಪ್ರೋವಾಚ ಸತ್ಯಾರ್ಥಂ ವಿಭೀಷಣಕೃತೇ ಹಿತಂ ।
ತಂ ಚಾಽಪಿ ಶೋಕಸಂತಪ್ತಂ ಸಂಬೋಧ್ಯ ರಘುನಂದನಃ ॥ ೧೫ ॥
ಅಹಂ ರಾಜ್ಯಂ ಪರಿತ್ಯಜ್ಯ ಸಾಂಪ್ರತಂ ರಾಕ್ಷಸೋತ್ತಮ ।
ಯಾಸ್ಯಾಮಿ ತ್ರಿದಿವಂ ತೂರ್ಣಂ ಲಕ್ಷ್ಮಣೋ ಯತ್ರ ಸಂಸ್ಥಿತಃ ॥ ೧೬ ॥
ನ ತೇನ ರಹಿತೋ ಮರ್ತ್ಯೇ ಮುಹೂರ್ತಮಪಿ ಚೋತ್ಸಹೇ ।
ಸ್ಥಾತುಂ ರಾಕ್ಷಸ ಶಾರ್ದೂಲ ಬಾಂಧವೇನ ಮಹಾತ್ಮನಾ ॥ ೧೭ ॥
ಅಹಂ ಶಿಕ್ಷಾಪಣಾರ್ಥಾಯ ತವ ಪ್ರಾಪ್ತೋ ವಿಭೀಷಣ ।
ತಸ್ಮಾದವ್ಯಗ್ರಚಿತ್ತೇನ ಸಂಶೃಣುಷ್ವ ಕುರುಷ್ವ ಚ ॥ ೧೮ ॥
ಏಷಾ ರಾಜ್ಯೋದ್ಭವಾ ಲಕ್ಷ್ಮೀರ್ಮದಂ ಸಂಜನಯೇನ್ನೃಣಾಂ ।
ಮದ್ಯವತ್ಸ್ವಲ್ಪಬುದ್ಧೀನಾಂ ತಸ್ಮಾತ್ಕಾರ್ಯೋ ನ ಸತ್ವಯಾ ॥ ೧೯ ॥
ಶಕ್ರಾದ್ಯಾ ಅಮರಾಃ ಸರ್ವೇ ತ್ವಯಾ ಪೂಜ್ಯಾಃ ಸದೈವ ಹಿ ।
ಮಾನ್ಯಾಶ್ಚ ಯೇನ ತೇ ರಾಜ್ಯಂ ಜಾಯತೇ ಶಾಶ್ವತಂ ಸದಾ ॥ ೨೦ ॥

---

೧೪—೧೫. ಸೂತನು ಹೇಳುತ್ತಾನೆ:—ರಾಮನು ಆ ವಿಭೀಷಣನಿಗೆ ಗದ್ಗದ ಧ್ವನಿಯಿಂದ ಎಲ್ಲವನ್ನೂ ತಿಳಿಸಿ ಕಣ್ಣೀರಿನಿಂದ ಮುಚ್ಚಿದ ಮುಖವುಳ್ಳವನಾಗಿ ಪುನಃ ಪುನಃ ನಿಟ್ಟುಸಿರುಬಿಡುತ್ತ ದುಃಖಿತನಾದ ಆ ವಿಭೀಷಣನನ್ನು ಎಚ್ಚರಿಸಿ ನಿಜವಾದ ವಿಷಯವನ್ನು ಹೇಳಿದನು.

೧೬. "ರಾಕ್ಷಸವರ್ಯನೆ! ನಾನು ಈಗ ರಾಜ್ಯವನ್ನು ತ್ಯಜಿಸಿ ಲಕ್ಷ್ಮಣ ನಿರುವ ಸ್ವರ್ಗಕ್ಕೆ ಬೇಗನೆ ಹೋಗುವೆನು.

೧೭. ನಾನು ಬಂಧುವಾದ ಅವನಿಲ್ಲದೆ ಭೂಲೋಕದಲ್ಲಿ ಒಂದು ಮುಹೂರ್ತ ಕಾಲವೂ ಇರಲು ಇಷ್ಟಪಡುವುದಿಲ್ಲ.

೧೮. ವಿಭೀಷಣ! ನಾನು ನಿನಗೆ ಉಪದೇಶಮಾಡಲು ಬಂದಿರುವೆನು. ಆದುದರಿಂದ ಅದನ್ನು ಸಾವಧಾನದಿಂದ ಕೇಳು. ಮತ್ತು ಹಾಗೆಯೇ ಆಚರಿಸು.

೧೯. ಈ ರಾಜ್ಯ ಸಂಪತ್ತು ಹೆಂಡದಂತೆ ಅಲ್ಪಬುದ್ಧಿಗಳಾದ ಮಾನವ ರಿಗೆ ಮದವನ್ನುಂಟುಮಾಡುವುದು. ಆದುದರಿಂದ ನೀನು ಹಾಗೆ ಮಾಡ ಬೇಡ.

೨೦. ನೀನು ಇಂದ್ರಾದಿ ದೇವತೆಗಳನ್ನು ಯಾವಾಗಲೂ ಸನ್ಮಾನಿಸಿ ಪೂಜಿಸು. ಅದರಿಂದ ನಿನ್ನ ರಾಜ್ಯವು ಶಾಶ್ವತವಾಗಿರುವುದು.

ಮಮ ಸತ್ಯಂ ಭವೇದ್ವಾಕ್ಯಮೇತಸ್ಮಾದಹಮಾಗತಃ ।
ಪ್ರಾಪ್ತ ರಾಜ್ಯ ಪ್ರತಿಷ್ಠೋಽಪಿ ತವ ಭ್ರಾತಾ ಮಹಾಬಲಃ ॥ ೨೧ ॥
ವಿನಾಶಂ ಸಹಸಾ ಪ್ರಾಪ್ತಸ್ತಸ್ಮಾನ್ಮಾನ್ಯಾಃ ಸುರಾಃ ಸದಾ ।
ಯದಿ ಕಶ್ಚಿತ್ಸಮಾಯಾತಿ ಮಾನುಷೋಽತ್ರ ಕಥಂಚನ ।
ಮತ್ಕಾಯ ಏವದ್ರಷ್ಟವ್ಯಃ ಸರ್ವೈರೇವ ನಿಶಾಚರೈಃ ॥ ೨೨ ॥
ತಥಾ ನಿಶಾಚರಾಃ ಸರ್ವೇ ತ್ವಯಾ ವಾರ್ಯಾ ವಿಭೀಷಣ ।
ಮಮ ಸೇತುಂ ಸಮುಲ್ಲಂಘ್ಯ ಸ ಗಂತವ್ಯಂ ಧರಾತಲೇ ॥ ೨೩ ॥

ವಿಭೀಷಣ ಉವಾಚ :—

ಏವಂ ವಿಭೋ ಕರಿಷ್ಯಾಮಿ ತವಾಽಽದೇಶಮಸಂಶಯಂ ।
ಪರಂ ತ್ವಯಾ ಪರಿತ್ಯಕ್ತೇ ಮರ್ತ್ಯೇ ಮೇ ಜೀವಿತಂ ವ್ರಜೇತ್ ॥ ೨೪ ॥
ತಸ್ಮಾನ್ಮಾಮಪಿ ತತ್ರೈವ ತ್ವಂ ವಿಭೋ ನೇತುಮರ್ಹಸಿ ।
ಆತ್ಮನಾ ಸಹ ಯತ್ರಾಸ್ತೇ ಪ್ರಾಗ್ಗತೋ ಲಕ್ಷ್ಮಣಸ್ತವ ॥ ೨೫ ॥

ಶ್ರೀರಾಮ ಉವಾಚ :—

ಮಯಾ ತೇಽಕ್ಷಯಮಾದಿಷ್ಟಂ ರಾಜ್ಯಂ ರಾಕ್ಷಸ ಸತ್ತಮ ।
ತಸ್ಮಾನ್ನಾಽರ್ಹಸಿ ಮಾಂ ಕರ್ತುಂ ಮಿಥ್ಯಾಚಾರಂ ಕಥಂಚನ ॥ ೨೬ ॥

---

೨೧–೨೨. ನನ್ನ ಮಾತು ಸತ್ಯವಾದೀತು. ಈ ಕಾರಣದಿಂದಲೇ ನಾನು ಬಂದಿರುವೆನು. ನಿನ್ನ ಬಲಿಷ್ಠನಾದ ಅಣ್ಣನು ಸ್ಥಿರವಾದ ರಾಜ್ಯವನ್ನು ಪಡೆದಿದ್ದರೂ ಕೂಡಲೆ ನಾಶವಾದನು. ಆದುದರಿಂದ ದೇವತೆಗಳನ್ನು ಯಾವಾಗಲೂ ಪೂಜಿಸಬೇಕು. ಇಲ್ಲಿಗೆ ಯಾವನಾದರೂ ಮನುಷ್ಯನು ಬಂದರೆ ಅವನನ್ನು ಸಮಸ್ತ ರಾಕ್ಷಸರೂ ನನ್ನ ಶರೀರದಂತೆ ನೋಡಬೇಕು.

೨೩. ಸಕಲ ರಾಕ್ಷಸರು ನನ್ನ ಸೇತುವೆಯನ್ನು ದಾಟಿ ಭೂಮಿಗೆ ಬಾರದಂತೆ ನೀನು ಅವರನ್ನು ತಡೆಯಬೇಕು.''

೨೪. ವಿಭೀಷಣನು ಹೇಳುತ್ತಾನೆ:—ಸ್ವಾಮಿ ! ನಾನು ನಿನ್ನ ಆದೇಶವನ್ನು ನಿಶ್ಚಯವಾಗಿಯೂ ನಡೆಸುವೆನು. ಆದರೆ ನೀನು ಭೂಮಿಯನ್ನು ತ್ಯಜಿಸಿದರೆ ನನ್ನ ಪ್ರಾಣವು ಹೋಗುವುದು.

೨೫. ಆದುದರಿಂದ ನೀನು ಲಕ್ಷ್ಮಣನು ಹಿಂದೆ ಹೋದ ಸ್ಥಳಕ್ಕೆ ನಿನ್ನೊಡನೆ ನನ್ನನ್ನು ಕರೆದುಕೊಂಡು ಹೋಗು.

೨೬. ಶ್ರೀರಾಮನು ಹೇಳುತ್ತಾನೆ:—ರಾಕ್ಷಸವರ್ಯನೆ! ನಾನು ನಿನ್ನ ರಾಜ್ಯವು ಅಕ್ಷಯವಾಗುವುದೆಂದು ಹೇಳಿರುವೆನು. ಆದುದರಿಂದ ನನ್ನನ್ನು ಸುಳ್ಳು ಆಚಾರವುಳ್ಳವನನ್ನಾಗಿ ಮಾಡಬೇಡ.

ಅಹಮಸ್ಮಿನ್ ಸ್ವಕೇ ಸೇತೌ ಶಂಕರತ್ರಿತಯಂ ಶುಭಂ ।
ಸ್ಥಾಪಯಿಷ್ಯಾಮಿ ಕೀರ್ತ್ಯರ್ಥಂ ತತ್ಪೂಜ್ಯಂ ಭವತಾ ಸದಾ ।
ಭಕ್ತಿಮಾನ್ ಪ್ರತಿಸಂಧಾಯ ಯಾವಚ್ಚಂದ್ರಾರ್ಕತಾರಕಂ ॥ ೨೭ ॥
ಏವಮುಕ್ತ್ವಾ ರಘುಶ್ರೇಷ್ಠೋ ರಾಕ್ಷಸೇಂದ್ರಂ ವಿಭೀಷಣಂ ।
ದಶರಾತ್ರಂ ತತ್ರ ತಸ್ಥೌ ಲಂಕಾಯಾಂ ವಾನರೈಃ ಸಹ ॥ ೨೮ ॥
ಕುರ್ವನ್ ಯುದ್ಧಕಥಾಶ್ಚಿತ್ರಾ ಯಾಃ ಕೃತಾಃ ಪೂರ್ವಮೇವ ಹಿ ।
ಪಶ್ಯನ್ ಯುದ್ಧಸ್ಯ ಸರ್ವಾಣಿ ಸ್ಥಾನಾನಿ ವಿವಿಧಾನಿ ಚ ॥ ೨೯ ॥
ಶಂಸಮಾನಃ ಪ್ರವೀರಾಂಸ್ತಾನ್ರಾಕ್ಷಸಾನ್ಬಲವತ್ತರಾನ್ ।
ಕುಂಭಕರ್ಣೇಂದ್ರಜಿತ್ಪೂರ್ವಾನ್ ಸಂಖ್ಯೇ ಚಾಽಭಿಮುಖಾಽಽಗತಾನ್ ॥
ತತಶ್ಚೈಕಾದಶೇ ಪ್ರಾಪ್ತೇ ದಿವಸೇ ರಘುನಂದನಃ ।
ಪುಷ್ಪಕಂ ತತ್ಸಮಾರುಹ್ಯ ಪ್ರಸ್ಥಿತಃ ಸ್ವಪುರೀಂ ಪ್ರತಿ ॥ ೩೧ ॥
ವಾನರೈಸ್ತೈಃ ಸಮೋಪೇತೋ ವಿಭೀಷಣಪುರಸ್ಸರಃ ।
ತತಃ ಸಂಸ್ಥಾಪಯಾಮಾಸ ಸೇತುಪ್ರಾಂತೇ ಮಹೇಶ್ವರಂ ॥ ೩೨ ॥
ಮಧ್ಯೇ ಚೈವ ತಥಾಽಽದೌ ಚ ಶ್ರದ್ಧಾಪೂತೇನ ಚೇತಸಾ ।
ರಾಮೇಶ್ವರತ್ರಯಂ ರಾಮ ಏವಂ ತತ್ರ ವಿಧಾಯ ಸಃ ॥ ೩೩ ॥
ಸೇತುಬಂಧಂ ತಥಾಽಽಸಾದ್ಯ ಪ್ರಸ್ಥಿತಃ ಸ್ವಗೃಹಂ ಪ್ರತಿ ।
ತಾವದ್ವಿಭೀಷಣೇನೋಕ್ತಃ ಪ್ರಣಿಪತ್ಯ ಮುಹುರ್ಮುಹುಃ ॥ ೩೪ ॥

---

೨೭. ನಾನು ನನ್ನ ಈ ಸೇತುವೆಯಲ್ಲಿ ಮೂರು ಶಂಕರ ಲಿಂಗಗಳನ್ನು ಕೀರ್ತಿಗಾಗಿ ಪ್ರತಿಷ್ಠೆಮಾಡುವೆನು. ನೀನು ಆ ಲಿಂಗಗಳನ್ನು ಭಕ್ತಿಯಿಂದ ಚಂದ್ರ, ಸೂರ್ಯ, ನಕ್ಷತ್ರಗಳಿರುವವರೆಗೆ ಆರಾಧಿಸು.

೨೮–೩೦. ರಘೂತ್ತಮನಾದ ರಾಮನು ರಾಕ್ಷಸಶ್ರೇಷ್ಠನಾದ ವಿಭೀಷಣನನ್ನು ಕುರಿತು ಹೀಗೆ ಹೇಳಿ ಆ ಲಂಕೆಯಲ್ಲಿ ತಾನು ಹಿಂದೆ ಮಾಡಿದ ಯುದ್ಧದ ಕಥೆಗಳನ್ನು ಹೇಳುತ್ತ ಸಕಲ ಸ್ಥಳಗಳನ್ನೂ ನೋಡುತ್ತ, ಅಭಿಮುಖವಾಗಿ ಯುದ್ಧ ಮಾಡಿದ ಬಲಿಷ್ಠರಾದ ಕುಂಭಕರ್ಣ, ಇಂದ್ರಜಿತ್ ಮೊದಲಾದ ರಾಕ್ಷಸೋತ್ತಮರನ್ನು ಹೊಗಳುತ್ತ ಹತ್ತು ದಿನಗಳಿದ್ದನು.

೩೧. ಹನ್ನೊಂದನೆಯ ದಿನ ರಾಮಚಂದ್ರನು ಪುಷ್ಪಕ ವಿಮಾನವನ್ನೇರಿ ತನ್ನ ಪಟ್ಟಣಕ್ಕೆ ಹೊರಟನು.

೩೨–೩೪. ಅವನು ವಾನರರಿಂದಲೂ, ವಿಭೀಷಣನಿಂದಲೂ ಕೂಡಿ ಸೇತುವೆಯನ್ನು ಕುರಿತು ಹೋಗಿ ಅದರ ಆದಿ, ಮಧ್ಯ, ಅಂತ್ಯಗಳಲ್ಲಿ ಶ್ರದ್ಧೆಯಿಂದ ಮೂರು ರಾಮೇಶ್ವರ ಲಿಂಗಗಳನ್ನು ಪ್ರತಿಷ್ಠೆಮಾಡಿ ಸೇತುಬಂಧವನ್ನು ಹೊಂದಿ ತನ್ನ ಮನೆಗೆ ಹೊರಟನು. ಅಷ್ಟರಲ್ಲಿ ವಿಭೀಷಣನು ಬಾರಿಬಾರಿಗೂ ವಂದಿಸಿ ಇಂತೆಂದನು.

ವಿಭೀಷಣ ಉವಾಚ :—

ಅನೇನ ಸೇತುಮಾರ್ಗೇಣ ರಾಮೇಶ್ವರ ದಿದೃಕ್ಷಯಾ ।
ಮಾನವಾ ಆಗಮಿಷ್ಯಂತಿ ಕೌತುಕಾಚ್ಛ್ರದ್ಧಯಾನ್ವಿತಾಃ ॥ ೩೫ ॥
ರಾಕ್ಷಸಾನಾಂ ಮಹಾರಾಜ ಜಾತಃ ಕ್ರೂರತಮಾ ಮತಾ ।
ದೃಷ್ಟ್ವಾ ಮಾನುಷಮಾಯಾಂತಂ ಮಾಂಸಸ್ಯೇಚ್ಛಾ ಪ್ರಜಾಯತೇ ॥ ೩೬ ॥
ಯದಾ ಕಂಚಿಜ್ಜನಂ ಕಶ್ಚಿದ್ರಾಕ್ಷಸೋ ಭಕ್ಷಯಿಷ್ಯತಿ ।
ಆಜ್ಞಾಭಂಗೋ ಧ್ರುವಂ ಭಾವೀ ಮಮ ಭಕ್ತಿರತಸ್ಯ ಚ ॥ ೩೭ ॥
ಭವಿಷ್ಯಂತಿ ಕಲೌ ಕಾಲೇ ದರಿದ್ರಾ ನೃಪಮಾನವಾಃ ।
ತೇಽತ್ರ ಸ್ವರ್ಣಸ್ಯ ಲೋಭೇನ ದೇವತಾದರ್ಶನಾಯ ಚ ॥ ೩೮ ॥
ನಿತ್ಯಂ ಚೈವಾಽಽಗಮಿಷ್ಯಂತಿ ತ್ಯಕ್ತ್ವಾ ರಕ್ಷಃ ಕೃತಂ ಭಯಂ ।
ತೇಷಾಂ ಯದಿ ವಧಂ ಕಶ್ಚಿದ್ರಾಕ್ಷಸಾತ್ಪ್ರಾಪಯಿಷ್ಯತಿ ॥ ೩೯ ॥
ಭವಿಷ್ಯತಿ ಚ ಮೇ ದೋಷಃ ಪ್ರಭುದ್ರೋಹೋದ್ಭವಃ ಪ್ರಭೋ ।
ತಸ್ಮಾತ್ಕಂಚಿದುಪಾಯಂ ತ್ವಂ ಚಿಂತಯಸ್ವ ಯಥಾ ಮಮ ॥
ಆಜ್ಞಾಭಂಗಕೃತಂ ಪಾಪಂ ಜಾಯತೇ ನ ಗುರೋ ಕ್ವಚಿತ್ ॥ ೪೦ ॥
ತಸ್ಯ ತದ್ವಚನಂ ಶ್ರುತ್ವಾ ತತಃ ಸ ರಘುಸತ್ತಮಃ ।
ಬಾಢಮಿತ್ಯೇವ ಚೋಕ್ತ್ವಾಽಥ ಚಾಪಂ ಸಜ್ಜೀಚಕಾರ ಸಃ ॥ ೪೧ ॥

---

೩೫. ವಿಭೀಷನು ಹೇಳುತ್ತಾನೆ:—ಮಾನವರು ಈ ಸೇತುಮಾರ್ಗದಿಂದ ರಾಮೇಶ್ವರನನ್ನು ನೋಡಲು ಕುತೂಹಲ ಶ್ರದ್ಧೆಗಳಿಂದ ಬರುವರು.

೩೬. ಮಹಾರಾಜ! ರಾಕ್ಷಸಜಾತಿಯು ಅತಿ ಕಠಿನವಾದುದು. ಅವರಿಗೆ ಬರುತ್ತಿರುವ ಮನುಷ್ಯನನ್ನು ನೋಡಿ ಮಾಂಸದ ಆಶೆಯು ಉಂಟಾಗುವುದು.

೩೭. ಒಬ್ಬ ರಾಕ್ಷಸನು ಯಾವನಾದರೂ ಒಬ್ಬ ಮನುಷ್ಯನನ್ನು ಭಕ್ಷಿಸಿದರೆ ಭಕ್ತನಾದ ನನಗೆ ನಿನ್ನ ಆಜ್ಞಾಭಂಗವಾಗುವುದು.

೩೮–೪೦. ಮುಂದೆ ಕಲಿಕಾಲದಲ್ಲಿ ರಾಜರೂ, ಮನುಷ್ಯರೂ ಬಡವರಾಗುವರು. ಅವರು ಸುವರ್ಣದ ಆಶೆಯಿಂದಲೂ, ದೇವತಾ ದರ್ಶನಕ್ಕಾಗಿಯೂ ಯಾವಾಗಲೂ ರಾಕ್ಷಸರ ಭಯವಿಲ್ಲದೆ ಇಲ್ಲಿಗೆ ಬರುವರು. ಅವರಲ್ಲಿ ಯಾವನಾದರೂ ಒಬ್ಬ ಮನುಷ್ಯನು ರಾಕ್ಷಸನಿಂದ ನಾಶವಾದರೆ ನನಗೆ ಪ್ರಭುದ್ರೋಹದಿಂದುಂಟಾದ ದೋಷವು ಸಂಭವಿಸುವುದು. ಆದುದರಿಂದ ನನಗೆ ನಿನ್ನ ಆಜ್ಞೆಯ ಭಂಗದಿಂದುಂಟಾದ ಪಾಪವು ಸಂಭವಿಸದಂತೆ ಒಂದುಪಾಯವನ್ನು ಆಲೋಚಿಸು.

೪೧. ರಾಘವೇಂದ್ರನೂ ಅವನ ಆ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿ ಬಿಲ್ಲನ್ನು ಸಿದ್ಧಗೊಳಿಸಿದನು.

ತತಸ್ತಂ ಕೀರ್ತಿರೂಪಂ ಚ ಮಧ್ಯದೇಶೇ ರಘೂತ್ತಮಃ ।
ಅಚ್ಛಿನ್ನನಿಶಿತೈರ್ಬಾಣೈರ್ದಶಯೋಜನ ವಿಸ್ತೃತಂ ॥ ೪೨ ॥
ತೇನ ಸಂಸ್ಥಾಪಿತೋ ಯತ್ರ ಶಿಖರೇ ಶಂಕರಃ ಸ್ವಯಂ ।
ಶಿಖರಂ ತತ್ಸಲಿಂಗಂ ಚ ಪತಿತಂ ವಾರಿಧೇರ್ಜಲೇ ॥ ೪೩ ॥
ಏವಂ ಮಾರ್ಗಮಗಮ್ಯಂ ತಂ ಕೃತ್ವಾ ಸೇತುಸಮುದ್ಭವಂ ।
ವಾನರೈ ರಾಕ್ಷಸೈಃ ಸಾರ್ಧಂ ತತಃ ಸಂಪ್ರಸ್ಥಿತೋ ಗೃಹಂ ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸೇತುಮಧ್ಯೇ ಶ್ರೀರಾಮಕೃತ ರಾಮೇಶ್ವರಪ್ರತಿಷ್ಠಾವರ್ಣನಂ"
ನಾಮೈಕೋತ್ತರಶತತಮೋಽಧ್ಯಾಯಃ

---

೪೨. ಬಳಿಕ ರಾಮನು ತನ್ನ ಕೀರ್ತಿರೂಪವಾದ ಹತ್ತುಯೋಜನ ವಿಸ್ತಾರವಾದ ಆ ಸೇತುವೆಯನ್ನು ಹರಿತವಾದ ಬಾಣಗಳಿಂದ ನಡುವೆ ಕತ್ತರಿಸಿದನು.

೪೩. ಅವನು ಅದರ ಶಿಖರದಲ್ಲಿ ಸ್ಥಾಪಿಸಿದ ಶಿವಲಿಂಗವೂ, ಆ ಶಿಖರವೂ ಸಮುದ್ರದ ನೀರಿನಲ್ಲಿ ಬಿದ್ದುವು.

೪೪. ರಾಮನು ಹೀಗೆ ಆ ಸೇತುಮಾರ್ಗವನ್ನು ಅಗಮ್ಯವಾಗಿ ಮಾಡಿ ರಾಕ್ಷಸರಿಂದಲೂ, ವಾನರರಿಂದಲೂ ಸಹಿತನಾಗಿ ತನ್ನ ಮನೆಗೆ ಹೊರಟನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸೇತುಮಧ್ಯೇ ಶ್ರೀರಾಮಕೃತರಾಮೇಶ್ವರಪ್ರತಿಷ್ಠಾವರ್ಣನ"ವೆಂಬ
ನೂರೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವ್ಯುತ್ತರಶತತಮೋಽಧ್ಯಾಯಃ

### ಶ್ರೀರಾಮಚಂದ್ರೇಣ ಪಾಟಕೇಶ್ವರಕ್ಷೇತ್ರೇ ಲಕ್ಷ್ಮಣಾದಿ ಪ್ರಾಸಾದಪಂಚಕನಿರ್ಮಾಣ ಪ್ರತಿಷ್ಠಾಪನವರ್ಣನಂ.

ಸೂತ ಉವಾಚ :—

ಸಂಪ್ರಸ್ಥಿತಸ್ಯ ರಾಮಸ್ಯ ಸ್ವಕೀಯಂ ಸದನಂ ಪ್ರತಿ ।
ಯದಾಶ್ಚರ್ಯಮಭೂನ್ಮಾರ್ಗೇ ಶ್ರೂಯತಾಂ ದ್ವಿಜಸತ್ತಮಾಃ ॥ ೧ ॥
ನಭೋಮಾರ್ಗೇಣ ಗಚ್ಛತ್ತದ್ವಿಮಾನಂ ಪುಷ್ಪಕಂ ದ್ವಿಜಾಃ ।
ಅಸ್ಮಾಕಂ ದೇವಸಂಜಾತಂ ನಿಶ್ಚಲಂ ಚಿತ್ರಕೃನ್ನೃಣಾಂ ॥ ೨ ॥
ಅಥ ತನ್ನಿಶ್ಚಲಂ ದೃಷ್ಟ್ವಾ ಪುಷ್ಪಕಂ ಗಗನಾಂಗಣೇ ।
ರಾಮೋ ವಾಯುಸುತಸ್ಯೇದಂ ವಚನಂ ಪ್ರಾಹ ವಿಸ್ಮಯಾತ್ ॥ ೩ ॥
ತ್ವಂ ಗತ್ವಾ ಮಾರುತೇ ಶೀಘ್ರಂ ಭೂಮಿಂ ಜಾನೀಹಿ ಕಾರಣಂ ।
ಕಿಮೇತತ್ಪುಷ್ಪಕಂ ವ್ಯೋಮ್ನಿ ನಿಶ್ಚಲತ್ವಮುಪಾಗತಂ ॥ ೪ ॥
ಕದಾಚಿದ್ಧಾರ್ಯತೇ ನಾಽಸ್ಯ ಗತಿಃ ಕುತ್ರಾಽಪಿ ಕೇನಚಿತ್ ।
ಬ್ರಹ್ಮದೃಷ್ಟಿಪ್ರಸೂತಸ್ಯ ಪುಷ್ಪಕಸ್ಯ ಮಹಾತ್ಮನಃ ॥ ೫ ॥

---

### ಕನ್ನಡದ ಅನುವಾದ

#### ಲಕ್ಷ್ಮಣಾದಿಪಂಚಪ್ರಾಸಾದನಿರ್ಮಾಣವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ಶ್ರೀರಾಮನು ತನ್ನ ಅರಮನೆಗೆ ಪ್ರಯಾಣಮಾಡುತ್ತಿರಲು ದಾರಿಯಲ್ಲಿ ಏನು ಅದ್ಭುತ ವಿಷಯವು ನಡೆಯಿತೆಂಬುದನ್ನು ಕೇಳಿರಿ.

೨. ಆ ರಾಮನ ಪುಷ್ಪಕ ವಿಮಾನವು ಆಕಾಶಮಾರ್ಗದಿಂದ ತೆರಳುತ್ತ ಆಕಸ್ಮಿಕವಾಗಿ ಅಲ್ಲಾಡದೆ ನಿಂತು ಜನರಿಗೆ ಆಶ್ಚರ್ಯವನ್ನುಂಟುಮಾಡಿತು.

೩. ಅನಂತರ ರಾಮನು ಆ ವಿಮಾನವು ಮುಂದೆ ಸಾಗದೆ ನಿಂತಿರುವುದನ್ನು ನೋಡಿ ಆಶ್ಚರ್ಯದಿಂದ ಆಂಜನೇಯನನ್ನು ಕುರಿತು ಇಂತೆಂದನು.

೪. "ಆಂಜನೇಯ! ನೀನು ತ್ವರೆಯಾಗಿ ಭೂಮಿಗಿಳಿದು ಈ ಪುಷ್ಪಕ ವಿಮಾನವು ಏತಕ್ಕೆ ನಿಂತಿದೆ ಎಂಬುದರ ಕಾರಣವನ್ನು ತಿಳಿ.

೫. ಬ್ರಹ್ಮದೃಷ್ಟಿಯಿಂದುಂಟಾದ ಈ ವಿಮಾನವು ಮುಂದಕ್ಕೆ ಹೋಗದಂತೆ ಯಾರಾದರೂ ತಡೆಯುತ್ತಿದ್ದಾರೆಯೆ? ನೋಡು."

ಬಾಧನಮಿತ್ಯೇವ ಸ ಪ್ರೋಚ್ಯ ಹನೂಮಾನ್ ಧರಣೀತಲಂ ।
ಗತ್ವಾ ಶೀಘ್ರಂ ಪುನಃ ಪ್ರಾಹ ಪ್ರಣಿಪತ್ಯ ರಘೂತ್ತಮಂ ॥ ೬ ॥
ಅತ್ರಾಽಸ್ತ್ಯಧಃ ಶುಭಂ ಕ್ಷೇತ್ರಂ ಹಾಟಕೇಶ್ವರಸಂಜ್ಞಿತಂ ।
ಯತ್ರ ಸಾಕ್ಷಾಜ್ಜಗತ್ಕರ್ತಾ ಸ್ವಯಂ ಬ್ರಹ್ಮಾ ವ್ಯವಸ್ಥಿತಃ ॥ ೭ ॥
ಆದಿತ್ಯಾ ವಸವೋ ರುದ್ರಾ ದೇವವೈದ್ಯೌ ತಥಾಶ್ವಿನೌ ।
ತತ್ರ ತಿಷ್ಠಂತಿ ತೇ ಸರ್ವೇ ತಥಾಽನ್ಯೇ ಸಿದ್ಧಕಿನ್ನರಾಃ ॥ ೮ ॥
ಏತಸ್ಮಾತ್ಕಾರಣಾನ್ನೈತದತಿಕ್ರಾಮತಿ ಪುಷ್ಪಕಂ ।
ತತ್ಕ್ಷೇತ್ರಂ ನಿಶ್ಚಲೀಭೂತಂ ಸತ್ಯಮೇತನ್ಮಯೋದಿತಂ ॥ ೯ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಕೌತೂಹಲಸಮನ್ವಿತಃ ।
ಪುಷ್ಪಕಂ ಪ್ರೇರಯಾಮಾಸ ತತ್ಕ್ಷೇತ್ರಂ ಪ್ರತಿ ರಾಘವಃ ॥ ೧೦ ॥
ಸರ್ವೈಸ್ತೈರ್ವಾನರೈಃ ಸಾರ್ಧಂ ರಾಕ್ಷಸೈಶ್ಚ ಪೃಥಗ್ವಿಧೈಃ ।
ಅವತೀರ್ಯ ತತೋಽಹೃಷ್ಟಸ್ತಸ್ಮಿನ್ ಕ್ಷೇತ್ರೇ ಸಮಂತತಃ ॥ ೧೧ ॥
ತೀರ್ಥಮಾಲೋಕಯಾಮಾಸ ಪುಣ್ಯಾನ್ಯಾಯತನಾನಿ ಚ ।
ತತೋ ವಿಲೋಕಯಾಮಾಸ ಪಿತಾಮಹವಿನಿರ್ಮಿತಾಂ ।
ಚಾಮುಂಡಾಂ ತತ್ರ ಚ ಸ್ನಾತ್ವಾ ಕುಂಡೇ ಕಾಮಪ್ರದಾಯಿನಿ ॥ ೧೨ ॥

---

೬. ಆಗ ಆಂಜನೇಯನು ಶ್ರೀರಾಮನ ಅಪ್ಪಣೆಯಂತೆ ಭೂಮಿಗಿಳಿದು ಅಲ್ಲಿಂದ ಮರಳಿ ಮೇಲಕ್ಕೆ ಬಂದು ನಮಸ್ಕರಿಸಿ ಇಂತೆಂದನು.

೭–೮. "ಸ್ವಾಮಿ! ಇಲ್ಲಿ ಕೆಳಗೆ ಮಂಗಳಕರವಾದ ಹಾಟಕೇಶ್ವರವೆಂಬ ಒಂದು ಕ್ಷೇತ್ರವಿರುವುದು. ಅಲ್ಲಿ ಜಗನ್ನಿರ್ಮಾಪಕನಾದ ಬ್ರಹ್ಮನೂ, ಆದಿತ್ಯರೂ, ವಸುಗಳೂ, ರುದ್ರರೂ, ಅಶ್ವಿನೀ ದೇವತೆಗಳೂ, ಇತರ ಸಿದ್ಧಕಿನ್ನರರೂ ವಾಸಿಸುತ್ತಿರುವರು.

೯. ಈ ಕಾರಣದಿಂದಲೇ ಈ ಪುಷ್ಪಕ ವಿಮಾನವು ಮುಂದಕ್ಕೆ ಹೋಗುವುದಿಲ್ಲ. ಆ ಕ್ಷೇತ್ರವು ನಿಶ್ಚಲವಾಗಿದೆ. ನಾನು ಹೇಳಿರುವ ಈ ಮಾತು ನಿಜವಾದುದು."

೧೦. ಸೂತನು ಹೇಳುತ್ತಾನೆ:—ರಾಮನು ಆಂಜನೇಯನ ಆ ಮಾತನ್ನು ಕೇಳಿ ಕುತೂಹಲದಿಂದ ಆ ಕ್ಷೇತ್ರವನ್ನು ಕುರಿತು ವಿಮಾನವನ್ನು ಪ್ರೇರಿಸಿದನು.

೧೧–೧೨. ಅವನು ಸಮಸ್ತ ಕಪಿಗಳೊಡನೆಯೂ, ರಾಕ್ಷಸರೊಡನೆಯೂ ಆ ಕ್ಷೇತ್ರದಲ್ಲಿಳಿದು ಸಂತೋಷದಿಂದ ಸುತ್ತಲೂ ಇರುವ ತೀರ್ಥಗಳನ್ನೂ, ದೇವತೆಗಳನ್ನೂ ಕಂಡನು. ಬಳಿಕ ಬ್ರಹ್ಮನು ನಿರ್ಮಿಸಿರುವ ಚಾಮುಂಡೆಯನ್ನೂ ನೋಡಿ ಇಷ್ಟಾರ್ಥವನ್ನು ನೀಡುವ ಅಲ್ಲಿರುವ ಕೊಳದಲ್ಲಿ ಮಿಂದನು.

ತತೋ ವಿಲೋಕಯಾಮಾಸ ಪಿತ್ರಾ ತಸ್ಯ ವಿನಿರ್ಮಿತಂ ।
ರಾಮಃ ಸ್ವಮಿವ ದೇವೇಶಂ ದೃಷ್ಟ್ವಾ ದೇವಂ ಚತುರ್ಭುಜಂ ॥ ೧೩ ॥
ರಾಜವಾಪ್ಯಾಂ ಶುಚಿರ್ಭೂತ್ವಾ ಸ್ನಾತ್ವಾ ತರ್ಪ್ಯ ನಿಜಾನ್ ಪಿತೄನ್ ।
ತತಶ್ಚ ಚಿಂತಯಾಮಾಸ ಕ್ಷೇತ್ರೇಽತ್ರ ಬಹುಪುಣ್ಯದೇ ॥ ೧೪ ॥
ಲಿಂಗಂ ಸಂಸ್ಥಾಪಯಾಮ್ಯೇವ ಯದ್ವತ್ತಾತೇನ ಕೇಶವಃ ।
ತಥಾ ಮೇ ದಯಿತೋ ಭ್ರಾತಾ ಲಕ್ಷ್ಮಣೋ ದಿವಮಾಶ್ರಿತಃ ॥ ೧೫ ॥
ಯಸ್ತಸ್ಯ ನಾಮನಿರ್ದಿಷ್ಟಂ ಲಿಂಗಂ ಸಂಸ್ಥಾಪಯಾಮ್ಯಹಂ ।
ತಂ ಚಾಪಿ ಮೂರ್ತಿಮಂತಂ ಚ ಸೀತಯಾ ಸಹಿತಂ ಶುಭಂ ।
ಕ್ಷೇತ್ರೇ ಮೇಧ್ಯತಮೇ ಚಾತ್ರ ತಥಾತ್ಮಾನಂ ದೃಷನ್ಮಯಂ ॥ ೧೬ ॥
ಏವಂ ಸ ನಿಶ್ಚಯಂ ಕೃತ್ವಾ ಪ್ರಾಸಾದಾನಾಂ ಚ ಪಂಚಕಂ ।
ಸ್ಥಾಪಯಾಮಾಸ ಸದ್ಭಕ್ತ್ಯಾ ರಾಮಃ ಶಸ್ತ್ರಭೃತಾಂ ವರಃ ॥ ೧೭ ॥
ತತಸ್ತೇ ವಾನರಾಃ ಸರ್ವೇ ರಾಕ್ಷಸಾಶ್ಚ ವಿಶೇಷತಃ ।
ಲಿಂಗಾನಿ ಸ್ಥಾಪಯಾಮಾಸುಃ ಸ್ವಾನಿಸ್ವಾನಿ ಪೃಥಕ್ ಪೃಥಕ್ ॥ ೧೮ ॥
ತತ್ರೈವ ಸುಚಿರಂ ಕಾಲಂ ಸ್ಥಿತಾಸ್ತೇ ಶ್ರದ್ಧಯಾನ್ವಿತಾಃ ।
ತತೋ ಜಗ್ಮುರಯೋಧ್ಯಾಯಾಂ ವಿಮಾನವರಮಾಶ್ರಿತಾಃ ॥ ೧೯ ॥
ಏತದ್ವಃ ಸರ್ವಮಾಖ್ಯಾತಂ ಯಥಾ ರಾಮೇಶ್ವರೋ ಮಹಾನ್ ।
ಲಕ್ಷ್ಮಣೇಶ್ವರ ಸಂಯುಕ್ತಸ್ತಸ್ಮಿಂಸ್ತೀರ್ಥೇ ಸುಶೋಭನೇ ॥ ೨೦ ॥

---

೧೩. ಅನಂತರ ಅವನು ಅಲ್ಲಿ ತನ್ನ ತಂದೆಯು ಪ್ರತಿಷ್ಠಿಸಿರುವ ತನ್ನಂತಿರುವ ನಾರಾಯಣಮೂರ್ತಿಯನ್ನು ಕಂಡನು.

೧೪–೧೬. ಬಳಿಕ ಶ್ರೀರಾಮನು ಮಿಂದು ಶುದ್ಧನಾಗಿ ಪಿತೃಗಳಿಗೆ ತರ್ಪಣ ಮಾಡಿ ಪುಣ್ಯಕರವಾದ ಈ ಕ್ಷೇತ್ರದಲ್ಲಿ ನನ್ನ ತಂದೆಯಂತೆ ನಾನೂ ನನ್ನ ಪ್ರಿಯ ಸಹೋದರನೂ, ಸ್ವರ್ಗಸ್ಥನೂ ಆದ ಲಕ್ಷ್ಮಣನ ಮೂರ್ತಿಯನ್ನು ಪ್ರತಿಷ್ಠಿಸುವೆನು. ಅಂತೆಯೇ ಸೀತೆಯೊಡನೆ ನನ್ನ ಕಲ್ಲಿನ ಪ್ರತಿಮೆಯನ್ನೂ ಸ್ಥಾಪಿಸುವೆನು, ಎಂದು ಆಲೋಚಿಸಿದನು.

೧೭–೧೮. ಹೀಗೆ ರಾಮನು ನಿಶ್ಚಯಿಸಿ ಭಕ್ತಿಯಿಂದ ಐದು ಗುಡಿಗಳನ್ನು ನಿರ್ಮಿಸಿದನು. ಬಳಿಕ ಸಕಲ ವಾನರರೂ, ರಾಕ್ಷಸರೂ ಅಲ್ಲಿ ತಮ್ಮ ತಮ್ಮ ಲಿಂಗಗಳನ್ನು ಪ್ರತ್ಯೇಕವಾಗಿ ಪ್ರತಿಷ್ಠೆ ಮಾಡಿದರು.

೧೯. ಅನಂತರ ಅವರೆಲ್ಲರೂ ಅಲ್ಲಿ ಭಕ್ತಿಯಿಂದ ಬಹುಕಾಲ ವಾಸಿಸಿ ವಿಮಾನದಲ್ಲಿ ಕುಳಿತು ಅಯೋಧ್ಯೆಗೆ ತೆರಳಿದರು.

೨೦. ದ್ವಿಜವರ್ಯರೆ! ಆ ಮಂಗಳಕರವಾದ ತೀರ್ಥದಲ್ಲಿ ಶ್ರೀರಾಮೇಶ್ವರನು ಲಕ್ಷ್ಮಣೇಶ್ವರನೊಡನೆ ಹೇಗೆ ನೆಲಸಿದನೆಂಬುದನ್ನು ನಿಮಗೆ ಹೇಳಿದ್ದೇನೆ.

ಯಸ್ತೌ ಪ್ರಾತಃ ಸಮುತ್ಥಾಯ ಸದಾ ಪಶ್ಯತಿ ಮಾನವಃ ।
ಸ ಕೃತ್ಸ್ನಂ ಫಲಮಾಪ್ನೋತಿ ಶ್ರುತೇ ರಾಮಾಯಣೇಽತ್ರ ಯತ್ ॥ ೨೧ ॥
ಅಥಾಽಷ್ಟಮ್ಯಾಂ ಚತುರ್ದಶ್ಯಾಂ ಯೋ ರಾಮಚರಿತಂ ಪಠೇತ್ ।
ತದಗ್ರೇ ವಾಜಿಮೇಧಸ್ಯ ಸ ಕೃತ್ಸ್ನಂ ಲಭತೇ ಫಲಂ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶ್ರೀರಾಮಚಂದ್ರೇಣ ಹಾಟಕೇಶ್ವರಕ್ಷೇತ್ರೇ ಲಕ್ಷ್ಮಣಾದಿ ಪ್ರಾಸಾದಪಂಚಕ
ನಿರ್ಮಾಣಪ್ರತಿಷ್ಠಾಪನವರ್ಣನಂ" ನಾಮ
ದ್ವ್ಯುತ್ತರಶತತಮೋಽಧ್ಯಾಯಃ

---

೨೧. ಪ್ರಾತಃಕಾಲದಲ್ಲಿ ಎದ್ದು ಆ ರಾಮಲಕ್ಷ್ಮಣೇಶ್ವರರನ್ನು ಪ್ರತಿದಿನವೂ ದರ್ಶನಗೈಯುವ ಮಾನವನು ರಾಮಾಯಣಶ್ರವಣದ ಸಂಪೂರ್ಣ ಪುಣ್ಯವನ್ನು ಪಡೆಯುವನು.

೨೨. ಆ ಮೂರ್ತಿಗಳ ಮುಂದೆ ಅಷ್ಟಮಿ, ಚತುರ್ದಶೀ ದಿನಗಳಲ್ಲಿ ರಾಮಾಯಣವನ್ನು ಪಠಿಸುವ ಮಾನವನು ಅಶ್ವಮೇಧಯಾಗ ಮಾಡಿದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಲಕ್ಷ್ಮಣಾದಿ ಪ್ರಾಸಾದಿಪಂಚನಿರ್ಮಾಣವರ್ಣನ"ವೆಂಬ
ನೂರೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ತ್ರ್ಯಧಿಕಶತತಮೋಽಧ್ಯಾಯಃ

## ಆನರ್ತಕತೀರ್ಥಕೂಪಿಕಾಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಆಶ್ಚರ್ಯಂ ಸೂತಪುತ್ರೈತದ್ಯತ್ತ್ವಯಾ ಪರಿಕೀರ್ತಿತಂ ।
ಯತ್ಸ್ಥಾಪಿತಾನಿ ಲಿಂಗಾನಿ ರಾಕ್ಷಸೈರಪಿ ವಾನರೈಃ ॥ ೧ ॥
ತಸ್ಮಾದ್ವಿಸ್ತರತೋ ಬ್ರೂಹಿ ಯತ್ರ ಯತ್ರ ಯಥಾ ಯಥಾ ।
ತೈಃಸ್ಥಾಪಿತಾನಿ ಲಿಂಗಾನಿ ಯೇಷು ಸ್ಥಾನೇಷು ಸೂತಜ ॥ ೨ ॥

ಸೂತ ಉವಾಚ:—

ಸುಗ್ರೀವಃ ಸಂಭ್ರಮಿತ್ವಾಽಥ ಕ್ಷೇತ್ರಂ ಸರ್ವಮಶೇಷತಃ ।
ಬಾಲಮುಂಡನಕಂ ಪ್ರಾಪ್ಯ ತತ್ರ ಸ್ನಾತ್ವಾ ಸಮಾಹಿತಃ ॥ ೩ ॥
ಮುಖಲಿಂಗಂ ತತಸ್ತತ್ರ ಸ್ಥಾಪಯಾಮಾಸ ಶೂಲಿನಃ ।
ತಥಾಽನ್ಯೈರ್ವಾನರೈಃ ಸರ್ವೈರ್ಮುಖಲಿಂಗಾನಿ ಶೂಲಿನಃ ।
ಸ್ವಸಂಜ್ಞಾರ್ಥಂ ದ್ವಿಜಶ್ರೇಷ್ಠಾಃ ಸ್ಥಾಪಿತಾನಿ ಯಥೇಚ್ಛಯಾ ॥ ೪ ॥
ಯಸ್ತೇಷಾಂ ಮುಖಲಿಂಗಾನಾಂ ಕರೋತಿ ಘೃತಕಂಬಲಂ ।
ಮಕರಸ್ಥೇನ ಸೂರ್ಯೇಣ ಶಿವಲೋಕಂ ಸ ಗಚ್ಛತಿ ॥ ೫ ॥

---

## ಕನ್ನಡದ ಅನುವಾದ

### ಆನರ್ತಕತೀರ್ಥಕೂಪಿಕಾಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಹೇಳಿರುವ ರಾಕ್ಷಸರೂ, ವಾನರರೂ ಲಿಂಗಗಳನ್ನು ಪ್ರತಿಷ್ಠೆಮಾಡಿರುವ ವೃತ್ತಾಂತವು ಆಶ್ಚರ್ಯಕರವಾದುದು.

೨. ಆದುದರಿಂದ ಅವರು ಯಾವ ಯಾವ ಸ್ಥಳಗಳಲ್ಲಿ ಹೇಗೆ ಹೇಗೆ ಲಿಂಗಗಳನ್ನು ಸ್ಥಾಪಿಸಿದರೆಂಬುದನ್ನು ವಿಸ್ತಾರವಾಗಿ ನಮಗೆ ಹೇಳು.

೩–೪. ಸೂತನು ಹೇಳುತ್ತಾನೆ:—ಅನಂತರ ಸುಗ್ರೀವನು ಆ ಕ್ಷೇತ್ರದಲ್ಲೆಲ್ಲ ಸಂಚರಿಸಿ ಒಮ್ಮನಸ್ಸಿನಿಂದ ಬಾಲಮುಂಡನಕದಲ್ಲಿ ಮಿಂದು ಮಹೇಶ್ವರನ ಮುಖಲಿಂಗವನ್ನು ಪ್ರತಿಷ್ಠೆಮಾಡಿದನು. ಹಾಗೆಯೇ ಇತರ ಕಪಿಗಳೂ ತಮ್ಮ ಹೆಸರಿಗಾಗಿ ಮಹೇಶ್ವರನ ಮುಖಲಿಂಗಗಳನ್ನು ಸ್ಥಾಪಿಸಿದರು.

೫. ಸೂರ್ಯನು ಮಕರರಾಶಿಯಲ್ಲಿರುವಾಗ ಆ ಲಿಂಗಗಳಿಗೆ ಘೃತಕಂಬಳವನ್ನು ಅಲಂಕಾರ ಮಾಡುವವನು ಶಿವಲೋಕವನ್ನು ಸೇರುವನು.

ತತಃ ಪಶ್ಚಿಮದಿಗ್ಭಾಗೇ ತಸ್ಯ ಕ್ಷೇತ್ರಸ್ಯ ರಾಕ್ಷಸೈಃ ।
ಸಂಸ್ಥಾಪಿತಾನಿ ಲಿಂಗಾನಿ ಚತುರ್ವಕ್ತ್ರಾಣಿ ಚ ದ್ವಿಜಾಃ ॥ ೬ ॥
ರಾಮೇಣ ಪೂರ್ವದಿಗ್ಭಾಗೇ ಪ್ರಾಸಾದಾನಾಂ ಚ ಪಂಚಕಂ ।
ಸ್ಥಾಪಿತಂ ಭಕ್ತಿಯುಕ್ತೇನ ಸರ್ವಪಾತಕನಾಶನಂ ॥ ೭ ॥
ತಥಾ ದಕ್ಷಿಣದಿಗ್ಭಾಗೇ ಕೂಪಿಕಾ ತೇನ ನಿರ್ಮಿತಾ ।
ಆನರ್ತೀಯ ತಡಾಗಸ್ಯ ಸಮೀಪೇ ಪಾಪನಾಶಿನೀ ॥ ೮ ॥
ಯಸ್ತಸ್ಯಾಂ ಕುರುತೇ ಶ್ರಾದ್ಧಂ ಸಂಪ್ರಾಪ್ತೇ ದಕ್ಷಿಣಾಯನೇ ।
ಸೋಽಶ್ವಮೇಧಫಲಂ ಪ್ರಾಪ್ಯ ಪಿತೃಲೋಕೇ ಮಹೀಯತೇ ॥ ೯ ॥
ಯಸ್ತತ್ರ ದೀಪಕಂ ದದ್ಯಾತ್ಕಾರ್ತಿಕೇ ಮಾಸಿ ಚ ದ್ವಿಜಾಃ ।
ನ ಸ ಪಶ್ಯತಿ ರೌದ್ರಾಂಸ್ತಾನ್ನರಕಾನೇಕವಿಂಶತಿಂ ।
ನ ಚಾಂಧೋ ಜಾಯತೇ ಕ್ವಾಽಪಿ ಯತ್ರ ಯತ್ರ ಪ್ರಜಾಯತೇ ॥ ೧೦ ॥

ಋಷಯ ಊಚುಃ:—

ಆನರ್ತೀಯ ತಡಾಗಂ ತತ್ಕೇನ ತತ್ರ ವಿನಿರ್ಮಿತಂ ।
ಕಿಂ ಪ್ರಭಾವಂ ಚ ಕಾರ್ತ್ಸ್ನ್ಯೇನ ಸೂತಪುತ್ರ ಪ್ರಕೀರ್ತಯ ॥ ೧೧ ॥

---

೬. ಅಯ್ಯಾ ಬ್ರಾಹ್ಮಣರೆ! ಆ ಕ್ಷೇತ್ರದ ಪಶ್ಚಿಮ ದಿಕ್ಕಿನಲ್ಲಿ ರಾಕ್ಷಸರು ಪ್ರತಿಷ್ಠೆಮಾಡಿರುವ ನಾಲ್ಕು ಮುಖಗಳುಳ್ಳ ಲಿಂಗಗಳಿರುವುವು.

೭. ಆ ಕ್ಷೇತ್ರದ ಪೂರ್ವ ದಿಕ್ಕಿನಲ್ಲಿ ಶ್ರೀರಾಮನು ಭಕ್ತಿಯಿಂದ ಸಕಲ ಪಾಪಗಳನ್ನು ನೀಗಿಸುವ ಐದು ಪ್ರಾಸಾದಗಳನ್ನು ಸ್ಥಾಪಿಸಿರುವನು.

೮. ಹಾಗೆಯೇ ಅವನು ಅದರ ದಕ್ಷಿಣ ದಿಕ್ಕಿನಲ್ಲಿ ಆನರ್ತೀಯ ಕೊಳದ ಹತ್ತಿರ ಪಾಪಗಳನ್ನು ಪರಿಹರಿಸುವ ಒಂದು ಬಾವಿಯನ್ನು ನಿರ್ಮಿಸಿರುವನು.

೯. ದಕ್ಷಿಣಾಯನದಲ್ಲಿ ಆ ಬಾವಿಯಲ್ಲಿ ಶ್ರಾದ್ಧಗೈದವನು ಅಶ್ವಮೇಧ ಯಾಗದ ಫಲವನ್ನು ಹೊಂದಿ ಪಿತೃಲೋಕದಲ್ಲಿ ಪೂಜ್ಯನಾಗುವನು.

೧೦. ಎಲೈ ದ್ವಿಜರೇ! ಕಾರ್ತಿಕ ಮಾಸದಲ್ಲಿ ಅಲ್ಲಿ ದೀಪದಾನ ಮಾಡಿದವನು ಭಯಂಕರವಾದ ಇಪ್ಪತ್ತೊಂದು ನರಕಗಳನ್ನು ನೋಡುವುದಿಲ್ಲ. ಅವನು ಹುಟ್ಟಿದಾಗಲೆಲ್ಲ ಕುರುಡನಾಗುವುದಿಲ್ಲ.

೧೧. ಋಷಿಗಳು ಹೇಳುತ್ತಾರೆ:— ಸೂತ! ಆ ಹಾಟಕಕ್ಷೇತ್ರದಲ್ಲಿರುವ ಆನರ್ತೀಯತಡಾಗವನ್ನು ಯಾರು ನಿರ್ಮಿಸಿದರು? ಅದು ಎಂತಹ ಮಾಹಾತ್ಮ್ಯವುಳ್ಳದು? ಅದನ್ನು ಸಂಪೂರ್ಣವಾಗಿ ಹೇಳು.

ಸೂತ ಉವಾಚ :—

ಆನರ್ತೀಯ ತಡಾಗಸ್ಯ ಮಹಿಮಾ ದ್ವಿಜಸತ್ತಮಾಃ ।
ಏಕವಕ್ತ್ರೇಣ ನೋ ಶಕ್ಯೋ ವಕ್ತುಂ ವರ್ಷಶತೈರಪಿ ॥ ೧೨ ॥
ಆಶ್ವಿನಸ್ಯ ಸಿತೇ ಪಕ್ಷೇ ಚತುರ್ದಶ್ಯಾಂ ಸಮಾಹಿತಃ ।
ಸ್ನಾತ್ವಾ ದೇವಾನ್ ಪಿತೄಂಶ್ಚೈವ ತರ್ಪಯೇದ್ವಿಧಿಪೂರ್ವಕಂ ॥ ೧೩ ॥
ತತೋ ದೀಪೋತ್ಸವದಿನೇ ಶ್ರಾದ್ಧಂ ಕೃತ್ವಾ ಸಮಾಹಿತಃ ।
ದಾಮೋದರಂ ಯಮಂ ಪೂಜ್ಯ ದೀಪಂ ದದ್ಯಾತ್ಸ್ವಭಕ್ತಿತಃ ॥ ೧೪ ॥
ಸಂಪೂಜ್ಯೋ ಧರ್ಮರಾಜಸ್ತು ಗಂಧಪುಷ್ಪಾನುಲೇಪನೈಃ ।
ಮಾಷಾಸ್ತಿಲಾಶ್ಚ ದಾತವ್ಯಾ ಗೋವಿಂದಃ ಪ್ರಿಯತಾಮಿತಿ ॥ ೧೫ ॥
ತಿಲಮಾಷಪ್ರದಾನೇನ ದ್ವಿಜಾನಾಂ ತರ್ಪಣೇನ ಚ ।
ಯಮೇನ ಸಹಿತೋ ದೇವಃ ಪ್ರೀಯತೇ ಪುರುಷೋತ್ತಮಃ ॥ ೧೬ ॥
ಯ ಏವಂ ಕುರುತೇ ವಿಪ್ರಾಸ್ತೀರ್ಥೆ ಆನರ್ತ ಸಂಜ್ಞಿತೇ ।
ಸೋಽಶ್ವಮೇಧಫಲಂ ಪ್ರಾಪ್ಯ ಬ್ರಹ್ಮಲೋಕೇ ಮಹೀಯತೇ ॥ ೧೭ ॥
ಯಸ್ಮಿನ್ದಿನೇ ಸಮಾಯಾತೋ ರಾಮಸ್ತತ್ರ ಪ್ರಹರ್ಷಿತಃ ।
ತಸ್ಮಿನ್ ದ್ವಿಜೋತ್ತಮೈಃ ಸರ್ವೈಃ ಪ್ರೋಕ್ತಃ ಸೋಽಭ್ಯೇತ್ಯ ಸಾದರಂ ॥ ೧೮ ॥

---

೧೨. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ಆನರ್ತೀಯ ತಡಾಗದ ಮಹಿಮೆಯನ್ನು ಒಂದು ಬಾಯಿಯಿಂದ ಅನೇಕ ವರ್ಷಗಳಲ್ಲಿಯೂ ಹೇಳಲಾಗದು.

೧೩. ಆಶ್ವಯುಜ ಮಾಸದ ಶುಕ್ಲಪಕ್ಷದ ಚತುರ್ದಶೀ ದಿನ ಆ ಆನರ್ತೀಯ ತಡಾಗದಲ್ಲಿ ಮಿಂದು ದೇವಪಿತೃಗಳಿಗೆ ವಿಧಿಯಂತೆ ತರ್ಪಣ ಮಾಡಬೇಕು.

೧೪. ಅನಂತರ ದೀಪೋತ್ಸವದ ದಿನ ಒಮ್ಮನಸ್ಸಿನಿಂದ ಶ್ರಾದ್ಧವನ್ನು ಮಾಡಿ ದಾಮೋದರ, ಯಮರನ್ನು ಪೂಜಿಸಿ ಭಕ್ತಿಯಿಂದ ದೀಪವನ್ನು ದಾನ ಮಾಡಬೇಕು.

೧೫. ಗಂಧ, ಪುಷ್ಪ, ಲೇಪನದ್ರವ್ಯ ಇವುಗಳಿಂದ ಧರ್ಮರಾಜನನ್ನು ಪೂಜಿಸಿ ಗೋವಿಂದನು ಪ್ರೀತನಾಗಲೆಂದು ಉದ್ದು, ಎಳ್ಳುಗಳನ್ನು ದಾನ ಮಾಡಬೇಕು.

೧೬. ಎಳ್ಳು, ಉದ್ದುಗಳನ್ನು ದಾನ ಮಾಡುವುದರಿಂದಲೂ, ಬ್ರಾಹ್ಮಣರನ್ನು ತೃಪ್ತಿಗೊಳಿಸುವುದರಿಂದಲೂ ಯಮನೊಡನೆ ವಿಷ್ಣುವು ತೃಪ್ತಿಗೊಳ್ಳುವನು.

೧೭. ಬ್ರಾಹ್ಮಣರೆ! ಈ ಆನರ್ತ ತಡಾಗದಲ್ಲಿ ಯಾವನು ಹೀಗೆ ಮಾಡುವನೋ ಅವನು ಅಶ್ವಮೇಧಯಾಗದ ಫಲವನ್ನು ಪಡೆದು ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

೧೮. ಶ್ರೀರಾಮನು ಸಂತೋಷದಿಂದ ಇಲ್ಲಿಗೆ ಬಂದಾಗ ಬ್ರಾಹ್ಮಣರೆಲ್ಲ ಅವನ ಸಮೀಪಕ್ಕೆ ಬಂದು ಪ್ರೀತಿಯಿಂದ ಇಂತೆಂದರು.

ಅತ್ರಾಽಗಸ್ತ್ಯೋ ಮುನಿಶ್ರೇಷ್ಠಸ್ತಿಷ್ಠತೇ ರಘುನಂದನ ।
ತಂ ಗತ್ವಾ ಪಶ್ಯ ವಿಪ್ರೇಂದ್ರ ಮಿತ್ರಾವರುಣಸಂಭವಂ ॥ ೧೯ ॥
ಅಥ ತೇಷಾಂ ವಚಃ ಶ್ರುತ್ವಾ ರಾಮೋ ರಾಜೀವಲೋಚನಃ ।
ವಾನರೈ ರಾಕ್ಷಸೈಃ ಸಾರ್ಧಂ ಪ್ರಹೃಷ್ಟಃ ಸತ್ವರಂ ಯಯೌ ॥ ೨೦ ॥
ಅಷ್ಟಾಂಗಪ್ರಣಿಪಾತೇನ ತಂ ಪ್ರಣಮ್ಯ ರಘೂತ್ತಮಃ ।
ಪರಿಷ್ವಕ್ತೋ ದೃಢಂ ತೇನ ಸಾನಂದೇನ ಮಹಾತ್ಮನಾ ॥ ೨೧ ॥
ನಾಽತಿದೂರೇ ತತಸ್ತಸ್ಯ ವಿನಯೇನ ಸಮನ್ವಿತಃ ।
ಉಪವಿಷ್ಟೋ ಧರಾಪೃಷ್ಠೇ ಕೃತಾಂಜಲಿಪುಟಃ ಸ್ಥಿತಃ ॥ ೨೨ ॥
ತತಃ ಪೃಷ್ಟಸ್ತು ಮುನಿನಾ ಕಥಯಾಮಾಸ ವಿಸ್ತರಾತ್ ।
ವೃತ್ತಾಂತಂ ಸರ್ವಮಾತ್ಮೀಯಂ ಸ್ವರ್ಗಸ್ಯ ಗಮನಂ ಪ್ರತಿ ॥ ೨೩ ॥
ಯಥಾ ಸೀತಾ ಪರಿತ್ಯಕ್ತಾ ಯಥಾ ಸೌಮಿತ್ರಿಣಾ ಕೃತಃ ।
ಪರಿತ್ಯಾಗಃ ಸ್ವಕೀಯಸ್ಯ ಸಂತ್ಯಕ್ತೇನ ಮಹಾತ್ಮನಾ ॥ ೨೪ ॥
ತಥಾ ಸುಗ್ರೀವಮಾಸಾದ್ಯ ತಥೈವ ಚ ವಿಭೀಷಣಂ ।
ಸಂಭಾಷ್ಯಚಾಽಽಗಮಸ್ತ್ವತ್ರ ತತಃ ಪುಷ್ಪಕಸಂಸ್ಥಿತಿಃ ॥ ೨೫ ॥
ತತೋಽಗಸ್ತ್ಯಃ ಕಥಾಶ್ಚಿತ್ರಾಶ್ಚಕ್ರೇ ತಸ್ಯ ಪುರಸ್ತದಾ ।
ರಾಜರ್ಷೀಣಾಂ ಪುರಾಣಾನಾಂ ದೃಷ್ಟಾಂತೈರ್ಬಹುಭಿರ್ಮುನಿಃ ॥ ೨೬ ॥

---

೧೯. ರಾಘವ! ಇಲ್ಲಿ ಮಿತ್ರಾವರುಣರ ತನಯನಾದ ಅಗಸ್ತ್ಯಮುನಿಯು ಇರುವನು. ಅವನನ್ನು ನೋಡು.

೨೦. ಶ್ರೀರಾಮನು ಅವರ ಮಾತನ್ನು ಕೇಳಿ ಸಂತೋಷದಿಂದ ಕಪಿಗಳೊಡನೆಯೂ, ರಾಕ್ಷಸರೊಡನೆಯೂ ಅಗಸ್ತ್ಯಮುನಿಯೆಡೆಗೆ ಶೀಘ್ರವಾಗಿ ಹೋದನು.

೨೧. ಅವನು ಆ ಮುನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಮಹಾತ್ಮನಾದ ಮುನಿಯು ಆನಂದದಿಂದ ರಾಮನನ್ನು ಗಾಢವಾಗಿ ಆಲಿಂಗಿಸಿದನು.

೨೨. ರಾಮನು ವಿನಯದಿಂದ ಆ ಮುನಿಯ ಹತ್ತಿರ ನೆಲದಮೇಲೆ ಕೈಮುಗಿದುಕೊಂಡು ಕುಳಿತನು.

೨೩–೨೫. ಅನಂತರ ಮುನಿಯು ರಾಮನ ವೃತ್ತಾಂತವನ್ನು ವಿಸ್ತಾರವಾಗಿ ಹೇಳಬೇಕೆಂದು ಕೇಳಲು ಅವನು ತಾನು ಸೀತೆಯನ್ನು ತ್ಯಜಿಸಿದ್ದನ್ನೂ, ಲಕ್ಷ್ಮಣನು ದಿವಂಗತನಾದುದನ್ನೂ, ಸುಗ್ರೀವವಿಭೀಷಣರನ್ನು ಸಮಿಾಪಿಸಿ ಅವರೊಡನೆ ಮಾತನಾಡಿ ಹಿಂದಿರುಗಿದುದನ್ನೂ, ಪುಷ್ಪಕ ವಿಮಾನವು ನಿಂತುದನ್ನೂ ವಿಸ್ತಾರವಾಗಿ ತಿಳಿಸಿದನು.

೨೬. ತರುವಾಯ ಅಗಸ್ತ್ಯನು ಶ್ರೀರಾಮನ ಮುಂದೆ ಪುರಾತನ ರಾಜರ್ಷಿಗಳು, ಅನೇಕ ದೃಷ್ಟಾಂತಗಳಿಂದ ಆಶ್ಚರ್ಯಕರವಾದ ಕಥೆಗಳನ್ನು ಹೇಳಿದನು.

ತತಃ ಕಥಾಽವಸಾನೇ ಚ ಚಲಚಿತ್ತಂ ರಘೂತ್ತಮಂ ।
ವಿಲೋಕ್ಯ ಪ್ರದದೌ ತಸ್ಮೈ ರತ್ನಾಭರಣಮುತ್ತಮಂ ॥ ೨೭ ॥
ಯನ್ನ ದೇವೇಷು ಯಕ್ಷೇಷು ಸಿದ್ಧವಿದ್ಯಾಧರೇಷು ಚ ।
ನಾಗೇಷು ರಾಕ್ಷಸೇಂದ್ರೇಷು ಮಾನುಷೇಷು ಚ ಕಾ ಕಥಾ ॥ ೨೮ ॥
ಯಸ್ಯೇಂದ್ರಾಯುಧಸಂಘಾಶ್ಚ ನಿಷ್ಕ್ರಾಮಂತಿ ಸಹಸ್ರಶಃ ।
ರಾತ್ರೌ ತಮಿಸ್ರಪಕ್ಷೇಽಪಿ ಲಕ್ಷ್ಯಂತೇಽರ್ಕೋಪಮತ್ವಿಷಃ ॥ ೨೯ ॥
ತದ್ರಾಮಸ್ತು ಗೃಹೀತ್ವಾಽಥ ವಿಸ್ಮಯೋತ್ಫುಲ್ಲಲೋಚನಃ ।
ಪಪ್ರಚ್ಛ ಕೌತುಕಾವಿಷ್ಟಃ ಕುತಸ್ತ್ವೇತನ್ಮುನೇ ತವ ॥ ೩೦ ॥
ಅತ್ಯದ್ಭುತಕರಂ ರತ್ನನಿರ್ಮಿತಂ ತಿಮಿರಾಪಹಂ ।
ಕಂಠಾಭರಣಮಾಖ್ಯಾಹಿ ನೇದಮಸ್ತಿ ಜಗತ್ತ್ರಯೇ ॥ ೩೧ ॥

ಅಗಸ್ತಿರುವಾಚ :—

ಯತ್ಪಶ್ಯಸಿ ರಘುಶ್ರೇಷ್ಠ ತಡಾಗಮಿದಮುತ್ತಮಂ ।
ಮಮಾಶ್ರಮಸಮೀಪಸ್ಥಂ ತದ್ದೇವದೇವನಿರ್ಮಿತಂ ॥ ೩೨ ॥
ತಸ್ಯ ತೀರೇ ಮಯಾದೃಷ್ಟಂ ಯದಾಶ್ಚರ್ಯಮನುತ್ತಮಂ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವ ರಘುನಂದನ ॥ ೩೩ ॥

---

೨೭. ಅನಂತರ ಅಗಸ್ತ್ಯಮುನಿಯು ಕಥೆಯ ಕೊನೆಯಲ್ಲಿ ಚಂಚಲ ಚಿತ್ತನಾದ ಶ್ರೀರಾಮನನ್ನು ನೋಡಿ ಅವನಿಗೆ ಉತ್ತಮವಾದ ರತ್ನಾಭರಣವನ್ನಿತ್ತನು.

೨೮. ಅದು ದೇವತೆಗಳು, ಯಕ್ಷರು, ಸಿದ್ಧರು, ವಿದ್ಯಾಧರರು, ನಾಗರು, ರಾಕ್ಷಸರು, ಮನುಷ್ಯರು ಇವರಲ್ಲಿ ಯಾರಲ್ಲಿಯೂ ಇರಲಿಲ್ಲ.

೨೯. ಅದರಿಂದ ಹೊರಟ ಸಾವಿರಾರು ಇಂದ್ರಾಯುಧಗಳು ಕೃಷ್ಣಪಕ್ಷದ ರಾತ್ರಿಯಲ್ಲಿಯೂ ಸೂರ್ಯನಂತೆ ಕಾಣುತ್ತಿದ್ದುವು.

೩೦–೩೧. ಶ್ರೀರಾಮನು ಆ ರತ್ನಾಭರಣವನ್ನು ತೆಗೆದುಕೊಂಡು ಆಶ್ಚರ್ಯ, ಕುತೂಹಲಗಳಿಂದ ಅಗಸ್ತ್ಯಮುನಿಯನ್ನು ಕುರಿತು, "ಮಹರ್ಷಿಯೆ! ಆಶ್ಚರ್ಯಕರವೂ, ಕತ್ತಲೆಯನ್ನು ನಿವಾರಿಸುವುದೂ ಆದ ಈ ರತ್ನಾಭರಣವು ನಿನಗೆ ಹೇಗೆ ಸಿಕ್ಕಿತು? ಇದು ಮೂರು ಲೋಕಗಳಲ್ಲಿಯೂ ಇಲ್ಲ. ಇದನ್ನು ನನಗೆ ಹೇಳು" ಎಂದು ಕೇಳಿದನು.

೩೨. ಅಗಸ್ತ್ಯನು ಹೇಳುತ್ತಾನೆ:—ರಾಘವ! ನನ್ನ ಆಶ್ರಮದ ಹತ್ತಿರ ದೇವತೆಗಳು ನಿರ್ಮಿಸಿರುವ ಈ ಉತ್ತಮ ಕೊಳವನ್ನು ನೋಡುವೆಯಷ್ಟೆ.

೩೩. ಇದರ ದಡದಲ್ಲಿ ನಾನು ನೋಡಿದ ಆಶ್ಚರ್ಯವನ್ನು ನಿನಗೆ ಹೇಳುವೆನು ಕೇಳು.

ಕದಾಚಿದ್ರಾಘವಶ್ರೇಷ್ಠ ನಿಶೀಥೇಽಹಂ ಸಮುತ್ಥಿತಃ ।
ಪಶ್ಯಾಮಿ ವ್ಯೋಮಮಾರ್ಗೇಣ ಪ್ರದ್ಯೋತಂ ಭಾಸ್ಕರೋಪಮಂ ॥ ೩೪ ॥
ಯಾವತ್ತಾವದ್ವಿಮಾನಂ ತದಪ್ಸರೋಗಣರಾಜಿತಂ ।
ತಸ್ಯ ಮಧ್ಯಗತಶ್ಚೈಕಃ ಪುರುಷಸ್ತರುಣಸ್ತಥಾ ।
ಅಂಧಸ್ತತ್ರ ಸಮಾರೂಢಃ ಸ್ತೂಯತೇ ಕಿನ್ನರೈರ್ನೃಪಃ ॥ ೩೫ ॥
ರತ್ನಾಭರಣಮೇತಚ್ಚ ಬಿಭ್ರತ್ಕಂಠೇ ಸುನಿರ್ಮಲಂ ।
ದ್ವಾದಶಾಽರ್ಕಪ್ರತೀಕಾಶಂ ಕಾಮದೇವ ಇವಾಽಪರಃ ॥ ೩೬ ॥
ಅಥೋತ್ತೀರ್ಯ ವಿಮಾನಾಗ್ರ್ಯಾತ್ಸ್ಕಂಧಲಗ್ನೋ ರಘೂದ್ವಹ ।
ಏಕಸ್ಯ ದೇವದೂತಸ್ಯ ಸಲಿಲಾಂತಮುಪಾಗತಃ ॥ ೩೭ ॥
ತತಶ್ಚ ಸಲಿಲಾತ್ತಸ್ಮಾದಾಕೃಷ್ಯ ಚ ಕಲೇವರಂ ।
ಮೃತಕಸ್ಯ ತತೋ ದಂತೈರ್ಭಕ್ಷಯಾಮಾಸ ಸತ್ವರಂ ॥ ೩೮ ॥
ಯಥಾ ಯಥಾ ಮಹಾಮಾಂಸಂ ಸ ಭಕ್ಷಯತಿ ರಾಘವ ।
ತಥಾ ತಥಾ ಪುನಃ ಕಾಯಂ ತದ್ರೂಪಂ ತತ್ರ ಜಾಯತೇ ॥ ೩೯ ॥
ತತಸ್ತೃಪ್ತಿಂ ಚಿರಾತ್ಪ್ರಾಪ್ಯ ಶುಚಿರ್ಭೂತ್ವಾ ಪ್ರಹರ್ಷಿತಃ ।
ನಿಷ್ಕ್ರಮ್ಯ ಸಲಿಲಾದ್ಭ್ಯಾವದ್ವಿಮಾನಮಧಿರೋಹತಿ ॥ ೪೦ ॥

---

೩೪. ರಾಮ! ಒಂದಾನೊಂದು ದಿನ ನಾನು ಅರ್ಧರಾತ್ರಿಯ ವೇಳೆಯಲ್ಲಿ ಎದ್ದು ಆಕಾಶದಲ್ಲಿ ಸೂರ್ಯನಂತಿರುವ ಪ್ರಕಾಶವನ್ನು ಕಂಡೆನು.

೩೫–೩೬. ಆ ಪ್ರಕಾಶದ ಮಧ್ಯದಲ್ಲಿ ಅಪ್ಸರೆಯರ ಸಮೂಹದಿಂದ ವಿರಾಜಿಸುವ ವಿಮಾನದಲ್ಲಿ ತರುಣನೂ, ಕುರುಡನೂ, ಕಿನ್ನರರಿಂದ ಸ್ತುತಿಸಲ್ಪಡುವವನೂ, ದ್ವಾದಶಾದಿತ್ಯರಂತೆ ಪ್ರಕಾಶಿಸುವ ಈ ರತ್ನಾಭರಣವನ್ನು ಕಂಠದಲ್ಲಿ ಧರಿಸಿವವನೂ, ಮನ್ಮಥನಂತಿರುವವನೂ ಆದ ಒಬ್ಬ ಮನುಷ್ಯನು ಕುಳಿತಿದ್ದನು.

೩೭. ರಾಮ! ಬಳಿಕ ಆ ಮನುಷ್ಯನು ವಿಮಾನದಿಂದಿಳಿದು ಒಬ್ಬ ದೇವದೂತನ ಕುತ್ತಿಗೆಯನ್ನು ಹಿಡಿದುಕೊಂಡು ನೀರಿನ ಹತ್ತಿರಕ್ಕೆ ಬಂದನು.

೩೮. ಅನಂತರ ಆ ನೀರಿನಿಂದ ಒಂದು ಹೆಣವನ್ನು ಮೇಲಕ್ಕೆಳೆದು ಹಲ್ಲುಗಳಿಂದ ಶೀಘ್ರವಾಗಿ ಅದನ್ನು ತಿಂದನು.

೩೯. ರಾಘವ! ಆ ಮನುಷ್ಯನು ಹೆಣವನ್ನು ಭಕ್ಷಿಸಿದ ಹಾಗೆಲ್ಲ ಆ ಮೃತ ಶರೀರವು ಮೊದಲಿನಂತೆಯೇ ಆಗುವುದು.

೪೦. ಅವನು ಬಹಳ ಹೊತ್ತಿನಮೇಲೆ ತೃಪ್ತಿಗೊಂಡು ಶುದ್ಧನಾಗಿ ಸಂತೋಷದಿಂದ ನೀರಿನಿಂದ ಮೇಲಕ್ಕೆ ಬಂದು ವಿಮಾನವನ್ನೇರಿದನು.

ತಾವನ್ಮಯಾ ಧ್ರುತಂ ಗತ್ವಾ ಸ ಪೃಷ್ಟಃ ಕೌತುಕಾನ್ನೃಪಃ ।
ಸೇವ್ಯಮಾನೋಽಪಿ ಗಂಧರ್ವೈಃ ಸಮಂತಾದ್ಬುದ್ಧಿತತ್ಪರೈಃ ॥ ೪೧ ॥
ಭೋ ಭೋ ವೈಮಾನಿಕಶ್ರೇಷ್ಠ ಮುಹೂರ್ತಂ ಪ್ರತಿಪಾಲಯ ।
ಅಗಸ್ತಿರ್ನಾಮ ವಿಪ್ರೋಽಹಂ ಮಿತ್ರಾವರುಣಸಂಭವಃ ॥ ೪೨ ॥
ತಚ್ಛ್ರುತ್ವಾ ಸಂಮುಖೋ ಭೂತ್ವಾ ಪ್ರಣಾಮಮಕರೋತ್ತತಃ ।
ತೈಶ್ಚ ವೈಮಾನಿಕೈಃ ಸಾರ್ಧಂ ಸರ್ವೈಸ್ತೈಃ ಕಿನ್ನರಾದಿಭಿಃ ॥ ೪೩ ॥
ಸೋಽಯಂ ರಾಜಾ ಮಯಾ ಪೃಷ್ಟಃ ಕೃತಾನತಿಃ ಪುರಃಸ್ಥಿತಃ ।
ಕಸ್ತ್ವಮೀದೃಗ್ವಪುಃ ಶ್ರೀಮಾನ್ವಿಮಾನವರಮಾಶ್ರಿತಃ ।
ಸೇವ್ಯಮಾನೋಽಪ್ಸರೋಭಿಶ್ಚ ಗಂಧರ್ವೈಃ ಕಿನ್ನರೈಸ್ತಥಾ ॥ ೪೪ ॥
ಅತ್ರಾಽಽಗತ್ಯ ತಡಾಗಾಂತೇ ಮಹಾಮಾಂಸಪ್ರಭಕ್ಷಣಂ ।
ಕೃತವಾನಸಿ ವೈಕಲ್ಯಂ ಕಸ್ಮಾತ್ತೇ ದೃಷ್ಟಿಸಂಭವಂ ॥ ೪೫ ॥

ವೈಮಾನಿಕ ಉವಾಚ :—

ಸಾಧು ಸಾಧು ಮುನಿಶ್ರೇಷ್ಠ ಯತ್ತ್ವಂ ಪ್ರಾಪ್ತೋ ಮಮಾಂತಿಕಂ ।
ಅವಶ್ಯಂ ಸಾನುಕೂಲೋ ಮೇ ವಿಧಿರ್ಯತ್ತ್ವಂ ಸಮಾಗತಃ ॥ ೪೬ ॥
ಸಾಧೂನಾಂ ದರ್ಶನಂ ಪುಣ್ಯಂ ತೀರ್ಥಭೂತಾ ಹಿ ಸಾಧವಃ ।
ಕಾಲೇನ ಫಲತೇ ತೀರ್ಥಂ ಸದ್ಯಃ ಸಾಧು ಸಮಾಗಮಃ ॥ ೪೭ ॥

---

೪೧. ಅಷ್ಟರಲ್ಲಿ ನಾನು ಶೀಘ್ರನಾಗಿ ಗಂಧರ್ವರಿಂದ ಸೇವಿಸಲ್ಪಡುತ್ತಿರುವ ಅವನಿದ್ದೆಡೆಗೆ ಹೋಗಿ ಅವನನ್ನು ಕುರಿತು ಕುತೂಹಲದಿಂದ ಹೀಗೆ ಹೇಳಿದೆನು.

೪೨. "ಎಲೈ ವಿಮಾನ ವಿಹಾರಿಯೆ! ಸ್ವಲ್ಪಹೊತ್ತು ನಿರೀಕ್ಷಿಸು. ನಾನು ಮಿತ್ರಾವರುಣ ತನಯನಾದ ಅಗಸ್ತ್ಯನೆಂಬ ಬ್ರಾಹ್ಮಣನು."

೪೩. ನನ್ನೀ ಮಾತನ್ನು ಕೇಳಿ ಅವನು ನನ್ನ ಎದುರಿಗೆ ಬಂದು ಆ ಸಮಸ್ತ ಕಿನ್ನರರೊಡನೆ ನನಗೆ ವಂದಿಸಿದನು.

೪೪. ಆಗ ನಾನು ನಮಸ್ಕರಿಸಿ ಮುಂದೆ ನಿಂತಿರುವ ಆ ರಾಜನನ್ನು ಕುರಿತು ಹೀಗೆ ಪ್ರಶ್ನಿಸಿದೆನು. "ವಿಮಾನದಲ್ಲಿ ಕುಳಿತು ಗಂಧರ್ವಕಿನ್ನರಾಪ್ಸರರಿಂದ ಸೇವಿಸಲ್ಪಡುತ್ತಿರುವ ಇಂತಹ ಶರೀರವುಳ್ಳ ನೀನಾರು?

೪೫. ನೀನು ಇಲ್ಲಿಗೆ ಬಂದು ಕೆರೆಯ ಹತ್ತಿರ ಮಾಂಸವನ್ನು ಭಕ್ಷಿಸಿರುವೆ. ನಿನ್ನ ಕಣ್ಣು ಕುರುಡಾಗಲು ಕಾರಣವೇನು?"

೪೬–೪೭. ವೈಮಾನಿಕನು ಹೇಳುತ್ತಾನೆ:—ಮುನಿವರ್ಯನೆ! ನೀನು ನನ್ನ ಬಳಿಗೈದುದರಿಂದ ಒಳ್ಳೆಯದಾಯಿತು. ಇದರಿಂದ ನನಗೆ ದೈವವು ಅನುಕೂಲವಾಗಿರುವುದೆಂದು ತಿಳಿಯುತ್ತೇನೆ. ಸಜ್ಜನರ ದರ್ಶನವು ಪುಣ್ಯಕರವಾದುದು. ಸಜ್ಜನರು ತೀರ್ಥದಂತಿರುವರು. ತೀರ್ಥವು ಕಾಲಾಂತರದಲ್ಲಿ ಫಲವನ್ನೀಯುವುದು. ಸಜ್ಜನರ ಸಮಾಗಮವು ಕೂಡಲೆ ಫಲಿಸುವುದು.

ತಸ್ಮಾತ್ಸರ್ವಂ ತವಾಖ್ಯಾನಂ ಕಥಯಾಮಿ ಮಹಾಮುನೇ ।
ಯೇನ ಮೇ ಗರ್ಹಿತಂ ಭೋಜ್ಯಂ ವಿಭವಶ್ಚ ತಥೇದೃಶಃ ॥ ೪೮ ॥
ಅಹಮಾಸಂ ಪುರಾ ರಾಜಾ ಶ್ವೇತೋನಾಮ ಮಹಾಮುನೇ ।
ಆನರ್ತಾಽಧಿಪತಿಃ ಪಾಪಃ ಸರ್ವಲೋಕನಿಪೀಡಕಃ ॥ ೪೯ ॥
ನ ಕಿಂಚಿತ್ಪ್ರಾಙ್ಮಯಾದತ್ತಂ ನ ಹುತಂ ಜಾತವೇದಸಿ ।
ನ ಚ ರಕ್ಷಾ ಕೃತಾ ಲೋಕೇ ನ ತ್ರಾತಾಃ ಶರಣಾಗತಾಃ ॥ ೫೦ ॥
ದೃಷ್ಟ್ವಾ ದೃಷ್ಟ್ವಾ ಮಯಾ ರತ್ನಂ ಯತ್ಕಿಂಚಿದ್ಧರಣೀತಲೇ ।
ತದ್ವೈ ಬಲಾದ್ಧೃತಂ ಸರ್ವಂ ಸರ್ವೇಷಾಮಿಹ ದೇಹಿನಾಂ ॥ ೫೧ ॥
ತತಃ ಕಾಲೇನ ದೀರ್ಘೇಣ ಜರಾಗ್ರಸ್ತಸ್ಯ ಮೇ ಬಲಾತ್ ।
ಹೃತಂ ರಾಜ್ಯಂ ಸ್ವಪುತ್ರೇಣ ಮಾಂ ನಿರ್ವಾಸ್ಯ ವಿಗರ್ಹಿತಂ ॥ ೫೨ ॥
ತತೋಽಹಂ ಜರಯಾ ಗ್ರಸ್ತೋ ವೈರಾಗ್ಯಂ ಪರಮಂ ಗತಃ ।
ಸಮಾಯಾತೋಽತ್ರ ವಿಪ್ರೇಂದ್ರ ಭ್ರಮಮಾಣ ಇತಸ್ತತಃ ॥ ೫೩ ॥
ತತಃ ಕ್ಷುತ್ಕ್ಷಾಮಕಂಠೋಽಹಂ ಸ್ನಾತ್ವಾಽತ್ರ ಸಲಿಲೇ ಶುಭೇ ।
ಮೃತಶ್ಚ ಸನ್ನಿವಿಷ್ಟೋಽಹಂ ಕ್ಷುಧಯಾ ಪರಿಪೀಡಿತಃ ॥ ೫೪ ॥
ಪ್ರವಿಶ್ಯಾಽತ್ರ ಜಲೇ ಪುಣ್ಯೇ ಪಂಚತ್ವಂ ಸಮುಪಾಗತಃ ।
ತತಶ್ಚ ತತ್ಕ್ಷಣಾದೇವ ವಿಮಾನಂ ಸಮುಪಸ್ಥಿತಂ ॥ ೫೫ ॥

---

೪೮–೪೯. ಮಹರ್ಷಿಯೆ! ಆದುದರಿಂದ ನನ್ನ ಆಹಾರವು ನಿಂದ್ಯವಾಗಿರುವು ದಕ್ಕೂ, ನನ್ನ ಐಶ್ವರ್ಯವು ಹೀಗಿರುವುದಕ್ಕೂ ಕಾರಣವನ್ನು ತಿಳಿಸುವ ನನ್ನ ಕಥೆ ಯನ್ನೆಲ್ಲ ನಿನಗೆ ಹೇಳುವೆನು. ನಾನು ಹಿಂದೆ ಶ್ವೇತನೆಂದು ಹೆಸರಾದ, ಪಾಪಿಯೂ, ಸಕಲ ಪ್ರಜೆಗಳನ್ನು ಪೀಡಿಸುವವನೂ ಆದ ಆನರ್ತದೇಶದ ದೊರೆಯಾಗಿದ್ದೆನು.

೫೦. ನಾನು ಹಿಂದಿನ ಜನ್ಮದಲ್ಲಿ ಏನನ್ನೂ ದಾನ ಮಾಡಲಿಲ್ಲ. ಅಗ್ನಿಯಲ್ಲಿ ಹೋಮಿಸಲಿಲ್ಲ. ರಾಜ್ಯವನ್ನು ಕಾಪಾಡಲಿಲ್ಲ. ಮರೆಹೊಕ್ಕವರನ್ನು ಪೊರೆಯಲಿಲ್ಲ.

೫೧–೫೨. ಪ್ರಪಂಚದ ಸಮಸ್ತ ಜನರಲ್ಲಿರುವ ರತ್ನಗಳನ್ನು ನೋಡಿ ಅವು ಗಳನ್ನು ಬಲಾತ್ಕಾರದಿಂದ ಅಪಹರಿಸಿದೆನು. ಅನಂತರ ಅನೇಕ ಕಾಲದಮೇಲೆ ನನ್ನ ಮಗನು ಮುದುಕನಾದ ನನ್ನ ರಾಜ್ಯವನ್ನು ಬಲಾತ್ಕಾರವಾಗಿ ಅಪಹರಿಸಿ ನಿಂದ್ಯನಾದ ನನ್ನನ್ನು ನಗರದಿಂದ ಹೊರಡಿಸಿದನು.

೫೩. ಬ್ರಾಹ್ಮಣೋತ್ತಮ! ಬಳಿಕ ಮುದುಕನಾದ ನಾನು ಅತಿಯಾಗಿ ವೈರಾಗ್ಯಗೊಂಡು ಸಂಚರಿಸುತ್ತ ಇಲ್ಲಿಗೆ ಬಂದೆನು.

೫೪. ಈ ತೀರ್ಥದಲ್ಲಿ ಮಿಂದು ಹಸಿವಿನಿಂದ ಪೀಡಿತನಾಗಿ ಮಡಿದೆನು.

೫೫. ನಾನು ಈ ಪುಣ್ಯಜಲದಲ್ಲಿ ಮೃತನಾಗಲು ಕೂಡಲೆ ವಿಮಾನವು ನನ್ನ ಹತ್ತಿರ ಬಂದಿತು.

ಮಾಮನ್ಯೇನ ಶರೀರೇಣ ಸಮಾದಾಯ ಚ ಕಿಂಕರಾಃ ।
ತತ್ರಾರೋಪ್ಯ ತತಃ ಪ್ರಾಪ್ತಾ ಬ್ರಹ್ಮಣಃ ಸದನಂ ಪ್ರತಿ ॥ ೫೬ ॥
ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।
ದಿವ್ಯಾಭರಣಸಂಜುಷ್ಟಂ ಸ್ತೂಯಮಾನಂ ಚ ಕಿನ್ನರೈಃ ॥ ೫೭ ॥
ತತೋ ಬ್ರಹ್ಮಸಭಾಮಧ್ಯೇಽಹಂ ತೈರ್ದೇವಕಿಂಕರೈಃ ।
ತಾದೃಗ್ರೂಪೋ ವಿಚಕ್ಷುಶ್ಚ ಧಾರಿತೋ ಬ್ರಹ್ಮಣಃ ಪುರಃ ॥ ೫೮ ॥
ಸರ್ವೈಃ ಸಭಾಗತೈರ್ದೃಷ್ಟ್ವಾ ವಿಸ್ಮಿತಾಸ್ಯೈಃ ಪರಸ್ಪರಂ ।
ಅನ್ಯೈಶ್ಚ ನಿಂದಮಾನೈಶ್ಚ ಧಿಕ್ಛಬ್ದಸ್ಯ ಪ್ರಜಲ್ಪಕೈಃ ॥ ೫೯ ॥

ಕಿಂಕರಾ ಊಚುಃ—

ಏಷ ದೇವಶ್ಚತುರ್ವಕ್ತ್ರಃ ಸಭೇಯಂ ತಸ್ಯಸಂಭವಾ ।
ಸರ್ವೈರ್ದೇವಗಣೈರ್ಜುಷ್ಟಾ ಪ್ರಣಾಮಃ ಕ್ರಿಯತಾಮಿತಿ ॥ ೬೦ ॥
ತತೋಽಹಂ ಪ್ರಣಿಪತ್ಯೋಚ್ಚೈಸ್ತಂದೇವಂ ದೇವಸಂಯುತಂ ।
ಉಪವಿಷ್ಟಃ ಸಭಾಮಧ್ಯೇ ವ್ರೀಡಯಾಽವನತಃ ಸ್ಥಿತಃ ॥ ೬೧ ॥
ಯಥಾ ಯಥಾ ಕಥಾಸ್ತತ್ರ ಪ್ರಜಾಯಂತೇ ಸಭಾತಲೇ ।
ದೇವ ದ್ವಿಜ ನರೇಂದ್ರಾಣಾಂ ಧರ್ಮಾಖ್ಯಾನಾನಿ ಕುಂಭಜ ॥ ೬೨ ॥
ತಥಾ ತಥಾ ಮಮಾಽತೀವ ಕ್ಷುದ್ವೃದ್ಧಿಂ ಸಂಪ್ರಗಚ್ಛತಿ ।
ಜಾನೇ ಕಿಂ ಭಕ್ಷಯಾಮ್ಯಾಶು ದೃಷದಃ ಕಾಷ್ಠಮೇವ ವಾ ॥ ೬೩ ॥

---

೫೬. ದೇವಕಿಂಕರರು ನನ್ನನ್ನು ಮತ್ತೊಂದು ಶರೀರದಿಂದ ಎತ್ತಿಕೊಂಡು ಹೋಗಿ ಆ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಬ್ರಹ್ಮಲೋಕವನ್ನು ಸೇರಿದರು.

೫೭–೫೮. ಅವರು ದಿವ್ಯಮಾಲೆ, ವಸ್ತ್ರಗಳನ್ನು ಧರಿಸಿದವನೂ, ದಿವ್ಯಗಂಧದಿಂದ ಲಿಪ್ತನೂ, ದಿವ್ಯವಾದ ಒಡವೆಗಳಿಂದ ಅಲಂಕೃತನೂ, ಕಿನ್ನರರಿಂದ ಸ್ತುತಿಸಲ್ಪಡುವವನೂ, ಕುರುಡನೂ ಆದ ನನ್ನನ್ನು ಬ್ರಹ್ಮನ ಮುಂದೆ ನಿಲ್ಲಿಸಿದರು.

೫೯. ಆಗ ಆ ಕಿಂಕರರನ್ನು ಸಭೆಯಲ್ಲಿರುವವರೆಲ್ಲರೂ ಆಶ್ಚರ್ಯದಿಂದ ನೋಡಿದರು. ಇತರರು ಛೀ ಎಂದು ನಿಂದಿಸಿದರು.

೬೦. ಕಿಂಕರರು ಹೇಳುತ್ತಾರೆ:—ಇವನು ಬ್ರಹ್ಮನು. ಇದು ಸಕಲ ದೇವತೆಗಳು ಕುಳಿತಿರುವ ಆ ಬ್ರಹ್ಮನ ಸಭೆಯು. ನೀನು ನಮಸ್ಕರಿಸು.

೬೧. ಬಳಿಕ ನಾನು ದೇವತೆಗಳೊಡನೆ ಕುಳಿತಿರುವ ಆ ಬ್ರಹ್ಮನನ್ನು ನಮಸ್ಕರಿಸಿ ಆ ಸಭೆಯ ನಡುವೆ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ಕುಳಿತೆನು.

೬೨–೬೩. ಅಗಸ್ತ್ಯನೆ! ಆ ಬ್ರಹ್ಮನ ಸಭೆಯಲ್ಲಿ ದೇವತೆಗಳು, ಬ್ರಾಹ್ಮಣರು, ರಾಜರು ಇವರ ಧಾರ್ಮಿಕ ಕಥೆಗಳನ್ನು ಹೇಳುತ್ತಿದ್ದ ಹಾಗೆಲ್ಲ ನನಗೆ ಕಲ್ಲನಾಗಲಿ ಕಟ್ಟಿಗೆಯನ್ನಾಗಲಿ ತಿನ್ನಲೋ ಎಂಬಂತೆ ಹಸಿವು ಅತ್ಯಂತ ಹೆಚ್ಚಿತು.

ತತೋ ಮಯಾ ಪ್ರಣಮ್ಯೋಚ್ಚೈರ್ವಿಜ್ಞಪ್ತಃ ಪ್ರಪಿತಾಮಹಃ ।
ಪ್ರಣಿಪತ್ಯ ಮುನಿಶ್ರೇಷ್ಠ ಲಜ್ಜಾಂ ತ್ಯಕ್ತ್ವಾ ಸುದೂರತಃ ॥ ೧೪ ॥
ಕ್ಷುಧಾ ಮಾಂ ಬಾಧತೇಽತೀವ ಸಾಂಪ್ರತಂ ಪ್ರಪಿತಾಮಹ ।
ತಥಾ ಪಶ್ಯಾಮಿ ನೋಕಿಂಚಿತ್ತಾದೃಗ್ಭೋಜ್ಯಂ ಪ್ರಯಚ್ಛ ಮೇ ॥ ೧೫ ॥
ಕ್ಷುತ್ಪಿಪಾಸಾದಯೋ ದೋಷಾ ನ ವಿದ್ಯಂತೇಽತ್ರ ತೇ ಕಿಲ ।
ಸ್ವರ್ಗೇ ಸ್ಥಿತಸ್ಯ ಯಚ್ಚೈತತ್ತತ್ಕಿಮೇವಂ ವಿಧಂ ಮಮ ॥ ೧೬ ॥

ಪಿತಾಮಹ ಉವಾಚ :—

ತ್ವಯಾ ನಾಽನ್ನಂ ಕ್ವಚಿದ್ದತ್ತಂ ಕಸ್ಯಚಿತ್ಪೃಥಿವೀತಲೇ ।
ತೇನಾಽತ್ರಾಽಪಿ ಬುಭುಕ್ಷಾ ತೇ ವೃದ್ಧಿಂ ಗಚ್ಛತಿ ದುರ್ಮತೇ ॥ ೧೭ ॥
ತಥಾ ಹೃತಾನಿ ರತ್ನಾನಿ ಯಾನಿ ದೃಷ್ಟಿಂ ಗತಾನಿ ತೇ ।
ಚಕ್ಷುರ್ಹೀನಸ್ತತೋ ಜಾತೋ ಮಮ ಲೋಕೇ ಗತೋಽಪಿ ಚ ॥ ೧೮ ॥
ಯಸ್ತ್ವಂ ಪಾತಕಯುಕ್ತೋಽಪಿ ಸಂಪ್ರಾಪ್ತೋ ಮಮ ಮಂದಿರಂ ।
ತದ್ವಕ್ಷ್ಯಾಮ್ಯಖಿಲಂ ತೇಽಹಂ ಶೃಣುಷ್ವೈಕಮನಾಃ ಸ್ಥಿತಃ ॥ ೧೯ ॥
ಯಸ್ಮಿಂಜಲೇ ತ್ವಯಾ ಮುಕ್ತಾಃ ಪ್ರಾಣಾಃ ಪಾಪಾತ್ಮನಾಽಪಿ ಚ ।
ಶ್ವೇತದ್ವೀಪಪತಿಸ್ತತ್ರ ಕಲಿಕಾಲಭಯಾತುರಃ ॥ ೨೦ ॥

---

೧೪. ಅನಂತರ ನಾನು ಲಜ್ಜೆಯನ್ನು ತ್ಯಜಿಸಿ ದೂರದಿಂದಲೇ ಬ್ರಹ್ಮನಿಗೆ ವಂದಿಸಿ ಹೀಗೆ ಬಿನ್ನೈಸಿದೆನು.

೧೫. "ಪಿತಾಮಹ! ಹಸಿವು, ನನ್ನನ್ನು ಅತ್ಯಂತವಾಗಿ ಪೀಡಿಸುತ್ತಿದೆ. ನಾನು ನೋಡದಿರುವ ಅಂತಹ ಭಕ್ಷ್ಯವನ್ನು ನೀನು ನನಗೆ ಕೊಡು.

೧೬. ಈ ಸ್ವರ್ಗವಾಸಿಗಳಿಗೆ ಹಸಿವು ಬಾಯಾರಿಕೆ ಮೊದಲಾದ ದೋಷಗಳಿರುವುದಿಲ್ಲವಷ್ಟೆ. ನನಗೇತಕ್ಕೆ ಹೀಗಾಗಿರುವುದು."

೧೭. ಬ್ರಹ್ಮನು ಹೇಳುತ್ತಾನೆ:—ಎಲೈ ದುರ್ಮತಿಯೆ! ನೀನು ಭೂಮಿಯಲ್ಲಿ ಎಲ್ಲಿಯೂ ಯಾರಿಗೂ ಅನ್ನವನ್ನು ನೀಡಲಿಲ್ಲ. ಆದುದರಿಂದ ಇಲ್ಲಿಯೂ ನಿನಗೆ ಹಸಿವು ಹೆಚ್ಚುತ್ತಿರುವುದು.

೧೮. ಹಾಗೆಯೇ ನೀನು ಕಂಡ ರತ್ನಗಳನ್ನೆಲ್ಲ ಅಪಹರಿಸಿರುವೆ. ಆದುದರಿಂದ ನನ್ನ ಲೋಕವನ್ನು ಸೇರಿದರೂ ಕುರುಡನಾಗಿರುವೆ.

೧೯. ನೀನು ಪಾಪಿಯಾಗಿದ್ದರೂ ನನ್ನ ಲೋಕವನ್ನು ಹೇಗೆ ಹೊಂದಿದೆ ಎಂಬುದನ್ನು ಹೇಳುವೆನು. ಅದನ್ನು ಸಾವಧಾನ ಮನಸ್ಸಿನಿಂದ ಕೇಳು.

೨೦. ಪಾಪಿಯಾದ ನೀನು ಮರಣಹೊಂದಿದ ನೀರಿನಲ್ಲಿ ಕಲಿಕಾಲದ ಭಯದಿಂದ ಪೀಡಿತನಾದ ಶ್ವೇತದ್ವೀಪದ ಅಧಿಪತಿಯು ವಾಸವಾಗಿದ್ದನು.

ತತೋಽಸ್ಯ ಸ್ಪರ್ಶನಾತ್ಸದ್ಯೋ ವಿಮುಕ್ತಃ ಸರ್ವಪಾತಕೈಃ ।
ಅನ್ನದಾನಾತ್ಪರಾಪೀಡಾ ಜಾಯತೇ ಕ್ಷುತ್ಸಮುದ್ಭವಾ ॥ ೭೧ ॥
ತಥಾ ರತ್ನಾಪಹಾರೇಣ ಸಂಜಾತಾ ಚಾಂಧತಾ ತವ ।
ನೈವಾಽನ್ಯತ್ಕಾರಣಂ ಕಿಂಚಿತ್ಸತ್ಯಮೇತನ್ಮಯೋದಿತಂ ॥ ೭೨ ॥
ತತೋ ಮಯಾ ವಿಧಿಃ ಪ್ರೋಕ್ತಃ ಪುನರೇವ ದ್ವಿಜೋತ್ತಮ ।
ವಿಷ್ಣೋಽಪಿ ಬ್ರಹ್ಮಲೋಕಸ್ತೇ ನರಕಾದತಿರಿಚ್ಯತೇ ।
ತಸ್ಮಾತ್ತತ್ರೈವ ಮಾಂ ದೇವ ಪ್ರೇಷಯಸ್ವ ಕಿಮತ್ರ ವೈ ॥ ೭೩ ॥

ಬ್ರಹ್ಮೋವಾಚ :—

ತಸ್ಮಾತ್ತತ್ರೈವ ಗಚ್ಛತ್ವಂ ಪ್ರೇಷಿತೋಽಸಿ ಕಿಮತ್ರ ವೈ ।
ನರಕೇ ತವ ವಾಸೋ ನ ಶ್ವೇತದ್ವೀಪಸಮುದ್ಭವಂ ॥ ೭೪ ॥
ಮಾಹಾತ್ಮ್ಯಂ ನಾಶಮಾಯಾತಿ ಶಾಸ್ತ್ರಂಸ್ಯಾತ್ಸತ್ಯವರ್ಜಿತಂ ।
ತಸ್ಮಾತ್ವಂ ನಿತ್ಯಮಾರೂಢೋ ವಿಮಾನೇಽತ್ರೈವ ಸುಂದರೇ ॥ ೭೫ ॥
ಗತ್ವಾ ಜಲಾಶಯೇ ತಸ್ಮಿನ್ ಯತ್ರ ಪ್ರಾಣಾಃ ಸಮುಜ್ಝಿತಾಃ ।
ತಮೇವ ನಿಜದೇಹಂ ಚ ಭಕ್ಷಯಸ್ವ ಯಥೇಚ್ಛಯಾ ॥ ೭೬ ॥
ತದ್ಭವಿಷ್ಯತಿ ಮದ್ವಾಕ್ಯಾದಕ್ಷಯಂ ಜಲಮಧ್ಯಗಂ ।
ತಾವತ್ಕಾಲಂ ಚ ದೃಷ್ಟಿಸ್ತೇ ಭೋಜ್ಯಕಾಲೇ ಭವಿಷ್ಯತಿ ॥ ೭೭ ॥

---

೭೧. ಆದುದರಿಂದ ನೀನು ಇವನ ಸ್ಪರ್ಶದಿಂದ ಸಕಲ ಪಾಪಗಳಿಂದ ಮುಕ್ತನಾಗಿರುವೆ. ನೀನು ಅನ್ನವನ್ನು ದಾನ ಮಾಡದಿರುವುದರಿಂದ ಹಸಿವು ನಿನ್ನನ್ನು ಪೀಡಿಸುತ್ತಿರುವುದು.

೭೨. ರತ್ನವನ್ನು ಅಪಹರಿಸಿದ್ದರಿಂದ ಕುರುಡನಾಗಿರುವೆ. ಬೇರೆ ಏನೂ ಕಾರಣವಿಲ್ಲ. ನಾನು ಹೇಳಿರುವುದು ನಿಜ.

೭೩. ಅದಕ್ಕೆ ನಾನು ಬ್ರಹ್ಮನನ್ನು ಕುರಿತು, "ಸ್ವಾಮಿ! ನನಗೆ ನಿನ್ನೀ ಬ್ರಹ್ಮಲೋಕವು ನರಕಕ್ಕಿಂತ ಹೆಚ್ಚಾಗಿರುವುದು. ಆದುದರಿಂದ ನನ್ನನ್ನು ನೀನು ಅಲ್ಲಿಗೇ ಕಳುಹಿಸು. ಇಲ್ಲಿರುವುದರಿಂದೇನು ಪ್ರಯೋಜನ?" ಎಂದೆನು.

೭೪—೭೬. ಬ್ರಹ್ಮನು ಹೇಳುತ್ತಾನೆ:—ಹಾಗಾದರೆ ನೀನು ಅಲ್ಲಿಗೇ ಹೋಗು. ನಿನಗೆ ನರಕವಾಸವಿಲ್ಲ. ನೀನು ನರಕವಾಸಿಯಾದರೆ ಶ್ವೇತದ್ವೀಪದ ಮಾಹಾತ್ಮ್ಯವು ಹಾಳಾಗುವುದು. ಶಾಸ್ತ್ರವೂ ಸುಳ್ಳಾಗುವುದು. ಆದುದರಿಂದ ನೀನು ಪ್ರತಿದಿನವೂ ಇಲ್ಲಿಯೇ ರಮ್ಯವಾದ ವಿಮಾನವನ್ನೇರಿ ನೀನು ಮೃತನಾಗಿರುವ ಕೊಳಕ್ಕೆ ಹೋಗಿ ಆ ನಿನ್ನ ದೇಹವನ್ನು ಸ್ವೇಚ್ಛೆಯಾಗಿ ಭಕ್ಷಿಸು.

೭೭. ನನ್ನ ಮಾತಿನಿಂದ ನೀರಿನ ನಡುವೆ ಇರುವ ನಿನ್ನ ಶರೀರವು ಅಕ್ಷಯವಾಗುವುದು. ನೀನು ಭಕ್ಷಿಸುವವರೆಗೆ ನಿನಗೆ ಕಣ್ಣುಗಳು ಕಾಣಿಸುವುವು.

ತತೋಽಹಂ ತಸ್ಯ ವಾಕ್ಯೇನ ದೀಪೋತ್ಸವದಿನೇ ಸದಾ ।
ನಿಶೀಥೇಽತ್ರ ಸಮಾಗತ್ಯ ಭಕ್ಷಯಾಮಿ ನಿಜಾಂ ತನುಮ್ ॥ ೭೮ ॥
ತತಸ್ತೃಪ್ತಿಂ ಪ್ರಗಚ್ಛಾಮಿ ಯಾವದ್ದೈವಂ ದಿನಂ ಸ್ಥಿತಂ ।
ಮಾನುಷಂ ಚ ತಥಾ ವರ್ಷ ಮೀದೃಗ್ರೂಪೋ ವ್ಯವಸ್ಥಿತಃ ॥ ೭೯ ॥
ನಾಽಸ್ತ್ಯಸಾಧ್ಯಂ ಮುನಿಶ್ರೇಷ್ಠ ತವ ಕಿಂಚಿಜ್ಜಗತ್ತ್ರಯೇ ।
ಯೇನೈಕಂ ಚುಲುಕಂ ಕೃತ್ವಾ ನಿಪೀತಃ ಪಯಸಾಂ ನಿಧಿಃ ॥ ೮೦ ॥
ತಸ್ಮಾನ್ಮಮೇ ದಯಾಂ ಕೃತ್ವಾ ಮಮೋಪರಿ ಮಹತ್ತರಾಂ ।
ಅಕೃತ್ಯಾದ್ರಕ್ಷ ಮಾಮಸ್ಮಾತ್ಸರ್ವಲೋಕವಿಗರ್ಹಿತಾತ್ ॥ ೮೧ ॥
ತಥಾ ದೃಷ್ಟಿಪ್ರದಾನಂ ಮೇ ಕುರುಷ್ವ ಮುನಿಸತ್ತಮ ।
ನಿರ್ವಿಣ್ಣೋಽಸ್ಮ್ಯಂಧಭಾವೇನ ನಾಽನ್ಯಾತ್ತ್ವತ್ತೋಽಸ್ತಿ ಮೇ ಗತಿಃ ॥ ೮೨ ॥
ತಸ್ಯ ತದ್ವಚನಂ ಶ್ರುತ್ವಾ ಕೃಪಯಾ ಮಮ ಮಾನಸಂ ।
ದ್ರವೀಭೂತಂ ತದಾ ವಾಕ್ಯಮುವೋಚಂ ತಂ ರಘೂತ್ತಮ ॥ ೮೩ ॥
ತ್ವಮನ್ನನಿಷ್ಕ್ರಯಂ ದೇಹಿ ಕಂಠಸ್ಥಮಿಹ ಭೂಷಣಂ ।
ಯೇನ ನಾಶಂ ಪ್ರಯಾತ್ಯೇಷಾ ಬುಭುಕ್ಷಾ ಜಠರೋದ್ಭವಾ ॥ ೮೪ ॥

---

೭೮. "ಆದುದರಿಂದ ನಾನು ಆ ಬ್ರಹ್ಮನ ಮಾತಿನಂತೆ ದೀಪೋತ್ಸವದ ದಿವಸ ಯಾವಾಗಲೂ ಅರ್ಧರಾತ್ರಿಯ ವೇಳೆಯಲ್ಲಿ ಇಲ್ಲಿಗೆ ಬಂದು ನನ್ನ ದೇಹವನ್ನು ಭಕ್ಷಿಸುತ್ತೇನೆ.

೭೯. ಆದುದರಿಂದ ದೇವತೆಗಳ ದಿವಸವಾದ ಮನುಷ್ಯರ ಒಂದು ವರ್ಷ ಕಾಲದವರೆಗೆ ತೃಪ್ತನಾಗಿ ಇಂತಹ ರೂಪದವನಾಗಿರುವೆನು.

೮೦. ಮುನಿವರ್ಯನೆ! ಒಂದೇ ಬೊಗಸೆಯಿಂದ ಸಮುದ್ರವನ್ನು ಕುಡಿದ ನಿನಗೆ ಮೂರು ಲೋಕಗಳಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ.

೮೧. ಆದುದರಿಂದ ನನ್ನಲ್ಲಿ ಅತಿಶಯವಾಗಿ ದಯೆಮಾಡಿ ನನ್ನನ್ನು ಸಮಸ್ತಲೋಕಗಳಲ್ಲಿ ನಿಂದ್ಯವಾದ ಈ ಅಕಾರ್ಯದಿಂದ ಕಾಪಾಡು.

೮೨. ಮುನಿವರ್ಯನೆ! ಹಾಗೆಯೇ ನನಗೆ ಕಣ್ಣನ್ನು ಕೊಡು. ನಾನು ಈ ಅಂಧ್ಯದಿಂದ ವ್ಯಥೆಗೊಂಡಿದ್ದೇನೆ. ನನಗೆ ನಿನಗಿಂತ ಬೇರೆ ಯಾರೂ ಗತಿಯಿಲ್ಲ."

೮೩. ರಾಘವ! ಅವನ ಮಾತನ್ನು ಕೇಳಿ ದಯೆಯಿಂದ ನನ್ನ ಮನಸ್ಸು ಕರಗಿತು. ಆಗ ನಾನು ಅವನನ್ನು ಕುರಿತು ಇಂತೆಂದೆನು.

೮೪. "ನೀನು ಅನ್ನದಾನ ಮಾಡದ ದೋಷದ ಪರಿಹಾರಕ್ಕಾಗಿ ನಿನ್ನ ಕುತ್ತಿಗೆಯಲ್ಲಿರುವ ಈ ಭೂಷಣವನ್ನು ದಾನಮಾಡು. ಅದರಿಂದ ನಿನ್ನ ಹೊಟ್ಟೆಯಲ್ಲುಂಟಾದ ಹಸಿವು ಹೋಗುವುದು.

ತಥಾಽದ್ಯಪ್ರಭೃತಿ ಪ್ರಾಜ್ಞ ರತ್ನದೀಪಾನ್ ಸುನಿರ್ಮಲಾನ್ ।
ಅತ್ರೈವ ಸರಸಸ್ತೀರೇ ದೇಹಿ ದಾಮೋದರಾಯ ಚ ॥ ೮೫ ॥
ಯೇನ ಸಂಜಾಯತೇ ದೃಷ್ಟಿಃ ಶಾಶ್ವತೀ ತವ ನಿರ್ಮಲಾ ।
ಮಮ ವಾಕ್ಯಾದಸಂದಿಗ್ಧಂ ಸತ್ಯೇನಾತ್ಮಾನಮಾಲಭೇ ॥ ೮೬ ॥
ರಾಜೋವಾಚ :—
ಮಮೋಪರಿ ದಯಾಂ ಕೃತ್ವಾ ತ್ವಮೇವ ಮುನಿಸತ್ತಮ ।
ಗೃಹಾಣ ರತ್ನಸಂಭೂತಂ ಕಂಠಾಭರಣಮುತ್ತಮಂ ॥ ೮೭ ॥
ತತೋ ದಯಾಽಭಿಭೂತೇನ ಮಯಾ ತಸ್ಯ ಪ್ರತಿಗ್ರಹಃ ।
ನಿಃಸ್ಪೃಹೇಣಾಽಪಿ ಸಂಚೀರ್ಣೋ ಮುನಿನಾಽರಣ್ಯವಾಸಿನಾ ॥ ೮೮ ॥
ತತಃ ಪ್ರಕ್ಷಾಲ್ಯ ಮೇ ಪಾದೌ ಯಾವತ್ತೇನಾನ್ನ ನಿಷ್ಕ್ರಯೇ ।
ವಿಭೂಷಣಮಿದಂ ದತ್ತಂ ಸದ್ಭಕ್ತ್ಯಾ ಭಾವಿತಾತ್ಮನಾ ॥ ೮೯ ॥
ತತಸ್ತಸ್ಯ ಪ್ರಣಷ್ಟಾ ಸಾ ಬುಭುಕ್ಷಾ ತತ್ಕ್ಷಣಾನ್ನೃಪ ।
ಸಂಜಾತಾ ಪರಮಾ ತೃಪ್ತಿರ್ದೇವಪೀಯೂಷ ಸಂಭವಾ ॥ ೯೦ ॥
ತಸ್ಯ ನಷ್ಟಂ ಮೃತಂ ಕಾಯಂ ತಚ್ಚ ಜೀರ್ಣಂ ಪುರೋದ್ಭವಂ ।
ಯದಾಸೀದಕ್ಷಯಂ ನಿತ್ಯಂ ತಸ್ಮಿಂಸ್ತೋಯೇ ವ್ಯವಸ್ಥಿತಂ ॥ ೯೧ ॥
ತತಃ ಸಂಸ್ಥಾಪಿತಸ್ತೇನ ತಸ್ಮಿನ್ ಸ್ಥಾನೇ ಸುಭಕ್ತಿತಃ ।
ದಾಮೋದರೋ ರಘುಶ್ರೇಷ್ಠ ಕೃತ್ವಾ ಪ್ರಾಸಾದಮುತ್ತಮಂ ॥ ೯೨ ॥

---

೮೫. ಹಾಗೆಯೇ ಈ ದಿನ ಮೊದಲ್ಗೊಂಡು ಈ ಸರೋವರದ ದಡದಲ್ಲಿ ದಾಮೋದರನಿಗೆ ನಿರ್ಮಲವಾದ ರತ್ನದೀಪಗಳನ್ನು ದಾನ ಮಾಡು.

೮೬. ಅದರಿಂದ ನಿನಗೆ ನನ್ನ ಮಾತಿನಿಂದ ಸ್ಥಿರವಾದ ವೃಷ್ಟಿಯು ಲಭಿಸುವುದು. ನನ್ನ ಆಣೆಯಾಗಿಯೂ ಅದು ನಿಜ'' ಎಂದೆನು.

೮೭. ರಾಜನು ಹೇಳುತ್ತಾನೆ:—ಮುನಿವರ್ಯನೆ! ನನ್ನ ಮೇಲೆ ದಯೆಯಿಟ್ಟು ನೀನೇ ಈ ರತ್ನದ ಕಂಠಾಭರಣವನ್ನು ತೆಗೆದುಕೋ.

೮೮. ಅನಂತರ ಅರಣ್ಯವಾಸಿಯಾದ ನಾನು ಆಶೆಯಿಲ್ಲದವನಾದರೂ ದಯೆಯಿಂದ ದಾನವನ್ನು ಸ್ವೀಕರಿಸಲು ಒಪ್ಪಿದೆನು.

೮೯. ಅವನು ಅನ್ನದಾನ ಮಾಡದ ಪ್ರಾಯಶ್ಚಿತ್ತಕ್ಕಾಗಿ ಭಕ್ತಿಯಿಂದ ನನ್ನ ಪಾದಗಳನ್ನು ತೊಳೆದು ಈ ರತ್ನಾಭರಣವನ್ನು ಕೊಟ್ಟನು.

೯೦. ದೊರೆಯೆ! ಬಳಿಕ ಅವನ ಹಸಿವು ಕೂಡಲೆ ನಾಶವಾಗಿ ಅಮೃತ ಪಾನದ ತೃಪ್ತಿಯುಂಟಾಯಿತು.

೯೧–೯೨. ಆ ಸರೋವರದಲ್ಲಿ ಅಕ್ಷಯವಾಗಿದ್ದ ಮೃತವಾದ ಅವನ ಹಳೆಯ ಶರೀರವು ನಾಶವಾಯಿತು. ಅನಂತರ ಅವನು ಅಲ್ಲಿ ಭಕ್ತಿಯಿಂದ ಉತ್ತಮವಾದ ಆಲಯವನ್ನು ನಿರ್ಮಿಸಿ ದಾಮೋದರನನ್ನು ಪ್ರತಿಷ್ಠೆ ಮಾಡಿದನು.

ತಸ್ಯಾಗ್ರೇ ಶ್ರದ್ಧಯಾ ಯುಕ್ತೋ ದೀಪಂ ದದ್ಯಾದ್ಯಥಾ ಯಥಾ ।
ತಥಾ ತಥಾ ಭವೇದ್ದೃಷ್ಟಿಸ್ತಸ್ಯ ನಿತ್ಯಂ ಸುನಿರ್ಮಲಾ ॥ ೯೩ ॥
ತತೋ ಮಾಸಾತ್ಸಮಾಸಾದ್ಯ ದಿವ್ಯ ಚಕ್ಷುರ್ಮಹೀಪತಿಃ ।
ಸ ಬಭೂವ ನೃಪಶ್ರೇಷ್ಠಃ ಸ್ಪೃಹಣೀಯತಮಃ ಸತಾಂ ॥ ೯೪ ॥
ತತಃ ಪ್ರೋವಾಚ ಮಾಂ ಹೃಷ್ಟಃ ಪ್ರಣಿಪತ್ಯ ಕೃತಾಂಜಲಿಃ ।
ಹರ್ಷಗದ್ಗದಯಾ ವಾಚಾ ಪ್ರಸ್ಥಿತಸ್ತ್ರಿದಿವಂ ಪ್ರತಿ ॥ ೯೫ ॥
ತ್ವತ್ಪ್ರಸಾದಾತ್ಪ್ರಣಷ್ಟಾ ಮೇ ಬುಭುಕ್ಷಾಽತಿಸುದಾರುಣಾ ।
ತಥಾ ದೃಷ್ಟಿಶ್ಚ ಸಂಜಾತಾ ದಿವ್ಯಾ ಬ್ರಾಹ್ಮಣಸತ್ತಮ ॥ ೯೬ ॥
ಅನುಜ್ಞಾಂ ದೇಹಿ ಮೇ ತಸ್ಮಾದ್ಯೇನ ಗಚ್ಛಾಮಿ ಸಾಂಪ್ರತಂ ।
ಬ್ರಹ್ಮಲೋಕಂ ಮುನಿಶ್ರೇಷ್ಠ ತೀರ್ಥಸ್ಯಾಽಸ್ಯ ಪ್ರಭಾವತಃ ॥ ೯೭ ॥
ತತೋ ಮಯಾ ವಿನಿರ್ಮುಕ್ತಃ ಪ್ರಣಿಪತ್ಯ ಮುಹುರ್ಮುಹುಃ ।
ಸ ಜಗಾಮ ಪ್ರಹೃಷ್ಟಾತ್ಮಾ ಬ್ರಹ್ಮಲೋಕಂ ಸನಾತನಂ ॥ ೯೮ ॥
ಏವಂ ಮೇ ಭೂಷಣಮಿದಂ ಜಾತಂ ಹಸ್ತಗತಂ ಪುರಾ ।
ತವ ಯೋಗ್ಯಮಿದಂ ಜ್ಞಾತ್ವಾ ತುಭ್ಯಂ ತೇನ ನಿವೇದಿತಂ ॥ ೯೯ ॥

---

೯೩. ಆ ದಾಮೋದರನ ಮುಂದೆ ಅವನು ನಿತ್ಯವೂ ದೀಪವನ್ನು ದಾನ ಮಾಡಿದ ಹಾಗೆಲ್ಲ ಅವನ ದೃಷ್ಟಿಯು ನಿರ್ಮಲವಾಯಿತು.

೯೪. ಆ ರಾಜನು ಒಂದು ತಿಂಗಳಲ್ಲಿ ದಿವ್ಯವಾದ ನೇತ್ರವನ್ನು ಪಡೆದು ಸಜ್ಜನರಿಗೆ ಪ್ರಿಯನಾದನು.

೯೫. ಬಳಿಕ ಅವನು ಸ್ವರ್ಗಲೋಕವನ್ನು ಕುರಿತು ಹೊರಡುತ್ತ ಸಂತೋಷದಿಂದ ನನಗೆ ನಮಸ್ಕರಿಸಿ ಕೈಮುಗಿದುಕೊಂಡು ಆನಂದದಿಂದ ಗದ್ಗದವಾದ ಮಾತಿನಿಂದ ಇಂತೆಂದನು.

೯೬. "ಬ್ರಾಹ್ಮಣೋತ್ತಮ! ನಿನ್ನ ಅನುಗ್ರಹದಿಂದ ಅತಿ ಭಯಂಕರವಾದ ನನ್ನ ಹಸಿವು ಮಾಯವಾಯಿತು. ದಿವ್ಯದೃಷ್ಟಿಯುಂಟಾಯಿತು.

೯೭. ಆದುದರಿಂದ ಈಗ ಈ ತೀರ್ಥದ ಮಾಹಾತ್ಮ್ಯದಿಂದ ನಾನು ಬ್ರಹ್ಮಲೋಕಕ್ಕೆ ತೆರಳಲು ಅನುಮತಿಯನ್ನು ಕೊಡು."

೯೮. ಬಳಿಕ ನಾನು ಬೀಳ್ಕೊಡಲು ಅವನು ಬಾರಿಬಾರಿಗೂ ವಂದಿಸುತ್ತ ಸಂತೋಷದಿಂದ ಶಾಶ್ವತವಾದ ಬ್ರಹ್ಮಲೋಕಕ್ಕೆ ಹೋದನು.

೯೯. ಹೀಗೆ ಈ ಒಡವೆಯು ಹಿಂದೆ ನನ್ನ ಕೈಯನ್ನು ಸೇರಿತು. ನಿನಗೆ ಉಚಿತವಾದುದೆಂದು ಈಗ ಇದನ್ನು ನಿನಗಿತ್ತಿರುವೆನು.

ತತಃ ಪ್ರಭೃತಿ ರಾಜೇಂದ್ರ ಸಮಾಗತ್ಯಾಽತ್ರ ಮಾನವಾಃ ।
ರತ್ನದೀಪಾನ್ ಪ್ರದಾಯೋಚ್ಚೈಃ ಸ್ನಾತ್ವಾಽತ್ರ ಸಲಿಲೇ ಶುಭೇ ।
ಕಾರ್ತಿಕೇ ಮಾಸಿ ನಿರ್ಯಾಂತಿ ದೇಹಾಂತೇ ತ್ರಿದಿವಾಲಯಂ ॥ ೧೦೦ ॥
ಯೇ ಪುನಃ ಪ್ರಾಣಸಂತ್ಯಾಗಂ ಪ್ರಕುರ್ವಂತಿ ಸಮಾಹಿತಾಃ ।
ಪಾಪಾತ್ಮಾನೋಽಪಿ ತೇ ಯಾಂತಿ ಬ್ರಹ್ಮಲೋಕಂ ರಘೂತ್ತಮ ॥ ೧೦೧ ॥
ತತೋ ದೃಷ್ಟ್ವಾ ಸಹಸ್ರಾಕ್ಷಃ ಪ್ರಭಾವಂ ತಜ್ಜಲೋದ್ಭವಂ ।
ಪಾಂಸುಭಿಃ ಪೂರಯಾಮಾಸ ಸಮಂತಾದ್ಭಯಸಂಕುಲಂ ॥ ೧೦೨ ॥
ತದದ್ಯ ದಿವಸಃ ಪ್ರಾಪ್ತೋ ದೀಪೋತ್ಸವಸಮುದ್ಭವಃ ।
ಸುಪುಣ್ಯೋಽತ್ರ ಮಮಾದೇಶಾತ್ತ್ವಂ ಕುರುಷ್ವ ಸುಕೂಪಿಕಾಂ ॥ ೧೦೩ ॥
ತಸ್ಯಾಂ ಸ್ನಾನಂ ವಿಧಾಯಾಽಥ ಪಿತೄಂಸ್ತರ್ಪಯ ರಾಘವ ।
ದೇವಸ್ಯಾಽಸ್ಯ ಪುರೋ ದೇಹಿ ರತ್ನದೀಪಮನುತ್ತಮಂ ॥ ೧೦೪ ॥
ಯೇನ ಸಂಜಾಯತೇ ಸಿದ್ಧಿರ್ಬ್ರಹ್ಮಲೋಕಸಮುದ್ಭವಾ ।
ಅನೇನೈವ ಶರೀರೇಣ ಸತ್ಯಮೇತನ್ಮಯೋದಿತಂ ॥ ೧೦೫ ॥
ತತಸ್ತೇ ರಾಘವಾಽಽದೇಶಾತ್ಸರ್ವೇ ರಾಕ್ಷಸ ವಾನರಾಃ ।
ತಸ್ಮಿನ್ ದೇಶೇ ವಿನಿದಧುಃ ಕೂಪಿಕಾಂ ವಿಮಲೋದಕಾಂ ॥ ೧೦೬ ॥

---

೧೦೦. ದೊರೆಯೆ! ಅದು ಮೊದಲ್ಗೊಂಡು ಮಾನವರು ಕಾರ್ತಿಕ ಮಾಸದಲ್ಲಿ ಇಲ್ಲಿಗೆ ಬಂದು ಮಿಂದು ರತ್ನದೀಪಗಳನ್ನು ದಾನ ಮಾಡಿ ಅವಸಾನ ಕಾಲದಲ್ಲಿ ಸ್ವರ್ಗವನ್ನು ಸೇರುವರು.

೧೦೧. ರಾಘವ! ಪಾಪಿಗಳೂ ಇಲ್ಲಿ ಮೃತರಾದರೆ ಬ್ರಹ್ಮಲೋಕಕ್ಕೆ ಹೋಗುವರು.

೧೦೨. ಅನಂತರ ಇಂದ್ರನು ಈ ನೀರಿನ ಪ್ರಭಾವವನ್ನು ನೋಡಿ ಈ ಸರೋವರವನ್ನು ಧೂಳಿನಿಂದ ತುಂಬಿದನು.

೧೦೩. ಈಗ ಪುಣ್ಯಕರವಾದ ದೀಪೋತ್ಸವದ ದಿನವು ಒದಗಿದೆ. ಆದುದರಿಂದ ನೀನು ನನ್ನ ಅಪ್ಪಣೆಯಿಂದ ಇಲ್ಲಿ ಒಳ್ಳೆಯ ಬಾವಿಯನ್ನು ನಿರ್ಮಿಸು.

೧೦೪. ರಾಘವ! ಅನಂತರ ಅದರಲ್ಲಿ ಮಿಂದು ಪಿತೃಗಳಿಗೆ ತರ್ಪಣಮಾಡು. ಈ ದಾಮೋದರನ ಮುಂದೆ ಉತ್ತಮವಾದ ರತ್ನದೀಪವನ್ನು ಇಡು.

೧೦೫. ಅದರಿಂದ ಈ ದೇಹದಿಂದಲೇ ಬ್ರಹ್ಮಲೋಕವು ಸಿದ್ಧಿಸುವುದು. ನಾನು ಹೇಳಿರುವ ಈ ವಿಷಯವು ನಿಜವಾದುದು.

೧೦೬. ತರುವಾಯ ಶ್ರೀರಾಮನ ಅಪ್ಪಣೆಯಿಂದ ಎಲ್ಲ ರಾಕ್ಷಸರೂ, ವಾನರರೂ ಆ ಸ್ಥಳದಲ್ಲಿ ನಿರ್ಮಲವಾದ ಜಲವುಳ್ಳ ಕೂಪವನ್ನು ತೋಡಿದರು.

ತತ್ರ ಸ್ನಾತ್ವಾ ಪಿತೄಂಸ್ತರ್ಪ್ಯ ರತ್ನದೀಪಂ ಪ್ರದಾಯ ಚ ।
ಸಮಸ್ತಂ ಕಾರ್ತಿಕಂ ಯಾವದಯೋಧ್ಯಾಂ ಪ್ರಸ್ಥಿತಾಸ್ತತಃ ॥ ೧೦೭ ॥
ತತೋ ವಿಭೀಷಣಂ ಮುಕ್ತ್ವಾ ಹನೂಮಂತಂ ಚ ವಾನರಂ ।
ಬ್ರಹ್ಮಲೋಕಂ ಗತಾಃ ಸರ್ವೇ ತತ್ತೀರ್ಥಸ್ಯ ಪ್ರಭಾವತಃ ॥ ೧೦೮ ॥

ಸೂತ ಉವಾಚ :—

ಅದ್ಯಾಽಪಿ ದೀಪದಾನಂ ಯಃ ಕುರುತೇ ತತ್ರ ಸಾದರಂ ।
ಸಂಪ್ರಾಪ್ತೇ ಕಾರ್ತಿಕೇ ಮಾಸಿ ಸ್ನಾತ್ವಾ ತತ್ರ ಜಲೇ ಶುಭೇ ।
ಸ ಸರ್ವಪಾತಕೈರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೧೦೯ ॥
ಏವಂ ತತ್ರ ಸಮುತ್ಪನ್ನಂ ತತ್ತಡಾಗಂ ಶುಭಾವಹಂ ।
ಆನರ್ತೀಯಂ ತಥಾ ವಿಷ್ಣುಕೂಪಿಕಾ ಸಾ ಚ ಶೋಭನಾ ॥ ೧೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಆನರ್ತಕತೀರ್ಥಕೂಪಿಕಾಮಾಹಾತ್ಮ್ಯವರ್ಣನಂ"
ನಾಮ ತ್ರ್ಯಧಿಕಶತತಮೋಽಧ್ಯಾಯಃ

---

೧೦೭. ಅವರು ಕಾರ್ತಿಕ ಮಾಸವೆಲ್ಲ ಅಲ್ಲಿ ಮಿಂದು ಪಿತೃತರ್ಪಣಮಾಡಿ ರತ್ನದೀಪವನ್ನು ಕೊಟ್ಟು ಅಯೋಧ್ಯೆಗೆ ತೆರಳಿದರು.

೧೦೮. ಬಳಿಕ ಎಲ್ಲರೂ ವಿಭೀಷಣ ಮತ್ತು ಆಂಜನೇಯರನ್ನು ಭೂಮಿಯಲ್ಲಿ ಬಿಟ್ಟು ಆ ತೀರ್ಥದ ಮಾಹಾತ್ಮ್ಯದಿಂದ ಬ್ರಹ್ಮಲೋಕಕ್ಕೆ ಹೋದರು.

೧೦೯. ಸೂತನು ಹೇಳುತ್ತಾನೆ:—ಈಗಲೂ ಕಾರ್ತಿಕ ಮಾಸದಲ್ಲಿ ಆ ತೀರ್ಥದ ನೀರಿನಲ್ಲಿ ಮಿಂದು ಭಕ್ತಿಯಿಂದ ದೀಪವನ್ನು ದಾನ ಮಾಡಿದವನು ಸಮಸ್ತ ಪಾಪ ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

೧೧೦. ಹೀಗೆ ಅಲ್ಲಿ ಆನರ್ತೀಯತಡಾಗವೂ, ಮಂಗಳಕರವಾದ ವಿಷ್ಣು ಕೂಪಿಕೆಯೂ ಉಂಟಾದುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಆನರ್ತಕತೀರ್ಥಕೂಪಿಕಾಮಾಹಾತ್ಮ್ಯವರ್ಣನ" ವೆಂಬ
ನೂರಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರುತ್ತರಶತತಮೋಽಧ್ಯಾಯಃ

### ಕುಶೇಶ್ವರಲವೇಶ್ವರಪ್ರತಿಷ್ಠಾವರ್ಣನಂ

ಋಷಯ ಊಚುಃ:—

ರಾಕ್ಷಸೈಸ್ತತ್ರ ಲಿಂಗಾನಿ ಯಾನಿ ಭಕ್ತ್ಯಾ ಸಮನ್ವಿತೈಃ ।
ಸ್ಥಾಪಿತಾನಿ ಚ ಮಾಹಾತ್ಮ್ಯಂ ತೇಷಾಂ ಸೂತ ಪ್ರಕೀರ್ತಯ ॥ ೧ ॥

ಸೂತ ಉವಾಚ:—

ತೇಷಾಂ ಪೂಜಾ ಕೃತೇ ರೌದ್ರಾ ರಾಕ್ಷಸಾ ಬಲವತ್ತರಾಃ ।
ಲಂಕಾಪುರ್ಯಾಃ ಸಮಾಯಾಂತಿ ಸದೈವ ಶತಶಃ ಪುರಾ ॥ ೨ ॥
ಆಗಚ್ಛಂತೋ ವ್ರಜಂತಸ್ತೇ ಮಾರ್ಗೇ ಕ್ಷೇತ್ರೇ ಚ ತತ್ರ ಚ ।
ಭಕ್ಷಯಂತಿ ಜನೌಘಾಂಶ್ಚ ಬಾಲವೃದ್ಧಾಂ ಜನಾನಪಿ ॥ ೩ ॥
ತತಸ್ತೇ ಮಾನವಾಃ ಸರ್ವೇ ಪ್ರದ್ರವಂತಿ ಸಮಂತತಃ ।
ಇತಶ್ಚೇತಶ್ಚ ಧಾವಂತಿ ಪ್ರಾಣರಕ್ಷಣತತ್ಪರಾಃ ॥ ೪ ॥
ತಥಾಽನ್ಯೇ ಬಹವೋ ಗತ್ವಾ ಹ್ಯಯೋಧ್ಯಾಖ್ಯಾಂ ಮಹಾಪುರೀಂ ।
ರಾಮಪುತ್ರಂ ನೃಪಶ್ರೇಷ್ಠಂ ಕುಶಂ ಪ್ರೋಚುಃ ಸುದುಃಖಿತಾಃ ॥ ೫ ॥

---

### ಕನ್ನಡದ ಅನುವಾದ

#### ಕುಶೇಶ್ವರಲವೇಶ್ವರಪ್ರತಿಷ್ಠಾವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಅಲ್ಲಿ ರಾಕ್ಷಸರು ಭಕ್ತಿಯಿಂದ ಸ್ಥಾಪಿಸಿರುವ ಲಿಂಗಗಳ ಮಾಹಾತ್ಮ್ಯವನ್ನು ಹೇಳು.

೨. ಸೂತನು ಹೇಳುತ್ತಾನೆ:—ಆ ಲಿಂಗಗಳನ್ನು ಪೂಜಿಸಲೋಸುಗ ಲಂಕಾ ಪಟ್ಟಣದಿಂದ ಯಾವಾಗಲೂ ಬಲಿಷ್ಠರೂ, ಭಯಂಕರರೂ ಆದ ರಾಕ್ಷಸರು ಬರುತ್ತಾರೆ.

೩. ಅವರು ಇಲ್ಲಿಗೆ ಬರುವಾಗಲೂ, ಹೋಗುವಾಗಲೂ ದಾರಿಯಲ್ಲಿಯೂ, ಕ್ಷೇತ್ರದಲ್ಲಿಯೂ ಬಾಲಕರೂ, ಮುದುಕರೂ ಆದ ಜನರನ್ನೂ, ಇತರರನ್ನೂ ಭಕ್ಷಿಸುವರು.

೪. ಆದುದರಿಂದ ಸಮಸ್ತ ಮಾನವರೂ ಪ್ರಾಣವನ್ನು ರಕ್ಷಿಸಿಕೊಳ್ಳಲು ಇಲ್ಲಿ ಅಲ್ಲಿ ಓಡುತ್ತಾರೆ.

೫. ಹಾಗೆಯೇ ಬಹುಮಂದಿ ಪ್ರಜೆಗಳು ಅಯೋಧ್ಯಾನಗರಿಗೆ ಹೋಗಿ ಅತ್ಯಂತ ದುಃಖದಿಂದ ರಾಮನ ಮಗನಾದ ಕುಶನನ್ನು ಕುರಿತು ಇಂತೆಂದರು.

ತವ ಪಿತ್ರಾ ಸಮಂ ಪ್ರಾಪ್ತಾಃ ಪೂರ್ವಂ ಯೇ ರಾಕ್ಷಸಾ ನೃಪ ।
ಹಾಟಕೇಶ್ವರಜೇ ಕ್ಷೇತ್ರೇ ವಿಭೀಷಣಪುರಸ್ಸರಾಃ ॥ ೬ ॥
ಸಂಸ್ಥಾಪಿತಾನಿ ಲಿಂಗಾನಿ ಚತುರ್ವಕ್ತ್ರಾಣಿ ತತ್ರವೈ ।
ರಾಕ್ಷಸೇಂದ್ರೈಃ ಸ್ವಮಂತ್ರೈಸ್ತೈಸ್ತಸ್ಯ ಕ್ಷೇತ್ರಸ್ಯ ಪಶ್ಚಿಮೇ ॥ ೭ ॥
ತೇನೈವ ಚಾನುಷಂಗೇಣ ಸಮಾಗಚ್ಛಂತಿ ನಿತ್ಯಶಃ ।
ತಸ್ಮಿನ್ ಕ್ಷೇತ್ರೇ ಪ್ರಕುರ್ವಂತಿ ತಥಾ ಲೋಕಸ್ಯ ಭಕ್ಷಣಂ ॥ ೮ ॥
ಯದಿ ವಾ ತಾನಿ ಲಿಂಗಾನಿ ಕಶ್ಚಿತ್ಸಂಪೂಜಯೇನ್ನರಃ ।
ಸದ್ಯೋ ವಿನಾಶಮಾಯಾತಿ ಸೋಽಪ್ಯನರ್ಥೋ ಮಹಾನಭೂತ್ ॥ ೯ ॥
ತಸ್ಮಾದ್ಯದಿ ನ ರಕ್ಷಾಂ ನಃ ಕರಿಷ್ಯಸಿ ಮಹೀಪತೇ ।
ತಚ್ಛನೈರ್ಯಾಸ್ಯತೇ ಲೋಕಃ ಸರ್ವೋಽಯಂ ಸಂಕ್ಷಯಂ ಧ್ರುವಂ ॥೧೦॥
ತಚ್ಚ ಕ್ಷೇತ್ರಂ ವಿಶೇಷೇಣ ಯತ್ರಾಗಚ್ಛಂತಿ ತೇ ಸದಾ ।
ರಾಕ್ಷಸಾಃ ಕ್ರೂರಕರ್ಮಾಣೋ ಮಹಾಮಾಂಸಸ್ಯ ಲೋಲುಪಾಃ ॥ ೧೧ ॥
ತಚ್ಛ್ರುತ್ವಾ ಸ ನೃಪಸ್ತೂರ್ಣಂ ಸ್ವಾಽಮಾತ್ಯಾನಾಂ ನ್ಯವೇದಯತ್ ।
ರಾಜ್ಯಭಾರಂ ತತಸ್ತತ್ರ ಬಲೇನ ಸಹಿತೋ ಯಯೌ ॥ ೧೨ ॥
ಅಥ ಪ್ರಾಪ್ತಂ ಕುಶಂ ದೃಷ್ಟ್ವಾ ಹತಶೇಷಾ ದ್ವಿಜೋತ್ತಮಾಃ ।
ಪ್ರೋಚುಸ್ತಂ ಭರ್ತ್ಸಯಿತ್ವಾತು ವಚನೈಃ ಪರುಷಾಕ್ಷರೈಃ ॥ ೧೩ ॥

---

೬–೭. "ಅರಸ! ಹಿಂದೆ ನಿನ್ನ ತಂದೆಯಾದ ರಾಮನೊಡನೆ ವಿಭೀಷಣ ಮೊದಲಾದ ರಾಕ್ಷಸರು ಹಾಟಕೇಶ್ವರಕ್ಷೇತ್ರಕ್ಕೆ ಬಂದು ಆ ಕ್ಷೇತ್ರದ ಪಶ್ಚಿಮದಲ್ಲಿ ತಮ್ಮ ಮಂತ್ರಗಳಿಂದ ನಾಲ್ಕುಮುಖಗಳುಳ್ಳ ಲಿಂಗಗಳನ್ನು ಪ್ರತಿಷ್ಠೆ ಮಾಡಿರುವರು.

೮. ಅವರು ಅದೇ ಕ್ರಮದಿಂದ ನಿತ್ಯವೂ ಆ ಕ್ಷೇತ್ರಕ್ಕೆ ಬಂಧು ಮನುಷ್ಯರನ್ನು ಭಕ್ಷಿಸುತ್ತಾರೆ.

೯. ಆ ಲಿಂಗಗಳನ್ನು ಯಾವನಾದರೂ ಮಾನವನು ಪೂಜಿಸಿದ್ದೇ ಆದರೆ ಅವನು ಕೂಡಲೆ ಸಾಯುವನು. ಬಹಳ ಅನಿಷ್ಟವೂ ಆಗುವುದು.

೧೦. ದೊರೆಯೆ! ಆದುದರಿಂದ ನೀನು ನಮ್ಮನ್ನು ಸಲಹದಿದ್ದರೆ ಈ ಸಮಸ್ತ ಲೋಕವೂ ಮೆಲ್ಲನೆ ನಿಶ್ಚಯವಾಗಿಯೂ ನಾಶವಾಗುವುದು.

೧೧. ಮಾಂಸದಲ್ಲಿ ಆಶೆಯುಳ್ಳ ಕ್ರೂರಕರ್ಮಿಗಳಾದ ರಾಕ್ಷಸರು ಆ ಕ್ಷೇತ್ರಕ್ಕೆ ಬರುವುದರಿಂದ ಆ ಕ್ಷೇತ್ರವೂ ಹಾಳಾಗುವುದು."

೧೨. ಆ ಕುಶನು ಆ ಮಾತನ್ನು ಕೇಳಿ ಶೀಘ್ರವಾಗಿ ತನ್ನ ರಾಜ್ಯಭಾರವನ್ನು ಮಂತ್ರಿಗಳಿಗೆ ವಹಿಸಿ ಸೈನ್ಯದೊಡನೆ ಹೊರಟನು.

೧೩. ಬಳಿಕ ಮಡಿದುಳಿದ ಬ್ರಾಹ್ಮಣರು ಬಂದಿರುವ ಕುಶನನ್ನು ನೋಡಿ ಅವನನ್ನು ಕಠಿನಮಾತಿನಿಂದ ಗದರಿಸಿ ಹೀಗೆಂದರು.

ಕಿಮೇವಂ ಕ್ರಿಯತೇ ರಾಜ್ಯಂ ಯಥಾ ತ್ವಂ ಕ್ಷತ್ರಿಯಾಧಮಃ ।
ಕರೋಷಿ ಯತ್ರ ವಿಧ್ವಂಸಂ ರಾಕ್ಷಸೈರ್ನೀಯತೇ ಜನಃ ॥ ೧೪ ॥
ನೂನಂ ಜಾತೋ ನ ರಾಮೇಣ ಭವಾನ್ರಾವಣಸಂಭವಃ ।
ಯೇನೋಪೇಕ್ಷಸಿ ಸರ್ವಾನ್ನೋ ರಾಕ್ಷಸೈಃ ಪರಿಪೀಡಿತಾನ್ ॥ ೧೫ ॥
ಸತ್ಯಮೇತತ್ಪುರಾ ಪ್ರೋಕ್ತಂ ನೀತಿಶಾಸ್ತ್ರವಿಚಕ್ಷಣೈಃ ।
ಯಸ್ಯ ವರ್ಣಸ್ಯ ಯೋ ರಾಜಾ ಸವರ್ಣಃ ಸುಖಮೇಧತೇ ॥ ೧೬ ॥
ತಸ್ಮಾತ್ತ್ವಂ ರಾಕ್ಷಸೋದ್ಭೂತೋ ರಾಕ್ಷಸೈರ್ದ್ವಿಜಸತ್ತಮಾನ್ ।
ಉಪೇಕ್ಷಸೇ ತತಃ ಸರ್ವಾನ್ ಭಕ್ಷ್ಯಮಾಣಾಂಸ್ತಥಾಽಪರಾನ್ ॥ ೧೭ ॥
ಆರ್ತಾನಾಂ ಯತ್ರ ಲೋಕಾನಾಂ ದೋಷೈಃ ಪಾರ್ಥಿವ ಸಂಭವೈಃ ।
ಪತಂತ್ಯಶ್ರೂಣಿ ಭೂಪೃಷ್ಠೇ ತತ್ರ ರಾಜಾ ಸ ದೋಷಭಾಕ್ ॥ ೧೮ ॥

**ಕುಶ ಉವಾಚ :—**

ಪ್ರಸಾದಃ ಕ್ರಿಯತಾಂ ವಿಪ್ರಾ ನ ಮಯಾ ಜ್ಞಾತಮೀದೃಶಂ ।
ರಾಕ್ಷಸೇಭ್ಯಃ ಸಮುತ್ಪನ್ನೋ ಬ್ರಾಹ್ಮಣಾನಾಂ ಪರಾಭವಃ ॥ ೧೯ ॥
ಅದ್ಯ ಪ್ರಭೃತಿ ಯಃ ಕಶ್ಚಿದ್ವಿನಾಶಂ ನೀಯತೇ ಕ್ವಚಿತ್ ।
ಬ್ರಾಹ್ಮಣೋ ವಾಽಥವಾಽನ್ಯೋಽಪಿ ತದ್ಭವೇನ್ಮಮ ಪಾತಕಂ ॥ ೨೦ ॥

---

೧೪. "ರಾಜ್ಯವನ್ನು ಏತಕ್ಕೆ ಹೀಗೆ ಹಾಳುಮಾಡುತ್ತಿರುವೆ? ನೀಚಕ್ಷತ್ರಿಯನಾದ ನೀನು ಏನು ಮಾಡುತ್ತಿರುವೆ? ರಾಜ್ಯದಲ್ಲಿ ರಾಕ್ಷಸರು ಜನರನ್ನು ನಾಶಗೊಳಿಸುತ್ತಿದ್ದಾರೆ.

೧೫. ರಾಕ್ಷಸರಿಂದ ಪೀಡಿತರಾದ ನಮ್ಮನ್ನು ಉದಾಸೀನ ಮಾಡುತ್ತಿರುವುದರಿಂದ ನೀನು ರಾಮನ ಮಗನಲ್ಲ, ನಿಶ್ಚಯವಾಗಿಯೂ ರಾವಣನ ಮಗನು.

೧೬. ದೊರೆಯು ಯಾವ ಜಾತಿಯವನೋ ಆ ಜಾತಿಯವರು ಸುಖಗೊಳ್ಳುತ್ತಾರೆ ಎಂದು ನೀತಿಶಾಸ್ತ್ರಕುಶಲರು ಹಿಂದೆ ಹೇಳಿದ ಮಾತು ನಿಜವಾಗಿರುವುದು.

೧೭. ಆದುದರಿಂದಲೇ ರಾಕ್ಷಸನ ಸುತನಾದ ನೀನು ರಾಕ್ಷಸರಿಂದ ತಿನ್ನಲ್ಪಡುತ್ತಿರುವ ಬ್ರಾಹ್ಮಣರನ್ನೂ, ಇತರರನ್ನೂ ಉದಾಸೀನ ಮಾಡುತ್ತಿರುವೆ.

೧೮. ದೊರೆಯ ದೋಷಗಳಿಂದ ದುಃಖಗೊಂಡ ಜನರ ಕಣ್ಣೀರು ನೆಲದ ಮೇಲೆ ಬಿದ್ದರೆ ರಾಜನು ದೋಷಿಯಾಗುವನು."

೧೯. ಕುಶನು ಹೇಳುತ್ತಾನೆ:—ಬ್ರಾಹ್ಮಣರೆ! ನನ್ನಲ್ಲಿ ಅನುಗ್ರಹಮಾಡಿರಿ. ರಾಕ್ಷಸರಿಂದ ಬ್ರಾಹ್ಮಣರಿಗುಂಟಾದ ಇಂತಹ ತೊಂದರೆಯನ್ನು ನಾನು ತಿಳಿಯಲಿಲ್ಲ.

೨೦. ಈ ದಿನ ಮೊದಲ್ಗೊಂಡು ರಾಕ್ಷಸರು ಬ್ರಾಹ್ಮಣರನ್ನಾಗಲಿ, ಇತರರನ್ನಾಗಲಿ ಕೊಂದರೆ ಆ ಪಾಪವು ನನಗೆ ಸಂಭವಿಸುವುದು.

ಏವಮುಕ್ತ್ವಾ ತತಸ್ತೂರ್ಣಂ ಪ್ರೇಷಯಾಮಾಸ ರಾಘವಃ ।
ವಿಭೀಷಣಾಯ ಸಂಕ್ರುದ್ಧೋ ದೂತಂ ಭಯವಿವರ್ಜಿತಂ ॥ ೨೧ ॥
ಗಚ್ಛ ದೂತ ದ್ರುತಂ ಗತ್ವಾ ತ್ವಯಾ ವಾಚ್ಯೋ ವಿಭೀಷಣಃ ।
ರಾಮೋಽಚಿತಸ್ತ್ವಯಾ ಸ್ನೇಹೋ ಮಯಾಸಹ ಕೃತೋ ಮಹಾನ್ ॥ ೨೨ ॥
ಯದ್ರಾಕ್ಷಸಗಣೈಃ ಸಾರ್ಧಂ ಮಮ ಭೂಮಿಂ ಸಮಂತತಃ ।
ತ್ವಂ ಕ್ಲೇಶಯಸಿ ದುರ್ಬುದ್ಧೇ ಮಾಂ ವಿಶ್ವಾಸ್ಯ ಸುಭಾಷಿತೈಃ ॥ ೨೩ ॥
ಮಮ ಪಿತ್ರಾ ಕೃತೇಯಂ ತೇ ಪ್ರತಿಷ್ಠಾ ರಾಕ್ಷಸಾಽಧಮ ।
ತೇನ ನೋ ಹನ್ಮಿ ತೇ ಭ್ರಾತಾ ಯಥಾ ತಾತೇನ ಶಾತಿತಃ ॥ ೨೪ ॥
ವಿಷವೃಕ್ಷೋಽಪಿ ಯೋ ವೃದ್ಧಿಂ ಸ್ವಯಮೇವ ಪ್ರಣೀಯತೇ ।
ಕಥಂ ಸಂಛಿದ್ಯತೇ ಸೋಽತ್ರ ಸ್ವಯಮೇವ ಮನೀಷಿಭಿಃ ॥ ೨೫ ॥
ತಸ್ಮಾದದ್ಯ ದಿನಾದೂರ್ಧ್ವಂ ಯದಿ ಕಶ್ಚಿನ್ನಿಶಾಚರಃ ।
ಸಮುದ್ರಸ್ಯೋತ್ತರಂ ಪಾರಂ ಕಥಂಚಿದಾಗಮಿಷ್ಯತಿ ॥ ೨೬ ॥
ತದಹಂ ಸತ್ವರಂ ಪ್ರಾಪ್ಯ ಲಂಕಾಂ ತವ ಪುರೀಮಿಮಾಂ ।
ಸಸೈನ್ಯೋ ಧ್ವಂಸಯಿಷ್ಯಾಮಿ ತಥಾ ಸರ್ವಾನ್ನಿಶಾಚರಾನ್ ॥ ೨೭ ॥
ತ್ವಾಂಚ ಬಧ್ವಾ ದೃಢೈಃ ಪಾಶೈರ್ನಿಗಡೈಶ್ಚ ಸುಸಂಯುತಂ ।
ಕಾರಾಸಂಸ್ಥಂ ಕರಿಷ್ಯಾಮಿ ಸದ್ಯ ಏವ ನ ಸಂಶಯಃ ॥ ೨೮ ॥

---

೨೧. ಕುಶನು ಹೀಗೆ ಹೇಳಿ ವಿಭೀಷಣನಲ್ಲಿ ಕ್ರುದ್ಧನಾಗಿ ನಿರ್ಭಯನಾದ ದೂತನನ್ನು ಅವನೆಡೆಗೆ ಕಳುಹಿಸಿದನು.

೨೨. ಆ ದೂತನನ್ನು ಕುರಿತು, "ದೂತ! ನೀನು ವಿಭೀಷಣನೆಡೆಗೆ ಹೋಗಿ ಹೀಗೆ ಹೇಳು. ನೀನು ನನ್ನೊಡನೆ ರಾಮನಿಗುಚಿತವಾದ ಸ್ನೇಹವನ್ನು ಮಾಡಿರುವೆ.

೨೩. ನೀನು ಒಳ್ಳೆಯ ಮಾತುಗಳಿಂದ ನನ್ನನ್ನು ನಂಬಿಸಿ ರಾಕ್ಷಸರಿಂದ ನನ್ನ ರಾಜ್ಯದ ಜನರನ್ನು ದುಃಖಗೊಳಿಸುತ್ತಿರುವೆ.

೨೪. ನೀಚರಾಕ್ಷಸನೆ! ನನ್ನ ತಂದೆಯು ನಿನ್ನನ್ನು ರಾಜ್ಯದಲ್ಲಿ ಸ್ಥಾಪಿಸಿರುವುದರಿಂದ ನಾನು ನಿನ್ನನ್ನು ನನ್ನ ತಂದೆಯು ನಿನ್ನ ಅಣ್ಣನಾದ ರಾವಣನನ್ನು ಕೊಂದಂತೆ ಕೊಲ್ಲುವುದಿಲ್ಲ.

೨೫. ಜ್ಞಾನಿಗಳು ತಾವು ಬೆಳೆಸಿರುವುದು ವಿಷವೃಕ್ಷವಾದರೂ ಅದನ್ನು ತಾವೇ ಕತ್ತರಿಸುವುದಿಲ್ಲ.

೨೬–೨೭. ಆದುದರಿಂದ ನಾಳೆಯಿಂದ ಯಾವನೊಬ್ಬ ರಾಕ್ಷಸನಾದರೂ ಸಮುದ್ರದ ಉತ್ತರದಡಕ್ಕೆ ಬಂದರೆ ನಾನು ಸೈನ್ಯಸಮೇತನಾಗಿ ನಿನ್ನ ಲಂಕಾಪುರಿಗೆ ಬಂದು ಸಕಲ ರಾಕ್ಷಸರನ್ನೂ ಧ್ವಂಸಗೊಳಿಸುವೆನು.

೨೮. ನಿನ್ನನ್ನೂ ಕೂಡಲೆ ಹಗ್ಗಗಳಿಂದಲೂ, ಸರಪಣಿ (ಜೇಡಿ)ಗಳಿಂದಲೂ ಕಟ್ಟಿ ಸೆರೆಯಲ್ಲಿರಿಸುವೆನು."

ಏವಮುಕ್ತಸ್ತತೋ ದೂತೋ ಗತ್ವಾ ಸೇತುಂ ದ್ರುತಂ ತತಃ ।
ದೃಷ್ಟ್ವಾ ರಾಮೇಶ್ವರಂ ದೇವಂ ಯಾವದಗ್ರೇ ವ್ಯವಸ್ಥಿತಃ ॥ ೨೯ ॥
ತಾವತ್ಪೃಷ್ಟೋ ಜನೈಃ ಕೈಶ್ಚಿತ್ಕಸ್ತ್ವಂ ವತ್ಸ ಇಹಾಽಽಗತಃ ।
ಕೇನ ಕಾರ್ಯೇಣ ನೋ ಬ್ರೂಹಿ ನಾಽತ್ರ ಗಚ್ಛಂತಿ ಮಾನವಾಃ ॥ ೩೦ ॥

ದೂತ ಉವಾಚ :—

ಅಹಂ ಕುಶೇನ ಭೂಪೇನ ವಿಭೀಷಣ ಗೃಹಂ ಪ್ರತಿ ।
ಪ್ರೇಷಿತಃ ಕಾರ್ಯಮುದ್ದಿಶ್ಯ ತತ್ರ ಯಾಸ್ಯಾಮ್ಯಹಂ ಕಥಂ ॥ ೩೧ ॥

ಜನಾ ಊಚುಃ :—

ನಾಽತಃ ಪರಂ ನರಃ ಕಶ್ಚಿದ್ಗಂತುಂ ಶಕ್ತಃ ಕಥಂಚನ ।
ಭಗ್ನಃ ಸೇತುರ್ಯತೋ ಮಧ್ಯೇ ರಾಮೇಣಾಕ್ಲಿಷ್ಟಕರ್ಮಣಾ ॥ ೩೨ ॥
ತಸ್ಮಾದತ್ರೈವ ತೇ ಕಾರ್ಯಂ ಸಿದ್ಧಿಂ ದೂತ ಪ್ರಯಾಸ್ಯತಿ ।
ವಿಭೀಷಣಕೃತಂ ಸರ್ವಂ ದರ್ಶನಾತ್ತಸ್ಯ ರಕ್ಷಸಃ ॥ ೩೩ ॥
ಸರ್ವದಾ ರಾಕ್ಷಸೇಂದ್ರೋಽಸೌ ಶುಭಂ ರಾಮೇಶ್ವರತ್ರಯಂ ।
ತ್ರಿಕಾಲಂ ಪೂಜಯತ್ಯೇವ ನಿಯಮಂ ಸಮುಪಾಶ್ರಿತಃ ॥ ೩೪ ॥
ಲಂಕಾದ್ವಾರೇ ಸ್ಥಿತೋ ಯೋ ವೈ ಸೇತುಖಂಡೇ ಮಹೇಶ್ವರಃ ।
ಪ್ರಭಾತೇ ಕುರುತೇ ತಸ್ಯ ಸ್ವಯಂ ಪೂಜಾಂ ವಿಭೀಷಣಃ ॥ ೩೫ ॥

---

೨೯-೩೦. ಕುಶನು ಹೀಗೆ ಹೇಳಲು ದೂತನು ಶೀಘ್ರವಾಗಿ ಸೇತುವೆಯ ಹತ್ತಿರಕ್ಕೆ ಹೋಗಿ ರಾಮೇಶ್ವರನ ಮುಂದೆ ನಿಂತನು. ಅಷ್ಟರಲ್ಲಿ ಅಲ್ಲಿರುವ ಜನರು ಅವನನ್ನು ಕುರಿತು ಮಗು! ನೀನು ಯಾರು? ಏತಕ್ಕೆ ಇಲ್ಲಿಗೆ ಬಂದಿರುವೆ? ಇಲ್ಲಿಗೆ ಮನುಷ್ಯರು ಬರುವುದಿಲ್ಲ. ಎಂದು ಕೇಳಿದರು.

೩೧. ದೂತನು ಹೇಳುತ್ತಾನೆ:—ಕುಶ ರಾಜನು ನನ್ನನ್ನು ಯಾವುದೋ ಒಂದು ಕಾರ್ಯಕ್ಕಾಗಿ ವಿಭೀಷಣನ ಮನೆಗೆ ಕಳುಹಿಸಿರುವನು. ನಾನು ಅಲ್ಲಿಗೆ ಹೇಗೆ ಹೋಗಲಿ.

೩೨-೩೩. ಜನರು ಹೇಳುತ್ತಾರೆ:—ದೂತ! ಸಾಧುಕಾರ್ಯನಿರತನಾದ ರಾಮನು ಮಧ್ಯದಲ್ಲಿ ಸೇತುವೆಯನ್ನು ಮುರಿದುದರಿಂದ ಇಲ್ಲಿಂದ ಮುಂದಕ್ಕೆ ಯಾವನೂ ಹೋಗಲು ಸಮರ್ಥನಲ್ಲ. ಆದುದರಿಂದ ನೀನು ಇಲ್ಲಿಯೇ ವಿಭೀಷಣನ ಕಾರ್ಯವನ್ನೆಲ್ಲ ನೋಡುವುದರಿಂದ ನಿನ್ನ ಕಾರ್ಯವು ಕೈಗೂಡುವುದು.

೩೪. ಈ ವಿಭೀಷಣ ರಾಜನು ಯಾವಾಗಲೂ ತ್ರಿಕಾಲದಲ್ಲಿ ವಿಧಿಯಂತೆ ಮೂವರು ರಾಮೇಶ್ವರರನ್ನು ಪೂಜಿಸುವನು.

೩೫. ವಿಭೀಷಣನು ಬೆಳಗ್ಗೆ ಲಂಕೆಯ ಬಾಗಿಲಲ್ಲಿರುವ ಸೇತುಖಂಡದಲ್ಲಿ ಮಹೇಶ್ವರನನ್ನು ತಾನೇ ಪೂಜಿಸುವನು.

ಜಲಮಧ್ಯಗತಂ ಯಚ್ಚ ಸೇತುಖಂಡಂ ದ್ವಿತೀಯಕಂ ।
ತತ್ರ ರಾಮೇಶ್ವರೋ ಯಶ್ಚ ಮಧ್ಯಾಹ್ನೇ ತಂ ಪ್ರಪೂಜಯೇತ್ ॥ ೩೬ ॥
ಏನಂ ದೇವಂ ನಿಶೀಥೇ ಚ ಸರ್ವದಾಽಽಗತ್ಯ ಭಕ್ತಿತಃ ।
ಸಂಪೂಜಯೇನ್ನ ಸಂದೇಹಃ ಸತ್ಯಮೇತತ್ಪ್ರಕೀರ್ತಿತಂ ॥ ೩೭ ॥
ತಸ್ಮಾತ್ತಿಷ್ಠ ತ್ವಮವ್ಯಗ್ರಃ ಸ್ಥಾನೇಽತ್ರೈವ ಸಮಾಹಿತಃ ।
ಯಾವದಾಗಮನಂ ತಸ್ಯ ರಾಕ್ಷಸಸ್ಯ ಮಹಾತ್ಮನಃ ॥ ೩೮ ॥
ತೇನೈವ ಸಹಿತಃ ಪಶ್ಚಾತ್ಸ್ವೇಚ್ಛಯಾ ತಸ್ಯಮಂದಿರಂ ।
ಪ್ರಯಾಸ್ಯಸಿ ಗೃಹಂ ವಾಽಪಿ ಸ್ವಕೀಯಂ ತದ್ವಿಸರ್ಜಿತಃ ॥ ೩೯ ॥
ಅಥ ತೇಷಾಂ ತದಾಕರ್ಣ್ಯ ಸ ದೂತೋ ಹರ್ಷಸಂಯುತಃ ।
ಬಾಢಮಿತ್ಯೇವ ಚೋಕ್ತ್ವಾಽಥ ತತ್ರಚೈವ ವ್ಯವಸ್ಥಿತಃ ॥ ೪೦ ॥
ಅಥ ಪ್ರಾಪ್ತೇ ನಿಶಾರ್ಧೇ ಸ ರಾಕ್ಷಸೈಃ ಪರಿವಾರಿತಃ ।
ವಿಭೀಷಣಃ ಸಮಾಯಾತಸ್ತಸ್ಮಿನ್ನಾಯತನೇ ಶುಭೇ ॥ ೪೧ ॥
ವಿಮಾನವರಮಾರೂಢಃ ಸ್ತೂಯಮಾನಃ ಸಮಂತತಃ ।
ರಾಕ್ಷಸೈರ್ಬಂದಿರೂಪೈಸ್ತೈರ್ಗೀಯಮಾನಸ್ತಥಾ ಪರೈಃ ॥ ೪೨ ॥
ಉತ್ತೀರ್ಯ ಚ ವಿಮಾನಾಗ್ರಾತ್ಕೃತ್ವಾಽಥ ತ್ರಿಃ ಪ್ರದಕ್ಷಿಣಾಂ ।
ರಾಮೇಶ್ವರಂ ಪ್ರಣಮ್ಯೋಚ್ಚೈಃ ಸ್ತೋತ್ರಮೇತಚ್ಚಕಾರ ಸಃ ॥ ೪೩ ॥

---

೩೬. ನೀರಿನ ಮಧ್ಯದಲ್ಲಿರುವ ಎರಡನೆಯ ಸೇತುಖಂಡದಲ್ಲಿ ರಾಮೇಶ್ವರನನ್ನು ಮಧ್ಯಾಹ್ನದಲ್ಲಿ ಪೂಜಿಸುತ್ತಾನೆ.

೩೭. ಇಲ್ಲಿರುವ ರಾಮೇಶ್ವರನನ್ನು ಅರ್ಧರಾತ್ರಿವೇಳೆ ಬಂದು ಭಕ್ತಿಯಿಂದ ಪೂಜಿಸುವನು. ನಮ್ಮ ಮಾತು ಸತ್ಯ.

೩೮. ಆದುದರಿಂದ ನೀನು ಇಲ್ಲಿಯೇ ಸ್ಥಿರಚಿತ್ತನಾಗಿ ವಿಭೀಷಣನು ಬರುವವರೆಗೆ ಇರು.

೩೯. ಅನಂತರ ಇಷ್ಟಬಂದಂತೆ ಅವನೊಡನೆ ಅವನ ಮನೆಗಾಗಲಿ, ಅವನಿಂದ ಕಳುಹಿಸಲ್ಪಟ್ಟವನಾಗಿ ನಿನ್ನ ಮನೆಗಾಗಲಿ ತೆರಳು.

೪೦. ಆ ದೂತನು ಅವರ ಮಾತನ್ನು ಕೇಳಿ ಸಂತೋಷಗೊಂಡವನಾಗಿ ಹಾಗೆಯೇ ಆಗಲೆಂದು ಅಲ್ಲಿಯೇ ಇದ್ದನು.

೪೧–೪೨. ಬಳಿಕ ಅರ್ಧರಾತ್ರಿಯಾಗಲು ವಿಭೀಷಣನು ಸ್ತುತಿಪಾಠಕರಾದ ರಾಕ್ಷಸರಿಂದಲೂ, ಇತರರಿಂದಲೂ ಸ್ತುತಿಸಲ್ಪಡುತ್ತ ಉತ್ತಮ ವಿಮಾನವನ್ನೇರಿ ಆ ರಾಮೇಶ್ವರನ ಆಲಯಕ್ಕೆ ಪರಿವಾರದೊಡನೆ ಬಂದನು.

೪೩. ಆ ವಿಭೀಷಣನು ಅಲ್ಲಿ ವಿಮಾನದಿಂದಿಳಿದು ಮೂರುಸಾರಿ ರಾಮೇಶ್ವರನಿಗೆ ಬಲವಂದು ನಮಸ್ಕರಿಸಿ ಗಟ್ಟಿಯಾಗಿ ಹೀಗೆ ಸ್ತುತಿಸಿದನು.

ನಮಸ್ತೇ ದೇವದೇವೇಶ ಭಕ್ತಾನಾಮಭಯಪ್ರದ ।
ಸರ್ವತಃ ಪಾಣಿಪಾದಂ ತೇ ಸರ್ವತೋಽಕ್ಷಿ ಶಿರೋಮುಖಂ ॥ ೪೪ ॥
ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಂ ಚಂದ್ರಸ್ತ್ವಂ ಪ್ರಭಾಕರಃ ।
ತ್ವಂ ವಿಷ್ಣುಸ್ತ್ವಂ ಚತುರ್ವಕ್ತ್ರಃ ಶಕ್ರಸ್ತ್ವಂ ಪರಮೇಶ್ವರಃ ॥ ೪೫ ॥
ಯಥಾ ತಿಲಗತಂ ತೈಲಂ ಗೂಢಂ ತಿಷ್ಠತಿ ಸರ್ವದಾ ।
ತಥಾ ತ್ವಂ ಸರ್ವಲೋಕೇಷು ಗೂಢಸ್ತಿಷ್ಠಸಿ ಶಂಕರ ॥ ೪೬ ॥
ಯಥಾ ಕಾಷ್ಠಗತೋ ವಹ್ನಿಃ ಸಂಸ್ಥಿತೋಽಪಿ ನ ಲಕ್ಷ್ಯತೇ ।
ಮೂಢೈಃ ಸರ್ವತ್ರ ಸಂಸ್ಥೋಽಪಿ ತಥಾ ತ್ವಂ ನೈವ ಲಕ್ಷ್ಯಸೇ ॥ ೪೭ ॥
ಯಥಾ ದಧಿಗತಂ ಸರ್ಪಿರ್ನಿಗೂಢತ್ವೇನ ಸಂಸ್ಥಿತಂ ।
ಚರಾಚರೇಷು ಭೂತೇಷು ತಥಾ ತ್ವಂ ದೇವ ಸಂಸ್ಥಿತಃ ॥ ೪೮ ॥
ಯಥಾ ಜಲಂ ಧರಾಪೃಷ್ಠಾತ್ಖನನ್ನಾಪ್ನೋತಿ ಮಾನವಃ ।
ತಥಾ ತ್ವಾಂ ಪೂಜಯನ್ನಿತ್ಯಂ ಮೋಕ್ಷಮಾಪ್ನೋತ್ಯಸಂಶಯಂ ॥ ೪೯ ॥
ತಾವಚ್ಚ ದುರ್ಲಭಃ ಸ್ವರ್ಗಸ್ತಾವಚ್ಛೂರಾಶ್ಚ ಶತ್ರವಃ ।
ಯಾವದೇವ ನ ಸಂತೋಷಂ ತ್ವಂ ಕರೋಷಿ ಶರೀರಿಣಾಂ ॥ ೫೦ ॥

---

೪೪. "ಭಕ್ತರಿಗೆ ಅಭಯವನ್ನೀಯುವ ಮಹೇಶ್ವರ! ನಿನ್ನ ಕೈಕಾಲುಗಳೂ, ಕಣ್ಣು ತಲೆ ಮುಖಗಳೂ ಎಲ್ಲೆಡೆಯಲ್ಲಿಯೂ ಇರುವುವು. ನಿನಗೆ ವಂದನೆಯು.

೪೫. ನೀನು ಯಜ್ಞವೂ, ವಷಟ್ಕಾರವೂ, ಚಂದ್ರನೂ, ಸೂರ್ಯನೂ, ವಿಷ್ಣುವೂ, ಬ್ರಹ್ಮನೂ, ಇಂದ್ರನೂ, ಪರಮೇಶ್ವರನೂ ಆಗಿರುವೆ.

೪೬. ಶಂಕರ! ನೀನು ಎಳ್ಳಿನಲ್ಲಿ ಎಣ್ಣೆಯು ಗೂಢವಾಗಿರುವಂತೆ ಸಕಲ ಲೋಕಗಳಲ್ಲಿ ಗೂಢವಾಗಿರುವೆ.

೪೭. ಕಟ್ಟಿಗೆಯಲ್ಲಿರುವ ಬೆಂಕಿಯು ಕಾಣದಿರುವಂತೆ ನೀನು ಎಲ್ಲೆಡೆಯಲ್ಲಿದ್ದರೂ ಮೂಢರು ನಿನ್ನನ್ನು ನೋಡುವುದಿಲ್ಲ.

೪೮. ಸ್ವಾಮಿ! ನೀನು ಮೊಸರಿನಲ್ಲಿ ತುಪ್ಪವು ಗೂಢವಾಗಿರುವಂತೆ ಚರಾಚರ ಪ್ರಾಣಿಗಳಲ್ಲಿರುವೆ.

೪೯. ಮಾನವನು ಭೂಮಿಯನ್ನು ಅಗೆಯುತ್ತ ನೀರನ್ನು ಹೊಂದುವಂತೆ ನಿತ್ಯವೂ ನಿನ್ನನ್ನು ಆರಾಧಿಸುವವನು ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು.

೫೦. ರಾಮೇಶ್ವರ! ನೀನು ಪ್ರಾಣಿಗಳಿಗೆ ಸಂತೋಷವನ್ನುಂಟುಮಾಡದಿರುವವರೆಗೆ ಸ್ವರ್ಗವು ದುರ್ಲಭವಾಗುವುದು. ಶತ್ರುಗಳೂ ಶೂರರಾಗಿರುವರು.

ತಾವಲ್ಲಕ್ಷ್ಮೀಶ್ಚಲಾ ನೃಣಾಂ ತಾವದ್ರೋಗಾಃ ಪೃಥಗ್ವಿಧಾಃ ।
ನ ಯಾವದ್ದೇವದೇವ ತ್ವಂ ಸಂತೋಷಂ ಸಂಪ್ರಯಾಸ್ಯಸಿ ॥ ೫೧ ॥
ತಾವತ್ಪುತ್ರೋದ್ಭವಂ ದುಃಖಂ ತಥಾ ಪ್ರಿಯಸಮುದ್ಭವಂ ।
ಯಾವತ್ತ್ವಂ ದೇವ ನಾಯಾಸಿ ಸಂತೋಷಂ ದೇಹಿನಾಮಿಹ ॥ ೫೨ ॥
ಏವಂ ಸ್ತುತ್ವಾ ತತೋ ಲಿಂಗಂ ಸ್ನಾಪಯಿತ್ವಾ ಯಥಾ ವಿಧಿ ।
ಗಂಧಾನುಲೇಪನೈರ್ದಿವ್ಯೈರ್ಮರ್ಚಯಾಮಾಸ ವೈ ತತಃ ॥ ೫೩ ॥
ಪಾರಿಜಾತಕಪುಷ್ಪೈಶ್ಚ ತಥಾ ಸಂತಾನಸಂಭವೈಃ ।
ಕಲ್ಪಪಾದಪಸಂಭೂತೈಸ್ತಥಾ ಮಂದಾರಜೈರಪಿ ॥ ೫೪ ॥
ಪೂಜಾಂ ಚಕ್ರೇ ಸುವಿಸ್ತೀರ್ಣಾಂ ಶ್ರದ್ಧಯಾ ಪರಯಾ ಯುತಃ ।
ದಿವ್ಯೈರಾಭರಣೈರ್ಭೂಷ್ಯ ದಿವ್ಯವಸ್ತ್ರೈಸ್ತತಃ ಪರಂ ॥ ೫೫ ॥
ಸ ಚ ಗೀತಂ ಸ್ವಯಂ ಚಕ್ರೇ ತಾಲಮಾದಾಯ ಪಾಣಿನಾ ।
ಮೂರ್ಛಾತಾಲಕೃತಂ ರಮ್ಯಂ ಸಪ್ತಸ್ವರವಿರಾಜಿತಂ ॥ ೫೬ ॥
ತಾನಯುಕ್ತ್ಯಾ ಸಮೋಪೇತಂ ಗ್ರಾಮ್ಯೈ ರಾಗೈಃ ಸ್ವಲಂಕೃತಂ ।
ಏವಂ ಕೃತ್ವಾ ಸ ಶುಶ್ರೂಷಾಂ ತಸ್ಯ ದೇವಸ್ಯ ಭಕ್ತಿತಃ ॥ ೫೭ ॥
ಯಾವತ್ಸಂಪ್ರಸ್ಥಿತೋ ಭೂಯೋ ಲಂಕಾಂ ಪ್ರತಿ ವಿಭೀಷಣಃ ।
ತಾವದ್ದೂತೋಽಗ್ರತಃ ಸ್ಥಿತ್ವಾ ಕುಶವಾಕ್ಯಮುವಾಚ ಹ ॥ ೫೮ ॥

---

೫೧. ಸ್ವಾಮಿ! ನೀನು ಪ್ರಸನ್ನನಾಗದಿರುವವರೆಗೆ ಮನುಷ್ಯರ ಸಂಪತ್ತು ಚಂಚಲವಾಗಿರುವುದು. ಅವರಿಗೆ ನಾನಾವಿಧ ರೋಗಗಳುಂಟಾಗುವುವು.

೫೨. ನೀನು ಈ ಲೋಕದಲ್ಲಿ ಪ್ರಾಣಿಗಳಿಗೆ ಸಂತೋಷವನ್ನುಂಟುಮಾಡದಿರುವವರೆಗೆ ಅವರಿಗೆ ಪುತ್ರರಿಂದಲೂ, ಬಂಧುಗಳಿಂದಲೂ ದುಃಖವುಂಟಾಗುವುದು.''

೫೩. ಆ ವಿಭೀಷಣನು ಹೀಗೆ ಸ್ತುತಿಸಿ ಲಿಂಗಕ್ಕೆ ವಿಧಿಯಂತೆ ಅಭಿಷೇಕ ಮಾಡಿ ದಿವ್ಯಗಂಧವನ್ನು ಲೇಪಿಸಿದನು.

೫೪–೫೮. ಅತ್ಯಂತ ಶ್ರದ್ಧೆಯಿಂದ ಪಾರಿಜಾತ, ಸಂತಾನ, ಕಲ್ಪ, ಮಂದಾರ ಪುಷ್ಪಗಳಿಂದ ವಿಸ್ತಾರವಾಗಿ ಲಿಂಗವನ್ನು ಪೂಜಿಸಿದನು. ಬಳಿಕ ದಿವ್ಯಾಭರಣಗಳಿಂದಲೂ, ದಿವ್ಯವಸ್ತ್ರಗಳಿಂದಲೂ ಅಲಂಕರಿಸಿ ತಾನೇ ತಾಳವನ್ನು ತೆಗೆದುಕೊಂಡು ಸ್ವರಗಳ ಆರೋಹ, ಅವರೋಹ, ಉಚ್ಚತಾ, ಗ್ರಾಮ ಇವುಗಳಿಂದ ಕೂಡಿದ ಸಪ್ತಸ್ವರಗಳಿಂದ ವಿರಾಜಿಸುವ ಸಂಗೀತವನ್ನು ಹಾಡಿದನು. ಅವನು ಹೀಗೆ ಭಕ್ತಿಯಿಂದ ಮಹೇಶ್ವರನಿಗೆ ಸೇವೆ ಸಲ್ಲಿಸಿ ಲಂಕೆಗೆ ಹೋಗಲುದ್ಯುಕ್ತನಾಗಲು ಕುಶನ ದೂತನು ಅವನ ಮುಂದೆ ನಿಂತು ತನ್ನ ದೊರೆಯ ಮಾತನ್ನು ತಿಳಿಸಿದನು.

ವಿಶೇಷತಸ್ತು ತೇನೋಕ್ತಂ ಯತ್ತಸ್ಯ ಪುರತಃ ಪುರಾ ।
ಅತಿಕೋಪಾಽಭಿಭೂತೇನ ಪ್ರರಕ್ತನಯನೇನ ಚ ॥ ೪೯ ॥
ತಚ್ಛ್ರುತ್ವಾಽಥ ಪ್ರಣಮ್ಯೋಚ್ಚೈರ್ದೂತಂ ಪ್ರಾಹ ವಿಭೀಷಣಃ ।
ಕೃತಾಂಜಲಿಪುಟೋ ಭೂತ್ವಾ ವಿನಯಾಽವನತಃ ಸ್ಥಿತಃ ॥ ೫೦ ॥
ಯದ್ಯೇವಂ ವಿಹಿತಂ ರಾಜ್ಯೇ ರಾಮಪುತ್ರಸ್ಯ ರಾಕ್ಷಸೈಃ ।
ತನ್ನೂನಂ ತನ್ಮಯಾ ಸರ್ವಂ ವಿಹಿತಂ ದೂತಸತ್ತಮ ॥ ೫೧ ॥
ತಸ್ಮಾನ್ಮಹಾಪ್ರಸಾದೋ ಮೇ ಕೃತಸ್ತೇನ ಮಹಾತ್ಮನಾ ।
ಕುಶೇನ ಪ್ರೇಷಿತೋ ಯಸ್ತ್ವಂ ಮಮ ಮೂರ್ಖಸ್ಯ ಸನ್ನಿಧೌ ॥ ೫೨ ॥
ಏವಮುಕ್ತ್ವಾ ಸ ತಾನ್ ಸರ್ವಾನ್ ಶೋಧಯಾಮಾಸ ರಾಕ್ಷಸಾನ್ ।
ಯೇ ಗತ್ವಾ ಭೂತಲೇ ಮರ್ತ್ಯಾನ್ ಧ್ವಂಸಯಂತಿ ಸದೈವ ಹಿ ॥ ೫೩ ॥
ತತಸ್ತತ್ರೈವ ಚಾಽನೀಯ ತಸ್ಯ ದೂತಸ್ಯ ಸನ್ನಿಧೌ ।
ಪ್ರತ್ಯೇಕಂ ತಾನುವಾಚೇದಂ ಕೋಪಾದಶ್ರೂಣಿ ಚೋತ್ಸೃಜನ್ ॥ ೫೪ ॥
ಯೈಃ ಕೃತೋ ಜನವಿಧ್ವಂಸೋ ರಾಕ್ಷಸೈಃ ಸುದುರಾತ್ಮಭಿಃ ।
ರಾಜ್ಯೇ ಕುಶಸ್ಯ ಸಂಪ್ರಾಪ್ತೈಃ ಪ್ರಭೋರ್ಮಮ ಮಹಾತ್ಮನಃ ॥ ೫೫ ॥
ತೇ ಸರ್ವೇ ವ್ಯಂತರಾ ರೌದ್ರಾಃ ಪ್ರಭವಂತು ಸುದುಃಖಿತಾಃ ।
ಲಂಕಾದ್ವಾರಗತಾ ನಿತ್ಯಂ ಕ್ಷುತ್ಪಿಪಾಸಾ ನಿಪೀಡಿತಾಃ ॥ ೫೬ ॥

---

೪೯–೫೦. ಅತ್ಯಂತ ಕೋಪದಿಂದ ಕೆಂಪಾದ ಕಣ್ಣುಳ್ಳ ಆ ದೂತನು ತನ್ನ ಮುಂದೆ ಹೇಳಿದ ಆ ಮಾತನ್ನು ಕೇಳಿ ವಿಭೀಷಣನು ಅವನನ್ನು ವಂದಿಸಿ ಕೈಮುಗಿದು ಕೊಂಡು ವಿನಯದಿಂದ ಇಂತೆಂದನು.

೫೧. "ದೂತೋತ್ತಮನೆ! ರಾಕ್ಷಸರು ಶ್ರೀರಾಮಪುತ್ರನ ರಾಜ್ಯದಲ್ಲಿ ಹೀಗೆ ಮಾಡಿದ್ದರೆ ಅದು ನಿಜವಾಗಿಯೂ ನಾನೇ ಮಾಡಿದಂತೆ.

೫೨. ಆದುದರಿಂದ ಮಹಾತ್ಮನಾದ ಕುಶನು ಮೂರ್ಖನಾದ ನನ್ನ ಬಳಿಗೆ ನಿನ್ನನ್ನು ಕಳುಹಿಸಿ ನನಗೆ ಅತ್ಯಂತ ಅನುಗ್ರಹ ಮಾಡಿರುವನು."

೫೩. ಅವನು ಹೀಗೆ ಹೇಳಿ ಭೂಮಿಯಲ್ಲಿ ಯಾವಾಗಲೂ ಮನುಷ್ಯರನ್ನು ಕೊಲ್ಲುವ ಆ ರಾಕ್ಷಸರನ್ನೆಲ್ಲ ಶೋಧಿಸಿದನು.

೫೪. ಬಳಿಕ ಅವರನ್ನೆಲ್ಲ ಆ ದೂತನ ಹತ್ತಿರಕ್ಕೆ ಕರೆತಂದು ಕೋಪದಿಂದ ಕಣ್ಣೀರನ್ನು ಸುರಿಸುತ್ತ ಪ್ರತ್ಯೇಕವಾಗಿ ಅವರನ್ನು ಕುರಿತು ಇಂತೆಂದನು.

೫೫–೫೬. "ನನ್ನ ಪ್ರಭುವೂ, ಮಹಾತ್ಮನೂ ಆದ ಆ ಕುಶನ ರಾಜ್ಯದಲ್ಲಿ ಜನರನ್ನು ಕೊಂದ ದುರಾತ್ಮರಾದ ರಾಕ್ಷಸರು ಭಯಂಕರ ಬ್ರಹ್ಮರಾಕ್ಷಸರಾಗಿ ಲಂಕೆಯ ದ್ವಾರದಲ್ಲಿ ನೆಲೆಸಿ ಯಾವಾಗಲೂ ಹಸಿವು ಬಾಯಾರಿಕೆಯಿಂದ

ಸರ್ವಭೋಗ ಪರಿತ್ಯಕ್ತಾಃ ಶೀತಾತಪಸಹಿಷ್ಣವಃ ।
ಶ್ಲೇಷ್ಮಮೂತ್ರಕೃತಾಹಾರಾ ನಿಂದ್ಯಾಃ ಸರ್ವಜನಸ್ಯ ಚ ॥ ೬೭ ॥
ಏವಂ ದತ್ವಾಽಥ ತೇಷಾಂ ಸ ಶಾಪಂ ರಾಕ್ಷಸಸತ್ತಮಃ ।
ತತಃ ಪ್ರಾಹ ಚ ತಂ ದೂತಂ ಪುನರೇವ ಕೃತಾಂಜಲಿಃ ॥ ೬೮ ॥
ಅದ್ಯ ಪ್ರಭೃತಿ ನೋ ಕಶ್ಚಿದ್ರಾಕ್ಷಸಃ ಸಂಪ್ರಯಾಸ್ಯತಿ ।
ತಸ್ಮಾದ್ವಾಚ್ಯೋ ರಘುಶ್ರೇಷ್ಠೋ ಮದ್ವಾಕ್ಯಾತ್ಸಕುಶಸ್ತ್ವಯಾ ।
ಕ್ಷಮ್ಯತಾಮಪರಾಧೋ ಮೇ ಯದಜ್ಞಾನಾದಯಂ ಕೃತಃ ॥ ೬೯ ॥
ರಾಕ್ಷಸೈರ್ದುಷ್ಟಜಾತೀಯೈರ್ಮಹಾಮಾಂಸಸ್ಯ ಲೋಲುಪೈಃ ।
ಕೃತಶ್ಚ ನಿಗ್ರಹಸ್ತೇಷಾಂ ಪ್ರತ್ಯಕ್ಷಂ ತವ ದೂತ ಯಃ ॥ ೭೦ ॥
ಯದನ್ಯದಪಿ ಕೃತ್ಯಂ ಸ್ಯಾದ್ದೈವಂ ವಾ ಮಾನುಷಂ ಚ ವಾ ।
ಮಮ ಭೃತ್ಯಸ್ಯ ತತ್ಸರ್ವಂ ಕಥನೀಯಮಶಂಕಿತಂ ॥ ೭೧ ॥

ದೂತ ಉವಾಚ:—

ಯಾನಿ ತತ್ರ ಚ ಲಿಂಗಾನಿ ರಾಕ್ಷಸೈರ್ನಿರ್ಮಿತಾನಿ ಚ ।
ತಾನಿ ಗತ್ವಾ ಸ್ವಯಂ ಶೀಘ್ರಂ ತ್ವಮುತ್ಪಾಟಯ ರಾಕ್ಷಸ ॥ ೭೨ ॥
ಏತದೇವ ಪರಂ ಕೃತ್ಯಂ ಸರ್ವಲೋಕಸುಖಾವಹಂ ।
ಸ್ಥಾಪಿತಾನಿ ಚ ಯಾನ್ಯೇವ ಮಂತ್ರೈ ರಾಕ್ಷಸಸಂಭವೈಃ ॥ ೭೩ ॥

---

ಪೀಡಿತರೂ, ಸಕಲ ಸುಖಭೋಗರಹಿತರೂ, ಚಳಿ ಬಿಸಿಲುಗಳನ್ನು ಸಹಿಸುವವರೂ, ಕಫಮೂತ್ರಗಳನ್ನು ಕುಡಿಯುವವರೂ, ಸಮಸ್ತ ಜನನಿಂದ್ಯರೂ ಆಗಲಿ.''

೬೮. ರಾಕ್ಷಸವರ್ಯನಾದ ಆ ವಿಭೀಷಣನು ಹೀಗೆ ಆ ಕ್ರೂರ ರಾಕ್ಷಸರಿಗೆ ಶಾಪವನ್ನಿತ್ತು ಮರಳಿ ಕೈಮುಗಿದುಕೊಂಡು ದೂತನನ್ನು ಕುರಿತು ಹೀಗೆಂದನು.

೬೯—೭೦. "ಈ ದಿನ ಮೊದಲ್ಗೊಂಡು ಅಲ್ಲಿಗೆ ಒಬ್ಬ ರಾಕ್ಷಸನೂ ಹೋಗುವುದಿಲ್ಲ. ಆದುದರಿಂದ ಈ ನನ್ನ ಮಾತಿನಿಂದ ರಘೂತ್ತಮನಾದ ಕುಶನಿಗೆ ಹೀಗೆ ಹೇಳು. ನನ್ನ ಅಜ್ಞಾನದಿಂದ ಮಾಂಸಾಸಕ್ತರಾದ ದುಷ್ಟಜಾತಿಯ ರಾಕ್ಷಸರೆಸಗಿದ ತಪ್ಪನ್ನು ಕ್ಷಮಿಸಲಿ. ನಿನ್ನ ಮುಂದೆಯೇ ಅವರನ್ನು ನಾನು ನಿಗ್ರಹಿಸಿರುವೆನು.

೭೧. ನನ್ನ ಭೃತ್ಯರು ಮಾಡಿರುವ ಇದಕ್ಕಿಂತ ಬೇರೆಯಾದ ದೈವಮಾನುಷ ಕಾರ್ಯಗಳು ಯಾವುದಾದರೂ ಇದ್ದರೆ ನಿಶ್ಶಂಕೆಯಿಂದ ತಿಳಿಸು.''

೭೨. ದೂತನು ಹೇಳುತ್ತಾನೆ:—ವಿಭೀಷಣ! ನೀನು ಆ ಕ್ಷೇತ್ರಕ್ಕೆ ಹೋಗಿ ರಾಕ್ಷಸರು ನಿರ್ಮಿಸಿರುವ ಲಿಂಗಗಳನ್ನು ಕಿತ್ತುಹಾಕು.

೭೩—೭೫. ಇದೇ ಸಕಲ ಮಾನವರಿಗೆ ಸುಖವನ್ನೀಯುವ ಉತ್ತಮ ಕಾರ್ಯವು. ರಾಕ್ಷಸರು ತಮ್ಮ ಮಂತ್ರಗಳಿಂದ ಸ್ಥಾಪಿಸಿ ಪೂಜಿಸಿರುವ ನಾಲ್ಕು

ಸಂಪೂಜಿತಾನಿ ರಕ್ಷೋಭಿಶ್ಚತುರ್ವಕ್ತ್ರಾಣಿ ರಾಕ್ಷಸ ।
ಅಜ್ಞಾನನ್ಮಾನವಃ ಕಶ್ಚಿದ್ಯದಿ ಪೂಜಾಂ ಸಮಾಚರೇತ್ ॥ ೨೪ ॥
ತತ್ಕ್ಷಣಾನ್ನಾಶಮಾಯಾತಿ ಏತದ್ದೃಷ್ಟಂ ಮಯಾ ಸ್ವಯಂ ।
ಏತಸ್ಮಾತ್ಕಾರಣಾದ್ವಚ್ಮಿ ತ್ವಾಮಹಂ ರಾಕ್ಷಸಾಧಿಪ ।
ತೈಃ ಸ್ಥಿತೈರ್ಭೂತಲೇ ಲಿಂಗೈಃ ಸ್ಥಿತಾಃ ಸರ್ವೇ ನಿಶಾಚರಾಃ ॥ ೨೫ ॥

ವಿಭೀಷಣ ಉವಾಚ :—

ಮಯಾ ಪೂರ್ವಂ ಪ್ರತಿಜ್ಞಾತಂ ರಾಮಸ್ಯ ಪುರತಃ ಕಿಲ ।
ರಾಮೇಶ್ವರಮತಿಕ್ರಮ್ಯ ನ ಗಂತವ್ಯಂ ಧರಾತಲೇ ॥ ೨೬ ॥
ಅನ್ಯಚ್ಚ ಕಾರಣಂ ದೂತ ಪ್ರೋಕ್ತಮತ್ರ ಮನೀಷಿಭಿಃ ।
ದುಃಸ್ಥಿತಂ ಸುಸ್ಥಿತಂ ವಾಽಪಿ ಶಿವಲಿಂಗಂ ನ ಚಾಲಯೇತ್ ॥ ೨೭ ॥
ತತ್ಕಥಂ ತತ್ರ ಗತ್ವಾಽಥ ಲಿಂಗಭೇದಂ ಕರೋಮ್ಯಹಂ ।
ಸ್ವಯಂ ಮಾಹೇಶ್ವರೋ ಭೂತ್ವಾ ಪ್ರತಿಜ್ಞಾಯ ಚ ವೈ ಸ್ವಯಂ ॥ ೨೮ ॥
ತಸ್ಮಾತ್ಪ್ರಸಾದನೀಯಸ್ತೇ ಮದ್ವಾಕ್ಯಾತ್ಸ ನರಾಧಿಪಃ ।
ಯದ್ಯಯುಕ್ತಂ ಮಯಾ ಪ್ರೋಕ್ತಂ ತತ್ತ್ವಂ ಕುರು ವಿನಿಗ್ರಹಂ ॥ ೨೯ ॥
ಏವಮುಕ್ತ್ವಾಽಥ ತಂ ದೂತಂ ರತ್ನೈಃ ಸಾಗರಸಂಭವೈಃ ।
ಪ್ರಭೂತೈರ್ಭೂಷಯಿತ್ವಾಽಥ ವಿಸಸರ್ಜ ನೃಪಂ ಪ್ರತಿ ॥ ೩೦ ॥

---

ಮುಖಗಳುಳ್ಳ ಲಿಂಗಗಳನ್ನು ತಿಳಿಯದೆ ಮಾನವನು ಪೂಜಿಸಿದರೆ ಕೂಡಲೆ ಅವನು ಸಾಯುವನು. ಇದನ್ನು ನಾನು ಸ್ವಂತವಾಗಿ ನೋಡಿದ್ದೇನೆ. ವಿಭೀಷಣ! ಈ ಕಾರಣದಿಂದಲೇ ನಾನು ನಿನಗೆ ಹೀಗೆ ಹೇಳುತ್ತಿದ್ದೇನೆ. ಆ ಲಿಂಗಗಳಿರುವುದರಿಂದಲೇ ಭೂಮಿಯಲ್ಲಿ ಸಕಲ ರಾಕ್ಷಸರಿರುವರು.

೨೬. ವಿಭೀಷಣನು ಹೇಳುತ್ತಾನೆ:—ದೂತ! ನಾನು ಹಿಂದೆ ರಾಮನ ಮುಂದೆ ರಾಮೇಶ್ವರಕ್ಕಿಂತ ಆಚೆಗಿರುವ ಭೂಮಿಗೆ ಹೋಗುವುದಿಲ್ಲವೆಂದು ಪ್ರತಿಜ್ಞೆ ಮಾಡಿರುವೆನು.

೨೭. ಸರಿಯಾಗಿರಲಿ, ಇಲ್ಲದಿರಲಿ ಶಿವಲಿಂಗವನ್ನು ಅಲ್ಲಾಡಿಸಬಾರದೆಂದು ಜ್ಞಾನಿಗಳು ಹೇಳಿರುವ ಮತ್ತೊಂದು ಕಾರಣವೂ ಇದೆ.

೨೮. ನಾನು ಮಹೇಶ್ವರ ಭಕ್ತನಾಗಿ ನಾನೇ ಪ್ರತಿಜ್ಞೆಮಾಡಿ ಶಿವಲಿಂಗವನ್ನು ಹೇಗೆ ಒಡೆಯಲಿ.

೨೯. ಆದುದರಿಂದ ನೀನು ನನ್ನ ಮಾತಿನಿಂದ ಆ ದೊರೆಯನ್ನು ಸಮಾಧಾನಗೊಳಿಸು. ನಾನು ಹೇಳಿರುವುದು ಯುಕ್ತವಲ್ಲದಿದ್ದರೆ ನೀನು ನಿಗ್ರಹಿಸು.

೩೦. ವಿಭೀಷಣನು ಹೀಗೆ ಹೇಳಿ ಸಮುದ್ರದಲ್ಲಿ ಹುಟ್ಟಿದ ಬಹುರತ್ನಗಳಿಂದ ಅವನನ್ನು ಅಲಂಕರಿಸಿ ಕುಶ ರಾಜನ ಬಳಿಗೆ ಕಳುಹಿಸಿದನು.

ಅಥ ತೇ ರಾಕ್ಷಸಾಸ್ತೇನ ಶಪ್ತಾಃ ಪ್ರೋಚುಃ ಸುದುಃಖಿತಾಃ ।
ಕುರು ಶಾಪಸ್ಯ ಮೋಕ್ಷಂ ನಃ ಸರ್ವೇಷಾಂ ರಾಕ್ಷಸೇಶ್ವರ ॥ ೬೧ ॥
ವಿಭೀಷಣ ಉವಾಚ :—
ನಾಽಹಂ ಕರೋಮಿ ಭೂಯೋಽಪಿ ಯುಷ್ಮಾಕಂ ರಾಕ್ಷಸಾಧಮಾಃ ।
ಅನುಗ್ರಹಂ ಪ್ರಶಪ್ತಾನಾಂ ವಂಚಕಾನಾಂ ವಿಶೇಷತಃ ॥ ೬೨ ॥
ತಸ್ಮಾತ್ಸೋಽಪಿ ರಘುಶ್ರೇಷ್ಠಃ ಪ್ರಸಾದಂ ವಃ ಕರಿಷ್ಯತಿ ।
ಮಮ ವಾಕ್ಯಾದಸಂದಿಗ್ಧಂ ಕಾಲಃ ಕಶ್ಚಿತ್ಪ್ರತೀಕ್ಷ್ಯತಾಂ ॥ ೬೩ ॥
ಏವಮುಕ್ತ್ವಾಽಥ ರಕ್ಷೇಂದ್ರಃ ಪ್ರೇಷಯಾಮಾಸ ಸತ್ವರಂ ।
ದೂತಂ ಕುಶಮಹೀಪಸ್ಯ ಮಾನುಷಂ ದೇವಪೂಜಕಂ ॥ ೬೪ ॥
ಗತ್ವಾ ಬ್ರೂಹಿ ಕುಶಂ ಭೂಪಂ ಸತ್ವರಂ ವಚನಾನ್ಮಮ ।
ಏತೇಷಾಂ ಮತ್ಪ್ರಶಪ್ತಾನಾಂ ರಾಕ್ಷಸಾನಾಂ ದುರಾತ್ಮನಾಂ ।
ಅನುಗ್ರಹಂ ಕುರು ವಿಭೋ ದೀನಾನಾಂ ಭೋಜನಾಯ ವೈ ॥ ೬೫ ॥
ಏವಮುಕ್ತಸ್ತತಸ್ತೇನ ದೂತೋ ದೂತೇನ ಸಂಯುತಃ ।
ಕುಶಸ್ತೇನ ವಿನಿರ್ಯಾತಃ ಸತ್ವರಂ ದ್ವಿಜಸತ್ತಮಾಃ ॥ ೬೬ ॥
ತತೋ ಗತ್ವಾ ದ್ರುತಂ ದೂತಃ ಕುಶಂ ಪ್ರೋವಾಚ ಸಾದರಂ ।
ಪ್ರಣಿಪತ್ಯ ಯಥಾ ನ್ಯಾಯಂ ವಿನಯಾಽವನತಃ ಸ್ಥಿತಃ ॥ ೬೭ ॥

---

೬೧. ಬಳಿಕ ವಿಭೀಷಣನಿಂದ ಶಾಪವನ್ನು ಹೊಂದಿದ ರಾಕ್ಷಸರೆಲ್ಲ ಅತಿ ದುಃಖಿತರಾಗಿ, "ರಾಕ್ಷಸರೊಡೆಯ! ನಮ್ಮೆಲ್ಲರ ಶಾಪವನ್ನು ಪರಿಹರಿಸು" ಎಂದು ಬೇಡಿಕೊಂಡರು.

೬೨. ವಿಭೀಷಣನು ಹೇಳುತ್ತಾನೆ:—ರಾಕ್ಷಸಾಧಮರೆ! ನನ್ನಿಂದ ಶಪ್ತರಾದ ಅತಿ ವಂಚಕರಾದ ನಿಮಗೆ ನಾನು ಮರಳಿ ಅನುಗ್ರಹವನ್ನು ಮಾಡುವುದಿಲ್ಲ.

೬೩. ಆದುದರಿಂದ ನನ್ನ ಮಾತಿನಿಂದ ರಾಘವೋತ್ತಮನಾದ ಆ ಕುಶನು ನಿಮಗೆ ನಿಶ್ಚಯವಾಗಿಯೂ ಅನುಗ್ರಹ ಮಾಡುವನು. ಸ್ವಲ್ಪಕಾಲ ನಿರೀಕ್ಷಿಸಿರಿ.

೬೪. ವಿಭೀಷಣನು ಹೀಗೆ ಹೇಳಿ ಕೂಡಲೆ ದೇವಪೂಜಕನಾದ ದೂತನನ್ನು ಕುಶನೆಡೆಗೆ ಕಳುಹಿಸಿದನು.

೬೫. ಮತ್ತು ಹೀಗೆಂದನು. "ದೂತ! ನೀನು ಶೀಘ್ರವಾಗಿ ಕುಶನೆಡೆಗೆ ಹೋಗಿ ನನ್ನ ಮಾತಿನಿಂದ ಸ್ವಾಮಿ! ನಾನು ಶಪಿಸಿದ ದುರಾತ್ಮರಾದ ಈ ದೀನ ರಾಕ್ಷಸರಿಗೆ ಭೋಜನಕ್ಕಾಗಿ ಅನುಗ್ರಹಿಸು."

೬೬. ದ್ವಿಜವರ್ಯರೆ! ವಿಭೀಷಣನು ಹೀಗೆ ಹೇಳಲು ಆ ದೂತನು ಕುಶನ ದೂತನೊಡನೆ ಹೊರಟನು.

೬೭. ಅನಂತರ ದೂತನು ಶೀಘ್ರವಾಗಿ ಕುಶನೆಡೆಗೆ ಹೋಗಿ ವಿಧಿಯಂತೆ ನಮಸ್ಕರಿಸಿ ವಿನಯದಿಂದ ನಮ್ರನಾಗಿ ಇಂತೆಂದನು.

ವಿಭೀಷಣೋ ಮಯಾ ದೃಷ್ಟ್ವಾ ದೇವೇ ರಾಮೇಶ್ವರೇ ವಿಭೋ ।
ಪೂಜಾರ್ಥಂ ತತ್ರ ಚಾಽಽಯಾತೋ ರಾಕ್ಷಸೈರ್ಬಹುಭಿರ್ವೃತಃ ॥ ೮೮ ॥
ಪ್ರೋಕ್ತೋ ಮಯಾ ಭವದ್ವಾಕ್ಯಮಶೇಷಂ ರಘುನಂದನ ।
ಶ್ರುತಂ ತೇನಾಽಪಿ ತತ್ಸರ್ವಂ ವಿನಯಾಽವನತೇನ ಚ ॥ ೮೯ ॥
ಅಜಾನತಃ ಪ್ರಭೋ ತಸ್ಯ ರಾಕ್ಷಸೈಃ ಸುದುರಾತ್ಮಭಿಃ ।
ಪ್ರಜೈವಂ ಪೀಡಿತಾ ಭೂಮೌ ಮಹಾಮಾಂಸಸ್ಯ ಲೋಲುಪೈಃ ॥ ೯೦ ॥
ತಚ್ಛ್ರುತ್ವಾ ಮನ್ಮುಖಾತ್ತೇನ ಸರ್ವೇಷಾಂ ನಿಗ್ರಹಃ ಕೃತಃ ।
ಯೈಃ ಕೃತಂ ಕದನಂ ಭೂಮೌ ತವ ಪಾರ್ಥಿವಸತ್ತಮ ।
ಕೃತಾಸ್ತೇ ವ್ಯಂತರಾಃ ಸರ್ವೇ ಪಾಪಾಹಾರವಿಹಾರಿಣಃ ॥ ೯೧ ॥
ಭವಿಷ್ಯಥ ತಥಾ ಯೂಯಂ ಕ್ಷುತ್ಪಿಪಾಸಾನಿಪೀಡಿತಾಃ ।
ತೈಃ ಸರ್ವೈಃ ಪ್ರಾರ್ಥಿತಃ ಸೋಽಪಿ ಭೂಯೋ ಭೂಯಃ ಪ್ರಣಮ್ಯ ತಂ ॥
ಶಪ್ತಾಃ ಸರ್ವೇ ವಯಂ ತಾವತ್ಪ್ರಸಾದಂ ಕುರು ತದ್ವಿಭೋ ।
ತೇ ತೇನಾಽಥ ತತಃ ಪ್ರೋಕ್ತಾನಾಽಹಂ ವೋ ರಾಕ್ಷಸಾಽಧಮಾಃ ॥ ೯೨ ॥
ಅನುಗ್ರಹಂ ಕರಿಷ್ಯಾಮಿ ನ ದಾಸ್ಯಾಮಿ ಚ ಭೋಜನಂ ।
ಕುಶಾದೇಶಾನ್ಮಯಾ ಸರ್ವೇ ಯೂಯಂ ಪಾಪಸಮನ್ವಿತಾಃ ॥ ೯೪ ॥
ನಿಗೃಹೀತಾಃ ಸ ಯುಷ್ಮಾಕಂ ಪ್ರಸಾದಂ ಪ್ರಕರಿಷ್ಯತಿ ।
ತದರ್ಥಂ ಪ್ರೇಷಿತೋ ದೂತಸ್ತ್ವತ್ಸಕಾಶಂ ಮಹೀಪತೇ ॥ ೯೫ ॥

---

೮೮–೮೯. "ಸ್ವಾಮಿ! ನಾನು ಪೂಜೆಗಾಗಿ ಅನೇಕ ರಾಕ್ಷಸರೊಡನೆ ರಾಮೇಶ್ವರಕ್ಕೆ ಬಂದ ವಿಭೀಷಣನನ್ನು ನೋಡಿ ನೀನು ಹೇಳಿದ ಮಾತನ್ನೆಲ್ಲ ಹೇಳಿದೆನು. ಅವನು ಅದನ್ನೆಲ್ಲ ವಿನಯದಿಂದ ನಮ್ರನಾಗಿ ಕೇಳಿದನು.

೯೦. ಸ್ವಾಮಿ! ಅವನಿಗೆ ತಿಳಿಯದಹಾಗೆಯೇ ದುರಾತ್ಮರೂ, ಮಾಂಸದಲ್ಲಿ ಆಶೆಯುಳ್ಳವರೂ ಆದ ರಾಕ್ಷಸರು ಭೂಮಿಯಲ್ಲಿ ಪ್ರಜೆಗಳನ್ನು ಹೀಗೆ ಪೀಡಿಸಿದ್ದಾರೆ.

೯೧–೯೫. ಅವನು ನನ್ನ ಮುಖದಿಂದ ಆ ವಿಷಯವನ್ನು ಕೇಳಿ ಆ ರಾಕ್ಷಸರನ್ನೆಲ್ಲ ನಿಗ್ರಹಿಸಿದನು. ದೊರೆಯೆ! ಅವನು ನಿನ್ನ ರಾಜ್ಯದಲ್ಲಿ ಹಿಂಸಾಕೃತ್ಯಗಳನ್ನಾಚರಿಸಿದ ಆ ರಾಕ್ಷಸರನ್ನೆಲ್ಲ ದುಷ್ಟಾಹಾರವಿಹಾರವುಳ್ಳ ಹಸಿವು ಬಾಯಾರಿಕೆಯಿಂದ ಪೀಡಿತರಾದ ಬ್ರಹ್ಮರಾಕ್ಷಸರನ್ನಾಗಿಸಿದನು. ಅವರೆಲ್ಲರೂ ವಿಭೀಷಣನನ್ನು ನಮಸ್ಕರಿಸಿ ಶಪ್ತರಾದ ನಮಗೆ ಅನುಗ್ರಹ ಮಾಡೆಂದು ಪುನಃಪುನಃ ಬೇಡಿಕೊಂಡರು. ಬಳಿಕ ಆ ವಿಭೀಷಣನು ಅವರನ್ನು ಕುರಿತು ರಾಕ್ಷಸಾಧಮರೆ! ನಾನು ನಿಮ್ಮನ್ನು ಅನುಗ್ರಹಿಸುವುದಿಲ್ಲ. ಭೋಜನವನ್ನೂ ಕೊಡುವುದಿಲ್ಲ. ನಾನು ಕುಶನ ಅಪ್ಪಣೆಯಿಂದ ಪಾಪಿಷ್ಠರಾದ ನಿಮ್ಮನ್ನು ಶಿಕ್ಷಿಸಿರುವೆನು. ಆ ಕುಶನೇ ನಿಮ್ಮಲ್ಲಿ ಅನುಗ್ರಹ ಮಾಡುವನು ಎಂದನು. ಅದಕ್ಕಾಗಿ ಅವನು ನಿನ್ನೆಡೆಗೆ ದೂತನನ್ನು ಕಳುಹಿಸಿದ್ದಾನೆ.

ರಕ್ಷಸಾ ತೇನ ಯದ್ಯುಕ್ತಮಖಿಲಂ ತತ್ಸಮಾಚರ ।
ಕಿಂ ವಾ ತೇ ಬಹುನೋಕ್ತೇನ ನಾಽಸ್ತಿ ಭಕ್ತಸ್ತಥಾವಿಧಃ ।
ಭಕ್ತಿಶಕ್ತಿಸಮೋಪೇತೋ ಯಥಾ ತೇ ಸ ವಿಭೀಷಣಃ ॥ ೯೬ ॥
ಅದ್ಯ ಪ್ರಭೃತಿ ನೋ ಭೂಮೌ ವಿಚರಿಷ್ಯಂತಿ ರಾಕ್ಷಸಾಃ ।
ತಸ್ಯ ವಾಕ್ಯಾದಸಂದೇಹಂ ತ್ವಂ ರಾಜನ್ ಸುಖಭಾಗ್ಭವ ॥ ೯೭ ॥
ಲಿಂಗಾನಾಂ ಚ ಕೃತೇ ರಾಜನ್ ವಿಜ್ಞಪ್ತಂ ತೇನ ರಾಕ್ಷಸಾ ।
ನ ಮಯಾ ಚಾಽತ್ರ ರಾಜೇಂದ್ರ ಆಗಂತವ್ಯಂ ಕಥಂಚನ ।
ರಾಮದೇವಸ್ಯ ವಾಕ್ಯೇನ ಜಂಬೂದ್ವೀಪೇ ನ ಮೇ ಗತಿಃ ॥ ೯೮ ॥
ಅತ್ರ ಸ್ಥಿತಸ್ಯ ಯತ್ಕೃತ್ಯಂ ದೈವಂ ವಾ ಮಾನುಷಂ ಚ ವಾ ।
ತವಾದೇಶಂ ಕರಿಷ್ಯಾಮಿ ಯದ್ಯಪಿ ಸ್ಯಾತ್ಸುದುಷ್ಕರಂ ॥ ೯೯ ॥
ತಸ್ಮಾತ್ತೇನ ಮಹಾರಾಜ ರಾಮೇಶ್ವರಪ್ರಪೂಜಕಃ ।
ಮನುಷ್ಯಃ ಪ್ರೇಷಿತೋ ದೂತೋ ಯಸ್ತಂ ಪಶ್ಯ ಮಹೀಪತೇ ॥ ೧೦೦ ॥
ಅಥ ತಸ್ಯ ಸಮಾದೇಶಾದ್ಧೌಕನೀಯೈಃ ಪೃಥಗ್ವಿಧೈಃ ।
ಸಹಿತಃ ಸ ಸಮಾಯಾತೋ ದೂತೋ ರಕ್ಷೇಂದ್ರನೋದಿತಃ ॥ ೧೦೧ ॥
ಧಾತ್ರೀ ಫಲಪ್ರಮಾಣಾನಾಂ ತೇನ ಪ್ರಸ್ಥಾಸ್ತ್ರಯೋದಶ ।
ಮೌಕ್ತಿಕಾನಾಂ ಸಮಾನೀತಾಃ ಕೃತೇ ತಸ್ಯ ಮಹೀಪತೇಃ ॥ ೧೦೨ ॥

---

೯೬. ಆ ವಿಭೀಷಣನು ಹೇಳಿದ್ದನ್ನೆಲ್ಲ ನೀನು ಮಾಡು. ಹೆಚ್ಚು ಮಾತಿನಿಂದೇನು. ಭಕ್ತಿ ಶಕ್ತಿಗಳಿಂದ ಕೂಡಿದ ಆ ವಿಭೀಷಣನಂತಹ ಭಕ್ತನಿಲ್ಲ.

೯೭. ಅರಸ! ಇನ್ನುಮುಂದೆ ಆ ವಿಭೀಷಣನ ಮಾತಿನಿಂದ ರಾಕ್ಷಸರು ನಮ್ಮ ರಾಜ್ಯದಲ್ಲಿ ನಿಶ್ಚಯವಾಗಿಯೂ ಸಂಚರಿಸುವುದಿಲ್ಲ.

೯೮. ಲಿಂಗಗಳ ವಿಷಯದಲ್ಲಿ ಅವನು ಹೀಗೆ ಬಿನ್ನೈಸಿಕೊಂಡಿದ್ದಾನೆ. ದೊರೆಯೆ! ಶ್ರೀರಾಮನ ಅಪ್ಪಣೆಯಿಂದ ನಾನು ಆ ಜಂಬೂದ್ವೀಪಕ್ಕೆ ಬರುವಂತಿಲ್ಲ.

೯೯. ಇಲ್ಲಿರುವ ನಾನು ದೇವ ಮನುಷ್ಯ ಸಂಬಂಧವಾದ ಮಾಡಲಾಗದ ನಿನ್ನ ಎಂತಹ ಅಪ್ಪಣೆಯನ್ನಾಗಲೀ ನೆರವೇರಿಸುವೆನು.

೧೦೦. ಮಹಾರಾಜ! ಆದುದರಿಂದ ವಿಭೀಷಣನು ರಾಮೇಶ್ವರನನ್ನು ಪೂಜಿಸುವ ಮನುಷ್ಯನನ್ನು ನಿನ್ನೆಡೆಗೆ ದೂತನನ್ನಾಗಿ ಕಳುಹಿಸಿದ್ದಾನೆ. ನೀನು ಅವನನ್ನು ನೋಡು."

೧೦೧. ಬಳಿಕ ಕುಶನ ಅಪ್ಪಣೆಯಿಂದ ವಿಭೀಷಣನು ಕಳುಹಿಸಿದ ಆ ದೂತನು ಬಗೆಬಗೆಯ ಕಾಣಿಕೆಗಳನ್ನು ತೆಗೆದುಕೊಂಡು ಬಂದನು.

೧೦೨–೧೦೫. ಅವನು ಕುಶನಿಗಾಗಿ ತಂದ ನೆಲ್ಲಿಕಾಯಿ ಗಾತ್ರದ ಹದಿಮೂರು ಸೇರು ಮುತ್ತುಗಳನ್ನೂ, ಹದಿನಾರು ಬಳ್ಳ ವೈಡೂರ್ಯ, ಮರಕತ

ವೈಡೂರ್ಯಾಣಾಂ ಮರಕತಾನಾಂ ಮಣೀನಾಂ ಚ ದ್ವಿಜೋತ್ತಮಾಃ ।
ಜಾತ್ಯಾನಾಂ ಷೋಡಶದ್ರೋಣಾಃ ಸಮಾನೀತಾಃ ಸುನಿರ್ಮಲಾಃ ॥೧೦೪॥
ಅಗ್ನಿಶೌಚಾನಿ ವಸ್ತ್ರಾಣಿ ತಥಾ ದೇವಮಯಾನಿ ಚ ।
ಅಸಂಖ್ಯಾತಾನಿ ವೈ ಹೇಮ ಜಾತ್ಯಂ ಸಂಖ್ಯಾವಿವರ್ಜಿತಂ ॥ ೧೦೫ ॥
ತತ್ಸರ್ವಂ ದರ್ಶಯಿತ್ವಾಽಥ ಕುಶಾಯ ಸುಮಹಾತ್ಮನೇ ।
ಕೃತ್ವಾ ಪ್ರದಕ್ಷಿಣಂ ಪಶ್ಚಾತ್ಪ್ರಣಾಮಮಕರೋದ್ದ್ವಿಜಾಃ ॥ ೧೦೬ ॥
ಏಷ ಪಾರ್ಥಿವಶಾರ್ದೂಲ ರಾಕ್ಷಸೇಂದ್ರೋ ವಿಭೀಷಣಃ ।
ಪ್ರಣಾಮಂ ಕುರುತೇ ಭಕ್ತ್ಯಾ ಮನ್ಮುಖೇನೇದಮಬ್ರವೀತ್ ॥ ೧೦೭ ॥
ಪ್ರಸಾದಾತ್ತೇ ಪಿತುಃ ಕ್ಷೇಮಂ ಮಮ ರಾಜ್ಯೇ ಮಹೀಪತೇ ।
ಏಷ ತಿಷ್ಠಾಮ್ಯಹಂ ನಿತ್ಯಂ ಪೂಜಯಂಸ್ತೇ ಪಿತುರ್ಹರಂ ॥ ೧೦೮ ॥
ಮಮ ರಾಜನ್ನವಿಜ್ಞಾತೈರ್ಯದಿ ತೈಃ ಸುದುರಾತ್ಮಭಿಃ ।
ಮಹೀತಲೇ ಕೃತಂ ಕಿಂಚಿದ್ವಿರುದ್ಧಂ ಕ್ಷಮ್ಯತಾಂ ಮಮ ॥ ೧೦೯ ॥
ಏತೇ ಯೇ ರಾಕ್ಷಸಾಃ ಶಪ್ತಾಸ್ತವಾರ್ಥಾಯ ಮಯಾ ಪ್ರಭೋ ।
ಏತೇಷಾಂ ಪ್ರೇತರೂಪಾಣಾಂ ತ್ವಮಾಹಾರಂ ಪ್ರಕೀರ್ತಯ ॥ ೧೧೦ ॥

ಕುಶ ಉವಾಚ :—

ಮಮಾದೇಶಾತ್ಸಮಾಗತ್ಯ ತೇಽತ್ರ ಲಿಂಗಾನಿ ಕೃತ್ಸ್ನಶಃ ।
ಪೂರಯಂತು ಪ್ರಯತ್ನೇನ ಪಾಂಸುಭಿಃ ಸರ್ವತೋ ದಿಶಂ ॥ ೧೧೧ ॥

---

ರತ್ನಗಳನ್ನೂ, ಅಗ್ನಿಶುದ್ಧವೂ, ದೇವಮಯವೂ ಆದ ವಸ್ತ್ರಗಳನ್ನೂ, ಲೆಖ್ಖವಿಲ್ಲದ ಒಳ್ಳೆಯಜಾತಿಯ ಸುವರ್ಣವನ್ನೂ ಕುಶನಿಗೆ ತೋರಿಸಿ ಪ್ರದಕ್ಷಿಣ ನಮಸ್ಕಾರ ಮಾಡಿ ಇಂತೆಂದನು.

೧೦೭. "ನರೇಂದ್ರ! ರಾಕ್ಷಸರಾಜನಾದ ವಿಭೀಷಣನು ಭಕ್ತಿಯಿಂದ ನಿನಗೆ ನಮಸ್ಕರಿಸಿ ನನ್ನ ಮುಖದಿಂದ ಹೀಗೆ ಹೇಳಿದ್ದಾನೆ.

೧೦೭. ದೊರೆಯೆ! ನಿನ್ನ ತಂದೆಯ ಅನುಗ್ರಹದಿಂದ ನನ್ನ ರಾಜ್ಯದಲ್ಲೆಲ್ಲ ಕ್ಷೇಮವಾಗಿದ್ದಾರೆ. ನಾನು ನಿತ್ಯವೂ ರಾಮೇಶ್ವರನನ್ನು ಪೂಜಿಸುತ್ತಿದ್ದೇನೆ.

೧೦೮. ನನಗೆ ತಿಳಿಯದಂತೆ ದುರಾತ್ಮರಾದ ರಾಕ್ಷಸರು ನಿನ್ನ ರಾಜ್ಯದಲ್ಲಿ ಮಾಡಿದ ದುಷ್ಕೃತನವನ್ನು ಕ್ಷಮಿಸು.

೧೧೦. ಸ್ವಾಮಿ! ನಿನಗಾಗಿ ಆ ರಾಕ್ಷಸರನ್ನು ನಾನು ಶಪಿಸಿರುವೆನು. ಪ್ರೇತರಾದ ಅವರಿಗೆ ನೀನೇ ಆಹಾರವನ್ನು ನಿರ್ಣಯಿಸು."

೧೧೧. ಕುಶನು ಹೇಳುತ್ತಾನೆ:—"ದೂತ! ಆ ರಾಕ್ಷಸರು ನನ್ನ ಅಪ್ಪಣೆಯಿಂದ ಇಲ್ಲಿಗೆ ಬಂದು ಅವರು ಸ್ಥಾಪಿಸಿರುವ ಲಿಂಗಗಳನ್ನು ಪೂರ್ತಿಯಾಗಿ ಧೂಳಿನಿಂದ ತುಂಬಲಿ.

ತತಸ್ತು ಭೋಜನಂ ತೇಷಾಂ ಯದ್ಭವಿಷ್ಯತಿ ಭೂತಲೇ ।
ತದ್ವಕ್ಷ್ಯಾಮಿ ಸ್ಥಿರೋ ಭೂತ್ವಾ ಶೃಣು ದೇವಪ್ರಪೂಜಕ ॥ ೧೧೧ ॥
ತುಲಾಗತೇ ಸಹಸ್ರಾದಿತ್ಯೇ ತೈರಾಗತ್ಯ ಧರಾತಲೇ ।
ವಿಹರ್ತವ್ಯಂ ಪ್ರಯತ್ನೇನ ಯಾವದ್ವೃಶ್ಚಿಕದರ್ಶನಂ ॥ ೧೧೨ ॥
ತತ್ರ ಯೈರ್ನ ಕೃತಂ ಶ್ರಾದ್ಧಂ ಪ್ರೇತಪಕ್ಷೇ ನರಾಧಮೈಃ ।
ಕನ್ಯಾಸ್ಥೇ ವಾ ರವೌ ಯಾವನ್ನತುಲಾಂತಗತಿರ್ಭವೇತ್ ॥ ೧೧೩ ॥
ಜ್ವರರೂಪೈಸ್ತದಂಗಸ್ಥೈರ್ಭಕ್ಷ್ಯಮನ್ನಂ ಪೃಥಗ್ವಿಧಂ ।
ಮಮಾದೇಶಾದಸಂದಿಗ್ಧಂ ಮಾಸಮೇಕಂ ನಿಶಾಚರೈಃ ॥ ೧೧೪ ॥
ವಿಧಿಹೀನಂ ಚ ಯೈರ್ದತ್ತಂ ಭುಕ್ತಂ ಚ ವಿಧಿವರ್ಜಿತಂ ।
ಶ್ರಾದ್ಧಂ ವಾ ಮಾನುಷೈಃ ಸೇವ್ಯಾ ಜ್ವರರೂಪೈಶ್ಚ ತೇ ಸದಾ ॥ ೧೧೫ ॥
ಏವಂ ವಾಚ್ಯಾಸ್ತ್ವಯಾ ಸರ್ವೇ ಪ್ರೇತಾಸ್ತೇ ಮದ್ವಚೋಽಖಿಲಂ ।
ತಸ್ಮಾದಾಗತ್ಯ ಕುರ್ವಂತು ಕಾರ್ತಿಕೇ ಮಾಸಿ ಮದ್ವಚಃ ॥ ೧೧೬ ॥
ತಥಾ ದೂತ ತ್ವಯಾ ವಾಚ್ಯೋ ಮಮ ವಾಕ್ಯಾದ್ವಿಭೀಷಣಃ ।
ಪ್ರಮಾದಾದ್ಯನ್ಮಯಾ ಪ್ರೋಕ್ತಂ ಪರುಷಂ ವಚನಂ ತವ ॥ ೧೧೭ ॥

---

೧೧೧. ಅನಂತರ ಧರಣಿಯಲ್ಲಿ ಅವರಿಗೆ ಭೋಜನವು ಹೇಗೆ ಲಭಿಸುವುದೆಂಬುದನ್ನು ಹೇಳುವೆನು ಸ್ಥಿರಮನಸ್ಕನಾಗಿ ಕೇಳು.

೧೧೨. ಸೂರ್ಯನು ತುಲಾರಾಶಿಯನ್ನು ಹೊಂದಲು ಆ ರಾಕ್ಷಸರು ಭೂಮಿಗೆ ಬಂದು ವೃಶ್ಚಿಕ ಸಂಕ್ರಾಂತಿಯವರೆಗೆ ವಿಹರಿಸಲಿ.

೧೧೩–೧೧೪. ಸೂರ್ಯನು ಕನ್ಯಾರಾಶಿಯನ್ನು ಹೊಂದಿ ತುಲಾರಾಶಿಯನ್ನು ಪ್ರವೇಶಿಸುವವರೆಗೆ ಮಹಾಲಯಪಕ್ಷದಲ್ಲಿ ಯಾರು ಶ್ರಾದ್ಧವನ್ನು ಮಾಡುವುದಿಲ್ಲವೋ ಅವರ ಶರೀರವನ್ನು ಆ ರಾಕ್ಷಸರು ಜ್ವರರೂಪದಿಂದ ನನ್ನ ಅಪ್ಪಣೆಯಿಂದ ಪ್ರವೇಶಿಸಿ ಒಂದು ತಿಂಗಳಕಾಲ ನಾನಾವಿಧ ಅನ್ನವನ್ನು ಭಕ್ಷಿಸಲಿ.

೧೧೫. ವಿಧಿ ವಿಹೀನವಾಗಿ ದಾನ ಮಾಡಿದವರೂ, ಶ್ರಾದ್ಧ ಮಾಡಿದವರೂ ಆದ ಮನುಷ್ಯರ ಶರೀರವನ್ನು ಹೊಕ್ಕು ಭುಂಜಿಸಲಿ.

೧೧೬. ನೀನು ಈ ನನ್ನ ಮಾತನ್ನೆಲ್ಲ ಆ ಪ್ರೇತಗಳಿಗೆ ಹೇಳು. ಅವುಗಳು ಕಾರ್ತಿಕ ಮಾಸದಲ್ಲಿ ನನ್ನ ಮಾತಿನಂತೆ ನಡೆಯಲಿ.

೧೧೭. ಹಾಗೆಯೇ ದೂತ! ನೀನು ವಿಭೀಷಣನಿಗೆ ನನ್ನ ಮಾತಿನಿಂದ ಹೇಳು. ನಾನು ಪ್ರಮಾದದಿಂದ ಕಠಿನ ಮಾತನ್ನು ಆಡಿರುವೆನು.

ಜಾನಾಮ್ಯಹಂ ಮಹಾಭಾಗ ನ ತೇಽಸ್ತಿ ವಿಕೃತಿಃ ಕ್ವಚಿತ್ ।
ಪರಿಕ್ಲಿಷ್ಟಂ ಜನಂ ದೃಷ್ಟ್ವಾ ಮಯ್ಯೈತದ್ವ್ಯಾಹೃತಂ ವಚಃ ॥ ೧೧೮ ॥
ರಾಕ್ಷಸೇಂದ್ರೇ ಸ್ಥಿತೇ ಭೂಮೌ ತ್ವಯಿ ಜಾನಾಮ್ಯಹಂ ಸದಾ ।
ತಿಷ್ಠತೇ ಜನಕೋ ಮಹ್ಯಂ ರಾಮಃ ಶಸ್ತ್ರಭೃತಾಂ ವರಃ ॥ ೧೧೯ ॥
ಏವಮುಕ್ತ್ವಾ ತತೋ ದೂತಂ ಪೂಜಯಾಮಾಸ ರಾಘವಃ ।
ವಸ್ತ್ರೈರ್ಬಹುವಿಧೈ ರತ್ನೈರ್ನದ್ಯುತ್ಥೈಶ್ಚ ಪೃಥಗ್ವಿಧೈಃ ॥ ೧೨೦ ॥
ವಿಭೀಷಣಕೃತೇ ಪಶ್ಚಾತ್ಪ್ರೇಷಯಾಮಾಸ ರಾಘವಃ ।
ಢೌಕನೀಯಾನ್ಯನೇಕಾನಿ ಯಾನಿ ಸಂತಿ ಚ ತತ್ರ ವೈ ॥ ೧೨೧ ॥

ಸೂತ ಉವಾಚ:—

ಏವಂ ಸ ಸುಖ ಸಂಯುಕ್ತಾನ್ಕೃತ್ವಾ ಸರ್ವಾನ್ದ್ವಿಜೋತ್ತಮಾನ್ ।
ಏತತ್ಸರ್ವಂ ದದೌ ಪಶ್ಚಾತ್ತೇಭ್ಯೋ ಮುಕ್ತಾದಿಕಂ ನೃಪಃ ॥ ೧೨೨ ॥
ಢೌಕನೀಯಂ ತಥಾಯಾತಂ ತಲ್ಲಂಕಾಯಾಃ ಪೃಥಗ್ವಿಧಂ ।
ಶಾಸನಾನಿ ತಥಾಽನ್ಯಾನಿ ಗಜಾಶ್ವಸಹಿತಾನಿ ಚ ॥ ೧೨೩ ॥
ಪತ್ತನಾನಿ ವಿಚಿತ್ರಾಣಿ ಗ್ರಾಮಾಣಿ ನಗರಾಣಿ ಚ ।
ಯಚ್ಚಾಽನ್ಯದ್ವಾಂಛಿತಂ ಯೇನ ತದ್ದತ್ತಂ ತೇನ ತಸ್ಯ ವೈ ॥ ೧೨೪ ॥

---

೧೧೮. ಭಾಗ್ಯವಂತನೆ! ನೀನು ಯಾವ ವಿಷಯದಲ್ಲಿಯೂ ವಿಕಾರಗೊಳ್ಳುವುದಿಲ್ಲವೆಂಬುದನ್ನು ಅರಿತಿರುವೆನು. ದುಃಖಗೊಂಡ ನನ್ನ ಪ್ರಜೆಗಳನ್ನು ಕಂಡು ಹೀಗೆ ಮಾತಾಡಿದ್ದೇನೆ.

೧೧೯. ರಾಕ್ಷಸಾಧಿಪನಾದ ನೀನು ಭೂಮಿಯಲ್ಲಿರುವಾಗ, ಮಹಾವೀರನಾದ ನನ್ನ ತಂದೆಯು ಇರುವನೆಂದು ತಿಳಿಯುತ್ತೇನೆ."

೧೨೦. ಕುಶನು ದೂತನನ್ನು ಕುರಿತು ಹೀಗೆಂದು ಹೇಳಿ ಅವನನ್ನು ಅನೇಕ ವಿಧ ವಸ್ತ್ರಗಳಿಂದಲೂ, ನದಿಯಲ್ಲಿ ಹುಟ್ಟಿದ ಬಗೆಬಗೆಯ ರತ್ನಗಳಿಂದಲೂ ಪೂಜಿಸಿದನು.

೧೨೧. ಅನಂತರ ವಿಭೀಷಣನಿಗಾಗಿ ಅಲ್ಲಿರುವ ಅನೇಕ ವಿಧ ಉಪಾಯನಗಳನ್ನು ಕಳುಹಿಸಿದನು.

೧೨೨–೧೨೪. ಸೂತನು ಹೇಳುತ್ತಾನೆ:—ಹೀಗೆ ಆ ಕುಶನು ಸಕಲ ಬ್ರಾಹ್ಮಣರನ್ನೂ ಸುಖಗೊಳಿಸಿ ಲಂಕೆಯಿಂದ ಕಾಣಿಕೆಯಾಗಿ ಬಂದ ಮುತ್ತು ಮೊದಲಾದುವುಗಳನ್ನೂ, ಆನೆ ಕುದುರೆಗಳಿಂದ ಸಹಿತವಾದ ಶಾಸನಗಳನ್ನೂ, ನಾನಾವಿಧ ಪಟ್ಟಣ, ಗ್ರಾಮಗಳನ್ನೇ ಅಲ್ಲದೆ ಅವರಿಗೆ ಇಷ್ಟವಾದುದನ್ನೆಲ್ಲವನ್ನೂ ಕೊಟ್ಟನು.

ತತಃ ಕುಶೇಶ್ವರಂ ದೇವಂ ವಿಧಾಯ ಚ ಲವೇಶ್ವರಂ ।
ಸ್ಥಾಪನಂ ಚ ಮಹಾಭಾಗೌ ಭ್ರಾತರೌ ತೌ ರಘೂತ್ತಮೌ ॥ ೧೨೫ ॥
ನಿವೇದ್ಯ ಬ್ರಾಹ್ಮಣೇಂದ್ರಾಣಾಂ ಕೃತ್ವಾ ವೃತ್ತಿಂ ಯಥೋಚಿತಾಂ ।
ಅಯೋಧ್ಯಾಂ ನಗರೀಂ ತೂರ್ಣಂ ಕೃತಕೃತ್ಯೌ ವಿನಿರ್ಗತೌ ॥ ೧೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕುಶೇಶ್ವರಲವೇಶ್ವರಪ್ರತಿಷ್ಠಾವರ್ಣನಂ"
ನಾಮ ಚತುರುತ್ತರಶತತಮೋಽಧ್ಯಾಯಃ

---

೧೨೫–೧೨೬. ಬಳಿಕ ಸಹೋದರರಾದ ಆ ಲವಕುಶರು ಕುಶೇಶ್ವರ ಲವೇಶ್ವರ ಮೂರ್ತಿಗಳನ್ನು ಪ್ರತಿಷ್ಠೆಮಾಡಿ ಬ್ರಾಹ್ಮಣೋತ್ತಮರಿಗೆ ಉಚಿತ ವೃತ್ತಿಯನ್ನಿತ್ತು ಧನ್ಯರಾಗಿ ಅಯೋಧ್ಯಾ ನಗರಿಗೆ ತ್ವರೆಯಿಂದ ಹೊರಟರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕುಶೇಶ್ವರಲವೇಶ್ವರಪ್ರತಿಷ್ಠಾವರ್ಣನ"ವೆಂಬ
ನೂರನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚೋತ್ತರಶತತಮೋಽಧ್ಯಾಯಃ

## ರಾಕ್ಷಸಲಿಂಗಚ್ಛೇದನವರ್ಣನಂ

ಸೂತ ಉವಾಚ :—

ಅಥ ಪ್ರಾಪ್ತೇ ದಿನಾಧೀಶೇ ತುಲಾಯಾಂ ದ್ವಿಜಸತ್ತಮಾಃ ।
ಪ್ರೇತಾ ಲಿಂಗೋದ್ಭವಾಂ ಭೂಮಿಂ ಪೂರಯಾಮಾಸುರೇವ ಹಿ ॥ ೧ ॥
ಯತ್ಕಿಂಚಿತ್ತತ್ರ ಸಂಸ್ಥಂ ತು ಆದ್ಯತೀರ್ಥಂ ಸುರಾಲಯಂ ।
ತತ್ಸರ್ವಂ ವ್ಯಂತರೈಸ್ತೈಶ್ಚ ಪಾಂಸುಭಿಃ ಪರಿಪೂರಿತಂ ॥ ೨ ॥
ತತಃ ಕ್ಷೇಮಂ ಸಮುತ್ಪನ್ನಂ ಕ್ಷೇತ್ರೇ ತತ್ರ ದ್ವಿಜೋತ್ತಮಾಃ ।
ಅನ್ಯೇಷಾಮಪಿ ಲೋಕಾನಾಂ ಲಿಂಗೈಸ್ತೈರ್ಲುಪ್ತಿಮಾಗತೈಃ ॥ ೩ ॥
ಕಸ್ಯಚಿತ್ತ್ವಥ ಕಾಲಸ್ಯ ಬೃಹದಶ್ವೋ ಮಹೀಪತಿಃ ।
ಶಾಲ್ವದೇಶಾತ್ಸಮಾಯಾತಃ ಕಸ್ಮಿಂಶ್ಚಿದ್ಯುಗಪರ್ಯಯೇ ॥ ೪ ॥
ಸ ದೃಷ್ಟ್ವಾ ವಿಪುಲಾಂ ಭೂಮಿಂ ಪ್ರಾಸಾದೈಃ ಪರಿವರ್ಜಿತಾಂ ।
ಪ್ರಾಸಾದಾರ್ಥಂ ಮತಿಂ ಚಕ್ರೇ ತತ್ರ ಕ್ಷೇತ್ರೇ ದ್ವಿಜೋತ್ತಮಾಃ ॥ ೫ ॥

---

## ಕನ್ನಡದ ಅನುವಾದ

### ರಾಕ್ಷಸಲಿಂಗಚ್ಛೇದನವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ತರುವಾಯ ಸೂರ್ಯನು ತುಲಾರಾಶಿಯನ್ನು ಹೊಂದಲು ಪ್ರೇತಗಳು ಲಿಂಗಗಳಿರುವ ಭೂಮಿಯನ್ನು ಧೂಳಿನಿಂದ ಮುಚ್ಚಿದುವು.

೨. ಅಲ್ಲಿರುವ ಆದ್ಯತೀರ್ಥ, ದೇವಾಲಯಗಳನ್ನು ಪ್ರೇತಗಳು ಧೂಳಿನಿಂದ ತುಂಬಿದುವು.

೩. ಆ ಕ್ಷೇತ್ರದಲ್ಲಿರುವ ಲಿಂಗಗಳು ಅಡಗಿಹೋಗಲು ಇತರ ಜನರಿಗೆ ಕ್ಷೇಮವುಂಟಾಯಿತು.

೪. ಅನಂತರ ಬಹು ಕಾಲವು ಕಳೆಯಲು ಒಂದಾನೊಂದು ಯುಗವ್ಯತ್ಯಯದಲ್ಲಿ ಶಾಲ್ವದೇಶದಿಂದ ಬೃಹದಶ್ವನೆಂಬ ರಾಜನು ಅಲ್ಲಿಗೆ ಬಂದನು.

೫. ದ್ವಿಜೋತ್ತಮರೆ! ಅವನು ಆ ಕ್ಷೇತ್ರದಲ್ಲಿ ದೇವಾಲಯಗಳಿಲ್ಲದ ವಿಶಾಲವಾದ ಭೂಮಿಯನ್ನು ಕಂಡು ದೇವಾಲಯವನ್ನು ಕಟ್ಟಿಸಬೇಕೆಂದು ಆಲೋಚಿಸಿದನು.

ಶಿಲ್ಪಿನಶ್ಚ ಸಮಾಹೂಯಾಽನೇಕಾಂಸ್ತತ್ರ ಸಹಸ್ರಶಃ ।
ಶೋಧಯಾಮಾಸ ತಾಂ ಭೂಮಿಮಧಸ್ತಾದ್ಬಹುವಿಸ್ತೃತಾಂ ॥ ೬ ॥
ಭೂಮೌ ನಿಖನ್ಯಮಾನಾಯಾಂ ತತೋ ಲಿಂಗಾನಿ ಭೂರಿಶಃ ।
ಚತುರ್ವಕ್ತ್ರಾಣಿ ತಾನ್ಯೇವ ಯಾಂತಿ ದೃಷ್ಟೇಽಶ್ಚ ಗೋಚರಂ ॥ ೭ ॥
ತತಃ ಸ ಪಾರ್ಥಿವಸ್ತೈಶ್ಚ ಲಿಂಗೈರ್ದೃಷ್ಟ್ವಾ ವೃತಾಂ ಭುವಂ ।
ತತ್ಕ್ಷಣಾನ್ಮೃತ್ಯುಮಾಪನ್ನಃ ಶಿಲ್ಪಿಭಿಶ್ಚ ಸಮನ್ವಿತಃ ॥ ೮ ॥
ತತಃ ಪ್ರಭೃತಿ ನೋ ತತ್ರ ಕಶ್ಚಿನ್ಮರ್ತ್ಯೋ ಮಹೀತಲೇ ।
ಪ್ರಾಸಾದಂ ಕುರುತೇ ಭೀತ್ಯಾ ತಡಾಗಂ ಕೂಪಮೇವ ಚ ॥ ೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರಾಕ್ಷಸಲಿಂಗಚ್ಛೇದನವರ್ಣನಂ" ನಾಮ
ಪಂಚೋತ್ತರಶತತಮೋಽಧ್ಯಾಯಃ

---

೬. ಅವನು ಅಲ್ಲಿ ಸಾವಿರಾರು ಮಂದಿ ಶಿಲ್ಪಿಗಳನ್ನು ಕರೆಯಿಸಿ ಬಹು ವಿಶಾಲ ವಾದ ಆ ಭೂಮಿಯನ್ನು ಕೆಳಗೆ ಶೋಧನೆ ಮಾಡಿಸಿದನು.

೭. ಶಿಲ್ಪಿಗಳು ಭೂಮಿಯನ್ನು ಅಗೆಯುತ್ತಿರುವಾಗ ಅನೇಕ ನಾಲ್ಕು ಮುಖಗಳುಳ್ಳ ಲಿಂಗಗಳು ಕಾಣಿಸಿದುವು.

೮. ಆ ದೊರೆಯು ಲಿಂಗಗಳಿಂದ ತುಂಬಿರುವ ಭೂಮಿಯನ್ನು ಕಂಡಕೂಡಲೆ ಶಿಲ್ಪಿಗಳೊಡನೆ ಮಡಿದನು.

೯. ಅದು ಮೊದಲ್ಗೊಂಡು ಆ ಕ್ಷೇತ್ರದಲ್ಲಿ ಯಾವ ಮನುಷ್ಯನೂ ಭಯ ದಿಂದ ದೇವಾಲಯ, ಕೆರೆ, ಬಾವಿಗಳನ್ನು ನಿರ್ಮಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರಾಕ್ಷಸಲಿಂಗಚ್ಛೇದನವರ್ಣನ"ವೆಂಬ
ನೂರೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡುತ್ತರಶತತಮೋಽಧ್ಯಾಯಃ

## ಲುಪ್ತತೀರ್ಥಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಭೂಪೃಷ್ಠೇ ಪಾಂಸುಭಿಸ್ತಸ್ಮಿನ್ಪ್ರೇತೈಸ್ತೈಃ ಪರಿಪೂರಿತೇ ।
ಯಾನಿ ತೀರ್ಥಾನಿ ಲುಪ್ತಾನಿ ಲಿಂಗಾನಿ ಚ ವದಸ್ವ ನಃ ॥ ೧ ॥

ಸೂತ ಉವಾಚ :—

ಅಸಂಖ್ಯಾತಾನಿ ತೀರ್ಥಾನಿ ತಥಾ ಲಿಂಗಾನಿ ಚ ದ್ವಿಜಾಃ ।
ಲೋಪಂ ಗತಾನಿ ವಕ್ಷ್ಯಾಮಿ ಪ್ರಾಧಾನ್ಯೇನ ಪ್ರಬೋಧತ ॥ ೨ ॥
ತತ್ರ ಲೋಪಂ ಗತಂ ತೀರ್ಥಂ ಚಕ್ರತೀರ್ಥಮಿತಿ ಸ್ಮೃತಂ ।
ಯತ್ರ ಚಕ್ರಂ ಪುರಾ ನ್ಯಸ್ತಂ ವಿಷ್ಣುನಾ ಪ್ರಭವಿಷ್ಣುನಾ ॥ ೩ ॥
ಮಾತೃತೀರ್ಥಂ ತಥೈವಾಽನ್ಯತ್ಸರ್ವಕಾಮಪ್ರದಂ ನೃಣಾಂ ।
ಯತ್ರ ತಾ ಮಾತರೋ ದಿವ್ಯಾಃ ಕಾರ್ತಿಕೇಯಪ್ರತಿಷ್ಠಿತಾಃ ॥ ೪ ॥
ಮುಚುಕುಂದಸ್ಯ ರಾಜರ್ಷೇಸ್ತಥಾಽನ್ಯಲ್ಲಿಂಗಮುತ್ತಮಂ ।
ತತ್ರ ಲೋಪಂ ಗತಂ ವಿಪ್ರಾಃ ಸಗರಸ್ಯ ತು ಭೂಪತೇಃ ॥ ೫ ॥
ಇಕ್ಷ್ವಾಕೋರ್ವಸುಷೇಣಸ್ಯ ಕಕುತ್ಸ್ಥಸ್ಯ ಮಹಾತ್ಮನಃ ।
ಐಲಸ್ಯ ಚಂದ್ರದೇವಸ್ಯ ಕಾಶಿರಾಜಸ್ಯ ಸನ್ಮತೇಃ ॥ ೬ ॥

---

## ಕನ್ನಡದ ಅನುವಾದ

### ಲುಪ್ತತೀರ್ಥಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಪ್ರೇತಗಳು ಆ ಕ್ಷೇತ್ರವನ್ನು ಧೂಳಿನಿಂದ ತುಂಬಿದಾಗ ಯಾವ ಯಾವ ಕ್ಷೇತ್ರಗಳೂ, ಲಿಂಗಗಳೂ ಅಡಗಿಹೋದುವು? ಅದನ್ನು ನಮಗೆ-ಹೇಳು.

೨. ಸೂತನು ಹೇಳುತ್ತಾನೆ:—ದ್ವಿಜರೆ! ಅಲ್ಲಿ ಅಡಗಿಹೋದ ಅನೇಕ ತೀರ್ಥ ಲಿಂಗಗಳಲ್ಲಿ ಮುಖ್ಯವಾದುವುಗಳನ್ನು ಹೇಳುವೆನು, ತಿಳಿಯಿರಿ.

೩-೪. ಅಲ್ಲಿ ಹಿಂದೆ ವಿಷ್ಣುವು ತನ್ನ ಚಕ್ರವನ್ನು ಸ್ಥಾಪಿಸಿರುವ ಚಕ್ರ ತೀರ್ಥವೂ, ಷಣ್ಮುಖನು ದಿವ್ಯಮಾತೆಯರನ್ನು ಪ್ರತಿಷ್ಠೆಮಾಡಿರುವ ಮನುಷ್ಯರಿಗೆ ಸಕಲೇಷ್ಟಗಳನ್ನು ಕೊಡುವ ಮಾತೃತೀರ್ಥವೂ ಅಡಗಿಹೋದುವು.

೫-೧೧. ಮತ್ತು ಮುಚುಕುಂದ, ಸಗರ, ಇಕ್ಷ್ವಾಕು, ವಸುಷೇಣ, ಕಕುತ್ಸ್ಥ, ಐಲ, ಕಾಶಿರಾಜನಾದ ಚಂದ್ರದೇವ ಇವರ ಲಿಂಗಗಳೂ, ಅಗ್ನಿವೇಶ್ಯ,

ಅಗ್ನಿವೇಶಸ್ಯ ರೈಭ್ಯಸ್ಯ ಚ್ಯವನಸ್ಯ ಭೃಗೋಸ್ತಥಾ ।
ಆಶ್ರಮೋ ಯಾಜ್ಞವಲ್ಕ್ಯಸ್ಯ ತತ್ರ ಲೋಪಂ ಸಮಾಯಯೌ ॥ ೭ ॥
ಹರೀತಸ್ಯ ಮಹರ್ಷೇಶ್ಚ ಹರ್ಯಶ್ವಸ್ಯ ಮಹಾತ್ಮನಃ ।
ಕುತ್ಸಸ್ಯ ಚ ವಸಿಷ್ಠಸ್ಯ ನಾರದಸ್ಯ ತ್ರಿತಸ್ಯ ಚ ॥ ೮ ॥
ತಥೈವ ಋಷಿಪತ್ನೀನಾಂ ತತ್ರ ಲಿಂಗಾನಿ ಭೂರಿಶಃ ।
ಕಾತ್ಯಾಯನ್ಯಾಶ್ಚ ಶಾಂಡಿಲ್ಯಾ ಮೈತ್ರೇಯ್ಯಾಶ್ಚ ತಥಾ ಪುರಾ ॥ ೯ ॥
ಅನ್ಯಾಸಾಂ ಮುನಿಪತ್ನೀನಾಂ ಯಾಸಾಂ ಸಂಖ್ಯಾ ನ ವಿದ್ಯತೇ ।
ತತ್ರಾಶ್ಚರ್ಯಮಭೂದನ್ಯತ್ಪೂರ್ಯಮಾಣೇ ಮಹೀತಲೇ ॥ ೧೦ ॥
ಪಾಂಸುಭೀ ರಾಕ್ಷಸೈರ್ಯೈಸ್ತೈಃ ಪ್ರೇತೈರ್ಬ್ರಾಹ್ಮಣಸತ್ತಮಾಃ ।
ತದ್ವೋಽಹಂ ಸಂಪ್ರವಕ್ಷ್ಯಾಮಿ ಶ್ರೋತವ್ಯಂ ಸುಸಮಾಹಿತೈಃ ॥ ೧೧ ॥
ದೃಷ್ಟ್ವಾ ಪಾಂಸುಮಯೀಂ ವೃಷ್ಟಿಂ ಮುಕ್ತಾಂ ಪ್ರೇತೈಃ ಸಮಂತತಃ ।
ಮಾತೃವರ್ಗೇಣ ತೇನಾಽಥ ಪ್ರಮುಕ್ತಃ ಪ್ರಚುರೋಽನಿಲಃ ॥ ೧೨ ॥
ತೇನ ಪಾಂಸುಕೃತಾ ವೃಷ್ಟಿಃ ಸಮಂತಾಸ್ಮಥಿತಾ ಬಹಿಃ ।
ತಸ್ಯಾ ಭೂಮೇಃ ಪತತ್ಯೇವ ನ ಕಿಂಚಿತ್ತತ್ರ ಪೂರ್ಯತೇ ॥ ೧೩ ॥
ತತಸ್ತೇ ವ್ಯಂತರಾಃ ಖಿನ್ನಾ ನಿರಾಶಾಸ್ತಸ್ಯ ಪೂರಣೇ ।
ಭೂತಾಸ್ತಸ್ಯ ಪುರೋ ಗತ್ವಾ ಚುಕ್ರುಶುಃ ಕುಶಭೂಪತೇಃ ॥ ೧೪ ॥
ಅಸ್ಮಾಭಿರ್ವಿಹಿತಾ ತತ್ರ ಪಾಂಸುವೃಷ್ಟಿರ್ಮಹೀಪತೇ ।
ನೀಯತೇ ಶತಧಾಽನ್ಯತ್ರ ಮಾತೃಮುಕ್ತೇನ ವಾಯುನಾ ॥ ೧೫ ॥

---

ರೈಭ್ಯ, ಚ್ಯವನ, ಭೃಗು, ಯಾಜ್ಞವಲ್ಕ್ಯ ಇವರ ಆಶ್ರಮಗಳೂ, ಹಾರೀತ, ಹರ್ಯಶ್ವ, ಕುತ್ಸ, ವಸಿಷ್ಠ, ನಾರದ, ತ್ರಿತ, ಕಾತ್ಯಾಯಿನೀ, ಶಾಂಡಿಲಿ, ಮೈತ್ರೇಯಿ ಇವರೇ ಅಲ್ಲದೆ ಇನ್ನೂ ಇತರ ಬಹುಮಂದಿ ಮುನಿಪತ್ನಿಯರು ಪ್ರತಿಷ್ಠಿಸಿದ ಶಿವಲಿಂಗಗಳೂ ಅಡಗಿಹೋದುವು. ಪ್ರೇತಗಳು ಧೂಳಿನಿಂದ ಆ ಸ್ಥಳವನ್ನು ಮುಚ್ಚುತ್ತಿರಲು ಅಲ್ಲಿ ನಡೆದ ಒಂದು ಆಶ್ಚರ್ಯವನ್ನು ನಿಮಗೆ ಹೇಳುವೆನು ಕೇಳಿರಿ.

೧೨. ಆ ಕ್ಷೇತ್ರದಲ್ಲಿ ಪ್ರೇತಗಳು ಸುರಿಸುತ್ತಿರುವ ಧೂಳಿಯನ್ನು ನೋಡಿ ಮಾತೆಯರು ಬಲವಾದ ಗಾಳಿಯನ್ನು ಬೀಸುವಂತೆ ಮಾಡಿದರು.

೧೩. ಅದರಿಂದ ಧೂಳಿವರ್ಷಣವು ಆ ಭೂಮಿಯ ಹೊರಗಡೆ ತೂರಿಹೋದುದರಿಂದ ಆ ಕ್ಷೇತ್ರವು ತುಂಬಲೇ ಇಲ್ಲ.

೧೪. ಬಳಿಕ ಆ ಪ್ರೇತಗಳು ಧೂಳಿ ತುಂಬುವುದರಲ್ಲಿ ಖಿನ್ನರಾಗಿ ಕುಶನ ಮುಂದೆ ಹೋಗಿ ಅರಚಿಕೊಂಡುವು.

೧೫. "ದೊರೆಯೆ! ನಾವು ಆ ಕ್ಷೇತ್ರದಲ್ಲಿ ಧೂಳನ್ನು ಸುರಿಸಿದೆವು. ಆದರೆ ಅದು ಮಾತೆಯರು ಪ್ರಯೋಗಿಸಿದ ಗಾಳಿಯಿಂದ ಬೇರೆ ಕಡೆ ಹೋಗುವುದು.

ಸ ತ್ವಂ ತಾಸಾಂ ವಿಘಾತಾರ್ಥಮುಪಾಯಂ ಭೂಪ ಚಿಂತಯ ।
ಯೇನ ತಾಂ ಪಾಂಸುಭಿರ್ಭೂಮಿಂ ಪೂರಯಾಮಃ ಸಮಂತತಃ ॥ ೧೬ ॥
ತೇಷಾಂ ತದ್ವಚನಂ ಶ್ರುತ್ವಾ ತತಃ ಕುಶಮಹೀಪತಿಃ ।
ರುದ್ರಮಾರಾಧಯಾಮಾಸ ತತ್ಕ್ಷೇತ್ರಂ ಪ್ರಾಪ್ಯ ಸದ್ದ್ವಿಜಾಃ ॥ ೧೭ ॥
ತತಸ್ತಸ್ಯ ಗತಸ್ತುಷ್ಟಿಂ ವರ್ಷಾಂತೇ ಭಗವಾನ್ ಹರಃ ।
ಪ್ರೋವಾಚ ಪ್ರಾರ್ಥಯಾಭೀಷ್ಟಂ ಯತ್ತೇ ಮನಸಿ ವಾಂಛಿತಂ ॥ ೧೮ ॥

ಕುಶ ಉವಾಚ :—

ಯಥಾ ಸಂಪೂರ್ಯತೇ ಚಾಽಽಶು ಪಾಂಸುಭಿರ್ಭೂಮಿಮಂಡಲಂ ।
ಏತತ್ಪ್ರೇತಪ್ರಮುಕ್ತೈಶ್ಚ ಪ್ರಸಾದಾತ್ತೇ ತಥಾ ಕುರು ॥ ೧೯ ॥
ಮಯಾ ಪ್ರೇತಗಣಾ ದೇವ ನಿರ್ದಿಷ್ಟಾಸ್ತಸ್ಯ ಪೂರಣೇ ।
ಮಾತೃಸಂರಕ್ಷ್ಯಮಾಣಂ ತಚ್ಛಕ್ಯಂ ಚೈತನ್ನ ಪೂರಿತುಂ ॥ ೨೦ ॥
ತತ್ರ ರಾಕ್ಷಸಜೈರ್ಮಂತ್ರೈಃ ಸಂತಿ ಲಿಂಗಾನಿ ಚ ಪ್ರಭೋ ।
ಪ್ರತಿಷ್ಠಿತಾನಿ ತತ್ಸ್ಪರ್ಶಾದ್ದರ್ಶನಾತ್ಸ್ಯಾಜ್ಜನಕ್ಷಯಃ ॥ ೨೧ ॥
ಅಚಲತ್ವಾತ್ತಥಾ ದೇವ ಲಿಂಗಾನಾಂ ಶಾಸ್ತ್ರಸದ್ಭಯಾತ್ ।
ಅನ್ಯದುತ್ಪಾಟನಾದ್ಯಂ ಚ ನೈವ ಕುರ್ಮಃ ಕಥಂಚನ ॥ ೨೨ ॥

---

೧೬. ನೀನು ಆ ಮಾತೆಯರ ನಾಶಕ್ಕೆ ಉಪಾಯವನ್ನು ಆಲೋಚಿಸು. ಅದರಿಂದ ನಾವು ಆ ಭೂಮಿಯನ್ನು ಸುತ್ತಲೂ ತುಂಬುವೆವು.”

೧೭. ಬ್ರಾಹ್ಮಣರೆ! ಅವರ ಆ ಮಾತನ್ನು ಕೇಳಿ ಕುಶನು ಆ ಕ್ಷೇತ್ರವನ್ನು ಹೊಂದಿ ರುದ್ರನನ್ನು ಪೂಜಿಸಿದನು.

೧೮. ಆ ರುದ್ರನು ಒಂದು ವರ್ಷವಾದ ಮೇಲೆ ಅವನಲ್ಲಿ ಸಂತುಷ್ಟನಾಗಿ ‘ನಿನ್ನ ಇಷ್ಟಾರ್ಥವನ್ನು ಕೇಳಿಕೊ,’ ಎಂದನು.

೧೯. ಕುಶನು ಹೇಳುತ್ತಾನೆ:—“ಪ್ರೇತಗಳು ಸುರಿಸಿದ ಧೂಳಿನಿಂದ ಈ ಭೂಮಿಯು ಶೀಘ್ರವಾಗಿ ತುಂಬುವಂತೆ ಅನುಗ್ರಹಿಸು.

೨೦. ಸ್ವಾಮಿ! ನಾನು ಆ ಕ್ಷೇತ್ರವನ್ನು ತುಂಬುವುದಕ್ಕಾಗಿ ಪ್ರೇತಗಣಗಳನ್ನು ನಿಯಮಿಸಿದೆನು. ಆದರೆ ಮಾತೆಯರು ಆ ಕ್ಷೇತ್ರವನ್ನು ರಕ್ಷಿಸುವುದರಿಂದ ತುಂಬಲು ಸಾಧ್ಯವಿಲ್ಲ.

೨೧. ಅಲ್ಲಿ ರಾಕ್ಷಸರು ತಮ್ಮ ಮಂತ್ರಗಳಿಂದ ಪ್ರತಿಷ್ಠೆಮಾಡಿದ ಶಿವಲಿಂಗಗಳು ಇವೆ. ಅದನ್ನು ಮುಟ್ಟುವುದರಿಂದಲೂ, ನೋಡುವುದರಿಂದಲೂ ಜನರು ಸಾಯುವರು.

೨೨. ಶಿವಲಿಂಗಗಳನ್ನು ಅಲ್ಲಾಡಿಸಬಾರದೆಂದು ಶಾಸ್ತ್ರವಿರುವುದರಿಂದ ಭಯಗೊಂಡು ನಾವು ಅದನ್ನು ಕೀಳುವುದೇ ಮೊದಲಾದುದನ್ನು ಮಾಡುವುದಿಲ್ಲ.

ತಸ್ಮಾಲ್ಲಿಂಗಕೃತೋ ನಾಶೋ ಬ್ರಾಹ್ಮಣಾನಾಂ ತಪಸ್ವಿನಾಂ ।
ಯಥಾ ನ ಸ್ಯಾತ್ಸುರಶ್ರೇಷ್ಠ ತಥಾ ನೀತಿರ್ವಿಧೀಯತಾಂ ॥ ೨೩ ॥
ತತಶ್ಚ ಭಗವಾನ್ರುದ್ರಸ್ತಾಃ ಸಮಾಹೂಯ ಮಾತರಃ ।
ಪ್ರೋವಾಚ ತ್ಯಜ್ಯತಾಂ ಸ್ಥಾನಂ ಭವತ್ಯೋ ಯತ್ರಸಂಸ್ಥಿತಾಃ ॥ ೨೪ ॥
ತತ್ರ ಪಾಂಸುಭಿರವ್ಯಗ್ರಾಃ ಕರಿಷ್ಯಂತಿ ದಿವಾನಿಶಂ ।
ಪ್ರೇತಾಃ ಕುಶಸಮಾದೇಶಾದ್ವೃಷ್ಟಿಂ ಲೋಕಹಿತಾಯ ಚ ॥ ೨೫ ॥

ಮಾತರ ಊಚುಃ :—

ತ್ಯಕ್ಷ್ಯಾಮಃ ಚ ತವಾದೇಶಾತ್ತತ್ಸ್ಥಾನಂ ವೃಷಭಧ್ವಜ ।
ಪರಂ ದರ್ಶಯ ಚಾಸ್ಮಾಕಂ ಕಿಂಚಿದನ್ಯತ್ತಥಾ ವಿಧಂ ॥ ೨೬ ॥
ಕ್ಷೇತ್ರೇಽತ್ರೈವ ನಿವತ್ಸ್ಯಾಮೋ ಯೇನ ಸ್ಕಂದಕೃತೇ ವಯಂ ।
ತೇನ ಸಂಸ್ಥಾಪಿತಾಶ್ಚಾಽತ್ರ ಪ್ರೋಕ್ತಾಃ ಸ್ಥೇಯಂ ಸದಾ ತತಃ ॥ ೨೭ ॥
ತತಃ ಪ್ರೋವಾಚ ಭಗವಾಂಸ್ತಸ್ಮಾತ್ಸ್ಥಾನಾನ್ಮಹತ್ತರಂ ।
ಸ್ಥಾನಂ ದಾಸ್ಯಾಮಿ ಸರ್ವಾಸಾಂ ಪೃಥಕ್ತ್ವೇನ ಶುಭಾವಹಂ ॥ ೨೮ ॥
ಅಷ್ಟಷಷ್ಟಿಸ್ತು ಕ್ಷೇತ್ರಾಣಾಂ ಮದೀಯಾನಾಂ ಸಮಂತತಃ ।
ಸಂಸ್ಥಿತಾಸ್ತಿ ಮಹಾಭಾಗಾ ಯೇಷು ಮತ್ಸಂಸ್ಥಿತಿಃ ಸದಾ ॥ ೨೯ ॥

---

೨೩. ಸುರೋತ್ತಮ! ಆ ಶಿವಲಿಂಗದಿಂದ ಬ್ರಾಹ್ಮಣರಿಗೂ, ಮುನಿಗಳಿಗೂ ನಾಶವಾಗದಂತೆ ಒಂದು ನ್ಯಾಯವನ್ನು ಕಲ್ಪಿಸು."

೨೪. ಬಳಿಕ ಪೂಜ್ಯನಾದ ರುದ್ರನು ಆ ಮಾತೆಯರನ್ನು ಕರೆಯಿಸಿ, "ನೀವು ನೆಲೆಸಿರುವ ಈ ಸ್ಥಳವನ್ನು ಬಿಟ್ಟುಬಿಡಿರಿ.

೨೫. ಇಲ್ಲಿ ಕುಶನ ಅಪ್ಪಣೆಯಿಂದ ಪ್ರೇತಗಳು ಹಗಲು ರಾತ್ರಿ ಲೋಕ ಹಿತಕ್ಕಾಗಿ ಧೂಳಿಯನ್ನು ಸುರಿಸುತ್ತಿರುವುವು," ಎಂದನು.

೨೬. ಮಾತೃಗಳು ಹೇಳುತ್ತಾರೆ:—ಮಹೇಶ್ವರ! ನಿನ್ನ ಅಪ್ಪಣೆಯಂತೆ ನಾವು ಈ ಸ್ಥಳವನ್ನು ಬಿಡುವೆವು. ಆದರೆ ನಮಗೆ ಇಂತಹ ಇನ್ನೊಂದು ಸ್ಥಳ ವನ್ನು ತೋರಿಸು.

೨೭. ಷಣ್ಮುಖನು ನಮ್ಮನ್ನು ಇಲ್ಲಿ ಸ್ಥಾಪಿಸಿ ನೀವು ಇಲ್ಲಿಯೇ ಯಾವಾಗಲೂ ನೆಲೆಸಿರಬೇಕೆಂದು ಹೇಳಿರುವುದರಿಂದ ನಾವು ಇಲ್ಲಿ ಸ್ಕಂದನಿಗಾಗಿ ವಾಸಮಾಡುತ್ತಿದ್ದೇವೆ.

೨೮. ಬಳಿಕ ಪರಮೇಶ್ವರನು ಇಂತೆಂದನು. ನಿಮಗೆ ಆ ಸ್ಥಳಕ್ಕಿಂತ ಶ್ರೇಷ್ಠ ವಾದ ಬೇರೆ ಸ್ಥಳವನ್ನು ಬೇರೆ ಬೇರೆಯಾಗಿ ಕೊಡುವೆನು.

೨೯. ಇಲ್ಲಿ ಸುತ್ತಲೂ ನನ್ನ ಅರುವತ್ತೆಂಟು ಕ್ಷೇತ್ರಗಳಿರುವುವು. ಅವುಗಳಲ್ಲಿ ನಾನು ಯಾವಾಗಲೂ ಇರುವೆನು.

ಅಷ್ಟಷಷ್ಟಿವಿಭಾಗೇನ ಭೂತ್ವಾ ಸರ್ವಾಃ ಪೃಥಕ್ ಪೃಥಕ್ ।
ತೇಷು ತಿಷ್ಠಥ ಮದ್ವಾಕ್ಯಾತ್ಪೂಜಾಮಗ್ರ್ಯಾಮವಾಪ್ಸ್ಯಥ ॥ ೩೦ ॥
ತಸ್ಯ ದೇವಸ್ಯ ತಚ್ಛ್ರುತ್ವಾ ವಾಕ್ಯಂ ತಾ ಮಾತರಸ್ತದಾ ।
ಪ್ರಹೃಷ್ಟಾಸ್ತತ್ಪರಿತ್ಯಜ್ಯ ಸ್ಥಾನಂ ಸ್ಕಂದವಿನಿರ್ಮಿತಂ ॥ ೩೧ ॥
ಅಷ್ಟಷಷ್ಟಿವಿಭಾಗೇನ ಭೂತ್ವಾ ರೂಪೈಃ ಪೃಥಗ್ವಿಧೈಃ ।
ಅಷ್ಟಷಷ್ಟಿಷು ಕ್ಷೇತ್ರೇಷು ತಸ್ಯ ತಾಃ ಸಂಸ್ಥಿತಾಃ ಸದಾ ॥ ೩೨ ॥
ತತಸ್ತಾಭಿರ್ವಿನಿರ್ಮುಕ್ತಂ ತತ್ಸರ್ವಂ ಭೂಮಿಮಂಡಲಂ ।
ಪಾಂಸುಭಿಃ ಪೂರಿತಂ ಪ್ರೇತೈರ್ದಿವಾರಾತ್ರಮತಂದ್ರಿತೈಃ ॥ ೩೩ ॥
ಏವಂ ತಸ್ಯ ವರಂ ದತ್ವಾ ಭಗವಾನ್ ವೃಷವಾಹನಃ ।
ಜಗಾಮಾಽದರ್ಶನಂ ಪಶ್ಚಾತ್ಸಾರ್ಧಂ ಸರ್ವೈರ್ಗಣೈರ್ದ್ವಿಜಾಃ ॥ ೩೪ ॥
ಕುಶೋಽಪಿ ಬ್ರಾಹ್ಮಣೈಃ ಸರ್ವೈಸ್ತಾಪಸೈಶ್ಚ ಪ್ರಶಂಸಿತಃ ।
ಲಬ್ಧಾಶೀಃ ಪ್ರಯಯೌ ತಸ್ಮಾದಯೋಧ್ಯಾನಗರೀಂ ಪ್ರತಿ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಲುಪ್ತತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಡುತ್ತರಶತತಮೋಽಧ್ಯಾಯಃ

---

೩೦. ನನ್ನ ಮಾತಿನಂತೆ ನೀವೆಲ್ಲ ಅವುಗಳಲ್ಲಿ ಅರುವತ್ತೆಂಟು ಅಂಶಗಳಿಂದ ನೆಲೆಸಿರಿ. ಅಲ್ಲಿ ಉತ್ತಮ ಪೂಜೆಯನ್ನು ಹೊಂದುವಿರಿ.

೩೧–೩೨. ಆ ಮಾತೆಯರು ಮಹೇಶ್ವರನ ಮಾತನ್ನು ಕೇಳಿ ಸಂತೋಷಗೊಂಡು ಸ್ಕಂದನಿರ್ಮಿತವಾದ ಆ ಸ್ಥಳವನ್ನು ತ್ಯಜಿಸಿ ಅರುವತ್ತೆಂಟು ಅಂಶಗಳಿಂದ ಆ ಅರುವತ್ತೆಂಟು ಕ್ಷೇತ್ರಗಳಲ್ಲಿ ಯಾವಾಗಲೂ ವಾಸಿಸಿದರು.

೩೩. ಬಳಿಕ ಮಾತೆಯರು ತ್ಯಜಿಸಿದ ಆ ಸ್ಥಳವನ್ನು ಪ್ರೇತಗಳು ಹಗಲು ರಾತ್ರಿ ಆಲಸ್ಯವಿಲ್ಲದೆ ಧೂಳಿನಿಂದ ತುಂಬಿದುವು.

೩೪. ದ್ವಿಜರೆ! ಪೂಜ್ಯನಾದ ಮಹೇಶ್ವರನು ಹೀಗೆ ಆ ಕುಶನಿಗೆ ವರವನ್ನಿತ್ತು ಸಕಲ ಗಣಗಳೊಡನೆ ಅದೃಶ್ಯನಾದನು.

೩೫. ಸಕಲ ಬ್ರಾಹ್ಮಣರೂ, ಮುನಿಗಳೂ ಕುಶನನ್ನು ಪ್ರಶಂಸಿಸಿ ಆಶೀರ್ವಾದವನ್ನೀಯಲು ಅವನು ಆ ಕ್ಷೇತ್ರದಿಂದ ಅಯೋಧ್ಯೆಗೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಲುಪ್ತತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತೋತ್ತರಶತತಮೋಽಧ್ಯಾಯಃ

### ಚಿತ್ರಶರ್ಮಕೃತ ಲಿಂಗಸ್ಥಾಪನವೃತ್ತಾಂತವರ್ಣನಂ

**ಋಷಯ ಊಚುಃ:—**

ಅಷ್ಟಷಷ್ಟಿರಿಯಂ ಪ್ರೋಕ್ತಾ ಯಾ ತ್ವಯಾ ಸೂತನಂದನ ।
ಕ್ಷೇತ್ರಾಣಾಂ ದೇವದೇವಸ್ಯ ಕಥಂ ಸಾ ತತ್ರ ಸಂಸ್ಥಿತಾ ।
ಏತತ್ಸರ್ವಂ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೧ ॥

**ಸೂತ ಉವಾಚ:—**

ಪ್ರಶ್ನಭಾರೋ ಮಹಾನೇಷ ಯೋ ಭವದ್ಭಿಃ ಪ್ರಕೀರ್ತಿತಃ ।
ತಥಾಽಪಿ ಕೀರ್ತಯಿಷ್ಯಾಮಿ ನಮಸ್ಕೃತ್ವಾ ಪಿನಾಕಿನಂ ॥ ೨ ॥
ಚಮತ್ಕಾರಪುರೇಽತ್ರಾಽಸೀತ್ಪೂರ್ವಂ ಬ್ರಾಹ್ಮಣಸತ್ತಮಃ ।
ವತ್ಸಸ್ಯಾನ್ವಯ ಸಂಭೂತಶ್ಚಿತ್ರಶರ್ಮಾ ಮಹಾಯಶಾಃ ॥ ೩ ॥
ತಸ್ಯ ಬುದ್ಧಿರಿಯಂ ಜಾತಾ ಪಾತಾಲೇ ಹಾಟಕೇಶ್ವರಂ ।
ಅತ್ರಾಽನೀಯ ತತೋ ಭಕ್ತ್ಯಾ ಪೂಜಯಾಮಿ ದಿವಾನಿಶಂ ॥ ೪ ॥
ಏವಂ ಸ ನಿಶ್ಚಯಂ ಕೃತ್ವಾ ತಪಶ್ಚಕ್ರೇ ತತಃ ಪರಂ ।
ನಿಯತೋ ನಿಯತಾಽಹಾರಃ ಪರಾಂ ನಿಷ್ಠಾಂ ಸಮಾಶ್ರಿತಃ ॥ ೫ ॥

---

## ಕನ್ನಡದ ಅನುವಾದ

### ಚಿತ್ರಶರ್ಮಕೃತ ಲಿಂಗಸ್ಥಾಪನವೃತ್ತಾಂತವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಹೇಳಿದ ಅರುವತ್ತೆಂಟು ಮಹೇಶ್ವರನ ಕ್ಷೇತ್ರಗಳು ಅಲ್ಲಿ ಹೇಗೆ ನೆಲಸಿದ್ದುವು. ಇದನ್ನೆಲ್ಲ ನಮಗೆ ಹೇಳು. ಕೇಳಲು ಬಹಳ ಕುತೂಹಲವುಂಟಾಗಿದೆ.

೨. ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ನೀವು ಕೇಳಿದ ಈ ಪ್ರಶ್ನೆಯ ಭಾರವು ದೊಡ್ಡದಾದುದು. ಆದರೂ ಮಹೇಶ್ವರನನ್ನು ವಂದಿಸಿ ಅದನ್ನು ಹೇಳುವೆನು.

೩. ಹಿಂದೆ ಈ ಚಮತ್ಕಾರಪುರದಲ್ಲಿ ವತ್ಸವಂಶದಲ್ಲಿ ಜನಿಸಿದ ಚಿತ್ರಶರ್ಮನೆಂಬ ಕೀರ್ತಿವಂತನಾದ ಬ್ರಾಹ್ಮಣೋತ್ತಮನಿದ್ದನು.

೪. ಅವನು ಪಾತಾಳದಲ್ಲಿರುವ ಹಾಟಕೇಶ್ವರನನ್ನು ಭೂಮಿಗೆ ತಂದು ಹಗಲು ರಾತ್ರಿ ಭಕ್ತಿಯಿಂದ ಪೂಜಿಸುವೆನು ಎಂದಾಲೋಚಿಸಿದನು.

೫. ಅವನು ಹೀಗೆ ನಿಶ್ಚಯಿಸಿ ಜಿತೇಂದ್ರಿಯನೂ, ಮಿತಾಹಾರಿಯೂ ಆಗಿ ಅತಿ ನಿಷ್ಠೆಯಿಂದ ತಪಸ್ಸನ್ನಾಚರಿಸಿದನು.

ತಸ್ಯಾಽಪಿ ಭಗವಾಂಛಂಭುಃ ಕಾಲೇನ ಮಹತಾ ತತಃ ।
ಸಂತುಷ್ಟೋ ಬ್ರಾಹ್ಮಣಶ್ರೇಷ್ಠಾಸ್ತತಃ ಪ್ರೋವಾಚ ಸಾದರಂ ॥ ೬ ॥
ವರಂ ಪ್ರಾರ್ಥಯ ವಿಪ್ರೇಂದ್ರ ಯತ್ತೇ ಮನಸಿ ವರ್ತತೇ ।
ಅಪಿ ತ್ರೈಲೋಕ್ಯರಾಜ್ಯಂ ತೇ ತುಷ್ಟೋ ದಾಸ್ಯಾಮ್ಯಸಂಶಯಂ ॥ ೭ ॥
ತಸ್ಮಾತ್ಪ್ರಾರ್ಥಯ ತೇ ನಿತ್ಯಂ ಯಚ್ಚ ಚಿತ್ತೇ ವ್ಯವಸ್ಥಿತಂ ।
ದುರ್ಲಭಂ ಸರ್ವದೇವಾನಾಂ ಮನುಷ್ಯಾಣಾಂ ವಿಶೇಷತಃ ॥ ೮ ॥

ಚಿತ್ರಶರ್ಮೋವಾಚ :—

ಯದಿ ತುಷ್ಟೋಽಸಿ ಮೇ ದೇವ ವರಂ ಚೇನ್ಮೇ ಪ್ರಯಚ್ಛಸಿ ।
ತದತ್ರಾಗಚ್ಛ ಪಾತಾಲಾಲ್ಲಿಂಗರೂಪೀ ಸುರೇಶ್ವರ ॥ ೯ ॥
ಯತ್ಪಾತಾಲೇ ಸ್ಥಿತಂ ಲಿಂಗಂ ಬ್ರಹ್ಮಣಾ ಸಂಪ್ರತಿಷ್ಠಿತಂ ।
ಹಾಟಕೇಶ್ವರಸಂಜ್ಞಂ ತು ತದಿಹಾಯಾತು ಸತ್ವರಂ ॥ ೧೦ ॥

ಶ್ರೀ ಭಗವಾನುವಾಚ :—

ಅಚಲಂ ಸರ್ವಲಿಂಗಂ ಸ್ಯಾತ್ಸರ್ವತ್ರಾಽಪಿ ದ್ವಿಜೋತ್ತಮ ।
ಕಿಂ ಪುನಃ ಪ್ರಥಮಂ ಯಚ್ಚ ಬ್ರಹ್ಮಣಾ ನಿರ್ಮಿತಂ ಸ್ವಯಂ ॥ ೧೧ ॥
ತಸ್ಮಾತ್ಸ್ಥಾಪಯ ಲಿಂಗಂ ತದ್ಧಾಟಕೇನ ದ್ವಿಜೋತ್ತಮ ।
ಹಾಟಕೇಶ್ವರಸಂಜ್ಞಂ ತು ಲೋಕೇ ಖ್ಯಾತಂ ಭವಿಷ್ಯತಿ ॥ ೧೨ ॥

---

೬. ಬ್ರಾಹ್ಮಣೋತ್ತಮರೆ! ಪೂಜ್ಯನಾದ ಮಹೇಶ್ವರನು ಬಹುಕಾಲದ ಮೇಲೆ ಅವನಲ್ಲಿ ಸಂತುಷ್ಟನಾಗಿ ಪ್ರೀತಿಯಿಂದ ಇಂತೆಂದನು.

೭–೮. ಬ್ರಾಹ್ಮಣೋತ್ತಮ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಸಂತುಷ್ಟನಾದ ನಾನು ನಿನಗೆ ನಿಶ್ಚಯವಾಗಿಯೂ ತ್ರೈಲೋಕ್ಯರಾಜ್ಯವನ್ನು ಕೊಡುವೆನು. ಆದುದರಿಂದ ಸರ್ವದೇವತೆಗಳಿಗೂ, ಮನುಷ್ಯರಿಗೂ ದುರ್ಲಭವಾದ ನಿನಗಿಷ್ಟವಾದ ವರವನ್ನು ಬೇಡಿಕೊ.

೯. ಚಿತ್ರಶರ್ಮನು ಹೇಳುತ್ತಾನೆ:—ಮಹೇಶ್ವರ! ಸಂತುಷ್ಟನಾಗಿ ನನಗೆ ವರವನ್ನೀಯುವುದಾದರೆ ಲಿಂಗರೂಪಿಯಾದ ನೀನು ಪಾತಾಳದಿಂದ ಇಲ್ಲಿಗೆ ಬಾ.

೧೦. ಬ್ರಹ್ಮನು ಪಾತಾಳದಲ್ಲಿ ಪ್ರತಿಷ್ಠೆಮಾಡಿರುವ ಹಾಟಕೇಶ್ವರವೆಂಬ ಲಿಂಗವು ಇಲ್ಲಿಗೆ ಬರಲಿ.

೧೧. ಶ್ರೀ ಭಗವಂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮ! ಸಕಲ ಲಿಂಗಗಳೂ ಎಲ್ಲಿಡೆಯಲ್ಲಿಯೂ ಅಚಲವಾಗಿರುವುವು. ಬ್ರಹ್ಮನು ತಾನೇ ನಿರ್ಮಿಸಿದ ಲಿಂಗದ ವಿಷಯವನ್ನು ಏನು ಹೇಳತಕ್ಕುದು?

೧೨. ಆದುದರಿಂದ ನೀನೇ ಚಿನ್ನದ ಲಿಂಗವನ್ನಿಲ್ಲಿ ಪ್ರತಿಷ್ಠೆಮಾಡು. ಅದು ಲೋಕದಲ್ಲಿ ಹಾಟಕೇಶ್ವರವೆಂದು ಪ್ರಖ್ಯಾತವಾಗುವುದು.

ಸೋಮವಾರೇ ಚತುರ್ದಶ್ಯಾಂ ಶುಕ್ಲಾಯಾಂ ಶ್ರದ್ಧಯಾನ್ವಿತಃ ।
ಯಸ್ತದ್ಭಕ್ತಿ ಸಮಾಯುಕ್ತಃ ಪೂಜಯಿಷ್ಯತಿ ಮಾನವಃ ॥ ೧೩ ॥
ಆದ್ಯಲಿಂಗೋದ್ಭವಂ ಶ್ರೇಯಃ ಪೂಜಯಾ ಲಪ್ಸ್ಯತೇ ದ್ವಿಜ ।
ಏವಮುಕ್ತ್ವಾಽಥ ಭಗವಾಂಸ್ತತ್ರೈವಾದರ್ಶನಂ ಗತಃ ॥ ೧೪ ॥
ಚಿತ್ರಶರ್ಮಾಽಪಿ ಕೃತ್ವಾಽಥ ಪ್ರಾಸಾದಂ ಸುಮನೋಹರಂ ।
ತತ್ರ ಹೇಮಮಯಂ ಲಿಂಗಂ ಸ್ಥಾಪಯಾಮಾಸ ಭಕ್ತಿತಃ ॥ ೧೫ ॥
ಶಾಸ್ತ್ರೋಕ್ತೇನ ವಿಧಾನೇನ ಪೂಜಾಂ ಚಕ್ರೇ ಚ ನಿತ್ಯಶಃ ।
ತತಸ್ತ್ರೈಲೋಕ್ಯವಿಖ್ಯಾತಂ ತಲ್ಲಿಂಗಂ ತತ್ರ ವೈ ದ್ವಿಜಾಃ ॥ ೧೬ ॥
ದೂರಾದಭ್ಯೇತ್ಯ ಲೋಕಾಶ್ಚ ಪೂಜಯಂತಿ ತತಃ ಪರಂ ।
ಅಥ ತತ್ರ ದ್ವಿಜಾ ಯೇಽನ್ಯೇ ಸಂಸ್ಥಿತಾ ಗುಣವತ್ತರಾಃ ॥ ೧೭ ॥
ತೇಷಾಂ ಸ್ಪರ್ಧಾ ತತೋ ಜಾತಾ ದೃಷ್ಟ್ವಾ ತಸ್ಯ ವಿಚೇಷ್ಟಿತಂ ।
ಏಕಸ್ಥಾನ ಪ್ರಸೂತಾನಾಂ ಸರ್ವೇಷಾಂ ಗುಣಶಾಲಿನಾಂ ॥ ೧೮ ॥
ಅಯಂ ಗುಣವಿಹೀನೋಽಪಿ ಪ್ರಖ್ಯಾತೋ ಭುವನತ್ರಯೇ ।
ಹರಾರಾಧನಮಾಸಾದ್ಯ ಯಸ್ಮಾತ್ತಸ್ಮಾದ್ವಯಂ ಪರಂ ।
ತದರ್ಥೇ ತೋಷಯಿಷ್ಯಾಮಃ ಸಾಮ್ಯಂ ಯೇನ ಪ್ರಜಾಯತೇ ॥ ೧೯ ॥
ಅಷ್ಟಷಷ್ಟಿಃ ಸ್ಮೃತಾ ಲೋಕೇ ಕ್ಷೇತ್ರಾಣಾಂ ಶೂಲಪಾಣಿನಃ ।
ಯತ್ರ ಸಾನ್ನಿಧ್ಯಮಭ್ಯೇತಿ ತ್ರಿಕಾಲಂ ಪರಮೇಶ್ವರಃ ॥ ೨೦ ॥

---

೧೩–೧೪. ಸೋಮವಾರ ಶುಕ್ಲಪಕ್ಷದ ಚತುರ್ದಶೀ ದಿನ ಆ ಲಿಂಗವನ್ನು ಭಕ್ತಿಯಿಂದ ಪೂಜಿಸುವ ಮಾನವನು ಆದ್ಯಲಿಂಗದ ಪೂಜೆಯಿಂದ ಲಭಿಸದ ಫಲವನ್ನೂ ಪಡೆಯುವನು. ಮಹೇಶ್ವರನು ಹೀಗೆ ಹೇಳಿ ಅದೃಶ್ಯನಾದನು.

೧೫. ಚಿತ್ರಶರ್ಮನು ಮನೋಹರವಾದ ಗುಡಿಯನ್ನು ಕಟ್ಟಿಸಿ ಅಲ್ಲಿ ಚಿನ್ನದ ಪ್ರತಿಮೆಯನ್ನು ಭಕ್ತಿಯಿಂದ ಪ್ರತಿಷ್ಠೆಮಾಡಿದನು.

೧೬. ನಿತ್ಯವೂ ಶಾಸ್ತ್ರೋಕ್ತವಿಧಿಯಿಂದ ಪೂಜೆಗೈದನು. ಅದರಿಂದ ಆ ಲಿಂಗವು ಮೂರು ಲೋಕಗಳಲ್ಲಿಯೂ ವಿಖ್ಯಾತವಾಯಿತು.

೧೭–೧೮. ದೂರದೇಶದ ಜನರೂ ಬಂದು ಅದನ್ನು ಪೂಜಿಸಿದರು. ಬಳಿಕ ಆ ಚಿತ್ರಶರ್ಮನ ಈ ಕೆಲಸವನ್ನು ನೋಡಿ ಒಂದೆಡೆ ಜನಿಸಿದ ಗುಣಶಾಲಿಗಳಾದ ಸಮಸ್ತ ಬ್ರಾಹ್ಮಣರಿಗೂ ಸ್ಪರ್ಧೆಯುಂಟಾಯಿತು.

೧೯. "ನಿರ್ಗುಣನಾದ ಈ ಬ್ರಾಹ್ಮಣನು ಶಿವನನ್ನಾರಾಧಿಸಿ ಮೂರುಲೋಕಗಳಲ್ಲಿ ವಿಖ್ಯಾತನಾಗಿದ್ದಾನೆ. ಆದುದರಿಂದ ನಾವೂ ಇವನಂತಾಗಲು ಶಿವನನ್ನು ಸಂತೋಷಗೊಳಿಸುವೆವು.

೨೦. ಲೋಕದಲ್ಲಿ ಶಿವನ ಅರುವತ್ತೆಂಟು ಕ್ಷೇತ್ರಗಳಿರುವುವು. ಇವುಗಳಲ್ಲಿ ಪರಮೇಶ್ವರನು ತ್ರಿಕಾಲದಲ್ಲಿಯೂ ಸನ್ನಿಹಿತನಾಗಿರುವನು.

ಅಷ್ಟಷಷ್ಟಿಶ್ಚ ಗೋತ್ರಾಣಾಮುಸ್ಮಾಕಂ ಚಾಽತ್ರ ಸಂಸ್ಥಿತಾ ।
ಏತೇನ ಮೂಢಮನಸಾ ಸಾರ್ಧಂ ಸಾಮಾನ್ಯಲಕ್ಷಣಾ ॥ ೨೧ ॥
ತಸ್ಮಾದನೇನ ಚಾರಾಧ್ಯ ಭಗವಂತಂ ತ್ರಿಲೋಚನಂ ।
ತಚ್ಚ ಲಿಂಗಂ ಸಮಾನೀತಮತ್ರ ಪಾತಾಲಸಂಸ್ಥಿತಂ ॥ ೨೨ ॥
ತಥಾ ಸರ್ವೈಶ್ಚ ಸರ್ವಾಣಿ ಕ್ಷೇತ್ರಲಿಂಗಾನಿ ಕೃತ್ಸ್ನಶಃ ।
ಆನೇತವ್ಯಾನಿ ಚಾರಾಽಽಧ್ಯ ತಪಃಶಕ್ತ್ಯಾ ಮಹೇಶ್ವರಂ ॥ ೨೩ ॥
ಏತೇಷಾಂ ಸರ್ವಗೋತ್ರಾಣಾಮಾನೇಷ್ಯತಿ ಚ ಶಂಕರಃ ।
ಯದ್ಗೋತ್ರಂ ಕ್ಷೇತ್ರಸಂಯುಕ್ತಂ ಯಚ್ಚಾಽನ್ಯದ್ವಾ ಭವಿಷ್ಯತಿ ॥ ೨೪ ॥
ತತಸ್ತೇ ಶರ್ಮಸಂಯುಕ್ತಾಃ ಸರ್ವ ಏವ ದ್ವಿಜೋತ್ತಮಾಃ ।
ಚಕ್ರುಸ್ತಪಃ ಕ್ರಿಯಾಂ ಸರ್ವೇ ದುಷ್ಕರಾಂ ಸರ್ವಜಂತುಭಿಃ ॥ ೨೫ ॥
ಜಪೈರ್ಹೋಮೋಪವಾಸೈಶ್ಚ ನಿಯಮೈಶ್ಚ ಪೃಥಗ್ವಿಧೈಃ ।
ಬಲಿಪೂಜೋಪಹಾರೈಶ್ಚ ಸ್ನಾನದಾನಾದಿಭಿಸ್ತಥಾ ॥ ೨೬ ॥
ಲಿಂಗಂ ಸಂಸ್ಥಾಪ್ಯ ದೇವಸ್ಯ ನಾಮ್ನಾಖ್ಯಾತಂ ದ್ವಿಜೇಶ್ವರಂ ।
ಮನೋಹರತರೇ ಪ್ರೋಚ್ಚೇ ಪ್ರಾಸಾದೇ ಪರ್ವತೋಪಮೇ ॥ ೨೭ ॥
ತ್ಯಕ್ತ್ವಾ ಗೃಹಕ್ರಿಯಾಃ ಸರ್ವಾಸ್ತಥಾ ಯಜ್ಞಸಮುದ್ಭವಾಃ ।
ಅನ್ಯಾಶ್ಚ ಲೋಕಯಾತ್ರೋತ್ಥಾಸ್ತೋಷಯಂತಿ ಮಹೇಶ್ವರಂ ॥ ೨೮ ॥

---

೨೧. ಇಲ್ಲಿ ಈ ಮೂಢನಾದ ಚಿತ್ರಶರ್ಮನೂ ಸೇರಿ ನಮ್ಮ ಅರುವತ್ತೆಂಟು ಗೋತ್ರಗಳಿರುವುವು.

೨೨–೨೩. ಆದುದರಿಂದ ಇವನು ವಿರೂಪಾಕ್ಷನನ್ನಾರಾಧಿಸಿ ಪಾತಾಳದಲ್ಲಿರುವ ಆ ಶಿವಲಿಂಗವನ್ನು ತಂದಿರುವನು. ಅದರಿಂದ ನಾವೆಲ್ಲ ತಪಶ್ಶಕ್ತಿಯಿಂದ ಮಹೇಶ್ವರನನ್ನು ಪೂಜಿಸಿ ಸಕಲಕ್ಷೇತ್ರಲಿಂಗಗಳನ್ನೂ ಇಲ್ಲಿಗೆ ತರೋಣ.

೨೪. ಈ ಸಮಸ್ತ ಗೋತ್ರಗಳ ಮಧ್ಯದಲ್ಲಿ ಯಾವ ಗೋತ್ರವು ಕ್ಷೇತ್ರದಿಂದ ಕೂಡಿರುವುದೊ, ಇತರ ಯಾವ ಗೋತ್ರವು ಕ್ಷೇತ್ರದಿಂದ ಸಹಿತವಾಗುವುದೊ, ಅಲ್ಲಿ ಶಂಕರನು ಸನ್ನಿಹಿತನಾಗಿರುವನು.''

೨೫. ಬಳಿಕ ಶರ್ಮಶಬ್ದದಿಂದ ಸಹಿತರಾದ ಆ ಬ್ರಾಹ್ಮಣರೆಲ್ಲ ಸಮಸ್ತ ಪ್ರಾಣಿಗಳಿಂದಲೂ ಮಾಡಲಸಾಧ್ಯವಾದ ತಪಸ್ಸನ್ನಾಚರಿಸಿದರು.

೨೬–೨೮. ಅವರು ಜಪ, ಹೋಮ, ಉಪವಾಸ, ನಾನಾ ವಿಧ ನಿಯಮ, ಬಲಿ, ಪೂಜೆ, ಕಾಣಿಕೆ, ಸ್ನಾನ, ದಾನ ಇವುಗಳೇ ಮೊದಲಾದುವುಗಳಿಂದ ಪರ್ವತದಂತಿರುವ ರಮ್ಯಪ್ರಾಸಾದದಲ್ಲಿ ದ್ವಿಜೇಶ್ವರನೆಂದು ಪ್ರಸಿದ್ಧವಾದ ಮಹೇಶ್ವರಲಿಂಗವನ್ನು ಪ್ರತಿಷ್ಠೆಮಾಡಿ ಎಲ್ಲಾ ಮನೆಗೆಲಸಗಳನ್ನೂ, ಯಜ್ಞಸಂಬಂಧವಾದ ಸಕಲಕಾರ್ಯಗಳನ್ನೂ, ಇತರ ಲೌಕಿಕ ಕೆಲಸಗಳನ್ನೂ ತ್ಯಜಿಸಿ ಆ ಮಹೇಶ್ವರನನ್ನು ಸಂತೋಷಗೊಳಿಸಿದರು.

ಏವಮಾರಾಧ್ಯಮಾನೋಽಪಿ ಸಂತೋಷಂ ಪರಮೇಶ್ವರಃ ।
ನಾಽಭ್ಯಗಚ್ಛತ್ಪರಾಂ ತುಷ್ಟಿಂ ಕಥಂಚಿದಪಿ ಸ ದ್ವಿಜಾಃ ॥ ೨೯ ॥
ತತೋ ವರ್ಷಸಹಸ್ರಾಂತೇ ಸಮಾರಾಧ್ಯ ಮಹೇಶ್ವರಂ ।
ನ ಚ ಕಿಂಚಿತ್ಫಲಂ ಪ್ರಾಪ್ತಾ ಯಾವತ್ಕ್ರುದ್ಧಾಸ್ತತೋಽಖಿಲಾಃ ॥ ೩೦ ॥
ಅಸ್ಯ ಮೂರ್ಖತಮಸ್ಯಾಽಪಿ ತ್ವಂ ಶೂಲಿಂಶ್ಚಿತ್ರಶರ್ಮಣಃ ।
ಸುಸ್ತೋಕೇನಾಽಪಿ ಕಾಲೇನ ಸಂತೋಷಂ ಪರಮಂ ಗತಃ ॥ ೩೧ ॥
ವಯಂ ವಾರ್ಧಕ್ಯಮಾಪನ್ನಾ ಬಾಲ್ಯಾತ್ಪ್ರಭೃತಿ ಶಂಕರಂ ।
ಪೂಜಯಂತೋಽಪಿ ನೋ ದೃಷ್ಟ್ವಸ್ತಥಾಽಪಿ ಪರಮೇಶ್ವರ ॥ ೩೨ ॥
ತಸ್ಮಾತ್ಸರ್ವೈಃ ಪ್ರಕರ್ತವ್ಯಂ ಹವ್ಯವಾಹಪ್ರವೇಶನಂ ।
ಅಸ್ಮಾಭಿರ್ನಿಶ್ಚಯೋ ಹ್ಯೇಷ ತವಾಗ್ರೇ ಸಾಂಪ್ರತಂ ಕೃತಃ ॥ ೩೩ ॥
ತತಶ್ಚಾಹೃತ್ಯ ಕಾಷ್ಠಾನಿ ಸರ್ವೇ ತೇ ದ್ವಿಜಸತ್ತಮಾಃ ।
ಈಶ್ವರಂ ಮನಸಿ ಧ್ಯಾತ್ವಾ ಚಿತಾಶ್ಚಕ್ರುಃ ಪೃಥಗ್ವಿಧಾಃ ॥ ೩೪ ॥
ತಥಾ ಸರ್ವಂ ಕ್ರಿಯಾಕಲ್ಪಂ ಸ್ನಾನದಾನಾದಿಕಂ ಚ ಯತ್ ।
ಕೃತ್ವಾ ತೇ ಬ್ರಾಹ್ಮಣಾಃ ಸರ್ವೇ ಸುಸಮಿದ್ಧಂ ಹುತಾಶನಂ ॥ ೩೫ ॥
ಯಾವತ್ಕೃತ್ವಾ ಸುತೈಃ ಸಾರ್ಧಂ ಪ್ರವಿಶಂತಿ ಸಮಾಹಿತಾಃ ।
ತಾವತ್ಸಭಗವಾಂಸ್ತುಷ್ಟಸ್ತೇಷಾಂ ಸಂದರ್ಶನಂ ಯಯೌ ॥ ೩೬ ॥

---

೨೯. ದ್ವಿಜರೆ! ಅವರು ಹೀಗೆ ಪೂಜಿಸುತ್ತಿದ್ದರೂ ಪರಮೇಶ್ವರನು ಸಂತುಷ್ಟ ನಾಗಲಿಲ್ಲ.

೩೦. ಅವರು ಸಾವಿರ ವರ್ಷಗಳವರೆಗೂ ಪರಮೇಶ್ವರನನ್ನು ಪೂಜಿಸಿದರೂ ಯಾವ ಫಲವೂ ದೊರೆಯದಿರುವುದರಿಂದ ಅತ್ಯಂತ ಕುಪಿತರಾದರು.

೩೧. ಪರಮೇಶ್ವರನನ್ನು ಕುರಿತು, "ಮಹೇಶ್ವರ! ನೀನು ಸ್ವಲ್ಪಕಾಲ ದಲ್ಲಿಯೇ ಅತಿ ಮೂರ್ಖನಾದ ಚಿತ್ರಶರ್ಮನಿಗೆ ಸಂತುಷ್ಟನಾಗಿರುವೆ.

೩೨. ನಾವು ಬಾಲ್ಯದಿಂದಲೂ ನಿನ್ನನ್ನು ಪೂಜಿಸುತ್ತ ಮುದುಕರಾದರೂ ನಿನ್ನ ದರ್ಶನವಾಗಲಿಲ್ಲ.

೩೩. ಆದುದರಿಂದ ನಾವೀಗ ನಿನ್ನ ಮುಂದೆ ಬೆಂಕಿಯನ್ನು ಪ್ರವೇಶಿಸ ಬೇಕೆಂದು ನಿಶ್ಚಯಿಸಿದೇವೆ," ಎಂದರು.

೩೪. ಬಳಿಕ ಆ ಬ್ರಾಹ್ಮಣೋತ್ತಮರೆಲ್ಲರೂ ಕಟ್ಟಿಗೆಗಳನ್ನು ತಂದು ಈಶ್ವರ ನನ್ನು ಮನಸ್ಸಿನಲ್ಲಿ ಚಿಂತಿಸುತ್ತ ನಾನಾ ವಿಧವಾದ ಚಿತೆಗಳನ್ನು ರಚಿಸಿದರು.

೩೫–೩೬. ಹಾಗೆಯೇ ಅವರು ಸ್ನಾನ, ದಾನ ಮೊದಲಾದ ಕಾರ್ಯಗಳನ್ನು ನೆರವೇರಿಸಿ ಅಗ್ನಿಯನ್ನು ಪ್ರಜ್ವಲಗೊಳಿಸಿ ಒಮ್ಮನಸ್ಸಿನಿಂದ ಮಕ್ಕಳೊಡನೆ ಆ ಅಗ್ನಿ ಯನ್ನು ಪ್ರವೇಶಿಸಲುದ್ಯುಕ್ತರಾಗಲು ಪೂಜ್ಯನಾದ ಶಿವನು ಅವರಿಗೆ ಗೋಚರನಾದನು.

ಅಬ್ರವೀಚ್ಚ ವಿಹಸ್ಯೋಚ್ಚೈರ್ಮೇಘಗಂಭೀರಯಾ ಗಿರಾ ।
ಸರ್ವಾಂಸ್ತಾನ್ಬ್ರಾಹ್ಮಣಶ್ರೇಷ್ಠಾನ್ಮೃತಾನ್ ಸಂಜೀವಯನ್ನಿವ ॥ ೩೭ ॥
ಭೋ ಭೋ ಬ್ರಾಹ್ಮಣಶಾರ್ದೂಲಾ ಮಾಸ್ತ್ವೈವಂ ಸಾಹಸಂ ಮಹತ್ ।
ಯೂಯಂ ಕುರುತ ಮದ್ವಾಕ್ಯಾತ್ಸಂತುಷ್ಟಸ್ಯ ವಿಶೇಷತಃ ॥ ೩೮ ॥
ತಸ್ಮಾದ್ವದತ ಯಚ್ಚಿತ್ತೇ ಯುಷ್ಮಾಕಂ ಚೈವ ಸಂಸ್ಥಿತಂ ।
ಯೇನ ದತ್ವಾ ಪ್ರಗಚ್ಛಾಮಿ ಸ್ವಮೇವ ಭುವನಂ ಪುನಃ ॥ ೩೯ ॥

ಬ್ರಾಹ್ಮಣಾ ಊಚುಃ:—

ಅಸ್ಮಿನ್‌ಕ್ಷೇತ್ರೇ ಸುರಶ್ರೇಷ್ಠ ಪುರಸ್ಯಾಽಸ್ಯ ಚ ಸಂನಿಧೌ ।
ಕ್ಷೇತ್ರಾಣಾಮಷ್ಟಷಷ್ಟಿರ್ಯಾ ಧನ್ಯಾ ಸಂಕೀರ್ತ್ಯತೇ ಜನೈಃ ॥ ೪೦ ॥
ಸದಾಭ್ಯೇತು ಸಮಂ ಲಿಂಗೈಸ್ತೈರಾದ್ಯೈಃ ಸುರಸತ್ತಮ ।
ಯೇನಾಮರ್ಷಪ್ರಶಾಂತಿರ್ನಃ ಸರ್ವೇಷಾಮಿಹ ಜಾಯತೇ ॥ ೪೧ ॥
ಏಷ ಸಂಸ್ಪರ್ಧತೇಽಸ್ಮಾಭಿಃ ಸರ್ವೈರ್ಗುಣವಿವರ್ಜಿತಃ ।
ತ್ವಲ್ಲಿಂಗಸ್ಯ ಪ್ರಭಾವೇನ ತಸ್ಮಾದೇತತ್ಸಮಾಚರ ॥ ೪೨ ॥

ಸೂತ ಉವಾಚ:—

ಏತಸ್ಮಿನ್ನಂತರೇ ವಿಪ್ರೋ ಜ್ಞಾತ್ವಾ ತಂ ವರದಂ ಹರಂ ।
ಉವಾಚ ಸ್ಪರ್ಧಯಾ ಯುಕ್ತಶ್ಚಿತ್ರಶರ್ಮಾ ಮಹೇಶ್ವರಂ ॥ ೪೩ ॥

---

೩೭. ಆ ಶಿವನು ಗಟ್ಟಿಯಾಗಿ ನಕ್ಕು ಮೇಘದಂತೆ ಗಂಭೀರವಾದ ಮಾತಿನಿಂದ ಆ ಎಲ್ಲ ಬ್ರಾಹ್ಮಣರನ್ನು ಕುರಿತು ಮೃತರನ್ನು ಬದುಕಿಸುವಂತೆ ಇಂತೆಂದನು.

೩೮. "ಎಲೈ ಬ್ರಾಹ್ಮಣೋತ್ತಮರೆ! ನೀವು ಸಂತುಷ್ಟನಾದ ನನ್ನ ಮಾತಿನಿಂದ ಇಂತಹ ಸಾಹಸಕಾರ್ಯವನ್ನು ಮಾಡಬೇಡಿರಿ.

೩೯. ಆದುದರಿಂದ ನೀವು ನಿಮ್ಮ ಮನಸ್ಸಿನಲ್ಲಿರುವುದನ್ನು ಹೇಳಿರಿ. ಅದನ್ನು ನಿಮಗೆ ಕೊಟ್ಟು ನಾನು ನನ್ನ ಮನೆಗೆ ಹೋಗುವೆನು."

೪೦–೪೧. ಬ್ರಾಹ್ಮಣರು ಹೇಳುತ್ತಾರೆ:—ಸ್ವಾಮಿ! ಈ ಪಟ್ಟಣದ ಹತ್ತಿರ ಅರುವತ್ತೆಂಟು ಕ್ಷೇತ್ರಗಳಿರುವುವು ಎಂದು ಜನರು ಹೇಳುತ್ತಾರಷ್ಟೆ. ಆ ಕ್ಷೇತ್ರಗಳು ಅಲ್ಲಿರುವ ಲಿಂಗಗಳೊಡನೆ ಈ ಕ್ಷೇತ್ರಕ್ಕೆ ಬರಲಿ. ಅದರಿಂದ ನಮ್ಮೆಲ್ಲರ ಕೋಪವು ಶಾಂತವಾಗುವುದು.

೪೨. ಮೂಢನಾದ ಈ ಚಿತ್ರಶರ್ಮನು ನಿನ್ನ ಲಿಂಗದ ಪ್ರಭಾವದಿಂದ ನಮ್ಮೊಡನೆ ಸ್ಪರ್ಧಿಸುತ್ತಾನೆ. ಆದುದರಿಂದ ನೀನು ಹೀಗೆ ಮಾಡು.

೪೩. ಸೂತನು ಹೇಳುತ್ತಾನೆ:—ಈ ಮಧ್ಯದಲ್ಲಿ ಈಶ್ವರನು ಆ ಬ್ರಾಹ್ಮಣರಿಗೆ ವರವನ್ನು ಕೊಡುವುದನ್ನರಿತು ಚಿತ್ರಶರ್ಮನು ಸ್ಪರ್ಧೆಯಿಂದ ಮಹೇಶ್ವರನನ್ನು ಕುರಿತು ಇಂತೆಂದನು.

ಚಿತ್ರಶರ್ಮೋವಾಚ:—
ಏತೈಃ ಪ್ರಾಣಪರಿತ್ಯಾಗಮಾರಭ್ಯ ತದನಂತರಂ।
ತುಷ್ಟಿಂ ನೀತೋಽಸಿ ದೇವೇಶ ಕೃತ್ವಾ ಚ ಸುಮಹತ್ತಪಃ ॥ ೪೪ ॥
ಮಯಾ ಸಂಸ್ಪರ್ಧಮಾನೈಶ್ಚ ಕೇವಲಂ ಗುಣಗರ್ವಿತೈಃ।
ತಸ್ಮಾದೇಷಾಂ ನ ದಾತವ್ಯಂ ತ್ವಯಾಕಿಂಚಿತ್ಸುರೇಶ್ವರ ॥ ೪೫ ॥
ಯದಿ ತ್ವಂ ಮಾಮತಿಕ್ರಮ್ಯ ಸಂಪ್ರದಾಸ್ಯಸಿ ವಾಂಛಿತಂ।
ಏತೈಃ ಪುತ್ರಕಲತ್ರೈಶ್ಚ ಸಾರ್ಧಂ ಪ್ರತ್ಯಕ್ಷತಸ್ತವ।
ಪಾವಕಂ ಸಾಧಯಿಷ್ಯಾಮಿ ತಸ್ಮಾದ್ಯುಕ್ತಂ ಸಮಾಚರ ॥ ೪೬ ॥
ಸೂತ ಉವಾಚ:—
ತಸ್ಯ ತದ್ವಚನಂ ಶ್ರುತ್ವಾ ಭಗವಾಂಛಶಿಶೇಖರಃ।
ಚಿಂತಯಾಮಾಸ ಚಿತ್ತೇನ ಕಿಮತ್ರ ಸುಕೃತಂ ಭವೇತ್ ॥ ೪೭ ॥
ಏತೇ ಬ್ರಾಹ್ಮಣಶಾರ್ದೂಲಾ ವಿನಾಶಂ ಯಾಂತಿ ಮತ್ಕೃತೇ।
ಏಷೋಽಪಿ ಸರ್ವಸಂಸಿದ್ಧೋ ಗುಣತುಲ್ಯೋ ದ್ವಿಜೋತ್ತಮಃ ॥ ೪೮ ॥
ತಸ್ಮಾದ್ದ್ವಾಭ್ಯಾಂ ಮಯಾ ಕಾರ್ಯಂ ಕ್ಷೇತ್ರೇ ಸೌಖ್ಯಂ ಯಥಾ ಭವೇತ್।
ಬ್ರಾಹ್ಮಣಾನಾಂ ವಿಶೇಷೇಣ ತಥಾಚಾಽತ್ರ ನಿವಾಸಿನಾಂ ॥ ೪೯ ॥
ಮಮಾಽಪಿ ಸರ್ವದಾ ಚಿತ್ತೇ ಕೃತ್ಯಮೇತದ್ಧಿ ವರ್ತತೇ।
ಏಕಸ್ಥಾನೇ ಕರೋಮ್ಯೇವ ಸರ್ವಕ್ಷೇತ್ರಾಣಿ ಯಾನಿ ಮೇ ॥ ೫೦ ॥

---

೪೪–೪೫. ಚಿತ್ರಶರ್ಮನು ಹೇಳುತ್ತಾನೆ:—ಮಹೇಶ್ವರ! ನೀನು ಗುಣ ಗರ್ವಿತರಾಗಿ ನನ್ನೊಡನೆ ಸ್ಪರ್ಧಿಸುತ್ತಿರುವ ಇವರು ಮಹಾತಪಸ್ಸನ್ನು ಮಾಡಿ ಪ್ರಾಣವನ್ನು ತ್ಯಜಿಸಲುದ್ಯುಕ್ತರಾಗಲು ಪ್ರಸನ್ನನಾಗಿರುವೆ. ಆದುದರಿಂದ ಇವರಿಗೆ ಏನನ್ನೂ ಕೊಡಕೂಡದು.

೪೬. ನೀನು ನನ್ನ ಮಾತನ್ನು ಮೀರಿ ಇವರಿಗೆ ಇಷ್ಟಾರ್ಥವನ್ನಿತ್ತರೆ ನಾನು ಈ ಹೆಂಡತಿ ಮಕ್ಕಳೊಡನೆ ನಿನ್ನ ಮುಂದೆಯೇ ಅಗ್ನಿಯನ್ನು ಪ್ರವೇಶಿಸುವೆನು. ಆದುದರಿಂದ ಇದರಲ್ಲಿ ಯಾವುದು ಉಚಿತವೋ ಅದನ್ನು ಮಾಡು.

೪೭. ಸೂತನು ಹೇಳುತ್ತಾನೆ:—ಅವನ ಆ ಮಾತನ್ನು ಕೇಳಿ ಚಂದ್ರ ಮೌಳಿಯು ಯಾವುದು ಒಳ್ಳೆಯದೆಂದು ಮನಸ್ಸಿನಲ್ಲಿ ಆಲೋಚಿಸಿದನು.

೪೮. ಈ ಬ್ರಾಹ್ಮಣೋತ್ತಮರು ನನಗಾಗಿ ಸಾಯುವರು. ಈ ಚಿತ್ರ ಶರ್ಮನೂ ನನ್ನ ಪ್ರಮಥಗಣಗಳಿಗೆ ಸಮಾನನು.

೪೯. ಆದುದರಿಂದ ನಾನು ಈ ಕ್ಷೇತ್ರದಲ್ಲಿ ವಾಸಿಸುವ ಈ ಬ್ರಾಹ್ಮಣರಿಗೂ, ಚಿತ್ರಶರ್ಮನಿಗೂ ಸೌಖ್ಯವಾಗುವಂತೆ ಮಾಡಬೇಕು.

೫೦. ನನ್ನ ಮನಸ್ಸಿನಲ್ಲಿ ಯಾವಾಗಲೂ ಸಕಲ ಕ್ಷೇತ್ರಗಳನ್ನೂ ಒಂದೆಡೆ ಯಲ್ಲಿ ಸೇರಿಸಬೇಕೆಂಬ ಆಲೋಚನೆ ಇದೆ.

ಭವಿಷ್ಯತಿ ತಥಾ ಕಾಲೋ ರೌದ್ರಃ ಕಲಿಸಮುದ್ಭವಃ ।
ತತ್ರ ಕ್ಷೇತ್ರಾಣಿ ತೀರ್ಥಾನಿ ನಾಶಂ ಯಾಸ್ಯಂತಿ ಭೂತಲೇ ॥ ೫೧ ॥
ಸತ್ತೀರ್ಥೈಸ್ತದ್ಭಯಾತ್ಸರ್ವೈಃ ಕ್ಷೇತ್ರಮೇತತ್ಸಮಾಶ್ರಿತಂ ।
ಆನಯಿಷ್ಯಾಮ್ಯಹಮಪಿ ಸ್ವಾನಿ ಕ್ಷೇತ್ರಾಣಿ ಕೃತ್ಸ್ನಶಃ ॥ ೫೨ ॥
ತತಸ್ತಂ ಚಿತ್ರಶರ್ಮಾಣಂ ಪ್ರಾಹ ಚೇದಂ ಮಹೇಶ್ವರಃ ।
ಶೃಣು ಮದ್ವಚನಂ ಕೃತ್ಸ್ನಂ ಕುರುಷ್ವ ತದನಂತರಂ ॥ ೫೩ ॥
ಅತ್ರ ಕ್ಷೇತ್ರಾಣಿ ಸರ್ವಾಣಿ ಮದೀಯಾನಿ ದ್ವಿಜೋತ್ತಮ ।
ಸಮಾಗಚ್ಛಂತು ವಿಪ್ರಾಶ್ಚ ಪ್ರಭವಂತು ಪ್ರಹರ್ಷಿತಾಃ ॥ ೫೪ ॥
ತವಾಽಪಿ ಯೋಗ್ಯತಾಂ ಶ್ರೇಷ್ಠಾಂ ಕರಿಷ್ಯಾಮಿ ಮಹಾಮತೇ ।
ಯದಿ ಮೇ ವರ್ತಸೇ ವಾಕ್ಯೇ ಮುಕ್ತ್ವಾ ಸ್ಪರ್ಧಾಂ ದ್ವಿಜೋದ್ಭವಾಂ ॥ ೫೫ ॥
ತುರೀಯಮಪಿ ತೇ ಗೋತ್ರಂ ವೇದೋಕ್ತೇನ ಕ್ರಮೇಣ ಚ ।
ಆದ್ಯತಾಂ ಚಾಽಪಿ ತೇ ಸರ್ವೇ ಕೀರ್ತಯಿಷ್ಯಂತಿ ತೇ ದ್ವಿಜಾಃ ॥ ೫೬ ॥
ತಥಾಽನ್ಯದಪಿ ಸನ್ಮಾನಂ ತವ ಯಚ್ಛಾಮಿ ಚ ದ್ವಿಜ ।
ಆಚಂದ್ರಾರ್ಕಮಸಂದಿಗ್ಧಂ ಪುತ್ರಪೌತ್ರಾದಿಕಂ ಚ ಯತ್ ॥ ೫೭ ॥
ತ್ವದನ್ವಯೇ ಭವಿಷ್ಯಂತಿ ಪುತ್ರಪೌತ್ರಾಸ್ತಥಾಪರೇ ।
ಕೃತ್ಯೇ ಶ್ರಾದ್ಧೇ ತರ್ಪಣೇ ವಾ ಕ್ರಿಯಮಾಣೇ ವಿಧಾನತಃ ॥ ೫೮ ॥

---

೫೧. ಮುಂದೆ ಕಲಿಯಿಂದ ಕಾಲವು ಭಯಂಕರವಾಗುವುದು. ಆಗ ಭೂಮಿಯಲ್ಲಿರುವ ತೀರ್ಥ ಕ್ಷೇತ್ರಗಳು ನಾಶವಾಗುವುವು.

೫೨. ಆ ಕಲಿಕಾಲದ ಭಯದಿಂದ ಒಳ್ಳೆಯ ತೀರ್ಥಗಳೆಲ್ಲ ಈ ಕ್ಷೇತ್ರವನ್ನು ಆಶ್ರಯಿಸಿರುವುವು. ನಾನು ನನ್ನ ಕ್ಷೇತ್ರಗಳನ್ನೆಲ್ಲ ಇಲ್ಲಿಗೆ ತರುವೆನು.

೫೩. ಬಳಿಕ ಮಹೇಶ್ವರನು ಚಿತ್ರಶರ್ಮನನ್ನು ಕುರಿತು ಇಂತೆಂದನು. ನೀನು ನನ್ನ ಮಾತನ್ನೆಲ್ಲ ಕೇಳು. ಅನಂತರ ನಿನ್ನ ಇಷ್ಟಬಂದಂತೆ ಮಾಡು.

೫೪. ದ್ವಿಜವರ್ಯನೆ! ನನ್ನ ಕ್ಷೇತ್ರಗಳೆಲ್ಲ ಇಲ್ಲಿಗೆ ಬರಲಿ. ಬ್ರಾಹ್ಮಣರು ಸಂತೋಷಗೊಳ್ಳಲಿ.

೫೫. ನೀನು ಬ್ರಾಹ್ಮಣರಲ್ಲಿ ಉಂಟಾದ ಸ್ಪರ್ಧೆಯನ್ನು ಬಿಟ್ಟು ನನ್ನ ಮಾತಿನಂತೆ ನಡೆದರೆ ನಿನ್ನ ಯೋಗ್ಯತೆಯನ್ನು ಹೆಚ್ಚಿಸುವೆನು.

೫೬. ವೇದೋಕ್ತಕ್ರಮದಿಂದ ನಿನ್ನ ಗೋತ್ರವು ನಾಲ್ಕನೆಯದಾದಾಗ್ಯೂ ಮೊದಲನೆಯದೆಂದು ಆ ಬ್ರಾಹ್ಮಣರು ಹೇಳುವರು.

೫೭–೫೯. ಹಾಗೆಯೇ ಮತ್ತೊಂದು ಸನ್ಮಾನವನ್ನು ನಿನಗೆ ಉಂಟುಮಾಡುವೆನು. ಚಂದ್ರಸೂರ್ಯರಿರುವವರೆಗೂ ನಿನ್ನ ಪುತ್ರಪೌತ್ರರೂ, ನಿನ್ನ ವಂಶದ ಪುತ್ರಪೌತ್ರರೂ ವಿಧಿಯಿಂದ ಶ್ರಾದ್ಧ, ತರ್ಪಣಮಾಡುವಾಗ ಮೊದಲಿನ

ಆದ್ಯಸ್ಯ ವತ್ಸಸಂಜ್ಞಸ್ಯ ನಾಮ ಉಚ್ಚಾರ್ಯ ಗೋತ್ರಜಂ ।
ತತೋಽನಾಮಾನಿ ಚಾಽಪ್ಯೇವಂ ಕೀರ್ತಯಿಷ್ಯಂತಿ ಭಕ್ತಿತಃ ॥ ೫೯ ॥
ತತಃ ಸಂತರ್ಪಯಿಷ್ಯಂತಿ ಪಿತೄನಥ ಪಿತಾಮಹಾನ್ ।
ತಥಾಽನ್ಯಾನಪಿ ಬಂಧೂಂಶ್ಚ ಸುಹೃತ್ಸಂಬಂಧಿ ಬಾಂಧವಾನ್ ॥ ೬೦ ॥
ತ್ವದಸ್ಯಯೇ ವಿನಾ ನಾಮ್ನಾ ತ್ವದೀಯೇನ ವಿಮೋಹಿತಾಃ ।
ಯೇ ಪಿತೄಂಸ್ತರ್ಪಯಿಷ್ಯಂತಿ ತೇಷಾಂ ವ್ಯರ್ಥಂ ಭವಿಷ್ಯತಿ ॥ ೬೧ ॥
ಶ್ರಾದ್ಧಂ ವಾ ಯದಿ ವಾ ದಾನಂ ತರ್ಪಣಂ ವಾ ತ್ವದುದ್ಭವಂ ।
ತಸ್ಮಾದಹಂ ಕೃತಿಂ ಮುಕ್ತ್ವಾ ಮಾಮಾರಾಧಯ ಕೇವಲಂ ॥ ೬೨ ॥
ಯೇನ ಸಿದ್ಧೋಽಪಿ ಸಂಸಿದ್ಧಿಂ ಪರಾಮಾಪ್ಸ್ಯೋಽಸಿ ಶಾಶ್ವತೀಂ ।
ಏವಂ ಸಂಬೋಧ್ಯ ತಂ ವಿಪ್ರಂ ಕೃತ್ವಾದ್ಯಮಪಿ ಪಶ್ಚಿಮಂ ॥ ೬೩ ॥
ತತಸ್ತಾನ್ ಬ್ರಾಹ್ಮಣಾನಾಹ ಪ್ರಾಸಾದಃ ಕ್ರಿಯತಾಮಿತಿ ।
ಗೋತ್ರಂ ಗೋತ್ರಂ ಪುರಸ್ಕೃತ್ಯ ಸ್ಥಾಪ್ಯಂ ಲಿಂಗಮನುತ್ತಮಂ ।
ಯೇನ ಸಂಕ್ರಮಣಂ ತೇಷು ಮಮ ಸಂಜಾಯತೇ ದ್ವಿಜಾಃ ॥ ೬೪ ॥
ಅಥ ತೇ ಬ್ರಾಹ್ಮಣಾಸ್ತತ್ರ ಭೂಮಿಭಾಗಾನ್ ಮನೋಹರಾನ್ ।
ದೃಷ್ಟ್ವಾ ದೃಷ್ಟ್ವಾ ಪ್ರಚಕ್ರುಶ್ಚ ಪ್ರಾಸಾದಾನ್ ಹರ್ಷಸಂಯುತಾಃ ॥ ೬೫ ॥

---

ವತ್ಸಗೋತ್ರವನ್ನು ಉಚ್ಚರಿಸಿ ಅನಂತರದವರ ನಾಮಗಳನ್ನು ಭಕ್ತಿಯಿಂದ ಹೇಳುವರು.

೬೦. ಅನಂತರ ಪಿತೃಪಿತಾಮಹರನ್ನೂ, ಇತರ ಬಂಧುಗಳನ್ನೂ, ಸ್ನೇಹಿತರು, ಸಂಬಂಧಿಕರು, ಬಾಂಧವರುಗಳನ್ನೂ ಕುರಿತು ತರ್ಪಣಮಾಡುವರು.

೬೧. ನಿನ್ನ ವಂಶದಲ್ಲಿ ಯಾರು ಅಜ್ಞಾನದಿಂದ ನಿನ್ನ ಹೆಸರನ್ನು ಬಿಟ್ಟು ಪಿತೃಗಳಿಗೆ ತರ್ಪಣಮಾಡುವರೊ, ಅವರ ಆ ತರ್ಪಣವು ನಿಷ್ಫಲವಾಗುವುದು.

೬೨. ಶ್ರಾದ್ಧ, ದಾನ, ತರ್ಪಣ ಇವುಗಳಲ್ಲಿ ಯಾವುದೇ ಆಗಲಿ ನಿನ್ನಿಂದಲೇ ಆರಂಭವಾಗಬೇಕು. ಆದುದರಿಂದ ನೀನು ಅಹಂಕಾರವನ್ನು ತ್ಯಜಿಸಿ ನನ್ನನ್ನೇ ಆರಾಧಿಸು.

೬೩–೬೪. ಅದರಿಂದ ನೀನು ಸಿದ್ಧನಾಗಿದ್ದಾಗ್ಯೂ ಶಾಶ್ವತವಾದ ಸಿದ್ಧಿಯನ್ನು ಪಡೆಯುವೆ. ಹೀಗೆ ಆ ಬ್ರಾಹ್ಮಣನಿಗೆ ಬೋಧಿಸಿ ಕೊನೆಯವನಾದರೂ ಮೊದಲನೆಯವನನ್ನಾಗಿ ಮಾಡಿ ಆ ಬ್ರಾಹ್ಮಣರನ್ನು ಕುರಿತು ಇಂತೆಂದನು. ನೀವು ನನಗೆ ಅನುಗ್ರಹಮಾಡಿರಿ. ನೀವು ಪ್ರತಿ ಗೋತ್ರವನ್ನೂ ಅನುಸರಿಸಿ ಉತ್ತಮ ಲಿಂಗವನ್ನು ಪ್ರತಿಷ್ಠೆಮಾಡಿ. ಅದರಿಂದ ನಾನು ಅವುಗಳಲ್ಲಿ ಸನ್ನಿಹಿತನಾಗುವೆನು.

೬೫–೬೬. ಬಳಿಕ ಆ ಬ್ರಾಹ್ಮಣರೆಲ್ಲ ಸಂತೋಷದಿಂದ ಮನೋಹರವಾದ ಸ್ಥಳಗಳನ್ನು ನೋಡಿ ನೋಡಿ ಕೈಲಾಸದಂತಿರುವ ಅರುವತ್ತೆಂಟು ದಿವ್ಯ ಪ್ರಾಸಾದ

ಅಷ್ಟಷಷ್ಟಿಮಿತಾನ್ ದಿವ್ಯಾನ್ ಕೈಲಾಸಶಿಖರೋಪಮಾನ್ ।
ತೇಷು ಸಂಸ್ಥಾಪಯಾಮಾಸುರ್ಲಿಂಗಾನಿ ವಿವಿಧಾನಿ ಚ ।
ಕ್ಷೇತ್ರೇ ಕ್ಷೇತ್ರೇ ಚ ಯನ್ನಾಮ ತತ್ತತ್ಸಂಜ್ಞಾಂ ಪ್ರಚಕ್ರಿರೇ ॥ ೬೬ ॥
ಅಥ ತೇಷಾಂ ಪುನರ್ದೃಷ್ಟಿಂ ಗತ್ವಾ ದೇವಸ್ತ್ರಿಲೋಚನಃ ।
ಪ್ರೋವಾಚ ಮಧುರಂ ವಾಕ್ಯಂ ಕಸ್ಮಿಂಶ್ಚಿತ್ಕಾಲಪರ್ಯಯೇ ।
ಆರಾಧಿತಸ್ತಪಃ ಶಕ್ತ್ಯಾ ಲಿಂಗಸಂಸ್ಥಾಪನಾದನು ॥ ೬೭ ॥

ಶ್ರೀ ಭಗವಾನುವಾಚ:—

ಪರಿತುಷ್ಟೋಽಸ್ಮಿ ವಿಪ್ರೇಂದ್ರಾ ಯುಷ್ಮಾಕಮಹಮದ್ಯ ವೈ ।
ಏತನ್ಮಮ ಕೃತಂ ಕೃತ್ಯಂ ಭವದ್ಭಿರಖಿಲಂ ತತಃ ॥ ೬೮ ॥
ಅಸ್ಮದೀಯಾನಿ ಲಿಂಗಾನಿ ಕ್ಷೇತ್ರಾಣಿ ಚ ಕಲೇರ್ಭಯಾತ್ ।
ತತೋ ಮಾನ್ಯಾಶ್ಚ ಮೇ ಯೂಯಂ ನಾಽನ್ಯೈರೇತದ್ಭವಿಷ್ಯತಿ ॥ ೬೯ ॥
ತಸ್ಮಾಚ್ಚಿತ್ತಸ್ಥಿತಂ ಶೀಘ್ರಂ ಪ್ರಾರ್ಥಯಂತು ದ್ವಿಜೋತ್ತಮಾಃ ।
ಸಂಪ್ರಯಚ್ಛಾಮಿ ಯೇನಾಽತು ಯದ್ಯಪಿಸ್ಯಾತ್ಸುದುರ್ಲಭಂ ॥ ೭೦ ॥

ಬ್ರಾಹ್ಮಣಾ ಊಚುಃ:—

ಯದಿ ದೇವ ಪ್ರಸನ್ನಸ್ತ್ವಮಸ್ಮಾಕಂ ಚ ಸುರೇಶ್ವರ ।
ಪಶ್ಚಿಮಶ್ಚಿತ್ರಶರ್ಮಾ ಚ ಯಥಾದ್ಯೋ ಭವತಾ ಕೃತಃ ॥ ೭೧ ॥

---

ಗಳನ್ನು ನಿರ್ಮಿಸಿದರು. ಅವುಗಳಲ್ಲಿ ಬಗೆಬಗೆಯ ಲಿಂಗಗಳನ್ನು ಸ್ಥಾಪಿಸಿ ಆಯಾ ಕ್ಷೇತ್ರಗಳ ಹೆಸರನ್ನಿಟ್ಟರು.

೬೭. ಅವರು ಲಿಂಗಗಳನ್ನು ಪ್ರತಿಷ್ಠೆಮಾಡಿದ ತರುವಾಯ ತಪಶ್ಶಕ್ತಿಯಿಂದ ಸಂತೋಷಗೊಳಿಸಲ್ಪಟ್ಟ ಶಿವನು ಒಂದಾನೊಂದು ಕಾಲದಲ್ಲಿ ಮರಳಿ ಪ್ರತ್ಯಕ್ಷನಾಗಿ ಹೀಗೆ ಸವಿಮಾತನ್ನಾಡಿದನು.

೬೮. ಶ್ರೀಭಗವಂತನು ಹೇಳುತ್ತಾನೆ:—ದ್ವಿಜವರ್ಯರೆ! ನೀವು ನನ್ನ ಸಕಲ ಕೆಲಸಗಳನ್ನು ಮಾಡಿದ್ದರಿಂದ ನಿಮ್ಮಲ್ಲಿ ನಾನು ಸಂತುಷ್ಟನಾಗಿದ್ದೇನೆ.

೬೯. ನೀವು ನನ್ನ ಲಿಂಗಗಳನ್ನೂ, ಕ್ಷೇತ್ರಗಳನ್ನೂ ಕಲಿಯ ಭಯದಿಂದ ರಕ್ಷಿಸಿರುವುದರಿಂದ ಪೂಜ್ಯರು. ಇತರರಿಂದ ಈ ಕಾರ್ಯವು ಆಗುವುದಿಲ್ಲ.

೭೦. ದ್ವಿಜವರ್ಯರೆ! ಆದುದರಿಂದ ಶೀಘ್ರವಾಗಿ ನಿಮ್ಮ ಮನೋಭೀಷ್ಟವನ್ನು ಬೇಡಿಕೊಳ್ಳಿರಿ. ಅದು ದುರ್ಲಭವಾಗಿದ್ದರೂ ಕೊಡುವೆನು.

೭೧—೭೩. ಬ್ರಾಹ್ಮಣರು ಹೇಳುತ್ತಾರೆ:—ಪರಮೇಶ್ವರ! ನೀನು ನಮಗೆ ಪ್ರಸನ್ನನಾಗಿದ್ದರೆ ಕೊನೆಯವನಾದ ಚಿತ್ರಶರ್ಮನನ್ನು ಮೊದಲನೆಯವನನ್ನಾಗಿ ಮಾಡಿದಂತೆ ನಮ್ಮ ಹೆಸರನ್ನೂ ಸಕಲ ಶ್ರಾದ್ಧಕಾರ್ಯಗಳಲ್ಲಿಯೂ ಹೇಳು

ಅಸ್ಮದೀಯಂ ಸದಾಸಾಮ ಕೀರ್ತನೀಯಮಸಂಶಯಂ ।
ಶ್ರಾದ್ಧಕೃತ್ಯೇಷು ಸರ್ವೇಷು ಯಥಾ ತೇನ ಸಮಾ ವಯಂ ।
ಭವಾಮಸ್ತ್ವತ್ಪ್ರಸಾದೇನ ಸಾಂಪ್ರತಂ ಚಿತ್ರಶರ್ಮಣಾ ॥ ೭೨ ॥
ಶ್ರೀ ಭಗವಾನುವಾಚ :—
ಯುಷ್ಮಾಕಮಪಿ ಯೇ ಕೇಚಿದ್ವಶಂ ಯಾಸ್ಯಂತಿ ಮಾನವಾಃ ।
ಯುವಾನಃ ಶಾಸ್ತ್ರಸಂಯುಕ್ತಾ ವೇದವಿದ್ಯಾವಿಶಾರದಾಃ ॥ ೭೩ ॥
ಆನಯಿಷ್ಯಥ ತಾನ್ ಯೂಯಮಾಮುಷ್ಯಾಯಣಸಂಜ್ಞಿತಾನ್ ।
ನಿತ್ಯಂ ಸ್ಥಿತಾಶ್ಚ ತೇ ಕ್ಷೇತ್ರೇ ಶ್ರಾದ್ಧಸ್ಯಾಕ್ಷಯ್ಯಕಾರಕಾಃ ॥ ೭೪ ॥
ಏವಮುಕ್ತ್ವಾಽಥ ದೇವೇಶಸ್ತತಶ್ಚಾದರ್ಶನಂ ಗತಃ ।
ತೇಽಪಿ ವಿಪ್ರಾಃ ಸುಸಂತುಷ್ಟಾಸ್ತತ್ರ ಸ್ಥಾನೇ ವ್ಯವಸ್ಥಿತಾಃ ॥ ೭೫ ॥
ಏವಂ ತತ್ರ ಸಮಸ್ತಾನಿ ಕ್ಷೇತ್ರಾಣ್ಯಾಯತನಾನಿ ಚ ।
ಕಲಿಭೀತಾನಿ ವಿಪ್ರೇಂದ್ರಾ ನಿವಸಂತಿ ಸದೈವ ಹಿ ॥ ೭೬ ॥
ಏವಂ ತೇ ಬ್ರಾಹ್ಮಣಾಃ ಪ್ರಾಪ್ಯ ಸಿದ್ಧಿಂ ಚೇಶ್ವರಪೂಜನಾತ್ ।
ಖ್ಯಾತಾಃ ಸರ್ವತ್ರ ಭುವನೇ ಶ್ರಾದ್ಧಸ್ಯಾಕ್ಷಯ್ಯಕಾರಕಾಃ ॥ ೭೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಿತ್ರಶರ್ಮಕೃತ ಲಿಂಗಸ್ಥಾಪನವೃತ್ತಾಂತವರ್ಣನಂ"
ನಾಮ ಸಪ್ತೋತ್ತರಶತತಮೋಽಧ್ಯಾಯಃ

---

ವಂತೆ ಮಾಡು. ಈಗ ನಾವು ನಿನ್ನ ಅನುಗ್ರಹದಿಂದ ಚಿತ್ರಶರ್ಮನಿಗೆ ಸಮಾನರಾಗುವೆವು.

೭೩–೭೪. ಶ್ರೀ ಭಗವಂತನು ಹೇಳುತ್ತಾನೆ:—ನಿಮಗೂ ಯುವಕರೂ, ಶಾಸ್ತ್ರಪ್ರವೀಣರೂ, ವೇದವಿದ್ಯಾನಿಪುಣರೂ ಆದ ಕೆಲವು ಮಂದಿ ಮನುಷ್ಯರು ವಶರಾಗುವರು. ನೀವು ಆಮುಷ್ಯಾಯಣರೆಂದು ಹೆಸರುಳ್ಳ ಅವರನ್ನು ಕರೆದುಕೊಂಡು ಬನ್ನಿ. ಅವರು ಯಾವಾಗಲೂ ಈ ಕ್ಷೇತ್ರದಲ್ಲಿದ್ದು ಶ್ರಾದ್ಧವನ್ನು ಅಕ್ಷಯವಾಗಿ ಮಾಡುವರು.

೭೫–೭೬. ಈಶ್ವರನು ಹೀಗೆ ಹೇಳಿ ಅದೃಶ್ಯನಾದನು. ಆ ಬ್ರಾಹ್ಮಣರೂ ಸಂತೋಷಗೊಂಡು ಅಲ್ಲಿಯೇ ನೆಲೆಸಿದರು. ವಿಪ್ರರೆ! ಹೀಗೆ ಆ ಕ್ಷೇತ್ರದಲ್ಲಿ ಕಲಿಯ ಭಯದಿಂದ ಸಮಸ್ತ ಕ್ಷೇತ್ರಗಳೂ, ದೇವಾಲಯಗಳೂ ಯಾವಾಗಲೂ ಇರುವುವು.

೭೭. ಹೀಗೆ ಆ ಬ್ರಾಹ್ಮಣರು ಈಶ್ವರನ ಪೂಜೆಯಿಂದ ಸಿದ್ಧಿಯನ್ನು ಹೊಂದಿ ಸಕಲ ಲೋಕದಲ್ಲಿ ಶ್ರಾದ್ಧವನ್ನು ಅಕ್ಷಯಗೊಳಿಸುವವರೆಂದು ವಿಖ್ಯಾತರಾದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಿತ್ರಶರ್ಮಕೃತ ಲಿಂಗಸ್ಥಾಪನವೃತ್ತಾಂತವರ್ಣನ" ವೆಂಬ
ನೂರೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟೋತ್ತರಶತತಮೋಽಧ್ಯಾಯಃ

## ಅಷ್ಟಷಷ್ಟಿತೀರ್ಥವರ್ಣನಂ

ಋಷಯ ಊಚುಃ:—

ಅಷ್ಟಷಷ್ಟಿಪ್ರಮಾಣಾನಿ ಯಾನಿ ಕ್ಷೇತ್ರಾಣಿ ಸೂತಜ ।
ತ್ವಯೋಕ್ತಾನಿ ಚ ತಾನ್ಯೇವ ನಾಮತೋ ನಃ ಪ್ರಕೀರ್ತಯ ॥ ೧ ॥
ತಥಾಽನ್ಯಾನಿ ಚ ತೀರ್ಥಾನಿ ಯಾನಿ ಸಂತಿ ಧರಾತಲೇ ।
ತಾನಿ ಕೀರ್ತಯ ಕಾರ್ತ್ಸ್ನ್ಯೇನ ಪರಂ ಕೌತೂಹಲಂ ಹಿ ನಃ ॥ ೨ ॥

ಸೂತ ಉವಾಚ:—

ಯಾನಿ ಪ್ರೋಕ್ತಾನಿ ತೀರ್ಥಾನಿ ಭವದ್ಭಿರ್ದ್ವಿಜಸತ್ತಮಾಃ ।
ಅಷ್ಟಷಷ್ಟಿಪ್ರಮಾಣಾನಿ ತಥಾ ಕ್ಷೇತ್ರಾಣಿ ಭೂತಲೇ ॥ ೩ ॥
ತಾನಿ ಸರ್ವಾಣಿ ಭೀತಾನಿ ಪ್ರವಿಷ್ಟಾನಿ ರಸಾತಲಂ ।
ತೀರ್ಥಾನಿ ಮುನಿಶಾರ್ದೂಲಾಃ ಪಾಪೇಽಪ್ಯತ್ರ ಕಲೌಯುಗೇ ॥ ೪ ॥
ಏತದೇವ ಪುರಾ ಪೃಷ್ಟಃ ಪಾರ್ವತ್ಯಾ ಪರಮೇಶ್ವರಃ ।
ಯದ್ಭವದ್ಭಿರಹಂ ಪೃಷ್ಟಸ್ತೀರ್ಥಯಾತ್ರಾಕೃತೇ ದ್ವಿಜಾಃ ॥ ೫ ॥
ಕೈಲಾಸಶಿಖರಾಽಽಸೀನಃ ಪುರಾ ದೇವೋ ಮಹೇಶ್ವರಃ ।
ಸರ್ವೈರ್ಗಣೈಃ ಸಾರ್ಧಮುಪವಿಷ್ಟೋ ವರಾಸನೇ ॥ ೬ ॥

---

## ಕನ್ನಡದ ಅನುವಾದ

### ಅಷ್ಟಷಷ್ಟಿತೀರ್ಥವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಅರುವತ್ತೆಂಟು ಕ್ಷೇತ್ರಗಳನ್ನು ಹೇಳಿರುವೆಯಷ್ಟೆ. ಅವುಗಳ ಹೆಸರನ್ನು ಹೇಳು.

೨. ಹಾಗೆಯೇ ಭೂಮಿಯಲ್ಲಿರುವ ಇತರ ತೀರ್ಥಗಳನ್ನೂ ಸಂಪೂರ್ಣವಾಗಿ ಹೇಳು. ಕೇಳಲು ನಮಗೆ ಬಹು ಕುತೂಹಲವುಂಟಾಗಿದೆ.

೩–೪. ಸೂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮರೆ! ಪಾಪಿಷ್ಠವಾದ ಈ ಕಲಿಯುಗದಲ್ಲಿ ನೀವು ಹೇಳಿದ ಅರುವತ್ತೆಂಟು ಕ್ಷೇತ್ರಗಳೂ, ತೀರ್ಥಗಳೂ ಭಯದಿಂದ ಪಾತಾಳವನ್ನು ಪ್ರವೇಶಿಸಿದುವು.

೫. ನೀವು ತೀರ್ಥಯಾತ್ರೆಯ ವಿಷಯದಲ್ಲಿ ಕೇಳಿದ ಪ್ರಶ್ನೆಯನ್ನೇ ಹಿಂದೆ ಪಾರ್ವತಿಯು ಪರಮೇಶ್ವರನನ್ನು ಕೇಳಿರುವಳು.

೬–೭. ಹಿಂದೆ ಕೈಲಾಸಶಿಖರದಲ್ಲಿ ವರಾಸನದಲ್ಲಿ ಸಕಲ ಗಣಗಳೊಡನೆ

ಪ್ರಣಾಮ ಕರಣಾರ್ಥಾಯ ಹ್ಯಾಗತೇಷ್ವಮರೇಷು ಚ ।
ಗತೇಷು ತೇಷು ವಿಪ್ರೇಂದ್ರಾಃ ಸರ್ವೇಷು ತ್ರಿದಿವಾಲಯಂ ।
ಅರ್ಧಾಸನಗತಾ ದೇವೀ ವಾಕ್ಯಮೇತದುವಾಚ ಹ ॥ ೭ ॥

ದೇವ್ಯುವಾಚ:—

ದೇವದೇವ ಮಹಾದೇವ ಗಂಗಾಕ್ಲಾಲಿತಶೇಖರ ।
ಯದಿ ಮೇ ತೀರ್ಥಮಾಹಾತ್ಮ್ಯಂ ಯದ್ಯಹಂ ವಲ್ಲಭಾ ತವ ॥ ೮ ॥
ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಮಿಹ ಭೂತಲೇ ।
ಸಂಖ್ಯಯಾ ನಾಮತೋ ದೇವ ಮಹ್ಯಂ ಕೀರ್ತಯ ಸಾಂಪ್ರತಂ ॥ ೯ ॥
ಯಾನಿ ತೀರ್ಥಾನ್ಯನೇಕಾನಿ ಕ್ಷೇತ್ರಾಣಿ ಚೈವ ಮೇ ಪ್ರಭೋ ।
ತಾನಿ ಕೀರ್ತಯ ದೇವೇಶ ಸುಗಮ್ಯಂ ಚೈವ ದೇಹಿನಾಂ ।
ಕೀರ್ತನಾಚ್ಚ ಸಮಗ್ರಾಣಾಂ ತೀರ್ಥಾನಾಂ ಲಭ್ಯತೇ ಫಲಂ ॥ ೧೦ ॥

ಈಶ್ವರ ಉವಾಚ:—

ತೀರ್ಥಶಬ್ದೋ ವರಾರೋಹೇ ಧರ್ಮಕೃತ್ಯೇಷು ವರ್ತತೇ ।
ಧರ್ಮಸ್ಥಾನೇಷು ಸರ್ವೇಷು ತತ್ತ್ವಂ ಶೃಣು ಸಮಾಹಿತಾ ॥ ೧೧ ॥
ಮಾತಾ ತೀರ್ಥಂ ಪಿತಾ ತೀರ್ಥಂ ತೀರ್ಥಂ ಸಾಧುಸಮಾಗಮಃ ।
ಧರ್ಮಾನುಚಿಂತನಂ ಚೈವ ತಥೈವ ನಿಯಮೋ ಯಮಃ ॥ ೧೨ ॥
ಪುಣ್ಯಾಃ ಕಥಾ ವರಾರೋಹೇ ದೇವರ್ಷೀಣಾಂ ಕೃತಾಸ್ತಥಾ ।
ಆಶ್ರಯಾಃ ಸನ್ಮುನೀಂದ್ರಾಣಾಂ ದೇವಾನಾಂ ಚ ತಥಾ ಪ್ರಿಯೇ ॥ ೧೩ ॥

---

ಕುಳಿತಿರುವಾಗ ನಮಸ್ಕಾರ ಮಾಡಲು ಬಂದ ದೇವತೆಗಳು ಅಮರಾವತಿಗೆ ಹೊರಟು ಹೋಗಲು ಅರ್ಧಾಸನದಲ್ಲಿ ಕುಳಿತಿರುವ ದೇವಿಯು ಇಂತೆಂದಳು.

೮. ದೇವಿಯು ಹೇಳುತ್ತಾಳೆ:—ಗಂಗೆಯು ತೊಳೆದ ಶಿರಸ್ಸುಳ್ಳ ಮಹೇಶ್ವರ! ನಾನು ನಿನಗೆ ಪ್ರಿಯಳಾಗಿದ್ದರೆ ತೀರ್ಥಮಾಹಾತ್ಮ್ಯವನ್ನು ನನಗೆ ಹೇಳು.

೯. ಈಗ ಭೂಮಿಯಲ್ಲಿರುವ ಮೂರೂವರೆ ಕೋಟಿ ತೀರ್ಥಗಳ ನಾಮಗಳನ್ನು ನನಗೆ ಹೇಳು.

೧೦. ಮನುಷ್ಯರಿಗೆ ಸಮಗ್ರತೀರ್ಥಗಳ ಹೆಸರನ್ನು ಹೇಳುವುದರಿಂದ ಫಲವು ಸುಖವಾಗಿ ಲಭಿಸುವಂತೆ ಆ ತೀರ್ಥಕ್ಷೇತ್ರಗಳನ್ನು ನನಗೆ ಹೇಳು.

೧೧. ಈಶ್ವರನು ಹೇಳುತ್ತಾನೆ:—ಪ್ರಿಯಳೆ! ತೀರ್ಥಶಬ್ದವು ಧರ್ಮಕಾರ್ಯಗಳಿಗೂ, ಸಕಲ ಧರ್ಮಸ್ಥಾನಗಳಿಗೂ ವಾಚಕವಾಗಿದೆ. ಅದನ್ನು ನೀನು ಒಮ್ಮನಸ್ಸಿನಿಂದ ಕೇಳು.

೧೨—೧೪. ತಾಯಿ, ತಂದೆ, ಸತ್ಸಂಗ, ಧರ್ಮಚಿಂತೆ, ನಿಯಮ, ಯಮ, ದೇವರ್ಷಿಗಳ ಪುಣ್ಯಕಥೆ, ಮುನೀಂದ್ರರು ಮತ್ತು ದೇವರ್ಷಿಗಳ ಆಶ್ರಯಸ್ಥಾನ

ಭೂಮಿಭಾಗಾಃ ಪವಿತ್ರಾಃ ಸ್ಯುಃ ಕೀರ್ತ್ಯಂತೇ ತೀರ್ಥಮಿತ್ಯುತ ।
ತೇಷಾಂ ಸಂದರ್ಶನಾದೇವ ಸ್ಮರಣಾಚ್ಚಾಽವಗಾಹನಾತ್ ।
ಮುಚ್ಯಂತೇ ಜಂತವಃ ಪಾಪೈರಪಿ ಜನ್ಮಶತೋದ್ಭವೈಃ ॥ ೧೪ ॥
ತಥಾ ಪಾತಕಿನೋ ಯೇಽಚ ಯೇಽಚ ವಿಶ್ವಾಸಘಾತಕಾಃ ।
ತೇಽಪಿ ಸರ್ವೇ ತಥಾ ಮುಕ್ತಾಸ್ತೇಷಾಂ ಚೈವಾಽವಗಾಹನಾತ್ ॥ ೧೫ ॥
ಏವಂ ಪಾಪಾನಿ ಸಂಯಾಂತಿ ನಾಶಂ ಸರ್ವಾಂಗಸುಂದರಿ ।
ಅಪಿ ಬ್ರಹ್ಮವಧಾತ್ಪಾಪಂ ಯದ್ಭವೇದಿಹ ದೇಹಿನಾಂ ।
ತಚ್ಚಾಽಪಿ ತೀರ್ಥಸಂಸರ್ಗಾತ್ಪ್ರಲಯಂ ಯಾತ್ಯಸಂಶಯಂ ॥ ೧೬ ॥
ಮಮಾಽಪಿ ಕರಸಂಲಗ್ನಂ ಕಪಾಲಂ ಬ್ರಹ್ಮಣಃ ಪುರಾ ।
ಪತಿತಂ ತೀರ್ಥಸಂಸರ್ಗಾತ್ತೇಷಾಂ ಚೈವಾವಗಾಹನಾತ್ ॥ ೧೭ ॥
ಏವಂ ಸರ್ವೇಷು ತೀರ್ಥೇಷು ತಥಾ ಹ್ಯಾಯತನೇಷು ಚ ।
ಸ್ನಾತವ್ಯಂ ಭಕ್ತಿಯುಕ್ತೇನ ಚೇತಸಾ ನಾನ್ಯಗಾಮಿನಾ ॥ ೧೮ ॥
ಯತ್ರ ಸ್ನಾತೈರ್ನರೈಃ ಸಮ್ಯಕ್ಸರ್ವೇಷಾಂ ಲಭ್ಯತೇ ಫಲಂ ।
ಮಮಾಶ್ರಯಂ ವಿಶಾಲಾಕ್ಷಿ ಸರ್ವಪಾತಕನಾಶನಂ ।
ಕಾಮದಂ ಚ ತಥಾ ನೄಣಾಂ ನಾರೀಣಾಂ ಚ ವಿಶೇಷತಃ ॥ ೧೯ ॥

---

ಗಳು, ಪವಿತ್ರವಾದ ಭೂಮಿಭಾಗಗಳು ಇವು ತೀರ್ಥವೆನಿಸಿಕೊಳ್ಳುವುವು. ಅವುಗಳನ್ನು ನೋಡುವುದರಿಂದಲೂ, ಸ್ಮರಿಸುವುದರಿಂದಲೂ, ಅವುಗಳಲ್ಲಿ ಸ್ನಾನ ಮಾಡುವುದರಿಂದಲೂ ಜಂತುಗಳು ಅನೇಕ ಜನ್ಮಗಳಲ್ಲೆಸಗಿದ ಪಾಪಗಳಿಂದ ಮುಕ್ತವಾಗುವುವು.

೧೫. ಅವುಗಳಲ್ಲಿ ಸ್ನಾನ ಮಾಡುವುದರಿಂದ ಪಾಪಿಗಳು, ವಿಶ್ವಾಸಘಾತುಕರು ಸಹ ಮುಕ್ತರಾಗುವರು.

೧೬. ಸುಂದರಿ! ಹೀಗೆ ಪಾಪಗಳು ನಾಶವಾಗುವುವು. ಪ್ರಾಣಿಗಳ ಬ್ರಹ್ಮಹತ್ಯೆಯಿಂದುಂಟಾದ ಪಾಪಗಳೂ ಈ ತೀರ್ಥಗಳ ಸಂಬಂಧದಿಂದ ನಶಿಸುವುವು.

೧೭. ಹಿಂದೆ ನನ್ನ ಕೈಯಲ್ಲಿ ಅಂಟಿಕೊಂಡ ಬ್ರಹ್ಮಕಪಾಲವೂ ಈ ತೀರ್ಥಯಾತ್ರೆಯಿಂದಲೂ, ಇವುಗಳಲ್ಲಿ ಸ್ನಾನಮಾಡುವುದರಿಂದಲೂ ಬಿದ್ದುಹೋಯಿತು.

೧೮. ಹೀಗೆ ಸಕಲ ತೀರ್ಥಗಳಲ್ಲಿಯೂ, ದೇವಾಲಯಗಳಲ್ಲಿಯೂ ಭಕ್ತಿಸಹಿತವಾದ ಒಮ್ಮನಸ್ಸಿನಿಂದ ಸ್ನಾನ ಮಾಡಬೇಕು.

೧೯. ಪಾಪವನ್ನು ನೀಗಿಸುವ ನನ್ನ ಕ್ಷೇತ್ರಗಳಲ್ಲಿ ಸ್ನಾನ ಮಾಡುವುದರಿಂದ ಮಾನವರಿಗೆ ಸಮಸ್ತೇಷ್ಟಾರ್ಥಗಳು ಲಭಿಸುವುವು. ಸ್ತ್ರೀಯರಿಗೆ ವಿಶೇಷವಾಗಿ ಆ ಪುಣ್ಯಫಲವು ಲಭಿಸುವುದು.

ಏತದ್ಗುಹ್ಯತಮಂ ದೇವಿ ಮಮ ನಿತ್ಯಂ ವ್ಯವಸ್ಥಿತಂ ।
ನ ಕಸ್ಯಾಽಪಿ ಮಯಾ ಖ್ಯಾತಂ ದೇವೇಂದ್ರಸ್ಯಾಽಪಿ ಪೃಚ್ಛತಃ ॥ ೨೦ ॥
ವಾಲ್ಲಭ್ಯಾತ್ತವ ಮೇ ಭದ್ರೇ ಕಥಿತಂ ವೈ ವರಾನನೇ ।
ಅಷ್ಟಷಷ್ಟಿಃ ಪ್ರಗಮ್ಯಾನಿ ಭಕ್ತ್ಯಾ ತೀರ್ಥಾನಿ ಮಾನವೈಃ ॥ ೨೧ ॥
ಮಮಾಶ್ರಯಾಣಿ ತಾನ್ಯೇವ ಸರ್ವಪಾಪಹರಾಣಿ ಚ ।
ಕಾಮದಾನಿ ವರಾರೋಹೇ ಮತ್ಪ್ರಭಾವಾದಸಂಶಯಂ ॥ ೨೨ ॥
ಯಂ ಯಂ ಕಾಮಂ ಸಮಾಧಾಯ ತತ್ರ ತೀರ್ಥೇ ಪುಮಾನ್ ಯದಿ ।
ಕೃತ್ವಾ ಸ್ನಾನಂ ತತೋ ದೇವಮರ್ಚಯೇಚ್ಚ ಮಹೇಶ್ವರಂ ॥ ೨೩ ॥
ಸುಕೃತಂ ಮನಸಿ ಧ್ಯಾತ್ವಾ ಯೈರ್ಸರ್ವೈಃ ಪೂಜಿತೋ ಹರಿಃ ।
ಆಸ್ತಾಂ ತೇಷಾಂ ವರಾರೋಹೇ ದರ್ಶನಂ ಸ್ಪರ್ಶನಂ ತಥಾ ।
ಸ್ಮರಣಾದಪಿ ಮುಚ್ಯಂತೇ ನರಾಃ ಪಾಪೈಃ ಪುರಾಕೃತೈಃ ॥ ೨೪ ॥
ಏತೇ ಶಕ್ರಾದಯೋ ದೇವಾಸ್ತೇಷು ತೀರ್ಥೇಷು ಸುಂದರಿ ।
ಮಾಂ ಪೂಜ್ಯ ತ್ರಿದಿವಂ ಪ್ರಾಪ್ತಾಸ್ತಥಾಽನ್ಯೇ ನಾರದಾದಯಃ ॥ ೨೫ ॥
ತಾನ್ಯಹಂ ತೇ ಪ್ರವಕ್ಷ್ಯಾಮಿ ವಿಸ್ತರೇಣ ಪೃಥಕ್ ಪೃಥಕ್ ।
ನಾಮತಃ ಶೃಣು ದೇವೇಶಿ ಸಮಾಹಿತಮನಾಃ ಸ್ಥಿತಾ ॥ ೨೬ ॥

---

೨೦. ದೇವಿ! ಇದು ಅತಿ ರಹಸ್ಯವಾದುದು. ಇದನ್ನು ನಾನು ಯಾರಿಗೂ ಹೇಳಲಿಲ್ಲ. ಕೇಳುತ್ತಿರುವ ದೇವೇಂದ್ರನಿಗೂ ಹೇಳಲಿಲ್ಲ.

೨೧. ದೇವಿ! ಮಾನವರು ಭಕ್ತಿಯಿಂದ ಹೊಂದಲರ್ಹವಾದ ಅರುವತ್ತೆಂಟು ತೀರ್ಥಗಳನ್ನು ನಿನ್ನಲ್ಲಿರುವ ಪ್ರೀತಿಯಿಂದ ಹೇಳಿದ್ದೇನೆ.

೨೨. ಪ್ರಿಯಳೆ! ಆ ನನ್ನ ತೀರ್ಥಗಳು ನನ್ನ ಸಾಮರ್ಥ್ಯದಿಂದ ನಿಶ್ಚಯವಾಗಿಯೂ ಸಕಲ ಪಾಪಗಳನ್ನು ಪರಿಹರಿಸುವುವೂ, ಇಷ್ಟಾರ್ಥಗಳನ್ನೀಯುವುವೂ ಆಗಿರುವುವು.

೨೩–೨೪. ಆ ತೀರ್ಥದಲ್ಲಿ ಯಾವ ಮಾನವನು ಯಾವ ಯಾವ ಇಷ್ಟಾರ್ಥಗಳನ್ನು ಆಲೋಚಿಸುತ್ತ ಮಿಂದು ಶಿವನನ್ನು ಅರ್ಚಿಸುವನೋ, ಯಾರು ಪುಣ್ಯಕಾರ್ಯಗಳನ್ನು ಮನಸ್ಸಿನಲ್ಲಿ ಆಲೋಚಿಸಿ ಹರಿಯನ್ನು ಪೂಜಿಸುತ್ತಾರೊ, ಅಂತಹ ಮನುಷ್ಯರ ದರ್ಶನ, ಸ್ಪರ್ಶನ ಮಾತ್ರವಲ್ಲದೆ ಸ್ಮರಣೆಯಿಂದಲೂ ಮಾನವರು ಹಿಂದೆ ಮಾಡಿದ ಪಾಪಗಳಿಂದ ಮುಕ್ತರಾಗುವರು.

೨೫. ಈ ಇಂದ್ರಾದಿ ದೇವತೆಗಳೂ, ನಾರದಾದಿ ಮುನಿಗಳೂ ಆ ತೀರ್ಥಗಳಲ್ಲಿ ನನ್ನನ್ನು ಆರಾಧಿಸಿ ಸ್ವರ್ಗಕ್ಕೆ ತೆರಳಿದರು.

೨೬. ನಾನು ಅವುಗಳ ನಾಮಗಳನ್ನು ಪ್ರತ್ಯೇಕವಾಗಿ ವಿಸ್ತಾರವಾಗಿ ಹೇಳುವೆನು. ನೀನು ಸಾವಧಾನ ಮನಸ್ಸಿನಿಂದ ಅದನ್ನು ಕೇಳು.

ವಾರಾಣಸೀ ಪ್ರಯಾಗಂ ಚ ನೈಮಿಷಂ ಚಾಽಪರಂ ತಥಾ ।
ಗಯಾಶಿರಃ ಸುಪುಣ್ಯಂ ಚ ಪವಿತ್ರಂ ಕುರುಜಾಂಗಲಂ ॥ ೨೭ ॥
ಪ್ರಭಾಸಂ ಪುಷ್ಕರಂ ಚೈವ ವಿಶ್ವೇಶ್ವರಮಥಾಪರಂ ।
ಅಟ್ಟಹಾಸಂ ಮಹೇಂದ್ರಂ ಚ ತಥೈವೋಜ್ಜಯಿನೀ ಚ ಯಾ ॥ ೨೮ ॥
ಮರುಕೋಟಿಃ ಶಂಕುಕರ್ಣಂ ಗೋಕರ್ಣಂ ಕ್ಷೇತ್ರಮುತ್ತಮಂ ।
ರುದ್ರಕೋಟಿಃ ಸ್ಥಲೇಶಂ ಚ ಹರ್ಷಿತಂ ವೃಷಭಧ್ವಜಂ ॥ ೨೯ ॥
ಕೇದಾರಂ ಚ ತಥಾ ಕ್ಷೇತ್ರಂ ಕ್ಷೇತ್ರಂ ಮಧ್ಯಮಕೇಶ್ವರಂ ।
ಸಹಸ್ರಾಕ್ಷಂ ತಥಾ ಕ್ಷೇತ್ರಂ ತಥಾಽನ್ಯತ್ಕಾರ್ತಿಕೇಶ್ವರಂ ॥ ೩೦ ॥
ತಥೈವ ವಸ್ತ್ರಮಾರ್ಗಂ ಚ ತಥಾ ಕನಖಲಂ ಸ್ಮೃತಂ ।
ಭದ್ರಕರ್ಣಂ ಚ ವಿಖ್ಯಾತಂ ದಂಡಕಾಖ್ಯಂ ತಥೈವ ಚ ॥ ೩೧ ॥
ತ್ರಿದಂಡಾಖ್ಯಂ ತಥಾ ಕ್ಷೇತ್ರಂ ತಥೈವ ಕೃಮಿಜಾಂಗಲಂ ।
ಏಕಾಮ್ರಂ ಚ ತಥಾ ಕ್ಷೇತ್ರಂ ಕ್ಷೇತ್ರಂ ಛಾಗಲಕಂ ತಥಾ ॥ ೩೨ ॥
ಕಾಲಿಂಜರಂ ಚ ದೇವೇಶಿ ತಥಾಽನ್ಯನ್ಮಂಡಲೇಶ್ವರಂ ।
ಕಾಶ್ಮೀರಂ ಮರುಕೇಶಂ ಚ ಹರಿಶ್ಚಂದ್ರಂ ಸುಶೋಭನಂ ॥ ೩೩ ॥
ಪುರಶ್ಚಂದ್ರಂ ಚ ವಾಮೇಶಂ ಕುಕ್ಕುಟೇಶ್ವರಮೇವ ಚ ।
ಭಸ್ಮಗಾತ್ರಮಥೋಂಕಾರಂ ತ್ರಿಸಂಧ್ಯಾ ವಿರಜಾ ತಥಾ ॥ ೩೪ ॥
ಅರ್ಕೇಶ್ವರಂ ಚ ನೇಪಾಲಂ ದುಷ್ಕರ್ಣಂ ಕರವೀರಕಂ ।
ಜಾಗೇಶ್ವರಂ ತಥಾ ದೇವಿ ಶ್ರೀಶೈಲಂ ಪರ್ವತೋತ್ತಮಂ ॥ ೩೫ ॥
ಅಯೋಧ್ಯಾ ಚೈವ ಪಾತಾಲಂ ತಥಾ ಕಾರೋಹಣಂ ಮಹತ್ ।
ದೇವಿಕಾ ಚ ನದೀಪುಣ್ಯಾ ಭೈರವಂ ಪೂರ್ವಸಾಗರಃ ॥ ೩೬ ॥

---

೨೭–೪೦. ವಾರಾಣಸೀ, ಪ್ರಯಾಗ, ನೈಮಿಷ, ಗಯಾಶಿರಸ್ಸು, ಕುರುಜಾಂಗಲಿ, ಪ್ರಭಾಸ, ಪುಷ್ಕರ, ವಿಶ್ವೇಶ್ವರ, ಅಟ್ಟಹಾಸ, ಮಹೇಂದ್ರ, ಉಜ್ಜಯಿನೀ, ಮರುಕೋಟಿ, ಶಂಕುಕರ್ಣ, ಗೋಕರ್ಣ, ರುದ್ರಕೋಟಿ, ಸ್ಥಲೇಶ, ಹರ್ಷಿತ, ವೃಷಭಧ್ವಜ, ಕೇದಾರ, ಮಧ್ಯಮಕೇಶ್ವರ, ಸಹಸ್ರಾಕ್ಷ, ಕಾರ್ತಿಕೇಶ್ವರ, ವಸ್ತ್ರಮಾರ್ಗ, ಕನಖಲ, ಭದ್ರಕರ್ಣ, ದಂಡಕಾ, ತ್ರಿದಂಡ, ಕೃಮಿಜಾಂಗಲ, ಏಕಾಮ್ರ, ಛಾಗಲಕ, ಕಾಲಿಂಜರ, ಮಂಡಲೇಶ್ವರ, ಕಾಶ್ಮೀರ, ಮರುಕೇಶ, ಹರಿಶ್ಚಂದ್ರ, ಪುರುಶ್ಚಂದ್ರ, ವಾಮೇಶ, ಕುಕ್ಕುಟೇಶ್ವರ, ಭಸ್ಮಗಾತ್ರ, ಓಂಕಾರ, ತ್ರಿಸಂಧ್ಯಾ, ವಿರಜಾ, ಅರ್ಕೇಶ್ವರ, ನೇಪಾಲ, ದುಷ್ಕರ್ಣ, ಕರವೀರಕ, ಜಾಗೇಶ್ವರ, ಶ್ರೀಶೈಲ, ಅಯೋಧ್ಯಾ, ಪಾತಾಳ, ಕಾರೋಹಣ, ದೇವಿಕಾ, ಭೈರವ, ಪೂರ್ವಸಾಗರ, ಸಪ್ತಗೋದಾವರೀ, ನಿರ್ಮಲೇಶ, ಕರ್ಣಿಕಾರ,

ಸಪ್ತ ಗೋದಾವರೀ ತೀರ್ಥಂ ತಥೈವ ಸಮುದಾಹೃತಂ ।
ನಿರ್ಮಲೇಶಂ ತಥಾಽನ್ಯಚ್ಚ ಕರ್ಣಿಕಾರಂ ಸುಶೋಭನಂ ॥ ೩೭ ॥
ಕೈಲಾಸಂ ಜಾಹ್ನವೀ ತೀರಂ ಜಲಲಿಂಗಂ ಚ ವಾಡವಂ ।
ಬದರೀ ತೀರ್ಥವರ್ಯಂ ಚ ಕೋಟಿ ತೀರ್ಥಂ ತಥೈವ ಚ ॥ ೩೮ ॥
ವಿಂಧ್ಯಾಚಲೋ ಹೇಮಕೂಟಂ ಗಂಧಮಾದನನೇವ ಚ ।
ಲಿಂಗೇಶ್ವರಂ ತಥಾ ಕ್ಷೇತ್ರಂ ಲಂಕಾದ್ವಾರಂ ತಥೈವ ಚ ॥ ೩೯ ॥
ನಲೇಶ್ವರಂ ತು ಮಧ್ಯೇಶಂ ಕೇದಾರಂ ರುದ್ರಜಾಲಕಂ ।
ಸುವರ್ಣಾಖ್ಯಂ ಚ ನಾಮೋರು ತಥಾಽನ್ಯತ್ಷಷ್ಟಿಕಾಪಥಂ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಷ್ಟಷಷ್ಟಿತೀರ್ಥವರ್ಣನಂ"
ನಾಮಾಷ್ಟೋತ್ತರಶತತಮೋಽಧ್ಯಾಯಃ

---

ಕೈಲಾಸ, ಜಾಹ್ನವೀ ತೀರ, ಜಲಲಿಂಗ, ವಾಡವ, ಬದರೀ ತೀರ್ಥ, ಕೋಟಿ ತೀರ್ಥ, ವಿಂಧ್ಯಾಚಲ, ಹೇಮಕೂಟ, ಗಂಧಮಾದನ, ಲಿಂಗೇಶ್ವರ, ಲಂಕಾದ್ವಾರ, ನಲೇಶ್ವರ, ಕೇದಾರ, ರುದ್ರಜಾಲಕ, ಸುವರ್ಣ, ಷಷ್ಟಿಕಾಪಥ ಇವು ತೀರ್ಥ ನಾಮಗಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಷ್ಟಷಷ್ಟಿತೀರ್ಥವರ್ಣನ" ವೆಂಬ
ನೂರೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವೋತ್ತರಶತತಮೋಽಧ್ಯಾಯಃ

## ಅಷ್ಟಷಷ್ಟಿತೀರ್ಥಮಾಹಾತ್ಮ್ಯಕಥನಂ

ಈಶ್ವರ ಉವಾಚ :—

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ವರಾನನೇ ।
ಸರ್ವೇಷಾಮೇವ ತೀರ್ಥಾನಾಂ ಸಾರಂ ತೀರ್ಥಸಮುಚ್ಚಯಂ ॥ ೧ ॥
ಏತೇಷ್ವಹಂ ವರಾರೋಹೇ ಸರ್ವೇಷ್ವೇವ ವ್ಯವಸ್ಥಿತಃ ।
ನಾಮ್ನಾ ಚಾನ್ಯೇಷು ತೀರ್ಥೇಷು ತ್ರಿದಶಾನಾಂ ಹಿತಾರ್ಥತಃ ॥ ೨ ॥
ಯೋ ಮಾಮೇತೇಷು ತೀರ್ಥೇಷು ಸ್ನಾತ್ವಾ ಪಶ್ಯತಿ ಮಾನವಃ ।
ಕೀರ್ತಯೇತ್ಕೀರ್ತನಾನ್ನಾಮ್ನಾ ಸ ನೂನಂ ಮೋಕ್ಷಮಾಪ್ನುಯಾತ್॥ ೩ ॥

ಶ್ರೀ ದೇವ್ಯುವಾಚ :—

ಯೇಷು ತೀರ್ಥೇಷು ಯನ್ನಾಮ ಕೀರ್ತನೀಯಂ ತವ ಪ್ರಭೋ ।
ತತ್ ಕಾರ್ತ್ಸ್ನ್ಯೇನ ಮಮ ಬ್ರೂಹಿ ಯದ್ಯಹಂ ತವವಲ್ಲಭಾ ॥ ೪ ॥

ಈಶ್ವರ ಉವಾಚ :—

ವಾರಾಣಸ್ಯಾಂ ಮಹಾದೇವಂ ಪ್ರಯಾಗೇ ಚ ಮಹೇಶ್ವರಂ ।
ನೈಮಿಷೇ ದೇವದೇವಂ ಚ ಗಯಾಯಾಂ ಪ್ರಪಿತಾಮಹಂ ॥ ೫ ॥

---

### ಕನ್ನಡದ ಅನುವಾದ

#### ಅಷ್ಟಷಷ್ಟಿತೀರ್ಥಮಾಹಾತ್ಮ್ಯಕಥನ

೧. ಈಶ್ವರನು ಹೇಳುತ್ತಾನೆ:—ಪ್ರಿಯಳೆ! ನೀನು ಕೇಳಿದ ಸಮಸ್ತ ತೀರ್ಥಗಳ ಸಾರವನ್ನು ಹೇಳಿರುವೆನು.

೨. ಈ ಸಮಸ್ತ ತೀರ್ಥಗಳಲ್ಲಿಯೂ ನಾನು ನೆಲೆಸಿರುವೆನು. ಇತರ ತೀರ್ಥಗಳಲ್ಲಿ ದೇವತೆಗಳ ಹಿತಕ್ಕಾಗಿ ಹೆಸರಿನಿಂದಿರುವೆನು.

೩. ಈ ತೀರ್ಥಗಳಲ್ಲಿ ಮಿಂದು ನನ್ನನ್ನು ನೋಡುವವನೂ, ನಾಮಸಂಕೀರ್ತನೆ ಮಾಡುವವನೂ, ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು.

೪. ಶ್ರೀದೇವಿಯು ಹೇಳುತ್ತಾಳೆ:—ನಾಥ! ನಾನು ನಿನಗೆ ಪ್ರಿಯಳಾಗಿದ್ದರೆ ಯಾವ ತೀರ್ಥದಲ್ಲಿ ನಿನ್ನ ಯಾವ ನಾಮವನ್ನು ಹೇಳಬೇಕೆಂಬುದನ್ನು ಸಂಪೂರ್ಣವಾಗಿ ಹೇಳು.

೫–೨೨. ಈಶ್ವರನು ಹೇಳುತ್ತಾನೆ:—ವಾರಾಣಸಿಯಲ್ಲಿ ಮಹಾದೇವ, ಪ್ರಯಾಗದಲ್ಲಿ ಮಹೇಶ್ವರ, ನೈಮಿಷದಲ್ಲಿ ದೇವದೇವ, ಗಯೆಯಲ್ಲಿ ಪ್ರಪಿತಾಮಹ,

ಕುರುಕ್ಷೇತ್ರೇ ವಿದುಃ ಸ್ಥಾಣುಂ ಪ್ರಭಾಸೇ ಶಶಿಶೇಖರಂ ।
ಪುಷ್ಕರೇ ತು ಹ್ಯಜಾಗಂಧಿಂ ವಿಶ್ವಂ ವಿಶ್ವೇಶ್ವರೇ ತಥಾ ॥ ೬ ॥
ಅಟ್ಟಹಾಸೇ ಮಹಾನಾದಂ ಮಹೇಂದ್ರೇ ಚ ಮಹಾವ್ರತಂ (೧೦) ।
ಉಜ್ಜಯಿನ್ಯಾಂ ಮಹಾಕಾಲಂ ಮರುಕೋಟೇ ಮಹೋತ್ಕಟಂ ॥ ೭ ॥
ಶಂಕುಕರ್ಣೇ ಮಹಾತೇಜಂ ಗೋಕರ್ಣೇ ಚ ಮಹಾಬಲಂ ।
ರುದ್ರಕೋಟ್ಯಾಂ ಮಹಾಯೋಗಂ ಮಹಾಲಿಂಗಂ ಸ್ಥಲೇಶ್ವರೇ ॥ ೮ ॥
ಹರ್ಷಿತೇ ಚ ತಥಾ ಹರ್ಷಂ ವೃಷಭಂ ವೃಷಭಧ್ವಜೇ ।
ಕೇದಾರೇ ಚೈವ ಈಶಾನಂ ಶರ್ವಂ ಮಧ್ಯಮಕೇಶ್ವರೇ (೨೦) ॥ ೯ ॥
ಸುಪರ್ಣಾಕ್ಷಂ ಸಹಸ್ರಾಕ್ಷೇ ಸುಸೂಕ್ಷ್ಮಂ ಕಾರ್ತಿಕೇಶ್ವರೇ ।
ಭವಂ ವಸ್ತ್ರಾಪಥೇ ದೇವಿ ಹ್ಯುಗ್ರಂ ಕನಖಲೇ ತಥಾ ॥ ೧೦ ॥
ಭದ್ರಕರ್ಣೇ ಶಿವಂ ಚೈವ ದಂಡಕೇ ದಂಡಿನಂ ತಥಾ ।
ಊರ್ಧ್ವರೇತಂ ತ್ರಿದಂಡಾಯಾಂ ಚಂಡೀಶಂ ಕೃಮಿಜಾಂಗಲೇ ॥ ೧೧ ॥
ಕೃತ್ತಿವಾಸಂ ತಥೈಕಾಮ್ರೇ ಛಾಗಲೇಯೇ ಕಪರ್ದಿನಂ (೩೦) ।
ಕಾಲಿಂಜರೇ ನೀಲಕಂಠಂ ಶ್ರೀಕಂಠಂ ಮಂಡಲೇಶ್ವರೇ ॥ ೧೨ ॥
ವಿಜಯಂ ಚೈವ ಕಾಶ್ಮೀರೇ ಜಯಂತಂ ಮರುಕೇಶ್ವರೇ ।
ಹರಿಶ್ಚಂದ್ರೇ ಹರಂ ಚೈವ ಪುರಶ್ಚಂದ್ರೇ ಚ ಶಂಕರಂ ॥ ೧೩ ॥
ಜಟಿಂ ವಾಮೇಶ್ವರೇ ವಿಂದ್ಯಾತ್ಸೌಮ್ಯಂ ವೈ ಕುಕ್ಕುಟೇಶ್ವರೇ ।
ಭೂತೇಶ್ವರಂ ಭಸ್ಮಗಾತ್ರೇ ಓಂಕಾರೇಽಮರಕಂಟಕಂ (೪೦) ॥ ೧೪ ॥

---

ಕುರುಕ್ಷೇತ್ರದಲ್ಲಿ ಸ್ಥಾಣು, ಪ್ರಭಾಸದಲ್ಲಿ ಶಶಿಶೇಖರ, ಪುಷ್ಕರದಲ್ಲಿ ಅಜಾಗಂಧಿ, ವಿಶ್ವೇಶ್ವರದಲ್ಲಿ ವಿಶ್ವ, ಅಟ್ಟಹಾಸದಲ್ಲಿ ಮಹಾನಾದ, ಮಹೇಂದ್ರದಲ್ಲಿ ಮಹಾವ್ರತ, ಉಜ್ಜಯಿನಿಯಲ್ಲಿ ಮಹಾಕಾಲ, ಮರುಕೋಟದಲ್ಲಿ ಮಹೋತ್ಕಟ, ಶಂಕುಕರ್ಣದಲ್ಲಿ ಮಹಾತೇಜ, ಗೋಕರ್ಣದಲ್ಲಿ ಮಹಾಬಲ, ರುದ್ರಕೋಟಿಯಲ್ಲಿ ಮಹಾಯೋಗ, ಸ್ಥಲೇಶ್ವರದಲ್ಲಿ ಮಹಾಲಿಂಗ, ಹರ್ಷಿತದಲ್ಲಿ ಹರ್ಷ, ವೃಷಭಧ್ವಜದಲ್ಲಿ ವೃಷಭ, ಕೇದಾರದಲ್ಲಿ ಈಶಾನ, ಮಧ್ಯಮಕೇಶ್ವರದಲ್ಲಿ ಶರ್ವ, ಸಹಸ್ರಾಕ್ಷದಲ್ಲಿ ಸುಪರ್ಣಾಕ್ಷ, ಕಾರ್ತಿಕೇಶ್ವರದಲ್ಲಿ ಸುಸೂಕ್ಷ್ಮ, ವಸ್ತ್ರಾಪಥದಲ್ಲಿ ಭವ, ಕನಖಲದಲ್ಲಿ ಉಗ್ರ, ಭದ್ರಕರ್ಣದಲ್ಲಿ ಶಿವ, ದಂಡಕದಲ್ಲಿ ದಂಡಿ, ತ್ರಿದಂಡದಲ್ಲಿ ಊರ್ಧ್ವರೇತ, ಕೃಮಿಜಾಂಗಲದಲ್ಲಿ ಚಂಡೀಶ, ಏಕಾಮ್ರದಲ್ಲಿ ಕೃತ್ತಿವಾಸ, ಛಾಗಲೇಯದಲ್ಲಿ ಕಪರ್ದಿ, ಕಾಲಿಂಜರದಲ್ಲಿ ನೀಲಕಂಠ, ಮಂಡಲೇಶ್ವರದಲ್ಲಿ ಶ್ರೀಕಂಠ, ಕಾಶ್ಮೀರದಲ್ಲಿ ವಿಜಯ, ಮರುಕೇಶ್ವರದಲ್ಲಿ ಜಯಂತ, ಹರಿಶ್ಚಂದ್ರದಲ್ಲಿ ಹರ, ಪುರಶ್ಚಂದ್ರದಲ್ಲಿ ಶಂಕರ, ವಾಮೇಶ್ವರದಲ್ಲಿ ಜಟಿ, ಕುಕ್ಕುಟೇಶ್ವರದಲ್ಲಿ ಸೌಮ್ಯ, ಭಸ್ಮಗಾತ್ರದಲ್ಲಿ ಭೂತೇಶ್ವರ, ಓಂಕಾರದಲ್ಲಿ ಅಮರಕಂಟಕ, ತ್ರಿಸಂಧ್ಯೆಯಲ್ಲಿ ತ್ರ್ಯಂಬಕ, ವಿರಜೆ

ತ್ರ್ಯಂಬಕಂ ಚ ತ್ರಿಸಂಧ್ಯಾಯಾಂ ವಿರಜಾಯಾಂ ತ್ರಿಲೋಚನಂ ।
ದೀಪ್ತಮರ್ಕೇಶ್ವರೇ ಜ್ಞೇಯಂ ನೇಪಾಲೇ ಪಶುಪಾಲಕಂ ॥ ೧೫ ॥
ಯಮಲಿಂಗಂ ಚ ದುಷ್ಕರ್ಣೇ ಕಪಾಲೀ ಕರವೀರಕೇ ।
ಜಾಗೇಶ್ವರೇ ತ್ರಿಶೂಲೀ ಚ ಶ್ರೀಶೈಲೇ ತ್ರಿಪುರಾಂತಕಂ ॥ ೧೬ ॥
ರೋಹಣಂ ತು ಅಯೋಧ್ಯಾಯಾಂ ಪಾತಾಲೇ ಹಾಟಕೇಶ್ವರಂ (೩೦) ।
ಕಾರೋಹಣೇ ನಕುಲೀಶಂ ದೇವಿಕಾಯಾಮುಮಾಪತಿಂ ॥ ೧೭ ॥
ಭೈರವೇ ಭೈರವಾಕಾರಮಮರಂ ಪೂರ್ವಸಾಗರೇ ।
ಸಪ್ತಗೋದಾವರೇ ಭೀಮಂ ಸ್ವಯಂಭೂರ್ನಿರ್ಮಲೇಶ್ವರೇ ॥ ೧೮ ॥
ಕರ್ಣಿಕಾರೇ ಗಣಾಧ್ಯಕ್ಷಂ ಕೈಲಾಸೇತು ಗಣಾಧಿಪಂ ।
ಗಂಗಾದ್ವಾರೇ ಹಿಮಸ್ಥಾನಂ ಜಲಲಿಂಗೇ ಜಲಪ್ರಿಯಂ (೬೦) ॥ ೧೯ ॥
ಅನಲಂ ವಾಡವೇಽಗ್ನೌ ಚ ಭೀಮಂ ಬದರಿಕಾಶ್ರಮೇ ।
ಶ್ರೇಷ್ಠೇ ಕೋಟೇಶ್ವರಂ ಚೈವ ವಾರಾಹಂ ವಿಂಧ್ಯಪರ್ವತೇ ॥ ೨೦ ॥
ಹೇಮಕೂಟೇ ವಿರೂಪಾಕ್ಷಂ ಭೂರ್ಭುವಂ ಗಂಧಮಾದನೇ ।
ಲಿಂಗೇಶ್ವರೇ ಚ ವರದಂ ಲಂಕಾಯಾಂ ಚ ನರಾಂತಕಂ (೬೮) ॥ ೨೧ ॥
ಅಷ್ಟಷಷ್ಟಿರಿಯಂ ದೇವಿ ತವಾಖ್ಯಾತಾ ವಿಶೇಷತಃ ।
ಪಠತಾಂ ಶೃಣ್ವತಾಂ ನಾಽಪಿ ಸರ್ವಪಾತಕನಾಶಿನೀ ॥ ೨೨ ॥
ತಸ್ಮಾತ್ಸರ್ವಪ್ರಯತ್ನೇನ ಕೀರ್ತನೀಯಾ ವಿಚಕ್ಷಣೈಃ ।
ಕಾಲತ್ರಯೇಽಪಿ ಶುಚಿಭಿರ್ವಿಶೇಷಾಚ್ಛಿವ ದೀಕ್ಷಿತೈಃ ॥ ೨೩ ॥

---

ಯಲ್ಲಿ ತ್ರಿಲೋಚನ, ಅರ್ಕೇಶ್ವರದಲ್ಲಿ ದೀಪ್ತ, ನೇಪಾಲದಲ್ಲಿ ಪಶುಪಾಲಕ, ದುಷ್ಕರ್ಣದಲ್ಲಿ ಯಮಲಿಂಗ, ಕರವೀರಕದಲ್ಲಿ ಕಪಾಲೀ, ಜಾಗೇಶ್ವರದಲ್ಲಿ ತ್ರಿಶೂಲೀ, ಶ್ರೀಶೈಲದಲ್ಲಿ ತ್ರಿಪುರಾಂತಕ, ಅಯೋಧ್ಯೆಯಲ್ಲಿ ರೋಹಣ, ಪಾತಾಳದಲ್ಲಿ ಹಾಟಕೇಶ್ವರ, ಕಾರೋಹಣದಲ್ಲಿ ನಕುಲೀಶ, ದೇವಿಕೆಯಲ್ಲಿ ಉಮಾಪತಿ, ಭೈರವ ದಲ್ಲಿ ಭೈರವಾಕಾರ, ಪೂರ್ವಸಾಗರದಲ್ಲಿ ಅಮರ, ಸಪ್ತಗೋದಾವರದಲ್ಲಿ ಭೀಮ, ಮಲೇಶ್ವರದಲ್ಲಿ ಸ್ವಯಂಭೂ, ಕರ್ಣಿಕಾರದಲ್ಲಿ ಗಣಾಧ್ಯಕ್ಷ, ಕೈಲಾಸದಲ್ಲಿ ಗಣಾಧಿಪ, ಗಂಗಾದ್ವಾರದಲ್ಲಿ ಹಿಮಸ್ಥಾನ, ಜಲಲಿಂಗದಲ್ಲಿ ಜಲಪ್ರಿಯ, ವಾಡವಾಗ್ನಿಯಲ್ಲಿ ಅನಲ, ಬದರಿಕಾಶ್ರಮದಲ್ಲಿ ಭೀಮ, ಶ್ರೇಷ್ಠದಲ್ಲಿ ಕೋಟೇಶ್ವರ, ವಿಂಧ್ಯಪರ್ವತ ದಲ್ಲಿ ವಾರಾಹ, ಹೇಮಕೂಟದಲ್ಲಿ ವಿರೂಪಾಕ್ಷ, ಗಂಧಮಾದನದಲ್ಲಿ ಭೂರ್ಭುವ, ಲಿಂಗೇಶ್ವರದಲ್ಲಿ ವರದ, ಲಂಕೆಯಲ್ಲಿ ನಾರಾಂತಕ ಹೀಗೆ ಅರುವತ್ತೆಂಟು ಕ್ಷೇತ್ರ ಗಳಲ್ಲಿರುವ ಲಿಂಗಗಳ ನಾಮಗಳನ್ನು ಹೇಳಿರುವೆನು. ಇವುಗಳನ್ನು ಪಠಿಸುವವರ ಮತ್ತು ಕೇಳುವವರ ಸಕಲ ಪಾಪಗಳೂ ಪರಿಹಾರವಾಗುವುವು.

೨೩. ಆದುದರಿಂದ ಕುಶಲರಾದ ಮಾನವರೂ, ವಿಶೇಷವಾಗಿ ಶಿವ ದೀಕ್ಷಿತರೂ ತ್ರಿಕಾಲದಲ್ಲಿ ಶುದ್ಧರಾಗಿ ಈ ನಾಮಗಳನ್ನು ಹೇಳಬೇಕು.

ಲಿಖಿತಾಽಪಿ ವರಾರೋಹೇ ಯಸ್ಯೈಷಾ ತಿಷ್ಠತೇ ಗೃಹೇ ।
ನ ತತ್ರ ಜಾಯತೇ ದೋಷೋ ಭೂತಪ್ರೇತಸಮುದ್ಭವಃ ॥ ೨೪ ॥
ನ ವ್ಯಾಧೇರ್ನ ಚ ಸರ್ಪಾಣಾಂ ನ ಚೌರಾಣಾಂ ವರಾನನೇ ।
ನಾಽನ್ಯೇಷಾಂ ಭೂಭುಜಾದೀನಾಂ ಕದಾಚಿದಪಿ ಕುತ್ರಚಿತ್ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಷ್ಟಷಷ್ಟಿತೀರ್ಥಮಾಹಾತ್ಮ್ಯಕಥನಂ" ನಾಮ
ನವೋತ್ತರಶತತಮೋಽಧ್ಯಾಯಃ

---

೨೪. ಯಾವ ಮನೆಯಲ್ಲಿ ಬರೆಯಲ್ಪಟ್ಟ ಈ ನಾಮಗಳಿರುವುವೊ, ಅಲ್ಲಿ ಭೂತ ಪ್ರೇತಗಳಿಂದುಂಟಾದ ದೋಷವು ಸಂಭವಿಸುವುದಿಲ್ಲ.

೨೫. ರೋಗ, ಸರ್ಪ, ಕಳ್ಳರು ಮತ್ತು ಇತರ ರಾಜರೇ ಮೊದಲಾದವರ ಭಯವೂ ಉಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಷ್ಟಷಷ್ಟಿತೀರ್ಥಮಾಹಾತ್ಮ್ಯಕಥನ"ವೆಂಬ
ನೂರಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ದಶೋತ್ತರಶತತಮೋಽಧ್ಯಾಯಃ

### ಅಷ್ಟಸಪ್ತಿತೀರ್ಥಮಾಹಾತ್ಮ್ಯವರ್ಣನಂ

ಶ್ರೀ ದೇವ್ಯುವಾಚ :—

ನೈತೇಷ್ವಪಿ ಸುರಶ್ರೇಷ್ಠ ಸರ್ವೇಷು ಭುವಿ ಮಾನವಾಃ ।
ಅಪಿ ದೀರ್ಘಾಯುಷೋ ಭೂತ್ವಾ ಸ್ನಾತುಂ ಶಕ್ತಾಃ ಕಥಂಚನ ॥ ೧ ॥
ಏತೇಷಾಮಪಿ ಸಾರಾಣಿ ಮಮ ತೀರ್ಥಾನಿ ಕೀರ್ತಯ ।
ಯೇಷು ಸ್ನಾತೋ ನರಃ ಸಮ್ಯಕ್ಸರ್ವೇಷಾಂ ಲಭತೇ ಫಲಂ ॥ ೨ ॥

ಈಶ್ವರ ಉವಾಚ :—

ಏತೇಷಾಂ ಮಧ್ಯತೋ ದೇವಿ ತೀರ್ಥಾಷ್ಟಕಮನುತ್ತಮಂ ।
ಅಸ್ತಿ ಸ್ನಾತೈರ್ನರೈಸ್ತತ್ರ ಸರ್ವೇಷಾಂ ಲಭ್ಯತೇ ಫಲಂ ॥ ೩ ॥
ನೈಮಿಷಂ ಚೈವ ಕೇದಾರಂ ಪುಷ್ಕರಂ ಕೃಮಿಜಾಂಗಲಂ ।
ವಾರಾಣಸೀ ಕುರುಕ್ಷೇತ್ರಂ ಪ್ರಭಾಸಂ ಹಾಟಕೇಶ್ವರಂ ॥ ೪ ॥
ಅಷ್ಟಾಸ್ವೇತೇಷು ಯಃ ಸ್ನಾತಃ ಸಮ್ಯಕ್ಛ್ರದ್ಧಾಸಮನ್ವಿತಃ ।
ಸ ಸ್ನಾತಃ ಸರ್ವತೀರ್ಥೇಷು ಸತ್ಯಮೇತನ್ಮಯೋದಿತಂ ॥ ೫ ॥

---

### ಕನ್ನಡದ ಅನುವಾದ

#### ಅಷ್ಟಸಪ್ತಿತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ದೇವಿಯು ಹೇಳುತ್ತಾಳೆ:— ಸುರೋತ್ತಮ! ಭೂಮಿಯಲ್ಲಿ ಮಾನವರು ದೀರ್ಘಾಯುಷ್ಮಂತರಾಗಿದ್ದರೂ ಈ ಸಕಲ ತೀರ್ಥಗಳಲ್ಲಿ ಸ್ನಾನ ಮಾಡಲು ಶಕ್ತರಾಗುವುದಿಲ್ಲ.

೨. ಆದುದರಿಂದ ಯಾವ ತೀರ್ಥಗಳಲ್ಲಿ ಮಿಂದ ಮಾನವನು ಈ ಸಕಲ ತೀರ್ಥಗಳ ಫಲವನ್ನು ಪಡೆಯುವನೊ, ಅಂತಹ ತೀರ್ಥಗಳಲ್ಲಿ ಶ್ರೇಷ್ಠವಾದು ವನ್ನು ನನಗೆ ಹೇಳು.

೩. ಈಶ್ವರನು ಹೇಳುತ್ತಾನೆ:—ದೇವಿ! ಇವುಗಳಲ್ಲಿ ಉತ್ತಮವಾದ ಎಂಟು ತೀರ್ಥಗಳಿವೆ. ಅಲ್ಲಿ ಮಿಂದ ಮಾನವರು ಸಕಲ ತೀರ್ಥಗಳಲ್ಲಿ ಮಿಂದ ಫಲವನ್ನು ಪಡೆಯುವರು.

೪-೫. ನೈಮಿಷ, ಕೇದಾರ, ಪುಷ್ಕರ, ಕೃಮಿಜಾಂಗಲ, ವಾರಾಣಸೀ, ಕುರುಕ್ಷೇತ್ರ, ಪ್ರಭಾಸ, ಹಾಟಕೇಶ್ವರ ಈ ಎಂಟು ತೀರ್ಥಗಳಲ್ಲಿ ಶ್ರದ್ಧೆಯಿಂದ ಮಿಂದ ಮನುಷ್ಯನು ಸಮಸ್ತ ತೀರ್ಥಗಳಲ್ಲಿ ಸ್ನಾನ ಮಾಡಿದವನಂತಾಗುವನು. ನಾನು ಹೇಳಿದ ಈ ಮಾತು ನಿಜ.

ಶ್ರೀ ದೇವ್ಯುವಾಚ :—

ಕಲಿಕಾಲೇ ಮಹಾದೇವ ಭವಿಷ್ಯತಿ ಕಥಂಚನ ।
ಸ್ನಾನಂ ತಸ್ಮಾತ್ಸ್ಮಮ ಬ್ರೂಹಿ ಯತ್ಸಾರಂ ತೀರ್ಥಮೇವ ಹಿ ॥ ೬ ॥
ಅಷ್ಟಾನಾಮಪಿ ಚೈತೇಷಾಂ ದೇವದೇವ ತ್ರಿಲೋಚನ ।
ಯದ್ಯಹಂ ವಲ್ಲಭಾ ಭಕ್ತಾ ತಥಾ ಚಿತ್ತಾನುವರ್ತಿನೀ ॥ ೭ ॥

ಈಶ್ವರ ಉವಾಚ :—

ಅಷ್ಟಾನಾಮಪಿ ದೇವೇಶಿ ಕ್ಷೇತ್ರಾಣಾಮಸ್ತಿ ಚೋತ್ತಮಮ್ ।
ಏತೇಷಾಮಪಿ ತತ್ಕ್ಷೇತ್ರಂ ಹಾಟಕೇಶ್ವರಸಂಜ್ಞಿತಂ ॥ ೮ ॥
ಯತ್ರ ಸರ್ವಾಣಿ ಕ್ಷೇತ್ರಾಣಿ ಸಂಸ್ಥಿತಾನಿ ಮಮಾಜ್ಞಯಾ ।
ತಥಾಽನ್ಯಾನಿ ಚ ತೀರ್ಥಾನಿ ಕಲಿಕಾಲೇಽಪಿ ಸಂಸ್ಥಿತೇ ॥ ೯ ॥
ತಸ್ಮಾತ್ಸರ್ವಪ್ರಯತ್ನೇನ ತತ್ಕ್ಷೇತ್ರಂ ಸೇವ್ಯಮೇವ ಹಿ ।
ಮಾನುಷೈರ್ಮೋಕ್ಷಮಿಚ್ಛದ್ಭಿಃ ಸತ್ಯಮೇತನ್ಮಯೋದಿತಂ ॥ ೧೦ ॥

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಮಷ್ಟಷಷ್ಟಿಸಮುದ್ಭವಂ ।
ಸಮುಚ್ಚಯಂ ದ್ವಿಜಶ್ರೇಷ್ಠಾ ನಾಮದೇವಸಮನ್ವಿತಂ ॥ ೧೧ ॥
ಯಥಾ ದೇವೇನ ಚಾಖ್ಯಾತಂ ಪಾರ್ವತ್ಯಾ ಗುಹ್ಯಮುತ್ತಮಂ ।
ಪ್ರಸನ್ನೇನ ಮಯಾ ಕೃತ್ಸ್ನಂ ಯುಷ್ಮಾಕಂ ಸಮುದಾಹೃತಂ ॥ ೧೨ ॥

---

೬–೭. ಶ್ರೀದೇವಿಯು ಹೇಳುತ್ತಾಳೆ:—ಮಹಾದೇವ! ನಾನು ನಿನಗೆ ಪ್ರಿಯಳೂ, ಮನಸ್ಸನ್ನು ಅನುಸರಿಸುವವಳೂ ಆಗಿದ್ದರೆ ಕಲಿಕಾಲದಲ್ಲಿ ಸ್ನಾನವೇ ಸಾಧ್ಯವಾಗುವುದರಿಂದ ಈ ಎಂಟು ಕ್ಷೇತ್ರಗಳಲ್ಲಿ ಉತ್ತಮವಾದುದು ಯಾವುದೆಂಬುದನ್ನು ತಿಳಿಸು.

೮–೯. ಈಶ್ವರನು ಹೇಳುತ್ತಾನೆ:—ದೇವೇಶಿ! ಈ ಎಂಟು ಕ್ಷೇತ್ರಗಳಲ್ಲಿ ಹಾಟಕೇಶ್ವರ ಎಂಬ ಕ್ಷೇತ್ರವು ಉತ್ತಮವಾದುದು. ಅಲ್ಲಿ ಕಲಿಕಾಲದಲ್ಲಿಯೂ ನನ್ನ ಆಜ್ಞೆಯಿಂದ ಸಕಲ ಕ್ಷೇತ್ರಗಳೂ, ತೀರ್ಥಗಳೂ ನೆಲೆಸಿರುವುವು.

೧೦. ಆದುದರಿಂದ ಮೋಕ್ಷವನ್ನು ಬಯಸುವ ಮಾನವರು ಆ ಕ್ಷೇತ್ರವನ್ನು ಸಕಲ ಪ್ರಯತ್ನದಿಂದ ಸೇವಿಸಬೇಕು. ನಾನು ಹೇಳಿರುವ ಈ ಮಾತು ನಿಜವಾದುದು.

೧೧–೧೨. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ನಿಮಗೆ ನಾನು ಅರುವತ್ತೆಂಟು ಕ್ಷೇತ್ರಗಳ ನಾಮದೇವತೆಗಳಿಂದ ಕೂಡಿದ ಸಮುಚ್ಚಯವನ್ನೆಲ್ಲ ಹೇಳಿರುತ್ತೇನೆ. ಶಿವನು ಪಾರ್ವತಿಗೆ ಹೇಳಿದಂತೆಯೇ ಉತ್ತಮ ರಹಸ್ಯವನ್ನು ಪ್ರಸನ್ನನಾದ ನಾನು ನಿಮಗೆ ಹೇಳಿದ್ದೇನೆ.

ಯಶ್ಚೈತತ್ಪಠತೇ ಭಕ್ತ್ಯಾ ಹ್ಯಷ್ಟಷಷ್ಟಿಸಮುದ್ಭವಂ ।
ಸ್ನಾನಜಂ ಲಭತೇ ಪುಣ್ಯಂ ಶೃಣ್ವಾನಃ ಶ್ರದ್ಧಯಾನ್ವಿತಃ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಷ್ಟಷಷ್ಟಿತೀರ್ಥಮಾಹಾತ್ಮ್ಯವರ್ಣನಂ"
ನಾಮ ದಶೋತ್ತರಶತತಮೋಽಧ್ಯಾಯಃ

---

೧೩. ಈ ಅರುವತ್ತೆಂಟು ಕ್ಷೇತ್ರಗಳ ಮಾಹಾತ್ಮ್ಯವನ್ನು ಭಕ್ತಿಯಿಂದ ಪಠಿಸುವವನೂ, ಕೇಳುವವನೂ ಸ್ನಾನಮಾಡಿದ ಪುಣ್ಯವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಷ್ಟಷಷ್ಟಿತೀರ್ಥಮಾಹಾತ್ಮ್ಯವರ್ಣನ"ವೆಂಬ
ನೂರಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋತ್ತರಶತತಮೋಽಧ್ಯಾಯಃ

## ಆನರ್ತಾಧಿಪತಿಕೃತಶೋಕಕಥನಂ

ಋಷಯ ಊಚುಃ:—

ಶಿವಕ್ಷೇತ್ರಾಣಿ ಯೈರ್ವಿಪ್ರೈಃ ಸಮಾನೀತಾನಿ ತತ್ರ ಚ ।
ತೇಷಾಂ ಸರ್ವಾಣಿ ಗೋತ್ರಾಣಿ ವದ ಸೂತಜ ವಿಸ್ತರಾತ್ ॥ ೧ ॥
ಕಸ್ಯ ಗೋತ್ರೋದ್ಭವೈರ್ವಿಪ್ರೈಃ ಕಿಂ ಕ್ಷೇತ್ರಂ ಸಮುಪಾರ್ಜಿತಂ ।
ಶಂಕರಸ್ಯ ಪ್ರಸಾದೇನ ತಸ್ಮಿನ್ ಕಾಲ ಉಪಸ್ಥಿತೇ ॥ ೨ ॥
ಕಿಯಂತ್ಯಪಿ ಚ ಗೋತ್ರಾಣಿ ಚಮತ್ಕಾರಪುರೋತ್ತಮೇ ।
ಸ್ಥಾಪಿತಾನಿ ಸುಭಕ್ತೇನ ತೇನಾನರ್ತೇನ ಸೂತಜ ॥ ೩ ॥
ತ್ವಯಾ ಪ್ರೋಕ್ತಂ ಪುರಾ ದತ್ತಂ ಪುರಂ ಕೃತ್ವಾ ದ್ವಿಜನ್ಮನಾಂ ।
ನ ಚ ತೇಷಾಂ ಕೃತಾ ಸಂಖ್ಯಾ ತಸ್ಮಾತ್ತಾಂ ಪರಿಕೀರ್ತಯ ॥ ೪ ॥

ಸೂತ ಉವಾಚ:—

ಉಪದೇಶಃ ಪುರಾ ದತ್ತೋ ದ್ವಿಸಪ್ತತಿಮುನೀಶ್ವರೈಃ ।
ಆನರ್ತಾಧಿಪತಿಃ ಪೂರ್ವಂ ಕುಷ್ಠರೋಗಪ್ರಪೀಡಿತಃ ।
ಶಂಖತೀರ್ಥಂ ಸಮಾಗತ್ಯ ಸ್ನಾನಂ ಚಕ್ರೇ ತ್ವರಾನ್ವಿತಃ ॥ ೫ ॥

---

## ಕನ್ನಡದ ಅನುವಾದ

### ಆನರ್ತಾಧಿಪತಿಕೃತಶೋಕಕಥನ

೧. ಋಷಿಗಳು ಹೇಳುತ್ತಾರೆ:—ಸೂತ! ಶಿವಕ್ಷೇತ್ರಗಳನ್ನು ತಂದ ಋಷಿಗಳ ಗೋತ್ರಗಳನ್ನು ವಿಸ್ತಾರವಾಗಿ ಹೇಳು.

೨. ಆ ಕಾಲದಲ್ಲಿ ಶಂಕರನ ಅನುಗ್ರಹದಿಂದ ಯಾವ ಗೋತ್ರದಲ್ಲಿ ಜನಿಸಿದ ಬ್ರಾಹ್ಮಣರಿಂದ ಯಾವ ಕ್ಷೇತ್ರವು ಸಂಪಾದಿಸಲ್ಪಟ್ಟಿತು.

೩. ಸೂತ! ಚಮತ್ಕಾರಪುರದಲ್ಲಿ ಭಕ್ತನಾದ ಆನರ್ತನು ಎಷ್ಟು ಗೋತ್ರಗಳನ್ನು ಸ್ಥಾಪಿಸಿರುವನು.

೪. ನೀನು ಹಿಂದೆ ಆ ನೃಪತಿಯು ಪಟ್ಟಣವನ್ನು ನಿರ್ಮಿಸಿ ಬ್ರಾಹ್ಮಣರಿಗೆ ದಾನಮಾಡಿರುವನೆಂದು ಹೇಳಿರುವೆ. ಅವು ಎಷ್ಟು ಎಂದು ಹೇಳಲಿಲ್ಲ. ಆದುದರಿಂದ ಆ ಸಂಖ್ಯೆಯನ್ನು ಹೇಳು.

೫. ಸೂತನು ಹೇಳುತ್ತಾನೆ:—ಹಿಂದೆ ಕುಷ್ಠರೋಗಪೀಡಿತನಾದ ಆನರ್ತರಾಜನು ಎಪ್ಪತ್ತೆರಡು ಮಂದಿ ಮುನೀಶ್ವರರಿಂದ ಉಪದೇಶವನ್ನು ಪಡೆದು ಇಲ್ಲಿಯ ಶಂಖತೀರ್ಥಕ್ಕೆ ಬಂದು ತ್ವರೆಯಿಂದ ಮಿಂದನು.

ತೇನ ನಾಶಂಗತಃ ಕುಷ್ಠೋ ಭೂಪತೇಸ್ತಸ್ಯ ತತ್ಕ್ಷಣಾತ್ ।
ತಸ್ಯ ತೀರ್ಥಸ್ಯ ಮಾಹಾತ್ಮ್ಯಾನ್ನಿರ್ವಿಣ್ಣಸ್ಯ ತನುಂಪ್ರತಿ ॥ ೬ ॥
ತತಃ ಸ ನೀರುಜೋ ಭೂತ್ವಾ ತೋಷೇಣಮಹತಾನ್ವಿತಃ ।
ತಾನುವಾಚ ಮುನಿಶ್ರೇಷ್ಠಾನ್ ಪ್ರಣಿಪತ್ಯ ಮುಹುರ್ಮುಹುಃ ॥ ೭ ॥
ಸುವರ್ಣಂ ವಾ ಗಜಾಶ್ವಂ ವಾ ರಾಜ್ಯಂ ಸಕಲಮೇವ ವಾ ।
ಭವದ್ಭ್ಯಃ ಸಂಪ್ರದಾಸ್ಯಾಮಿ ತಸ್ಮಾದ್ಬ್ರೂತ ದ್ವಿಜೋತ್ತಮಾಃ ॥ ೮ ॥
ಯದ್ಯಸ್ಯ ರೋಚತೇ ಯಾವನ್ಮಾತ್ರಮನ್ಯದಪಿ ದ್ವಿಜಾಃ ।
ಪ್ರಸಾದಃ ಕ್ರಿಯತಾಂ ಮಹ್ಯಂ ದೀನಸ್ಯ ಪ್ರಣತಸ್ಯ ಚ ॥ ೯ ॥

ಬ್ರಾಹ್ಮಣಾ ಊಚುಃ:—

ನಿಷ್ಪರಿಗ್ರಹಧರ್ಮಾಣೋ ವಾನಪ್ರಸ್ಥಾ ವಯಂ ದ್ವಿಜಾಃ ।
ಸದ್ಯಃ ಪ್ರಕ್ಷಾಲಕಾಃ ಕಿಂ ನೋ ರಾಜ್ಯೇನ ವಿಭವೇನ ಚ ॥ ೧೦ ॥

ರಾಜೋವಾಚ:—

ಉಪಕಾರಂ ಸಮಾಸಾದ್ಯ ಯಃ ಕರೋತಿ ನ ಪಾಪಕೃತ್ ।
ಉಪಕಾರಂ ಪುನಸ್ತಸ್ಯ ಸ ಕೃತಘ್ನ ಉದಾಹೃತಃ ॥ ೧೧ ॥
ಬ್ರಹ್ಮಘ್ನೇ ಚ ಸುರಾಪೇ ಚ ಚೌರೇ ಭಗ್ನವ್ರತೇ ಶಠೇ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥ ೧೨ ॥

---

೬. ಆ ತೀರ್ಥದ ಮಾಹಾತ್ಮ್ಯದಿಂದ ತನ್ನ ಶರೀರದ ವಿಷಯದಲ್ಲಿ ವೈರಾಗ್ಯಗೊಂಡ ಆ ರಾಜನ ಕುಷ್ಠರೋಗವು ಕೂಡಲೆ ನಾಶವಾಯಿತು.

೭. ಅದರಿಂದ ಅತ್ಯಂತ ಸಂತೋಷಗೊಂಡ ರಾಜನು ಆ ಮುನಿವರ್ಯರನ್ನು ನಮಸ್ಕರಿಸಿ ಇಂತೆಂದನು.

೮-೯. ದ್ವಿಜೋತ್ತಮರೆ! ಸುವರ್ಣವನ್ನಾಗಲಿ, ಆನೆಯನ್ನಾಗಲಿ, ಕುದುರೆಯನ್ನಾಗಲಿ, ಈ ನನ್ನ ಸಕಲ ರಾಜ್ಯವನ್ನಾಗಲಿ ಯಾರಿಗೆ ಯಾವುದು ಇಷ್ಟವೊ ಅದನ್ನಾಗಲಿ ಕೊಡುವೆನು. ನಮ್ರನೂ, ದೀನನೂ ಆದ ನನಗೆ ಅನುಗ್ರಹವನ್ನು ಮಾಡಿರಿ.

೧೦. ಬ್ರಾಹ್ಮಣರು ಹೇಳುತ್ತಾರೆ:— ದಾನವನ್ನು ಪರಿಗ್ರಹಿಸದವರೂ, ವಾನಪ್ರಸ್ಥರೂ, ಲಭಿಸಿದ ದ್ರವ್ಯವನ್ನು ಕೂಡಲೆ ದಾನ ಮಾಡುವವರೂ ಆದ ನಮಗೆ ರಾಜ್ಯದಿಂದಲೂ, ಐಶ್ವರ್ಯದಿಂದಲೂ ಏನು ಪ್ರಯೋಜನ?

೧೧. ರಾಜನು ಹೇಳುತ್ತಾನೆ:—ಉಪಕಾರವನ್ನು ಪಡೆದು ಪ್ರತ್ಯುಪಕಾರ ಮಾಡದ ಪಾಪಿಯು ಕೃತಘ್ನನೆನ್ನಿಸಿಕೊಳ್ಳುವನು.

೧೨. ಬ್ರಹ್ಮಘ್ನನೂ, ಮದ್ಯಪಾನಮಾಡಿದವನೂ, ಕಳ್ಳನೂ, ಭ್ರಷ್ಟವ್ರತನೂ, ಮೂರ್ಖನೂ ಆದವನಿಗೆ ಪ್ರಾಯಶ್ಚಿತ್ತವಿರುವುದು. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ.

ತಸ್ಮಾತ್ಕೃತ್ವಾ ಪ್ರಸಾದಂ ಮೇ ಕಿಂಚಿದ್ಬ್ರೂತ ದ್ವಿಜೋತ್ತಮಾಃ ।
ಯೇನಾನೃಣ್ಯಂ ಪ್ರಗಚ್ಛಾಮಿ ಯದ್ಯಪಿ ಸ್ಯಾತ್ಸುಜೀವಿತಂ ॥ ೧೩ ॥
ಮುನಯ ಊಚುಃ:—
ಸತ್ಯಮೇತನ್ಮಹಾಭಾಗ ಕೃತಘ್ನೇ ನಾಸ್ತಿ ನಿಷ್ಕೃತಿಃ ।
ಪರಂ ತತ್ರ ಭವೇದ್ದೋಷೋ ಯತ್ರ ದಾತಾತು ಸಸ್ಪೃಹಃ ॥ ೧೪ ॥
ನಿಃಸ್ಪೃಹೋ ಯತ್ರ ರಾಜೇಂದ್ರ ಹ್ಯುಪಕಾರಪರೋ ಭವೇತ್ ।
ನ ತತ್ರ ಜಾಯತೇ ದೋಷಃ ಸ್ವಲ್ಪೋಽಪಿ ಚ ಕಥಂಚನ ॥ ೧೫ ॥
ತಸ್ಮಾತ್ತ್ವಂ ಗಚ್ಛ ರಾಜ್ಯಂ ಸ್ವಂ ಸ್ವಧರ್ಮೇಣ ಪ್ರಪಾಲಯ ।
ಇಹಲೋಕೇ ಪರೇ ಚೈವ ಯೇನ ಸೌಖ್ಯಂ ಪ್ರಜಾಯತೇ ॥ ೧೬ ॥
ಏವಂ ಸ ಭೂಮಿಪೋ ವಿಪ್ರೈರ್ನಿಷಿದ್ಧಃ ಸ ಸಹಸ್ರಧಾ ।
ಕೃಚ್ಛ್ರೇಣ ತಾನ್ ಪ್ರಣಮ್ಯೋಚ್ಚೈರ್ಜಗಾಮ ಸ್ವಗೃಹಂ ತತಃ ॥ ೧೭ ॥
ತತ್ರ ಗತ್ವಾ ಪ್ರಹೃಷ್ಟಾತ್ಮಾ ಕೃತ್ವಾ ರಮ್ಯಂ ಮಹೇಶ್ವರಂ ।
ಗೀತನೃತ್ಯಸುವಾದ್ಯೈಶ್ಚ ರಾತ್ರಿಜಾಗರಣಾದಿಭಿಃ ।
ಚಕಾರ ಪೂರ್ವವದ್ರಾಜ್ಯಂ ಸಮಂತಾದ್ಧತಕಂಟಕಂ ॥ ೧೮ ॥

---

೧೩. ದ್ವಿಜವರ್ಯರೆ! ಆದುದರಿಂದ ನನಗೆ ಅನುಗ್ರಹಮಾಡಿ ಯಾವುದಾದರೊಂದು ಕಾರ್ಯವನ್ನು ಹೇಳಿರಿ. ಅದರಿಂದ ನಾನು ಋಣಮುಕ್ತನಾಗುವೆನು. ನನ್ನ ಜೀವನವು ಸಾರ್ಥಕವಾಗಲಿ.

೧೪. ಮುನಿಗಳು ಹೇಳುತ್ತಾರೆ:—ಮಹಾಭಾಗ್ಯಶಾಲಿಯೆ! ಇದು ನಿಜ. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ. ಆದರೆ ದಾನ ಮಾಡುವವನು ಆಶಾಸಹಿತನಾದರೆ ಉಪಕಾರ ಮಾಡಿಸಿಕೊಂಡವನು ದೋಷಿಯಾಗುವನು.

೧೫. ಮಹಾರಾಜ! ಉಪಕಾರ ಮಾಡುವವನು ಆಶೆಯಿಲ್ಲದವನಾದರೆ ಅವನು ಸ್ವಲ್ಪವೂ ದೋಷವುಳ್ಳವನಾಗುವುದಿಲ್ಲ.

೧೬. ಆದುದರಿಂದ ನೀನು ಹೋಗು. ರಾಜ್ಯವನ್ನು ಸ್ವಧರ್ಮದಿಂದ ಪಾಲಿಸು. ಅದರಿಂದ ಇಹಪರಲೋಕಗಳಲ್ಲಿ ಸೌಖ್ಯವುಂಟಾಗುವುದು.

೧೭. ಹೀಗೆ ಆ ದೊರೆಯು ಬ್ರಾಹ್ಮಣರಿಂದ ಸಾವಿರಾರುಸಾರಿ ತಡೆಯಲ್ಪಟ್ಟವನಾಗಿ ಕಷ್ಟದಿಂದ ಅವರನ್ನು ವಂದಿಸಿ ತನ್ನ ಮನೆಗೆ ಹೋದನು.

೧೮. ಅಲ್ಲಿಗೆ ಹೋಗಿ ಸಂತುಷ್ಟಾಂತಃಕರಣವುಳ್ಳವನಾಗಿ ಮನೋಹರನಾದ ಮಹೇಶ್ವರನನ್ನು ಪ್ರತಿಷ್ಠೆಮಾಡಿ ಗೀತ, ನೃತ್ಯ, ವಾದ್ಯ, ರಾತ್ರಿಜಾಗರಣ ಮೊದಲಾದುವುಗಳಿಂದ ಮೊದಲಿನಂತೆ ಶತ್ರುಗಳಿಲ್ಲದ ತನ್ನ ರಾಜ್ಯವನ್ನು ಆಳಿದನು.

ಚಿಂತಯಾನೋ ದಿವಾನಕ್ತಂ ಬ್ರಾಹ್ಮಣಾನ್ ಪ್ರತಿ ತಾನ್ ಸದಾ ।
ಕಥಂ ತೇಷಾಂ ದ್ವಿಜೇಂದ್ರಾಣಾಮುಪಕಾರೋ ಭವಿಷ್ಯತಿ ।
ಮದೀಯೋ ಮಮ ಯೈರ್ದತ್ತಂ ಗಾತ್ರನೇತತ್ಸುಸರ್ನವಂ ॥ ೧೯ ॥
ತೇಽಪಿ ಸರ್ವೇ ಮುನಿಶ್ರೇಷ್ಠಾಃ ಖೇಚರತ್ವಸಮನ್ವಿತಾಃ ।
ತಪಃಶಕ್ತ್ಯಾ ಸದಾ ಯಾಂತಿ ನಾನಾತೀರ್ಥೇಷು ಭಕ್ತಿತಃ ॥ ೨೦ ॥
ತೇಷು ಸ್ನಾನಂ ಜಪಂ ಕೃತ್ವಾ ತಥೈವ ಪಿತೃತರ್ಪಣಂ ।
ಪ್ರಾಣಯಾತ್ರಾಂ ಪುನಶ್ಚಕ್ರುಸ್ತತ್ರಾಗತ್ಯ ಸ್ವ ಆಶ್ರಮೇ ॥ ೨೧ ॥
ಅನ್ಯೇ ತತ್ರೈವ ಕುರ್ವಂತಿ ನಿತ್ಯಕೃತ್ಯಾನಿ ಯೇ ದ್ವಿಜಾಃ ।
ತಥಾಽನ್ಯೇ ದೂರಮಾಸಾದ್ಯ ತೀರ್ಥಂ ದೃಷ್ಟ್ವಾ ಮನೋಹರಂ ॥ ೨೨ ॥
ಉಷಿತ್ವಾ ರಜನೀಂ ತತ್ರ ದ್ವಿರಾತ್ರಂ ವಾ ಪುನರ್ಗೃಹಂ ।
ಸಮಾಗಚ್ಛಂತಿ ಚಾನ್ಯೇತು ತ್ರಿರಾತ್ರೇಣ ಸಮಾಯಯುಃ ॥ ೨೩ ॥
ವಾರಾಣಸ್ಯಾಂ ಪ್ರಯಾಗೇ ವಾ ಪುಷ್ಕರೇ ವಾಽಥ ನೈಮಿಷೇ ।
ಪ್ರಭಾಸೇ ವಾಽಥ ಕೇದಾರೇ ಹ್ಯನ್ಯಸ್ಮಿನ್ನಹಿವಾಂಛ್ಯತೇ ॥ ೨೪ ॥
ಕದಾಚಿದಥ ತೇ ಸರ್ವೇ ಕಾರ್ತಿಕ್ಯಾಂ ಪುಷ್ಕರತ್ರಯೇ ।
ಗತಾ ವಿನಿಶ್ಚಯಂ ಕೃತ್ವಾ ಸ್ನಾನಾರ್ಥಂ ದ್ವಿಜಸತ್ತಮಾಃ ॥ ೨೫ ॥

---

೧೯. ಅಲ್ಲಿ ಅವನು ಹಗಲು ರಾತ್ರಿ ನನಗೆ ಹೊಸಶರೀರವನ್ನಿತ್ತ ಆ ಬ್ರಾಹ್ಮಣರಿಗೆ ನನ್ನಿಂದ ಹೇಗೆ ಉಪಕಾರವಾದೀತು? ಎಂದು ಚಿಂತಿಸುತ್ತಿದ್ದನು.

೨೦. ಆ ಮುನಿಗಳೆಲ್ಲ ತಪಶ್ಯಕ್ತಿಯಿಂದ ಆಕಾಶದಲ್ಲಿ ಸಂಚರಿಸುತ್ತ ಭಕ್ತಿಯಿಂದ ನಾನಾ ತೀರ್ಥಗಳಿಗೆ ಹೋಗುತ್ತಾರೆ.

೨೧. ಅವುಗಳಲ್ಲಿ, ಸ್ನಾನ, ಜಪ, ಪಿತೃತರ್ಪಣಗಳನ್ನು ಮಾಡಿ ಅದೇ ಆಶ್ರಮಕ್ಕೆ ಬಂದು ಜೀವನ ಯಾತ್ರೆಯನ್ನು ನೆರವೇರಿಸುತ್ತಿದ್ದರು.

೨೨–೨೩. ಇತರರು ಅಲ್ಲಿಯೇ ನಿತ್ಯಕೃತ್ಯಗಳನ್ನು ನೆರವೇರಿಸುತ್ತಿದ್ದರು. ಮತ್ತೆ ಕೆಲವರು ದೂರ ಹೋಗಿ ಮನೋಹರವಾದ ತೀರ್ಥವನ್ನು ಕಂಡು ಒಂದು ರಾತ್ರಿ ಅಥವಾ ಎರಡು ದಿನ ಅಲ್ಲಿಯೇ ವಾಸಿಸಿ ಮರಳಿ ತಮ್ಮ ಮನೆಗೆ ಬರುತ್ತಿದ್ದರು. ಇನ್ನು ಕೆಲವರು ಮೂರು ರಾತ್ರಿ ಅಲ್ಲಿ ವಾಸಿಸಿ ಹಿಂದಿರುಗುತ್ತಿದ್ದರು.

೨೪. ಅವರು ವಾರಾಣಸೀ, ಪ್ರಯಾಗ, ಪುಷ್ಕರ, ನೈಮಿಷ, ಪ್ರಭಾಸ, ಕೇದಾರ ಇವುಗಳಲ್ಲಿ ವಾಸಿಸುತ್ತಿದ್ದರು. ಬೇರೆ ಕಡೆ ವಾಸಿಸಲು ಅಪೇಕ್ಷಿಸುತ್ತಿರಲಿಲ್ಲ.

೨೫. ದ್ವಿಜವರ್ಯರೆ! ಒಂದಾನೊಂದುವೇಳೆ ಅವರೆಲ್ಲ ಕಾರ್ತಿಕ ಪೂರ್ಣಿಮಾ ದಿನ ಸ್ನಾನಮಾಡಲು ನಿಶ್ಚಯಿಸಿ ಪುಷ್ಕರಕ್ಷೇತ್ರಕ್ಕೆ ಹೋದರು.

ಪಂಚರಾತ್ರಂ ವಸಿಷ್ಯಾಮೋ ವಯಂ ತತ್ರ ಸಮಾಹಿತಾಃ ।
ತಸ್ಮಾದ್ವಹ್ನಿಷು ದಾರೇಷು ರಕ್ಷಾ ಕಾರ್ಯಾ ಸ್ವಶಕ್ತಿತಃ ॥ ೨೬ ॥
ಏವಂ ತೇ ಸಮಯಂ ಕೃತ್ವಾ ಗತಾ ಯಾವದ್ದ್ವಿಜೋತ್ತಮಾಃ ।
ತಾವದ್ಭೂಪತಿನಾ ಜ್ಞಾತಾ ಸ ಕಶ್ಚಿತ್ತತ್ರ ತಿಷ್ಠತಿ ॥ ೨೭ ॥
ತೇಷಾಂ ಮಧ್ಯೇ ಮುನೀಂದ್ರಾಣಾಂ ಸುತೀರ್ಥಾಶ್ರಮವಾಸಿನಾಂ ।
ದಮಯಂತೀತಿ ವಿಖ್ಯಾತಾ ಚಂದ್ರಬಿಂಬಸಮಾನನಾ ॥ ೨೮ ॥
ತಾಮುವಾಚ ರಹಸ್ಯೇವಂ ವ್ರಜತ್ವಂ ಚಾರುಹಾಸಿನಿ ।
ಹಾಟಕೇಶ್ವರಜೇ ಕ್ಷೇತ್ರೇ ಮಮಾದೇಶೋಽಧುನಾ ಧ್ರುವಂ ॥ ೨೯ ॥
ತತ್ರ ತಿಷ್ಠಂತಿ ಯಾಃ ಪತ್ನ್ಯೋ ಮುನೀನಾಂ ಭಾವಿತಾತ್ಮನಾಂ ।
ಭೂಷಣಾನಿ ವಿಚಿತ್ರಾಣಿ ತಾಸಾಂ ಯಚ್ಛ ಯಥೇಚ್ಛಯಾ ॥ ೩೦ ॥
ನ ತಾಸಾಂ ಪತಯೋಽಸ್ಮಾಕಂ ಪ್ರಕುರ್ವಂತಿ ಪ್ರತಿಗ್ರಹಂ ।
ಕಥಂಚಿದಪಿ ಸುಶ್ರೋಣಿ ಲೋಭ್ಯಮಾನಾಽಪಿ ಭೂರಿಶಃ ॥ ೩೧ ॥
ಸ್ತ್ರೀಣಾಂ ಭೂಷಣಜಾ ಚಿಂತಾ ಸದಾ ಚೈವಾಧಿಕಾ ಭವೇತ್ ।
ಲೌಲ್ಯಂ ಚ ಕೌತುಕಂ ಚೈವ ಸದಾಭೂಷಣಜಂ ಭವೇತ್ ॥ ೩೨ ॥
ಅಪಿ ಮೃನ್ಮಯಕಂ ಕಿಂಚಿತ್ಕಾಷ್ಠಸೂತ್ರಮಯಂ ಚ ವಾ ।
ಜತು ಕಾಚಮಯಂ ವಾಽಪಿ ನಾರೀ ಧತ್ತೇ ವಿಭೂಷಣಂ ॥ ೩೩ ॥

---

೨೬—೨೯. ನಾವು ಇಲ್ಲಿ ಐದು ರಾತ್ರಿ ವಾಸಿಸೋಣ. ಆದುದರಿಂದ ಅಗ್ನಿ, ಪತ್ನಿಯರು, ಇವರನ್ನು ಶಕ್ತ್ಯನುಸಾರ ಕಾಪಾಡಬೇಕು, ಎಂದು ನಿಶ್ಚಯಿಸಿ ಆ ಬ್ರಾಹ್ಮಣರು ಹೊರಟು ಹೋದರು. ಆಗ ದೊರೆಯು ತೀರ್ಥವಾಸಿಗಳಾದ ಆ ಬ್ರಾಹ್ಮಣರಲ್ಲಿ ಯಾರೂ ಮನೆಯಲ್ಲಿಲ್ಲವೆಂಬುದನ್ನರಿತು ಸುಂದರಿಯಾದ ದಮಯಂತಿಯೆಂಬುವಳನ್ನು ಕುರಿತು ಗುಟ್ಟಿನಲ್ಲಿ ಇಂತೆಂದನು. "ಸುಂದರಿಯೆ! ನೀನು ನನ್ನ ಅಪ್ಪಣೆಯಂತೆ ಹಾಟಕೇಶ್ವರ ಕ್ಷೇತ್ರಕ್ಕೆ ಹೋಗು.

೩೦. ಅಲ್ಲಿ ಜ್ಞಾನಿಗಳಾದ ಮುನಿಗಳ ಪತ್ನಿಯರಿಗೆ ಯಥೇಚ್ಛವಾಗಿ ನಾನಾ ವಿಧಗಳಾದ ಒಡವೆಗಳನ್ನು ಕೊಡು.

೩೧. ಸುಂದರಾಂಗಿಯೆ! ನಾನು ಅನೇಕ ವಿಧವಾಗಿ ಹೇಗೋ ಆಶೆಗೊಳಿಸಿದರೂ ಅವರ ಗಂಡಂದಿರು ಪ್ರತಿಗ್ರಹಮಾಡುವುದಿಲ್ಲ.

೩೨. ಹೆಂಗಸರಿಗೆ ಯಾವಾಗಲೂ ಒಡವೆಯ ಚಿಂತೆಯು ಅಧಿಕವಾಗಿರುವುದು. ಅವರಿಗೆ ಭೂಷಣದ ವಿಷಯದಲ್ಲಿ ಅತ್ಯಾಶೆಯೂ, ಕುತೂಹಲವೂ ಉಂಟಾಗುವುದು.

೩೩. ಸ್ತ್ರೀಯು ಮಣ್ಣು, ಕಟ್ಟಿಗೆ, ನೂಲು, ಅರಗು, ಗಾಜು ಇವುಗಳಲ್ಲಿ ಯಾವುದರಿಂದಾದರೂ ಮಾಡಿದ ಒಡವೆಯನ್ನು ಧರಿಸುವಳು.

ಏಷ ಏವ ಭವೇತ್ತ್ರೇಷಾಮುಪಕಾರಸ್ಯ ಸಂಭವಃ ।
ಉಪಾಯಃ ಪದ್ಮಪತ್ರಾಕ್ಷಿ ನ ಚಾಽನ್ಯೋಽಸ್ತಿ ಕಥಂಚನ ॥ ೩೪ ॥
ಸಾ ತಥೇತಿ ಪ್ರತಿಜ್ಞಾಯ ವಿಚಿತ್ರಾಭರಣಾನಿ ಚ ।
ಗೃಹೀತ್ವಾ ಹರ್ಷಸಂಯುಕ್ತಾ ತತಸ್ತತ್ಕ್ಷೇತ್ರಮಾಯಯೌ ॥ ೩೫ ॥
ಮಣಿಮುಕ್ತಾಮಯಾನ್ಯೇವ ಕುಂಡಲಾನಿ ಶುಭಾನಿ ಚ ।
ತಥಾ ಚಂದ್ರೋಜ್ಜ್ವಲಾನ್ ಹಾರಾನ್ ನೂಪುರಾಣಿ ಬೃಹಂತಿ ಚ ॥ ೩೬ ॥
ಇಂದ್ರನೀಲ ಮಹಾನೀಲ ವೈಡೂರ್ಯ ಖಚಿತಾನಿ ಚ ।
ಪದ್ಮರಾಗೈಸ್ತಥಾ ವಜ್ರೈರ್ಮಾಣಿಕ್ಯೈಶ್ಚ ಮನೋರಮೈಃ ॥ ೩೭ ॥
ಕೇಯೂರೈಃ ಕಂಕಣೈರ್ದಿವ್ಯೈಃ ಶಕ್ರಚಾಪನಿಭೈಃ ಶುಭೈಃ ।
ಹೇಮಸೂತ್ರೈಶ್ಚ ಜಾತ್ಯೈಶ್ಚ ಮೇಖಲಾಭಿಸ್ತಥೈವ ಚ ॥ ೩೮ ॥
ಅಥ ಸಾ ಬೋಧನೇ ವಿಷ್ಣೋಃ ಸಂಪ್ರಾಪ್ತೇ ದಿವಸೇ ಶುಭೇ ।
ಉಪವಾಸಪರಾ ಸ್ನಾತಾ ಏಕಸ್ಮಿನ್ ಸಲಿಲಾಶಯೇ ॥ ೩೯ ॥
ತೀರದೇಶೇ ನಿವೇಶ್ಯೈವ ಮಹಾಭೂಷಣಪರ್ವತಂ ।
ಯಸ್ಯ ಪ್ರಭಾಭಿರುಗ್ರಾಭಿರ್ವ್ಯಾಪ್ತಂ ಗಗನಮಂಡಲಂ ॥ ೪೦ ॥
ಏತಸ್ಮಿನ್ನಂತರೇ ಪ್ರಾಪ್ತಾಸ್ತಾಪಸ್ಯಃ ಕೌತುಕಾನ್ವಿತಾಃ ।
ಕೀದೃಶಾ ರಾಜಪತ್ನೀ ಸಾ ಕಿಂ ರೂಪಾ ಕಿಂ ವಿಭೂಷಣಾ ॥ ೪೧ ॥

---

೩೪. ಪದ್ಮಾಕ್ಷಿ! ಇದೇ ಆ ಬ್ರಾಹ್ಮಣರಿಗೆ ಉಪಕಾರ ಮಾಡುವುದಕ್ಕೆ ಉಪಾಯವು, ಬೇರೆ ಯಾವ ರೀತಿಯಾಗಿಯೂ ದಾರಿಯಿಲ್ಲ."

೩೫–೩೮. ಆ ದಮಯಂತಿಯು ಹಾಗೆಯೇ ಆಗಲೆಂದು ಒಪ್ಪಿ ಸಂತೋಷದಿಂದ ರತ್ನ ಮುತ್ತುಗಳಿಂದ ಮಾಡಿದ ಕುಂಡಲ, ಚಂದ್ರನಂತೆ ವಿರಾಜಿಸುವ ಹಾರ, ಇಂದ್ರನೀಲ, ಮಹಾನೀಲ, ವೈಡೂರ್ಯಗಳನ್ನು ಕೆತ್ತಿರುವ ದೊಡ್ಡ ಕಾಲ್ಗೆಜ್ಜೆ, ಪದ್ಮರಾಗ, ವಜ್ರ, ಮಾಣಿಕ್ಯ, ಕೇಯೂರ, ಕಾಮನಬಿಲ್ಲಿನಂತಿರುವ ದಿವ್ಯಕಂಕಣ, ಪುತ್ಥಳಿ ಚಿನ್ನದ ಸೂತ್ರ, ಡಾಬು ಮೊದಲಾದ ಬಗೆಬಗೆಯ ಒಡವೆಗಳನ್ನು ತೆಗೆದುಕೊಂಡು ಆ ಕ್ಷೇತ್ರಕ್ಕೆ ಬಂದಳು.

೩೯–೪೦. ಅವಳು ಉತ್ಥಾನದ್ವಾದಶೀ ದಿನ ಉಪವಾಸ ಮಾಡಿ ಆ ಒಡವೆಗಳ ರಾಶಿಯನ್ನು ದಡದಲ್ಲಿರಿಸಿ ಒಂದು ಸರೋವರದಲ್ಲಿ ಮಿಂದಳು. ಆ ಒಡವೆಗಳ ಕಾಂತಿಯು ಆಕಾಶಮಂಡಲವನ್ನು ವ್ಯಾಪಿಸಿತು.

೪೧. ಈ ಸಮಯದಲ್ಲಿ ಮುನಿಪತ್ನಿಯರು ಆ ರಾಜಪತ್ನಿಯು ಎಂತಹವಳು, ಹೇಗಿರುವಳು, ಎಂತಹ ಒಡವೆಯನ್ನು ಧರಿಸಿರುವಳು ಎಂದು ನೋಡಲು ಕುತೂಹಲದಿಂದ ಅಲ್ಲಿಗೆ ಬಂದರು.

ಅಥ ತಾಸ್ತಾಂ ಸಮಾಲೋಕ್ಯ ದಿವ್ಯಭೂಷಣಭೂಷಿತಾಂ ।
ಸುರೂಪಾಂಗೀಂ ಸಮಾಧಿಸ್ಥಾಂ ಚಿತ್ತೇ ಚಿಂತಾಂ ಪ್ರಚಕ್ರಿರೇ ॥ ೪೨ ॥
ಧನ್ಯೇಯಂ ಭೂಪತೇರ್ಭಾರ್ಯಾ ಯೈವಂ ಭೂಷಣಭೂಷಿತಾ ।
ದಮಯಂತೀ ಸುರೂಪಾಢ್ಯಾ ಸರ್ವಲಕ್ಷಣಲಕ್ಷಿತಾ ॥ ೪೩ ॥
ಸಮಾಧ್ಯಂತಂ ಸಮಾಸಾದ್ಯ ತಾಪಸೀರ್ವೀಕ್ಷ್ಯ ಸಾಽಪಿ ಚ ।
ದಮಯಂತೀ ನಮಶ್ಚಕ್ರೇ ತಾಃ ಸರ್ವಾ ವಿಧಿಪೂರ್ವಕಂ ॥ ೪೪ ॥
ತಾಃ ಕೃತಾಂಜಲಿನಾ ಪ್ರಾಹ ವಲ್ಗುವಾಕ್ಯಂ ಮನೋಹರಂ ।
ಮಯಾಽಯಂ ಭೂಷಣಸ್ತೋಮ ಉದ್ದಿಶ್ಯ ಗರುಡಧ್ವಜಂ ।
ಕಲ್ಪಿತೋಽದ್ಯ ದಿನೇ ಸ್ನಾತ್ವಾ ಸಮುಪೋಷ್ಯ ದಿನೇ ಹರೇಃ ॥ ೪೫ ॥
ತಸ್ಮಾದ್ಗೃಹ್ಣಂತು ತಾಪಸ್ಯೋ ಮಯಾ ದತ್ತಾನಿ ವಾಂಛಯಾ ।
ಭೂಷಣಾನಿ ವಿಚಿತ್ರಾಣಿ ಪ್ರಸಾದಃ ಕ್ರಿಯತಾಂ ಮಮ ॥ ೪೬ ॥
ತತಶ್ಚೈಕಾಽಬ್ರವೀತ್ತಾಸಾಮೇಷಾ ಮುಕ್ತಾವಲೀ ಮಮ ।
ಇಮಾಂ ದೇಹಿ ನ ಮೇ ವಾಂಛಾ ವಿದ್ಯತೇಽನ್ಯಾ ನೃಪಪ್ರಿಯೇ ॥ ೪೭ ॥
ತತಸ್ತಯಾ ವಿಹಸ್ಯೋಚ್ಚೈಃ ಪ್ರಕ್ಷಾಲ್ಯ ಚರಣೌ ಸ್ವಯಂ ।
ದತ್ತಾ ಮುಕ್ತಾವಲೀ ತಸ್ಯಾ ವಸ್ತ್ರೈರ್ದಿವ್ಯೈಃ ಸಮನ್ವಿತಾ ।
ಯಸ್ಯಾಃ ಷಣ್ಮಾಸತುಲ್ಯಾನಿ ಮೌಕ್ತಿಕಾನ್ಯಮಲಾನಿ ಚ ॥ ೪೮ ॥

---

೪೨–೪೩. ಬಳಿಕ ಅವರು ದಿವ್ಯಾಭರಣಭೂಷಿತಳೂ, ಸುಂದರಿಯೂ, ಧ್ಯಾನಾಸಕ್ತಳೂ ಆದ ಆ ದಮಯಂತಿಯನ್ನು ಕಂಡು ಹೀಗೆ ಒಡವೆಗಳಿಂದ ಅಲಂಕೃತಳೂ, ಸುಂದರಾಂಗಿಯೂ, ಸಮಸ್ತ ಲಕ್ಷಣಗಳಿಂದ ಕೂಡಿರುವವಳೂ ಆದ ಅರಸಿಯಾದ ಈ ದಮಯಂತಿಯು ಪುಣ್ಯವಂತಳು ಎಂದು ಮನಸ್ಸಿನಲ್ಲಿ ಚಿಂತಿಸಿದರು.

೪೪. ಆ ದಮಯಂತಿಯು ಸಮಾಧಿಯಿಂದೆಚ್ಚೆತ್ತು ಆ ಮುನಿಪತ್ನಿಯರನ್ನು ನೋಡಿ ಅವರನ್ನೆಲ್ಲ ವಿಧಿಯಂತೆ ವಂದಿಸಿದಳು.

೪೫. ಅವಳು ಆ ಮುನಿಪತ್ನಿಯರನ್ನು ಕುರಿತು ಕೈಮುಗಿದುಕೊಂಡು ಇಂಪಾಗಿ ಇಂತೆಂದಳು. "ನಾನು ಈ ಹರಿದಿನದಲ್ಲಿ ಮಿಂದು ಉಪವಾಸ ಮಾಡಿ ಈ ಒಡವೆಗಳ ಸಮೂಹವನ್ನು ವಿಷ್ಣುವಿಗೆ ಅರ್ಪಿಸಿರುವೆನು.

೪೬. ತಾಪಸಿಯರೆ! ಆದುದರಿಂದ ನಾನು ಪ್ರೀತಿಯಿಂದ ಕೊಟ್ಟ ಈ ವಿಚಿತ್ರ ಒಡವೆಗಳನ್ನು ಸ್ವೀಕರಿಸಿ ಅನುಗ್ರಹಿಸಿರಿ."

೪೭–೪೮. ಅನಂತರ ಅವರಲ್ಲಿ ಒಬ್ಬಳು, "ಈ ಮುತ್ತಿನ ಸರವು ನನಗಿರಲಿ. ಇದನ್ನು ನನಗೆ ಕೊಡು. ನನಗೆ ಬೇರೆ ಯಾವ ಅಪೇಕ್ಷೆಯಿಲ್ಲ ಎಂದಳು." ತರುವಾಯ ಆ ದಮಯಂತಿಯು ಗಟ್ಟಿಯಾಗಿ ನಕ್ಕು ತಾನೇ ಅವಳ ಕಾಲುಗಳನ್ನು ತೊಳೆದು ಅವಳಿಗೆ ದಿವ್ಯವಸ್ತ್ರಗಳೊಡನೆ ಮುತ್ತಿನ ಸರವನ್ನು ಕೊಟ್ಟಳು.

ಶರತ್ಕಾಲೇ ಯಥಾವ್ಯೋಮ್ನಿ ನಕ್ಷತ್ರಾಣಿ ದ್ವಿಜೋತ್ತಮಾಃ ।
ತಥಾಽನ್ಯಾ ಸ್ಪರ್ಧಯಾ ಯುಕ್ತಾ ಯಯಾಚೇಽಮಲವರ್ಚಸಂ ।
ಹಾರಂ ನಿರ್ಮೂಲ್ಯತಾಂಯುಕ್ತಂ ಚಿತ್ತಾಹ್ಲಾದಕರಂ ಪರಂ ॥ ೪೯ ॥
ಅಥ ಸಾ ತಂ ಕರೇ ಕೃತ್ವಾ ತಸ್ಯಾ ಹಾರಂ ಪ್ರಯಚ್ಛತಿ ।
ತಾವದನ್ಯಾ ಪ್ರಜಗ್ರಾಹ ಹಾರಂ ಶೃಂಗಾರಲಾಲಸಾ ॥ ೫೦ ॥
ತತಃ ಶೇಷಾಶ್ಚ ತಾಪಸ್ಯೋ ಭೂಷಣಾರ್ಥಂ ಸಮುತ್ಸುಕಾಃ ।
ಸಸ್ಪರ್ಧಾ ಜಗೃಹುಸ್ತಾನಿ ಭೂಷಣಾನಿ ಸ್ವಯಂ ದ್ವಿಜಾಃ ॥ ೫೧ ॥
ಅನ್ಯಾಶ್ಚಾನ್ಯಾ ಕರೇ ಕೃತ್ವಾ ಭೂಷಣಂ ಸುಮನೋಹರಂ ।
ಬಲಾದಾಕೃಷ್ಯ ಜಗ್ರಾಹ ಧರ್ಷಯಿತ್ವಾ ತತಃ ಪರಂ ॥ ೫೨ ॥
ಯಥಾ ಯಥಾ ಪ್ರಗೃಹ್ಣಂತಿ ತಾಪಸ್ಯೋ ಭೂಷಣಾರ್ಚಿತಾಃ ।
ತಥಾ ತಥಾಽಸ್ಯಾಃ ಸಂಜಜ್ಞೇ ದಮಯಂತ್ಯಾ ಮುದಾ ಹೃದಿ ॥ ೫೩ ॥
ಅನ್ಯಾನಿ ಚ ಪ್ರಚಿಕ್ಷೇಪ ಶತಶೋಽಥ ಸಹಸ್ರಶಃ ।
ನ ತೃಪ್ತಿರ್ಜಾಯತೇ ತಾಸಾಂ ತಥಾಽಪಿ ದ್ವಿಜಸತ್ತಮಾಃ ॥ ೫೪ ॥

---

೪೯. ದ್ವಿಜೋತ್ತಮರೆ! ಆ ಮುತ್ತಿನಸರದ ಆರು ಮಾಷಪ್ರಮಾಣದ ನಿರ್ಮಲವಾದ ಮುತ್ತುಗಳು ಶರತ್ಕಾಲದಲ್ಲಿ ಆಕಾಶದಲ್ಲಿರುವ ನಕ್ಷತ್ರಗಳಂತೆ ಹೊಳೆಯುತ್ತಿದ್ದುವು. ಹಾಗೆಯೇ ಮತ್ತೊಬ್ಬಳು ಸ್ಪರ್ಧೆಯಿಂದ ಶುದ್ಧವಾದ ತೇಜಸ್ಸುಳ್ಳದ್ದೂ, ಅಮೂಲ್ಯವಾದುದೂ, ಮನೋಹರವಾದುದೂ ಆದ ಹಾರ ವನ್ನು ಬೇಡಿದಳು.

೫೦. ದಮಯಂತಿಯು ಆ ಹಾರವನ್ನು ಕೈಯಲ್ಲಿ ತೆಗೆದುಕೊಂಡು ಅವಳಿಗೆ ಕೊಟ್ಟಳು. ಅಷ್ಟರಲ್ಲಿ ಮತ್ತೊಬ್ಬಳು ಶೃಂಗಾರಾಸಕ್ತಳಾಗಿ ಹಾರವನ್ನು ತೆಗೆದು ಕೊಂಡಳು.

೫೧. ದ್ವಿಜರೆ! ಅನಂತರ ಉಳಿದ ತಾಪಸಿಯರು ಒಡವೆಗಾಗಿ ಉತ್ಸುಕ ರಾಗಿ ಸ್ಪರ್ಧಿಸುತ್ತ ಆ ಒಡವೆಗಳನ್ನು ತಾವೇ ತೆಗೆದುಕೊಂಡರು.

೫೨. ಇನ್ನೂ ಇತರ ಮುನಿಪತ್ನಿಯರೂ, ಮತ್ತೆ ಕೆಲವರೂ ತಾವೇ ಬಲಾ ತ್ಕಾರದಿಂದ ಮನೋಹರವಾದ ಭೂಷಣಗಳನ್ನು ಕಸೆದುಕೊಂಡರು.

೫೩. ಒಡವೆಯಲ್ಲಿ ಆಶೆಯುಳ್ಳ ತಾಪಸಿಯರು ಒಡವೆಗಳನ್ನು ತೆಗೆದುಕೊಂಡ ಹಾಗೆಲ್ಲ ದಮಯಂತಿಯ ಮನಸ್ಸಿನಲ್ಲಿ ಸಂತೋಷವುಂಟಾಯಿತು.

೫೪. ಅವಳು ನೂರಾರು ಸಾವಿರಾರು ಒಡವೆಗಳನ್ನು ಎಸೆದಳು. ಆದರೂ ಆ ಮುನಿಪತ್ನಿಯರಿಗೆ ತೃಪ್ತಿಯುಂಟಾಗಲಿಲ್ಲ.

ಭೂಷಣಾಃಭಾವಮಾಸಾದ್ಯ ತತಃ ಸಾ ಪಾರ್ಥಿವಪ್ರಿಯಾ ।
ಹೃಷ್ಟ್ವಾ ಪ್ರೋವಾಚ ತಾಃ ಸರ್ವಾಃ ಸಂತೋಷಃ ಕ್ರಿಯತಾಮಿತಿ ॥ ೫೫ ॥
ಪುನಶ್ಚೈವಾನಯಿಷ್ಯಾಮಿ ಪ್ರಭಾತೇ ನಾಽತ್ರ ಸಂಶಯಃ ।
ಅನ್ಯಾನಿ ಚ ವಿಚಿತ್ರಾಣಿ ಯಸ್ಯಾ ರೋಚಂತಿ ಯಾನಿ ಚ ॥ ೫೬ ॥
ತತಸ್ತಾಃ ಸಕಲಾಃ ಪ್ರೋಚುರ್ಗಚ್ಛತ್ವಂ ಪಾರ್ಥಿವಪ್ರಿಯೇ ।
ಆಗಂತವ್ಯಂ ಚ ಭೂಯೋಽಪಿ ಪ್ರಗೃಹ್ಯಾಭರಣಾನಿ ಚ ॥ ೫೭ ॥
ಏವಮುಕ್ತ್ವಾ ತತಸ್ತಾಭಿಃ ಪ್ರಣಿಪತ್ಯ ನೃಪಪ್ರಿಯಾ ।
ಪ್ರಹೃಷ್ಟಾ ಪ್ರಯಯೌ ತೂರ್ಣಂ ಸ್ವಪುರಂ ಪ್ರತಿ ಸದ್ದ್ವಿಜಾಃ ॥ ೫೮ ॥
ತಾಪಸ್ಯೋಽಪಿ ಗೃಹಂ ಗತ್ವಾ ವಸ್ತ್ರಾಣಿ ವಿವಿಧಾನಿ ಚ ।
ಭೂಷಣಾನಿ ಚ ಗಾತ್ರೇಷು ಸಸ್ಪರ್ಧಾ ನಿದಧುಸ್ತದಾ ॥ ೫೯ ॥
ತಾಪಸೀನಾಂ ಚತುಷ್ಕಂ ಚ ಪರಿತ್ಯಜ್ಯ ಯತವ್ರತಂ ।
ಶೇಷಾಭಿಃ ಪ್ರಗೃಹೀತಾನಿ ಮಂಡನಾನಿ ಯಥೇಚ್ಛಯಾ ॥ ೬೦ ॥
ತತಃ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ।
ಭೂಯೋಽಪಿ ರಾಜಪತ್ನೀ ಸಾ ಭೂಷಣಾನ್ಯಂಬರಾಣಿ ಚ ॥ ೬೧ ॥
ತಥೈವ ಪ್ರದದೌ ತಾಸಾಂ ಜಗೃಹುಶ್ಚ ತಥೈವ ತಾಃ ।
ಏವಂ ತಸ್ಯಾಃ ಪ್ರಯಚ್ಛಂತ್ಯಾ ಅಹನ್ಯಹನಿ ಭಕ್ತಿತಃ ॥ ೬೨ ॥

---

೫೫–೫೬. ಬಳಿಕ ಆ ರಾಣಿಯು ತನ್ನಲ್ಲಿ ಒಡವೆಗಳಿಲ್ಲದಿರುವುದನ್ನು ನೋಡಿ ಸಂತೋಷಗೊಂಡು ಅವರನ್ನು ಕುರಿತು ಹೀಗೆಂದಳು. "ನೀವು ಸಂತುಷ್ಟರಾಗಿರಿ. ಬೆಳಿಗ್ಗೆ ಮರಳಿ ನಿಮಗಿಷ್ಟವಾದ ಬೇರೆ ನಾನಾ ಬಗೆಯ ಒಡವೆಗಳನ್ನು ತರುವೆನು, ಸಂದೇಹಪಡಬೇಡಿರಿ."

೫೭. ಅನಂತರ ಅವರೆಲ್ಲ, "ರಾಣಿಯೆ! ನೀನು ಹೊರಡು. ಪುನಃ ಒಡವೆಗಳನ್ನು ತೆಗೆದುಕೊಂಡು ಬಾ" ಎಂದರು.

೫೮. ಅವರು ಹೀಗೆನ್ನಲು ಆ ಅರಸತಿಯು ಅವರಿಗೆ ವಂದಿಸಿ ಸಂತೋಷದಿಂದ ಶೀಘ್ರವಾಗಿ ತನ್ನ ಪಟ್ಟಣಕ್ಕೆ ಹೋದಳು.

೫೯. ತಾಪಸಿಯರೂ ತಮ್ಮ ಮನೆಗೆ ಹೋಗಿ ನಾನಾ ಬಗೆಯ ವಸ್ತ್ರಗಳನ್ನೂ, ಒಡವೆಗಳನ್ನೂ ದೇಹದಲ್ಲಿ ಧರಿಸಿದರು.

೬೦. ವ್ರತನಿಷ್ಠರಾದ ನಾಲ್ಕು ಮಂದಿ ಮುನಿಪತ್ನಿಯರನ್ನು ಬಿಟ್ಟು ಉಳಿದ ಎಲ್ಲ ತಾಪಸಿಯರೂ ಯಥೇಚ್ಛವಾಗಿ ಒಡವೆಗಳನ್ನು ತೆಗೆದುಕೊಂಡರು.

೬೧–೬೨. ಬಳಿಕ ಬೆಳಿಗ್ಗೆ ನಿರ್ಮಲವಾದ ಸೂರ್ಯಮಂಡಲವು ಉದಯಿಸಲು ರಾಣಿಯು ಮರಳಿ ಒಡವೆ ವಸ್ತ್ರಗಳನ್ನು ಹಾಗೆಯೇ ಆ ಮುನಿಪತ್ನಿಯರಿಗಿತ್ತಳು. ಅವರೂ ಮೊದಲಿನಂತೆಯೇ ಸ್ವೀಕರಿಸಿದರು. ಹೀಗೆ ಅವಳು ಪ್ರತಿ

ಪಂಚರಾತ್ರಮತಿಕ್ರಾಂತಂ ತೃಪ್ತಾಸ್ತಾಸ್ತಾಪಸಪ್ರಿಯಾಃ ।
ನ ರಾಜ್ಞೀ ತೃಪ್ತಿಮಾಯಾತಿ ಪ್ರಯಚ್ಛಂತೀ ಪ್ರಭಕ್ತಿತಃ ॥ ೬೩ ॥
ತತಃ ಶುಶ್ರಾವ ತಾಪಸ್ಯಶ್ಚತಸ್ರೋಽತ್ರ ಸುನಿಃಸ್ಪೃಹಾಃ ।
ವಲ್ಕಲಾಜಿನಧಾರಿಣ್ಯೋ ನ ತಸ್ಯಾಃ ಪಾರ್ಶ್ವಮಾಗತಾಃ ।
ನ ಚಾಽನ್ಯಾ ಭೂಷಿತಾ ದೃಷ್ಟ್ವಾ ಚಕ್ರುರೀರ್ಷ್ಯಾಂ ಕಥಂಚನ ॥ ೬೪ ॥
ಅಥ ಸಾ ತ್ವರಿತಂ ಗತ್ವಾ ತಾಸಾಂ ಪಾರ್ಶ್ವಮನಿಂದಿತಾ ।
ಭೂಷಣಾನಿ ಮಹಾರ್ಹಾಣಿ ಗೃಹೀತ್ವಾ ಪಂಚಮೇ ದಿನೇ ॥ ೬೫ ॥
ತತಃ ಪ್ರೋವಾಚ ತಾಃ ಸರ್ವಾಃ ಪ್ರಸಾದಃ ಕ್ರಿಯತಾಮಿತಿ ।
ಇಮಾನಿ ಭೂಷಣಾರ್ಥಾಯ ಭೂಷಣಾನಿ ಪ್ರಗೃಹ್ಯತಾಂ ॥ ೬೬ ॥

ತಾಪಸ್ಯ ಊಚುಃ:—

ನಾಽಸ್ಮಾಕಂ ಭೂಷಣೈಃ ಕಾರ್ಯಂ ಭೂಷಿತಾ ವಲ್ಕಲೈರ್ವಯಂ ।
ತಸ್ಮಾದ್ಗಚ್ಛ ನಿಜಂ ಹರ್ಮ್ಯಮರ್ಥಿಭ್ಯಃ ಸಂಪ್ರದೀಯತಾಂ ॥ ೬೭ ॥
ವದಂತೀನಾಂ ತಯಾ ಸಾರ್ಧಮೇವಂ ತಾಸಾಂ ದ್ವಿಜೋತ್ತಮಾಃ ।
ಚತ್ವಾರಃ ಪತಯಃ ಪ್ರಾಪ್ತಾ ಏಕೈಕಸ್ಯಾಃ ಪೃಥಕ್ ಪೃಥಕ್ ॥ ೬೮ ॥
ಶುನಃಶೇಪೋಽಥ ಶಾಕ್ರೇಯೋ ಬೌದ್ಧೋ ದಾಂತಶ್ಚತುರ್ಥಕಃ ।
ವಿಯನ್ಮಾರ್ಗಂ ಹಿ ಚತ್ವಾರಃ ಪ್ರಾಪ್ಯ ಸ್ವಾಶ್ರಮಮಾಯಯುಃ ॥ ೬೯ ॥

---

ದಿನವೂ ಕೊಡುತ್ತಿರಲು ಐದು ರಾತ್ರಿಗಳು ಕಳೆದುವು. ಮುನಿಪತ್ನಿಯರು ತೃಪ್ತಿಗೊಂಡರು. ಆದರೆ ಭಕ್ತಿಯಿಂದ ಕೊಡುತ್ತಿರುವ ರಾಣಿಯು ತೃಪ್ತಳಾಗಲಿಲ್ಲ.

೬೪. ಅನಂತರ ಆ ದಮಯಂತಿಯು ಆಶೆಯಿಲ್ಲದವರೂ, ನಾರುಡಿಗೆ ಕೃಷ್ಣಾಜಿನಗಳನ್ನು ಧರಿಸಿದವರೂ, ಇತರ ಸ್ತ್ರೀಯರು ಅಲಂಕೃತರಾದುದನ್ನು ಕಂಡು ಅಸೂಯೆ ಪಡದವರೂ, ತನ್ನ ಹತ್ತಿರ ಬಾರದಿದ್ದವರೂ ಆದ ನಾಲ್ಕು ಮಂದಿ ತಾಪಸಿಯರಿರುವುದನ್ನು ಕೇಳಿದಳು.

೬೫–೬೬. ಬಳಿಕ ಅವಳು ಐದನೆಯ ದಿನ ಅನೂಲ್ಯವಾದ ಒಡವೆಗಳನ್ನು ತೆಗೆದುಕೊಂಡು ಶೀಘ್ರವಾಗಿ ಆ ತಾಪಸಿಯರ ಹತ್ತಿರ ಹೋಗಿ ಅಲಂಕಾರಕ್ಕಾಗಿ ಈ ಒಡವೆಗಳನ್ನು ತೆಗೆದುಕೊಂಡು ನನಗೆ ಅನುಗ್ರಹಮಾಡಿರಿ ಎಂದಳು.

೬೭. ತಾಪಸಿಯರು ಹೇಳುತ್ತಾರೆ:—ನಮಗೆ ಒಡವೆಗಳಿಂದ ಪ್ರಯೋಜನವಿಲ್ಲ. ನಾವು ನಾರುಬಟ್ಟೆಗಳಿಂದಲೇ ಅಲಂಕಾರಗೊಂಡಿದ್ದೇವೆ. ಆದುದರಿಂದ ನೀನು ನಿನ್ನ ಅರಮನೆಗೆ ಹೋಗಿ ಯಾಚಕರಿಗೆ ಕೊಡು.

೬೮. ದ್ವಿಜವರ್ಯರೆ! ಆ ಮುನಿಪತ್ನಿಯರು ಆ ದಮಯಂತಿಯೊಡನೆ ಮಾತಾಡುತ್ತಿರಲು ಅವರೆಲ್ಲರ ಗಂಡಂದಿರೂ ಬಂದರು.

೬೯. ಶುನಶ್ಶೇಪ, ಶಾಕ್ರೇಯ, ಬೌದ್ಧ, ದಾಂತ ಎಂಬ ಆ ನಾಲ್ಕು ಮಂದಿ ಬ್ರಾಹ್ಮಣರು ಆಕಾಶಮಾರ್ಗದಿಂದ ತಮ್ಮ ಆಶ್ರಮಕ್ಕೆ ಬಂದರು.

ಶೇಷಾಃ ಸರ್ವೇ ಗತಿಭ್ರಂಶಂ ಪ್ರಾಪ್ಯ ಭೂಮಾರ್ಗಮಾಶ್ರಿತಾಃ ।
ಅಥ ತೇ ಸ್ವಾಶ್ರಮಂ ದೃಷ್ಟ್ವಾ ವಿಕೃತಾಕಾರಭೂಷಣಂ ।
ಕಿಮಿದಂ ಕಿಮಿದಂ ಪ್ರೋಚುರ್ಯತ್ತಾಪಸ್ಯೋ ವಿಡಂಬಿತಾಃ ॥ ೭೦ ॥
ಕೇನೈವಂ ಪಾಪ್ಮನಾಽಸ್ಮಾಕಮಾಶ್ರಮೋಽಯಂ ವಿಡಂಬಿತಃ ।
ಪ್ರದತ್ತ್ವಾ ತಾಪಸೀನಾಂ ಚ ಭೂಷಣಾನ್ಯಂಬರಾಣಿ ಚ ॥ ೭೧ ॥

ತತ್ಪತ್ನ್ಯ ಊಚುಃ :—

ಚಮತ್ಕಾರಸ್ಯ ಭೂಪಸ್ಯ ಯೈಷಾ ಭಾರ್ಯಾ ವ್ಯವಸ್ಥಿತಾ ।
ಅನಯಾ ಸಂಪ್ರದತ್ತಾನಿ ಸರ್ವಾಸಾಂ ಭೂಷಣಾನಿ ವೈ ॥ ೭೨ ॥
ಅಸ್ಮಾಕಮಪಿ ಸಂಪ್ರಾಪ್ತಾ ಗೃಹೇ ವೈ ನೃಪವಲ್ಲಭಾ ।
ದಾತುಂ ವಿಭೂಷಣಾನ್ಯೇವಂ ನಿಷಿದ್ಧಾಽಸ್ಮಾಭಿರದ್ಯ ಸಾ ॥ ೭೩ ॥

ಸೂತ ಉವಾಚ :—

ತಾಸಾಂ ತದ್ವಚನಂ ಶ್ರುತ್ವಾ ತತಸ್ತೇ ಕೋಪಮೂರ್ಛಿತಾಃ ।
ಊಚುಸ್ತಾಂ ನೃಪತೇರ್ಭಾರ್ಯಾಂ ಶಾಪಂ ದಾತುಂ ಮುಹುರ್ಮುಹುಃ ॥
ದ್ವಿಸಪ್ತತಿರ್ವಯಂ ಪಾಪೇ ಸ್ನಾನಾರ್ಥಂ ಪುಷ್ಕರೇ ಗತಾಃ ।
ಕಾರ್ತಿಕ್ಯಾಂ ವ್ಯೋಮಮಾರ್ಗೇಣ ಮನೋನುರುತರಂಹಸಾ ॥ ೭೫ ॥
ಚತ್ವಾರಸ್ತ್ವ ಇಮೇ ಪ್ರಾಪ್ತಾ ಯೇಷಾಂ ದಾರೈಃ ಪ್ರತಿಗ್ರಹಃ ।
ನ ಕೃತಸ್ತಸ್ಯ ಭೂಪಸ್ಯ ಕುಭಾರ್ಯಾಯಾಃ ಕಥಂಚನ ॥ ೭೬ ॥

---

೭೦–೭೧. ಉಳಿದ ಎಲ್ಲ ಬ್ರಾಹ್ಮಣರೂ ಆಕಾಶಮಾರ್ಗಗಮನದಿಂದ ಭ್ರಷ್ಟರಾಗಿ ಭೂಮಾರ್ಗವನ್ನು ಆಶ್ರಯಿಸಿದರು. ಬಳಿಕ ಆ ನಾಲ್ಕು ಮಂದಿ ಬ್ರಾಹ್ಮಣರು ವಿಕಾರವಾದ ಆಕಾರ ಭೂಷಣಗಳುಳ್ಳ ತಮ್ಮ ಆಶ್ರಮವನ್ನು ಕಂಡು ಯಾವ ಪಾಪಿಯು ತಾಪಸಿಯರಿಗೆ ಒಡವೆಗಳನ್ನೂ, ವಸ್ತ್ರಗಳನ್ನೂ ಕೊಟ್ಟು ಮೋಸಗೊಳಿಸಿದನೆಂದು ಕೇಳಿದರು.

೭೨. ಅವರ ಪತ್ನಿಯರು ಹೇಳುತ್ತಾರೆ:—ಚಮತ್ಕಾರನೆಂಬ ರಾಜನ ರಾಣಿಯು ಎಲ್ಲಾ ಮುನಿಪತ್ನಿಯರಿಗೆ ಒಡವೆ ವಸ್ತ್ರಗಳನ್ನು ಕೊಟ್ಟಿರುವಳು.

೭೩. ಆ ರಾಣಿಯು ನಮಗೂ ಒಡವೆ ವಸ್ತ್ರಗಳನ್ನು ಕೊಡಲು ಈ ದಿನ ನಮ್ಮ ಆಶ್ರಮಕ್ಕೆ ಬಂದಳು. ಆದರೆ ನಾವು ಬೇಡವೆಂದು ತಡೆದೆವು.

೭೪. ಸೂತನು ಹೇಳುತ್ತಾನೆ:—ಬಳಿಕ ಆ ಮುನಿಗಳು ಅವರ ಆ ಮಾತನ್ನು ಕೇಳಿ ಕುಪಿತರಾಗಿ ರಾಜಪತ್ನಿಗೆ ಶಾಪಕೊಡಲು ಇಂತೆಂದರು.

೭೫–೭೬. "ಪಾಪಿಷ್ಠಳೆ! ಕಾರ್ತಿಕ ಶುದ್ಧ ಪೂರ್ಣಿಮಾ ದಿನ ಪುಷ್ಕರ ಕ್ಷೇತ್ರಕ್ಕೆ ಸ್ನಾನಕ್ಕೋಸ್ಕರ ಹೋಗಿದ್ದ ಎಪ್ಪತ್ತೆರಡು ಮಂದಿಗಳಲ್ಲಿ ನಾವು ನಾಲ್ಕು ಮಂದಿ ಆಕಾಶಮಾರ್ಗದಿಂದ ವಾಯು ಮನೋವೇಗದಿಂದ ಬಂದಿದ್ದೇವೆ. ಹೇಗೋ ನಮ್ಮ ಪತ್ನಿಯರು ಆ ದುಷ್ಟ ರಾಜಪತ್ನಿಯಿಂದ ಒಡವೆಗಳನ್ನು ತೆಗೆದುಕೊಳ್ಳಲಿಲ್ಲ.

ತಸ್ಮಾದ್ವಿಡಂಬಿತೋ ಯಸ್ಮಾದಾಶ್ರಮೋಽಯಂ ತಪಸ್ವಿನಾಂ ।
ಶಿಲಾರೂಪಾ ಚ ಭವತೀ ತಸ್ಮಾದ್ಭವತು ಕುತ್ಸಿತಾ ॥ ೭೭ ॥
ಅಥ ಸಾ ತತ್ಕ್ಷಣಾದೇವ ಶಿಲಾರೂಪಾ ಬಭೂವ ಹ ।
ನಿಶ್ಚೇಷ್ಟಾ ತತ್ಕ್ಷಣಾದೇವ ಮುನಿವಾಕ್ಯಾದನಂತರಂ ॥ ೭೮ ॥
ತತಃ ಸ ಪರಿವಾರೋಽಸ್ಯಾಸ್ತದ್ದುಃಖೇನ ಸಮಾಕುಲಃ ।
ಬಾಷ್ಪಪೂರ್ಣೇಕ್ಷಣೋ ದೀನಃ ಪ್ರಸ್ಥಿತಃ ಸ್ವಪುರಂಪ್ರತಿ ॥ ೭೯ ॥
ಕಥಯಾಮಾಸ ತತ್ಸರ್ವಂ ದಮಯಂತ್ಯಾಃ ಸಮುದ್ಭವಂ ।
ವೃತ್ತಾಂತಂ ಬ್ರಾಹ್ಮಣಶ್ರೇಷ್ಠಾಸ್ತಸ್ಯಾಃ ಶಾಪಸಮುದ್ಭವಂ ॥ ೮೦ ॥
ಶ್ರುತ್ವಾ ಸ ಪಾರ್ಥಿವಸ್ತೂರ್ಣಂ ವೃತ್ತಾಂತಂ ಶಾಪಜಂ ತದಾ ।
ಪ್ರಸಾದನಾಯ ವಿಪ್ರಾಣಾಂ ದುಃಖಿತಃ ಸ ವನಂ ಯಯೌ ॥ ೮೧ ॥
ತತಸ್ತೇ ಮುನಯಸ್ತೂರ್ಣಂ ಚತ್ವಾರೋಽಪಿ ಮಹೀಪತಿಂ ।
ಜ್ಞಾತ್ವಾ ಪ್ರಸಾದನಾರ್ಥಾಯ ಭಾರ್ಯಾರ್ಥಂ ಸಮುಪಸ್ಥಿತಂ ॥ ೮೨ ॥
ಅಗ್ನಿಹೋತ್ರಾಣಿ ದಾರಾಂಶ್ಚ ಸಮಾದಾಯ ತತಃ ಪರಂ ।
ಕುರುಕ್ಷೇತ್ರಂ ಸಮಾಜಗ್ಮುಃ ಖಮಾರ್ಗೇಣ ದ್ರುತಂ ತದಾ ॥ ೮೩ ॥
ಪಾರ್ಥಿವೋಽಪಿ ಸಮನ್ವೇಷ್ಯ ಯತ್ನಾತ್ತಾನ್ ಸರ್ವತೋ ಮುನೀನ್ ।
ಸ ನಿರ್ವಿಣ್ಣಃ ಶ್ರಮಾರ್ತಶ್ಚ ಭಾರ್ಯಾವ್ಯಸನದುಃಖಿತಃ ॥ ೮೪ ॥

---

೭೭. ನಮ್ಮ ಆಶ್ರಮದವರನ್ನು ಮೋಸಗೊಳಿಸಿದ್ದರಿಂದ ದುಷ್ಟಳಾದ ನೀನು ಕಲ್ಲಾಗು."

೭೮. ಅನಂತರ ಕೂಡಲೆ ಆ ರಾಣಿಯು ಮುನಿಯ ಮಾತಿನಿಂದ ಕಲ್ಲಿನ ರೂಪವನ್ನು ಧರಿಸಿ ಅಲ್ಲಾಡದವಳಾದಳು.

೭೯. ಆಗ ಪರಿವಾರದವರು ರಾಣಿಯ ದುಃಖದಿಂದ ವ್ಯಥೆಗೊಂಡವರಾಗಿ ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ತಮ್ಮ ಪಟ್ಟಣಕ್ಕೆ ಹೊರಟರು.

೮೦. ಬ್ರಾಹ್ಮಣೋತ್ತಮರೆ! ಆ ಪರಿವಾರದವರು ದಮಯಂತಿಗೆ ಶಾಪದಿಂದುಂಟಾದ ವೃತ್ತಾಂತವನ್ನೆಲ್ಲ ದೊರೆಗೆ ತಿಳಿಸಿದರು.

೮೧. ಆ ರಾಜನು ಶಾಪವೃತ್ತಾಂತವನ್ನು ಕೇಳಿ ದುಃಖಗೊಂಡು ಬ್ರಾಹ್ಮಣರನ್ನು ಸಮಾಧಾನಗೊಳಿಸಲು ಶೀಘ್ರವಾಗಿ ಕಾಡಿಗೆ ಹೋದನು.

೮೨–೮೩. ಅನಂತರ ಆ ನಾಲ್ಕು ಮಂದಿ ಮುನಿಗಳು ರಾಜನು ಪತ್ನಿಗಾಗಿ ಸಮಾಧಾನಗೊಳಿಸಲು ಹತ್ತಿರ ಬಂದಿರುವನೆಂದು ತಿಳಿದು ಅಗ್ನಿಹೋತ್ರ, ಪತ್ನಿಯರನ್ನು ಸಾಗಿಸಿಕೊಂಡು ಆಕಾಶಮಾರ್ಗದಿಂದ ಕುರುಕ್ಷೇತ್ರಕ್ಕೆ ಬಂದರು.

೮೪–೮೫. ಪತ್ನಿಯ ದುಃಖದಿಂದ ವ್ಯಸನಗೊಂಡ ರಾಜನು ಎಲ್ಲೆಡೆಯಲ್ಲಿಯೂ ಆ ಮುನಿಗಳನ್ನು ಹುಡುಕಿ ಆಯಾಸಗೊಂಡು ಖೇದದಿಂದ

ತತೋ ಜಗಾಮ ತಂ ದೇಶಂ ಯತ್ರ ಭಾರ್ಯಾ ಶಿಲಾಮಯೀ ।
ಸಾಸ್ಥಿತಾ ತಾಪಸೀ ವೃಂದೈಃ ಸರ್ವತೋಽಪಿ ಸಮನ್ವಿತಾ ॥ ೮೫ ॥
ಅಥ ತಾಂ ತಾದೃಶೀಂ ದೃಷ್ಟ್ವಾ ಸೇವಕೈಃ ಸಕಲೈರ್ವೃತಃ ।
ಹಾಹೇತಿ ಸ ಮುಹುಃ ಪ್ರೋಚ್ಯ ಮೂರ್ಛಿತಃ ಪ್ರಾಪತತ್ಕ್ಷಿತೌ ॥ ೮೬ ॥
ತತಃ ಕೃಚ್ಛ್ರಾತ್ಸಮಾಸಾದ್ಯ ಸಂಜ್ಞಾಂ ತೋಯಸಮುಕ್ಷಿತಃ ।
ಪ್ರಲಾಪಮಕರೋತ್ಪಶ್ಚಾತ್ಸ್ಮೃತ್ವಾ ಸ್ಮೃತ್ವಾ ಪ್ರಿಯಾನ್ ಗುಣಾನ್ ॥೮೭॥
ಹಾ ಪ್ರಿಯೆ ಮೃಗಶಾವಾಕ್ಷಿ ಮಮ ಪ್ರಾಣವಿನಾಶಿನಿ ।
ಮಾಂ ಮುಕ್ತ್ವಾಽದ್ಯ ಪ್ರಿಯಂ ಕಾಂತಂ ಕ್ವಗತಾಽಸಿ ಶುಭಾನನೇ ॥ ೮೮ ॥
ನಾಽಭುಕ್ತೇ ಮಯಿ ಭುಕ್ತಾಸಿ ನಿದ್ರಾಂ ನಾಽನಿದ್ರಿತೇ ಗತಾ ।
ನ ಸೌಭಾಗ್ಯಸ್ಯ ಗರ್ವೇಣ ಮಮಾಜ್ಞಾ ಲಂಘಿತಾ ಕ್ವಚಿತ್ ॥ ೮೯ ॥
ನ ಸ್ಮರಾಮಿ ತ್ವಯಾ ಪ್ರೋಕ್ತಂ ಕದಾಚಿದ್ವಿಕೃತಂ ವಚಃ ।
ರಹಸ್ಯಪಿ ವಿಶಾಲಾಕ್ಷಿ ಕಿಮು ಭೋಜನಸಂಸದಿ ॥ ೯೦ ॥

ಸೂತ ಉವಾಚ :—

ಏವಂ ಪ್ರಲಪತಸ್ತಸ್ಯ ಭೂಪತೇಃ ಕರುಣಂ ಬಹು ।
ಆಯಾತಾ ಮಂತ್ರಿಣಸ್ತಸ್ಯ ಶ್ರುತ್ವಾ ಭೂಪಂ ತಥಾವಿಧಂ ॥ ೯೧ ॥

---

ಸುತ್ತಲೂ ಮುನಿಪತ್ನಿಯರಿರುವ ಆ ರಾಣಿಯು ಶಿಲೆಯಾದ ಸ್ಥಳಕ್ಕೆ ಹೋದನು.

೮೬. ಸೇವಕರೊಡನೆ ಅಲ್ಲಿ ಶಿಲಾರೂಪಳಾದ ಪತ್ನಿಯನ್ನು ಕಂಡು ಅಯ್ಯೋ! ಎಂದು ಮೂರ್ಛೆಗೊಂಡು ನೆಲದಮೇಲೆ ಬಿದ್ದನು.

೮೭. ಬಳಿಕ ನೀರಿನಿಂದ ಪ್ರೋಕ್ಷಿಸಲ್ಪಟ್ಟವನಾಗಿ ಕಷ್ಟದಿಂದ ಚೇತರಿಸಿ ಕೊಂಡು ಪತ್ನಿಯ ಪ್ರಿಯಗುಣಗಳನ್ನು ಸ್ಮರಿಸಿ ಸ್ಮರಿಸಿ ಗೋಳಾಡಿದನು.

೮೮. "ಹರಿಣಾಕ್ಷಿಯೂ, ಸುಂದರಿಯೂ ಆದ ಪ್ರಿಯಳೆ! ನಿನ್ನ ಪ್ರಿಯ ಕಾಂತನಾದ ನನ್ನನ್ನು ಬಿಟ್ಟು ಈಗ ಎಲ್ಲಿಗೆ ಹೋಗಿರುವೆ?

೮೯. ನೀನು ಹಿಂದೆ ನಾನು ಊಟ ಮಾಡದಿರುವಾಗ ಊಟ ಮಾಡಲಿಲ್ಲ. ನಿದ್ರೆ ಮಾಡದಿರುವಾಗ ನಿದ್ರಿಸಲಿಲ್ಲ. ಸೌಂದರ್ಯದರ್ಪದಿಂದ ನನ್ನ ಅಪ್ಪಣೆ ಯನ್ನು ಒಂದು ವೇಳೆಯೂ ಮೀರಲಿಲ್ಲ.

೯೦. ವಿಶಾಲನಯನಳೆ! ನೀನು ರಹಸ್ಯದಲ್ಲಿಯೂ ವಿಕಾರದ ಮಾತನ್ನು ನುಡಿದುದನ್ನು ಸ್ಮರಿಸುವುದಿಲ್ಲ. ಭೋಜನ ಸಭೆಯಲ್ಲಿ ಏನು ಹೇಳತಕ್ಕುದು?"

೯೧. ಸೂತನು ಹೇಳುತ್ತಾನೆ:—ದೊರೆಯು ಹೀಗೆ ದೈನ್ಯದಿಂದ ಗೋಳಾಡು ತ್ತಿರಲು ಅವನ ಈ ಸ್ಥಿತಿಯನ್ನು ಕೇಳಿ ಮಂತ್ರಿಗಳು ಹತ್ತಿರ ಬಂದರು.

ತತಃ ಸಂಬೋಧ್ಯ ತಂ ಕೃಚ್ಛ್ರಾದ್ದೃಷ್ಟಾಂತೈರ್ಬಹುವಿಸ್ತರೈಃ ।
ರಾಜರ್ಷೀಣಾಂ ಪುರಾಣಾನಾಂ ಮಹದ್ವ್ಯಸನಸಂಭವೈಃ ॥ ೯೨ ॥
ನಿನ್ಯುಸ್ತಂ ಭೂಪತಿಂ ದೀನಂ ಬಾಷ್ಪವ್ಯಾಕುಲಲೋಚನಂ ।
ನಿಃಶ್ವಸಂತಂ ಯಥಾ ನಾಗಂ ತೇಜಸಾ ಪರಿವರ್ಜಿತಂ ॥ ೯೩ ॥
ಸೋಽಪಿ ಕೃತ್ವಾಽಽಲಯಂ ತಸ್ಯಾಃ ಸಮಂತಾತ್ಸುಮನೋಹರಂ ।
ಕರ್ಪೂರಾಗರು ಧೂಪಾದ್ಯೈರ್ವಸ್ತ್ರ ಕುಂಕುಮಚಂದನೈಃ ।
ಯೋಜಯಾಮಾಸ ತಾಂ ಭಾರ್ಯಾಂ ಶಿಲಾರೂಪಮಪಿ ಸ್ಥಿತಾಂ ॥ ೯೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅನರ್ತಾಧಿಪತಿಕೃತಶೋಕಕಥನಂ"
ನಾಮೈಕಾದಶೋತ್ತರಶತತಮೋಽಧ್ಯಾಯಃ

---

೯೨-೯೩. ಅವರು ಹಿಂದಿನ ರಾಜರ್ಷಿಗಳ ವಿಸ್ತಾರವಾದ ವ್ಯಸನ ದೃಷ್ಟಾಂತಗಳಿಂದ ತೇಜಸ್ಸಿಲ್ಲದ ಆನೆಯಂತೆ ನಿಟ್ಟುಸಿರುಬಿಡುತ್ತಿರುವ ದೀನನಾದ ದೊರೆಯನ್ನು ಕಷ್ಟದಿಂದ ಸಮಾಧಾನಗೊಳಿಸಿದರು.

೯೪. ರಾಜನು ಶಿಲಾರೂಪಳಾದ ಆ ರಾಣಿಗೆ ಮನೆಯನ್ನು ಕಟ್ಟಿಸಿ ಕರ್ಪೂರ, ಗಂಧ, ಧೂಪ, ವಸ್ತ್ರ, ಕುಂಕುಮ ಮೊದಲಾದುವುಗಳಿಂದ ಅಲಂಕರಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅನರ್ತಾಧಿಪತಿಕೃತಶೋಕಕಥನ" ವೆಂಬ
ನೂರಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋತ್ತರಶತತಮೋಽಧ್ಯಾಯಃ

### ಊಷರೋತ್ಪತ್ತಿಮಾಹಾತ್ಮ್ಯಕಥನಂ

ಸೂತ ಉವಾಚ :—

ತತಃ ಕತಿಪಯಾಽಹಸ್ಯ ಗತೇ ತಸ್ಮಿನ್ ಮಹೀಪತೌ ।
ಸ್ವಗೃಹಂ ಪ್ರತಿ ದುಃಖಾರ್ತೇ ಪರಿವಾರಸಮನ್ವಿತೇ ॥ ೧ ॥
ಪದ್ಭ್ಯಾಮೇವ ಸಮಾಯಾತಾ ಹ್ಯಷ್ಟಷಷ್ಟಿರ್ದ್ವಿಜೋತ್ತಮಾಃ ।
ಪರಿಶ್ರಾಂತಾಃ ಕೃಶಾಂಗಾಶ್ಚ ಧೂಲಿಧೂಸರಿತಾನನಾಃ ॥ ೨ ॥
ಯಾವತ್ಪಶ್ಯಂತಿ ದಾರಾಃ ಸ್ವಾ ದಿವ್ಯಾಭರಣಭೂಷಿತಾಃ ।
ದಿವ್ಯವಸ್ತ್ರೈಃ ಸುಸಂವೀತಾ ರಾಜಪತ್ನ್ಯ ಇವಾಽಪರಾಃ ॥ ೩ ॥
ತತಶ್ಚ ವಿಸ್ಮಯಾವಿಷ್ಟಾಃ ಪಪ್ರಚ್ಛುಸ್ತೇ ಕ್ಷುಧಾನ್ವಿತಾಃ ।
ಕಿಮಿದಂ ಕಿಮಿದಂ ಪಾಪಾ ವಿರುದ್ಧಂ ವಿಹಿತಂ ವಪುಃ ॥ ೪ ॥
ಕಥಂ ಪ್ರಾಪ್ತಾನಿ ವಸ್ತ್ರಾಣಿ ಭೂಷಣಾನಿ ವರಾಣಿ ಚ ।
ನೂನಮಸ್ಮದ್ಗತೇರ್ಭ್ರಂಶಃ ಖೇ ಜಾತೋ ನಾಽನ್ಯಥಾ ಭವೇತ್ ॥ ೫ ॥
ವಿಕಾರಮೇನಂ ಸಂತ್ಯಕ್ತ್ವಾ ಯುಷ್ಮದೀಯಂ ಸುಗರ್ಹಿತಾಃ ।
ಅಥ ತಾಃ ಸರ್ವವೃತ್ತಾಂತಮೂಚುಸ್ತಾಪಸಯೋಷಿತಃ ॥ ೬ ॥

---

### ಕನ್ನಡದ ಅನುವಾದ

#### ಊಷರೋತ್ಪತ್ತಿಮಾಹಾತ್ಮ್ಯಕಥನ

೧. ಸೂತನು ಹೇಳುತ್ತಾನೆ:—ಅನಂತರ ದುಃಖಿತನಾದ ಮಹಾರಾಜನು ಕೆಲವು ದಿನಗಳ ತರುವಾಯ ತನ್ನ ಅರಮನೆಗೆ ಹೋಗಲು ಆ ಅರುವತ್ತೆಂಟು ಮಂದಿ ಬ್ರಾಹ್ಮಣರು ಬಳಲಿದವರೂ, ಕೃಶಾಂಗರೂ, ಧೂಳಿನಿಂದ ಮಲಿನವಾದ ಮುಖವುಳ್ಳವರೂ ಆಗಿ ಮನೆಗೆ ಬಂದರು.

೨–೫. ಹಸಿವಿನಿಂದ ಪೀಡಿತರಾದ ಅವರು ರಾಜಪತ್ನಿಯರಂತೆ ದಿವ್ಯವಾದ ಒಡವೆ ವಸ್ತ್ರಗಳಿಂದ ಅಲಂಕಾರಗೊಂಡ ತಮ್ಮ ಸತಿಯುರನ್ನು ನೋಡಿ ಆಶ್ಚರ್ಯದಿಂದ, "ಎಲೌ ಪಾಪಿಷ್ಠರೆ! ಇದೇನು? ನಿಮ್ಮ ಶರೀರವನ್ನು ವಿಕಾರಮಾಡಿಕೊಂಡಿರುವಿರಿ. ಉತ್ತಮವಾದ ಈ ಒಡವೆ ವಸ್ತ್ರಗಳನ್ನು ಹೇಗೆ ಪಡೆದಿರಿ? ನಿಶ್ಚಯವಾಗಿಯೂ ಇದರಿಂದಲೇ ನಮ್ಮ ಆಕಾಶಗತಿಯು ಭ್ರಂಶವಾಗಿರುವುದು. ಬೇರೆ ಯಾವುದರಿಂದಲೂ ಅಲ್ಲ.

೬–೧೦. ನಿಂದ್ಯರೆ! ನಿಮ್ಮ ವಿಕಾರವನ್ನು ತ್ಯಜಿಸಿರಿ. ಎಂದು ಹೇಳಿದರು. ಬಳಿಕ ಅವರು ರಾಜಪತ್ನಿಯಾದ ದಮಯಂತಿಯು ಬಂದಿದ್ದುದನ್ನೂ, ಅವಳು

ಯಥಾ ರಾಜ್ಞೀ ಸಮಾಯಾತಾ ದಮಯಂತೀ ನೃಪಪ್ರಿಯಾ ।
ಭೂಷಣಾನಿ ಚ ದತ್ತಾನಿ ತಯಾ ಚೈವ ಯಥಾ ದ್ವಿಜಾಃ ॥ ೭ ॥
ಯಥಾ ಶಾಪಶ್ಚ ಸಂಜಾತೋ ಬ್ರಾಹ್ಮಣಾನಾಂ ಮಹಾತ್ಮನಾಂ ।
ಅಥ ತೇ ಮುನಯಃ ಕ್ರುದ್ಧಾಸ್ತಚ್ಛ್ರುತ್ವಾ ಗರ್ಹಿತಂ ವಚಃ ।
ರಾಜಪ್ರತಿಗ್ರಹೋ ನಿಂದ್ಯಸ್ತಾಪಸಾನಾಂ ವಿಶೇಷತಃ ॥ ೮ ॥
ತತೋ ಭೂಪಸ್ಯ ರಾಷ್ಟ್ರಸ್ಯ ನಾಶಾರ್ಥಂ ಜಗೃಹುರ್ಜಲಂ ।
ಕ್ರೋಧೇನ ಮಹತಾವಿಷ್ಟಾ ವೇಪಮಾನಾ ನಿರರ್ಗಲಂ ॥ ೯ ॥
ಅನೇನ ಪಾಪ್ಮನಾಽಸ್ಮಾಕಂ ಕುಭೂಪೇನ ಪ್ರಣಾಶಿತಾ ।
ಖೇ ಗತಿರ್ಲೋಭಯಿತ್ವಾತು ಪತ್ನ್ಯೋಽಸ್ಮಾಕಮಕೃತ್ರಿಮಾಃ ।
ಸರಲಾಸ್ತದ್ಗುಣಾಃ ಸರ್ವೇ ಯೇನೇದೃಗ್ವ್ಯಸನಂ ಸ್ಥಿತಂ ॥ ೧೦ ॥

ಸೂತ ಉವಾಚ:—

ಏವಂ ತೇ ಮುನಯೋ ಯಾವಚ್ಛಾಪಂ ತಸ್ಯ ಮಹೀಪತೇಃ ।
ಪ್ರಯಚ್ಛಂತಿ ಚ ತಾಸ್ತಾವದೂಚುರ್ಭಾರ್ಯಾ ರುಷಾನ್ವಿತಾಃ ॥ ೧೧ ॥
ನ ದೇಯೋ ಭೂಪತೇಸ್ತಸ್ಯ ಶಾಪೋ ಬ್ರಾಹ್ಮಣಸತ್ತಮಾಃ ।
ಅಸ್ಮದೀಯಂ ವಚಸ್ತಾವಚ್ಛ್ರೋತವ್ಯಮವಿಶಂಕಿತೈಃ ॥ ೧೨ ॥
ವಯಂ ಸರ್ವಾ ನರೇಂದ್ರಸ್ಯ ಭಾರ್ಯಯಾ ಸಮಲಂಕೃತಾಃ ।
ಸುವಸ್ತ್ರೈರ್ಭೂಷಣೈರ್ದಿವ್ಯೈಃ ಶ್ರದ್ಧಾಪೂತೇನ ಚೇತಸಾ ॥ ೧೩ ॥

---

ಒಡವೆಗಳನ್ನು ಕೊಟ್ಟುದನ್ನೂ, ಬ್ರಾಹ್ಮಣರು ದಮಯಂತಿಗೆ ಶಾಪವಿತ್ತುದನ್ನೂ ತಿಳಿಸಿದರು. ನಿಂದ್ಯವಾದ ಆ ಮಾತನ್ನು ಕೇಳಿ ಕುಪಿತರಾದ ಮುನಿಗಳು ರಾಜನಿಂದ ಪ್ರತಿಗ್ರಹಮಾಡುವುದು ವಿಶೇಷವಾಗಿ ತಪಸ್ವಿಗಳಿಗೆ ನಿಂದ್ಯವಾದುದು. ಎಂದು ಹೇಳಿ ಕೋಪದಿಂದ ನಡುಗುತ್ತ ಪಾಪಿಯಾದ ಈ ದುಷ್ಟರಾಜನು ಕಪಟವನ್ನರಿಯದವರೂ, ಸರಳರೂ, ಒಳ್ಳೆಯ ಗುಣವುಳ್ಳವರೂ ಆದ ನಮ್ಮ ಪತ್ನಿಯರಿಗೆ ಆಶೆಯನ್ನುಂಟುಮಾಡಿ ನಮ್ಮ ಆಕಾಶಗಮನವನ್ನು ಹಾಳುಮಾಡಿದನು. ಆದರಿಂದ ನಮಗೆ ಇಂತಹ ದುಃಖವೊದಗಿತು. ಎಂದು ಆ ರಾಜನನ್ನೂ, ಅವನ ದೇಶವನ್ನೂ ನಾಶಗೊಳಿಸಲು ಶಪಿಸುವುದಕ್ಕಾಗಿ ನೀರನ್ನು ತೆಗೆದುಕೊಂಡರು.

೧೧. ಸೂತನು ಹೇಳುತ್ತಾನೆ:—ಹೀಗೆ ಆ ಮುನಿಗಳು ಆ ದೊರೆಗೆ ಶಾಪವನ್ನೀಯಲುದ್ಯುಕ್ತರಾಗಲು ಅಷ್ಟರಲ್ಲಿ ಕುಪಿತರಾದ ಅವರ ಪತ್ನಿಯರು ಇಂತೆಂದರು.

೧೨. "ಬ್ರಾಹ್ಮಣವರ್ಯರೆ! ನೀವು ಆ ದೊರೆಗೆ ಶಾಪವನ್ನು ಕೊಡಬಾರದು. ನಮ್ಮ ಮಾತನ್ನು ನಿಶ್ಶಂಕೆಯಿಂದ ಕೇಳಬೇಕು.

೧೩. ರಾಣಿಯು ನಮ್ಮನ್ನು ಶ್ರದ್ಧೆಯಿಂದ ದಿವ್ಯ ಒಡವೆ ವಸ್ತ್ರಗಳಿಂದ ಅಲಂಕರಿಸಿದ್ದಾಳೆ.

ವಯಂ ದರಿದ್ರದೋಷೇಣ ಸದಾ ಯುಷ್ಮದ್ಗೃಹೇ ಸ್ಥಿತಾಃ ।
ಕರ್ಶಿತಾ ನ ಚ ಸಂಪ್ರಾಪ್ತಂ ಸುಖಂ ಮರ್ತ್ಯಸಮುದ್ಭವಂ ॥ ೧೪ ॥
ಏತೇಷಾಂ ಪರಲೋಕೋಽತ್ರ ವಿದ್ಯತೇ ಯೇ ತಪೋರತಾಃ ।
ಸ ಚ ಮರ್ತ್ಯಫಲಂ ಕಿಂಚಿದಪಿ ಸ್ವಲ್ಪತರಂ ಭವೇತ್ ॥ ೧೫ ॥
ಅನ್ಯೇಷಾಂ ವಿಷಯಸ್ಥಾನಾಮಿಹಲೋಕಃ ಪ್ರಕೀರ್ತಿತಃ ।
ಭೋಗಪ್ರಸಕ್ತ ಚಿತ್ತಾನಾಂ ನೀಚಾನಾಂ ಸುದುರಾತ್ಮನಾಂ ॥ ೧೬ ॥
ಗೃಹಸ್ಥಾಶ್ರಮಿಣಾಂ ಚೈವ ಸ್ವಧರ್ಮರತಚೇತಸಾಂ ।
ಇಹ ಲೋಕಃ ಪರಶ್ಚೈವ ಜಾಯತೇ ನಾಽತ್ರಸಂಶಯಃ ॥ ೧೭ ॥
ತಾ ವಯಂ ನಾಽತ್ರ ಸಂದೇಹೋ ಗೃಹಸ್ಥಾಶ್ರಮಮುತ್ತಮಂ ।
ಸಂಸೇವ್ಯ ಸಾಧಯಿಷ್ಯಾಮೋ ಲೋಕದ್ವಯಮನುತ್ತಮಂ ॥ ೧೮ ॥
ತಸ್ಮಾದ್ಗೃಹಾಣಿ ರಮ್ಯಾಣಿ ಪ್ರವದಂತಿ ಸಮಾಹಿತಾಃ ।
ಭೂಪಾಲಾದ್ಭೂಮಿಮಾದಾಯ ವೃತ್ತಿಂಚೈವಾಽಭಿವಾಂಛಿತಾಂ ॥ ೧೯ ॥
ತತಶ್ಚೈವಾಽಥ ವೀಕ್ಷಧ್ವಂ ಪುತ್ರ ಪೌತ್ರಸಮುದ್ಭವಂ ।
ಸೌಖ್ಯಂ ಚಾಽಪಿ ಕುಮಾರೀಣಾಂ ಬಾಂಧವಾನಾಂ ವಿಶೇಷತಃ ॥ ೨೦ ॥
ನ ಕರಿಷ್ಯಥ ಚೇದ್ವಾಕ್ಯಮೇತದಸ್ಮದುದೀರಿತಂ ।
ಸರ್ವಾಃ ಪ್ರಾಣಪರಿತ್ಯಾಗಂ ಕರಿಷ್ಯಾಮೋ ನ ಸಂಶಯಃ ॥ ೨೧ ॥

---

೧೪. ನಿಮ್ಮ ಮನೆಯಲ್ಲಿರುವ ನಾವು ಯಾವಾಗಲೂ ಬಡತನದಿಂದ ಪೀಡಿತರಾಗಿದ್ದೇವೆ. ನಾವು ಮಾನವಸಹಜವಾದ ಸುಖವನ್ನು ಪಡೆಯಲಿಲ್ಲ.

೧೫. ತಪೋನಿಷ್ಠರಾದವರಿಗೆ ಪರಲೋಕ ಸುಖವಿರುವುದು. ಈ ಲೋಕದ ಅಲ್ಪಸುಖವೂ ಇಲ್ಲ.

೧೬. ಭೋಗಾಸಕ್ತಮಾನಸರೂ, ನೀಚರೂ, ದುರಾತ್ಮರೂ ಆದ ವಿಷಯಾಸಂಗಿಗಳಿಗೆ ಈ ಲೋಕದ ಸುಖಮಾತ್ರ ಲಭಿಸುವುದು.

೧೭. ಸ್ವಧರ್ಮಾಸಕ್ತರಾದ ಗೃಹಸ್ಥಾಶ್ರಮಿಗಳಿಗೆ ಇಹಪರ ಸುಖಗಳೆರಡೂ ದೊರೆಯುವುವು.

೧೮. ನಾವು ಉತ್ತಮ ಗೃಹಸ್ಥಾಶ್ರಮವನ್ನು ಸೇವಿಸಿ ಶ್ರೇಷ್ಠವಾದ ಉಭಯಲೋಕಗಳನ್ನೂ ಸಾಧಿಸೋಣ.

೧೯. ಆದುದರಿಂದ ಪ್ರಾಜ್ಞರು ರಾಜನಿಂದ ಭೂಮಿಯನ್ನೂ, ಇಷ್ಟವಾದ ವೃತ್ತಿಯನ್ನೂ ಪಡೆದ ಗೃಹಸ್ಥಾಶ್ರಮವನ್ನು ರಮ್ಯವೆಂದು ಹೇಳುತ್ತಾರೆ.

೨೦. ಆದುದರಿಂದ ನೀವು ಪುತ್ರಪೌತ್ರರಿಂದುಂಟಾದ ಸೌಖ್ಯವನ್ನೂ, ವಿಶೇಷವಾಗಿ ಕನ್ಯೆಯರ ಮತ್ತು ಬಂಧುಗಳ ಸೌಖ್ಯವನ್ನೂ ನೋಡಿರಿ.

೨೧. ನಾವು ಹೇಳಿದ ಈ ಮಾತನ್ನು ನಡೆಯಿಸದಿದ್ದರೆ ನಾವೆಲ್ಲರೂ ಸೇರಿ ನಿಜವಾಗಿಯೂ ಪ್ರಾಣವನ್ನು ತ್ಯಜಿಸುವೆವು.

ಯೂಯಂ ಸ್ತ್ರೀವಧಪಾಪೇನ ಯುಕ್ತಾಸ್ಸಂತಸ್ತತಃ ಪರಂ ।
ನರಕಂ ರೌರವಂ ದುರ್ಗಂ ಗಮಿಷ್ಯಥ ಸುನಿಶ್ಚಿತಂ ॥ ೨೨ ॥
ಏವಂ ತೇ ಮುನಯಃ ಶ್ರುತ್ವಾ ತಾಸಾಂ ವಾಕ್ಯಾನಿ ತಾನಿ ವೈ ।
ಭೂಪೃಷ್ಠೇ ತತ್ಯಜುಸ್ತೋಯಂ ಶಾಪಾರ್ಥಂ ಯತ್ಕರೈರ್ಧೃತಂ ॥ ೨೩ ॥
ತತಸ್ತತ್ತೋಯವಿನಿರ್ದಗ್ಧಂ ತದ್ವಿಭಾಗಂ ಕ್ಷಿತೇಸ್ತದಾ ।
ಊಷರತ್ವಮನುಪ್ರಾಪ್ತಮದ್ಯಾಪಿ ದ್ವಿಜಸತ್ತಮಾಃ ॥ ೨೪ ॥
ಆಸ್ತಾಮನ್ನಾದಿಕಂ ತತ್ರ ಯದುಪ್ತಂ ನ ಪ್ರರೋಹತಿ ।
ನ ಜನ್ಮಚಾಪ್ನುಯಾದ್ಭೂಯಃ ಪಕ್ಷೀ ವಾ ಕೀಟ ಏವ ವಾ ॥ ೨೫ ॥
ತೃಣಂ ವಾಽಥ ಮೃಗಸ್ತತ್ರ ಕಿಂಪುನರ್ಭಕ್ತಿಮಾನ್ನರಃ ।
ಯಸ್ತತ್ರ ಕುರುತೇ ಶ್ರಾದ್ಧಂ ಶ್ರದ್ಧಯಾ ಫಾಲ್ಗುನೇ ನರಃ ॥ ೨೬ ॥
ಪೌರ್ಣಮಾಸ್ಯಾಂ ರವೇರ್ವಾರೇ ಸ ಪಿತೄನುದ್ಧರೇನ್ನಿಜಾನ್ ।
ಅಪಿ ಸ್ವಕರ್ಮಣಾ ಪ್ರಾಪ್ತಂನರಕೇ ದಾರುಣಾಕೃತೌ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಊಷರೋತ್ಪತ್ತಿಮಾಹಾತ್ಮ್ಯಕಥನಂ"
ನಾಮ ದ್ವಾದಶೋತ್ತರಶತತಮೋಽಧ್ಯಾಯಃ

---

೨೨. ಅನಂತರ ನೀವು ಸ್ತ್ರೀವಧೆಯಿಂದುಂಟಾದ ಪಾಪದಿಂದ ಲಿಪ್ತರಾಗಿ ದುರ್ಗಮವಾದ ರೌರವ ನರಕಕ್ಕೆ ತೆರಳುವಿರಿ."

೨೩. ಆ ಮುನಿಗಳು ತಮ್ಮ ಪತ್ನಿಯರು ನುಡಿದ ಆ ಮಾತುಗಳನ್ನು ಕೇಳಿ ಶಾಪಕ್ಕಾಗಿ ಕೈಯಲ್ಲಿ ಹಿಡಿದ ನೀರನ್ನು ನೆಲದಮೇಲೆ ಬಿಟ್ಟರು.

೨೪. ದ್ವಿಜವರ್ಯರೆ! ಆ ನೀರಿನಿಂದ ಸುಟ್ಟ ಭೂಮಿಭಾಗವು ಏನೂ ಬೆಳೆಯದ ಊಷರಕ್ಷೇತ್ರವಾಯಿತು.

೨೫-೨೭. ಅಲ್ಲಿ ಆಹಾರವಸ್ತುಗಳು ಬೆಳೆಯದಿರುವುದಿರಲಿ. ನೆಟ್ಟ ಯಾವ ಬೀಜವೂ ಮೊಳೆಯುವುದಿಲ್ಲ. ಪಕ್ಷಿಯಾಗಲಿ, ಕೀಟವಾಗಲಿ ಹುಟ್ಟುವುದಿಲ್ಲ. ಹುಲ್ಲು ಅಥವಾ ಮೃಗಗಳು ಬೆಳೆಯುವುದಿಲ್ಲ. ಅಲ್ಲಿ ಫಾಲ್ಗುನ ಮಾಸದ ಹುಣ್ಣಿಮೆ ಭಾನುವಾರ ಭಕ್ತಿಯಿಂದ ಶ್ರಾದ್ಧಮಾಡಿದವನು ತನ್ನ ಪಿತೃಗಳನ್ನು ಕರ್ಮದಿಂದ ಪ್ರಾಪ್ತವಾದ ದಾರುಣ ನರಕದಿಂದ ಉದ್ಧರಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಊಷರೋತ್ಪತ್ತಿಮಾಹಾತ್ಮ್ಯಕಥನ" ವೆಂಬ
ನೂರಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋತ್ತರಶತತಮೋಽಧ್ಯಾಯಃ

### ಅಗ್ನಿಕುಂಡಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತತಸ್ತೇ ಬ್ರಾಹ್ಮಣಾಃ ಸರ್ವೇ ಗತಕೋಪಾ ದಧುರ್ಮತಿಂ ।
ಯಜ್ಞಕರ್ಮಸು ಗಾರ್ಹಸ್ಥ್ಯೇ ಪುತ್ರ ಪೌತ್ರ ಸಮುದ್ಭವೇ ॥ ೧ ॥
ಏತಸ್ಮಿನ್ನಂತರೇ ರಾಜಾ ಸ ತಾನ್ ಪ್ರಾಪ್ತಾನ್ ದ್ವಿಜೋತ್ತಮಾನ್ ।
ಶ್ರುತ್ವಾ ಭಕ್ತಿಸಮಾಯುಕ್ತಃ ಪ್ರಣಾಮಾರ್ಥಮುಪಾಗತಃ ॥ ೨ ॥
ಶ್ರುತ್ವಾ ಕೋಪಗತಾಂ ವಾರ್ತಾಮುಪಶಾಮುಕೃತಾಂ ತಥಾ ।
ಗಾರ್ಹಸ್ಥ್ಯಪ್ರತಿಪನ್ನಾನಾಂ ವಾಕ್ಯೈರ್ಭಾರ್ಯಾಸಮುದ್ಭವೈಃ ॥ ೩ ॥
ತತಃ ಪ್ರಣಮ್ಯ ತಾನ್ ಸರ್ವಾನ್ ಸಾಷ್ಟಾಂಗಂ ಸ ಮಹೀಪತಿಃ ।
ತತಃ ಕೃತಾಂಜಲಿಪುಟಃ ಪ್ರೋವಾಚ ವಿನತಃ ಸ್ಥಿತಃ ॥ ೪ ॥
ಯುಷ್ಮದೀಯಪ್ರಸಾದೇನ ಸಂಪ್ರಾಪ್ತಂ ಜನ್ಮನಃ ಫಲಂ ।
ಮಯಾ ರೋಗವಿನಾಶೇನ ತಸ್ಮಾದ್ಬ್ರೂತ ಕರೋಮಿ ಕಿಂ ॥ ೫ ॥

---

### ಕನ್ನಡದ ಅನುವಾದ

#### ಅಗ್ನಿಕುಂಡಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ಅನಂತರ ಆ ಸಮಸ್ತ ಬ್ರಾಹ್ಮಣರೂ ಕೋಪ ರಹಿತರಾಗಿ ಯಜ್ಞಮಾಡುವುದರಲ್ಲಿಯೂ, ಗೃಹಸ್ಥಧರ್ಮದಲ್ಲಿಯೂ, ಪುತ್ರ ಪೌತ್ರರ ಜನನದಲ್ಲಿಯೂ ಮನಸ್ಸನ್ನಿಟ್ಟರು.

೨-೩. ಈ ಮಧ್ಯದಲ್ಲಿ ಆ ರಾಜನು ಬ್ರಾಹ್ಮಣರು ಮನೆಗೆ ಬಂದಿರುವುದನ್ನೂ, ಅವರು ಕುಪಿತರಾಗಿ ಪತ್ನಿಯರ ಮಾತಿನಿಂದ ಶಾಂತರಾದುದನ್ನೂ, ಗೃಹಸ್ಥ ಧರ್ಮವನ್ನವಲಂಬಿಸಿರುವುದನ್ನೂ ಕೇಳಿ ಭಕ್ತಿಯಿಂದ ಅವರನ್ನು ವಂದಿಸಲು ಬಂದನು.

೪. ಅವನು ಆ ಬ್ರಾಹ್ಮಣರನ್ನು ಸಾಷ್ಟಾಂಗ ನಮಸ್ಕಾರಮಾಡಿ ಕೈಜೋಡಿಸಿ ಕೊಂಡು ನಮ್ರತೆಯಿಂದ ಇಂತೆಂದನು.

೫. "ನಾನು ನಿಮ್ಮ ಅನುಗ್ರಹದಿಂದ ರೋಗ ಮುಕ್ತನಾಗಿ ಜನ್ಮದ ಫಲವನ್ನು ಹೊಂದಿದೆನು. ಆದುದರಿಂದ ನಿಮಗೇನು ಉಪಕಾರ ಮಾಡಲಿ ಹೇಳಿರಿ."

ಬ್ರಾಹ್ಮಣಾ ಊಚುಃ:—

ಭಾರ್ಯಯಾ ತವ ರಾಜೇಂದ್ರ ವಯಂ ಸರ್ವತ್ರವಾಸಿನಃ ।
ನೀತಾಃ ಕೃತಾರ್ಥತಾಂ ದತ್ವಾ ರತ್ನಾನಿ ವಿವಿಧಾನಿ ಚ ॥ ೬ ॥
ತಸ್ಮಾತ್ಪುರವರಂ ಕೃತ್ವಾ ಕ್ಷೇತ್ರೇಽತ್ರೈವ ಸುಶೋಭನೇ ।
ಅಸ್ಮಾಕಂ ದೇಹಿ ಗಾರ್ಹಸ್ಥ್ಯಂ ಯೇನ ಸಮ್ಯಕ್ ಪ್ರಜಾಯತೇ ॥ ೭ ॥
ಯಜಾಮೋ ವಿವಿಧೈರ್ಯಜ್ಞೈಃ ಸದಾಸಂಪೂರ್ಣದಕ್ಷಿಣೈಃ ।
ಇಮಂ ಲೋಕಂ ಪರಂ ಚೈವ ಸಾಧಯಾಮಃ ಸದಾ ಸ್ಥಿತಾಃ ॥ ೮ ॥
ತಚ್ಛ್ರುತ್ವಾ ಪಾರ್ಥಿವೋ ಹೃಷ್ಟಸ್ತಥೇತ್ಯುಕ್ತ್ವಾ ತತಃ ಪರಂ ।
ಅನುಕೂಲದಿನೇ ಪ್ರಾಪ್ತೇ ಶಿಲ್ಪಾನಾಹೂಯ ಭೂರಿಶಃ ॥ ೯ ॥
ಪುರಂ ಪ್ರಕಲ್ಪಯಾಮಾಸ ಬಹುಪ್ರಕಾರಸಂಕುಲಂ ।
ಪ್ರಾಕಾರಪರಿಖಾಯುಕ್ತಂ ಗೋಪುರೈಃ ಸಮಲಂಕೃತಂ ॥ ೧೦ ॥
ಅಥಾಽಷ್ಟಷಷ್ಟಿವಿಪ್ರಾಣಾಂ ತತ್ರ ಮಧ್ಯೇ ನೃಪೋತ್ತಮಃ ।
ಅಷ್ಟಷಷ್ಟಿಗೃಹಾಣ್ಯೇವ ಚಕಾರ ಸುಬೃಹಂತಿ ಚ ॥ ೧೧ ॥
ಮತ್ತವಾರಣ ಜುಷ್ಟಾನಿ ದೀರ್ಘಿಕಾ ಸಹಿತಾನಿ ಚ ।
ಗೃಹೋದ್ಯಾನೈಃ ಸಮೇತಾನಿ ಯಥಾ ರಾಜಗೃಹಾಣಿ ಚ ॥ ೧೨ ॥

---

೬. ಬ್ರಾಹ್ಮಣರು ಹೇಳುತ್ತಾರೆ:— ಮಹಾರಾಜ! ನಾವೆಲ್ಲರೂ ನಿನ್ನ ರಾಣಿಯಿಂದ ನಾನಾವಿಧ ರತ್ನಗಳನ್ನು ಕೊಟ್ಟು ಕೃತಾರ್ಥರಾಗಿ ಮಾಡಲ್ಪಟ್ಟೆವು.

೭. ಆದುದರಿಂದ ಈ ಶುಭಕ್ಷೇತ್ರದಲ್ಲಿ ಉತ್ತಮವಾದ ಪಟ್ಟಣವನ್ನು ನಿರ್ಮಿಸಿ ನಮಗೆ ಕೊಡು. ಆದರಿಂದ ನಮ್ಮ ಗೃಹಸ ಧರ್ಮವು ಸರಿಯಾಗಿ ನಡೆಯುವುದು.

೮. ಯಾವಾಗಲೂ ಸಂಪೂರ್ಣದಕ್ಷಿಣೆಯನ್ನಿತ್ತು ಯಾಗವನ್ನು ಮಾಡುತ್ತೇವೆ. ಇಹಪರ ಲೋಕಗಳೆರಡನ್ನೂ ಸಾಧಿಸುವೆವು.

೯–೧೦. ದೊರೆಯು ಅದನ್ನು ಕೇಳಿ ಸಂತೋಷದಿಂದ ಹಾಗೆಯೇ ಆಗಲೆಂದು ಅನುಕೂಲದಿನದಲ್ಲಿ ಅನೇಕಮಂದಿ ಶಿಲ್ಪಿಗಳನ್ನು ಕರೆಯಿಸಿ ಅನೇಕ ಕೋಟೆಗಳಿಂದಲೂ ಕಂದಕಗಳಿಂದಲೂ, ಗೋಪುರಗಳಿಂದಲೂ ಸಹಿತವಾದ ಪಟ್ಟಣವನ್ನು ನಿರ್ಮಿಸಿದನು.

೧೧–೧೨. ಅಲ್ಲಿ ನಡುವೆ ಅರುವತ್ತೆಂಟು ಮಂದಿ ಬ್ರಾಹ್ಮಣರಿಗೆ ಅರಮನೆಯಂತೆ ಮದಿಸಿದ ಆನೆಗಳಿಂದಲೂ, ಕೊಳಗಳಿಂದಲೂ, ಚಿಕ್ಕ ತೋಟಗಳಿಂದಲೂ ಕೂಡಿರುವ ದೊಡ್ಡ ಮನೆಗಳನ್ನು ಕಟ್ಟಿಸಿದನು.

ತಥಾ ಕೃತ್ವಾಽಥ ರತ್ನೌಘೈಃ ಪೂರಯಿತ್ವಾ ತಥಾ ಪರೈಃ ।
ಪದೌ ತೇಭ್ಯೋಽಷ್ಟಷಷ್ಟಿಂ ಚ ಗ್ರಾಮಾಣಾಂ ತದನಂತರಂ ॥ ೧೩ ॥
ತತಃ ಸರ್ವಾನ್ ಸಮಾಹೂಯ ಪುತ್ರಪೌತ್ರಾಂಸ್ತದಗ್ರತಃ ।
ಪ್ರೋವಾಚ ತಾರನಾದೇನ ಶ್ರೂಯತಾಂ ಜಲ್ಪತೋ ಮಮ ॥ ೧೪ ॥
ಏತತ್ಪುರಂ ಮಯಾ ದತ್ತಮೇಭಿಗ್ರಾಮೈಃ ಸಮನ್ವಿತಂ ।
ಏತೇಭ್ಯೋ ಬ್ರಾಹ್ಮಣೇಂದ್ರೇಭ್ಯಃ ಶ್ರದ್ಧಾಪೂತೇನ ಚೇತಸಾ ॥ ೧೫ ॥
ತಸ್ಮಾದ್ರಕ್ಷಾ ಪ್ರಕರ್ತವ್ಯಾ ಯಥಾ ನಸ್ಯಾತ್ಕ್ಷತಿಃ ಕ್ವಚಿತ್ ।
ಕಷ್ಟಂ ವಾ ಬ್ರಾಹ್ಮಣೇಂದ್ರಾಣಾಂ ತಥಾ ಚೈವ ಪರಾಭವಂ ॥ ೧೬ ॥
ಅಸ್ಮದ್ವಂಶಸಮುದ್ಭೂತೋ ಯಸ್ತ್ವೇತಾಂ ತೋಷಯಿಷ್ಯತಿ ।
ಅನ್ಯೋ ವಾ ಭೂಪತಿರ್ವೃದ್ಧಿಮುಗ್ರ್ಯಾಂ ನೂನಂ ಸ ಯಾಸ್ಯತಿ ॥ ೧೭ ॥
ಯಶ್ಚಾಽಪರಾಧ ಸಂಯುಕ್ತಾನೇತಾನ್ ಖೇದಂ ನಯಿಷ್ಯತಿ ।
ಯೋಜಯಿಷ್ಯತಿ ವಾ ಕ್ಲೇಶೈರ್ವಿವಿಧೈರ್ವಾ ಪರಾಭವೈಃ ।
ಸ ಶತ್ರುಭಿಃ ಪರಾಭೂತೋ ವೇಷ್ಟಿತೋ ವಿವಿಧೈರ್ಗದೈಃ ॥ ೧೮ ॥
ಇಹ ಲೋಕೇ ವಿಯೋಗಾದೀನ್ಪ್ರಾಪ್ಯ ಕ್ಲೇಶಾನ್ಸುದಾರುಣಾನ್ ।
ರೌರವಾದಿಷು ರೌದ್ರೇಷು ನರಕೇಷು ಪ್ರಯಾಸ್ಯತಿ ॥ ೧೯ ॥

---

೧೩. ಅನಂತರ ಅವುಗಳನ್ನು ರತ್ನಗಳಿಂದ ತುಂಬಿ ಅರುವತ್ತೆಂಟು ಗ್ರಾಮಗಳನ್ನು ಆ ಅರುವತ್ತೆಂಟು ಮಂದಿ ಬ್ರಾಹ್ಮಣರಿಗೆ ದಾನ ಕೊಟ್ಟನು.

೧೪. ಅನಂತರ ಆ ರಾಜನು ಎಲ್ಲಾ ಮಕ್ಕಳು ಮೊಮ್ಮಕ್ಕಳನ್ನೂ ಕರೆಯಿಸಿ ಉಚ್ಚಧ್ವನಿಯಿಂದ, "ನಾನು ಹೇಳುವುದನ್ನು ಕೇಳಿರಿ" ಎಂದನು.

೧೫. ನಾನು ಶ್ರದ್ಧೆಗೊಂಡ ಮನಸ್ಸಿನಿಂದ ಈ ಬ್ರಾಹ್ಮಣರಿಗೆ ಈ ಗ್ರಾಮಗಳೊಡನೆ ಈ ಪಟ್ಟಣವನ್ನು ಕೊಟ್ಟಿದ್ದೇನೆ.

೧೬. ಆದುದರಿಂದ ನೀವು ಈ ಬ್ರಾಹ್ಮಣೋತ್ತಮರಿಗೆ ಕಷ್ಟವಾಗಲಿ, ಅಪಜಯವಾಗಲಿ ಆಗದಂತೆ ಇದನ್ನು ರಕ್ಷಿಸಬೇಕು.

೧೭. ನಮ್ಮ ವಂಶದವರಾಗಲಿ, ಇತರರಾಗಲಿ ಯಾರಾದರೂ ರಾಜರು ಇವರನ್ನು ಸಂತೋಷಗೊಳಿಸಿದರೆ ಅವರು ಉತ್ತಮವಾದ ವೃದ್ಧಿಯನ್ನು ಹೊಂದುತ್ತಾರೆ.

೧೮–೧೯. ಇವರನ್ನು ಕ್ಲೇಶ ಪರಾಭವಗಳಿಂದ ವ್ಯಥೆಗೊಳಿಸಿದವನು ಶತ್ರುಗಳಿಂದಲೂ, ನಾನಾ ಬಗೆಯ ರೋಗಗಳಿಂದಲೂ ಪೀಡಿತನಾಗಿ ಈ ಲೋಕದಲ್ಲಿ ವಿಯೋಗ ಮೊದಲಾದ ದಾರುಣಕ್ಲೇಶಗಳನ್ನು ಹೊಂದಿ ಭಯಂಕರವಾದ ರೌರವಾದಿ ನರಕಗಳಿಗೆ ಹೋಗುವನು.

ಏವಮುಕ್ತ್ವಾ ತತಃ ಸರ್ವಂ ತೇಷಾಂ ಕೃತ್ಯಂ ಮಹೀಪತಿಃ ।
ಸ್ವಯಮೇವಾಕರೋನ್ನಿತ್ಯಂ ದಿವಾರಾತ್ರಮತಂದ್ರಿತಃ ॥ ೨೦ ॥
ಅಥ ತಾ ಬ್ರಾಹ್ಮಣೇಂದ್ರಾಣಾಂ ಭಾರ್ಯಾಃ ಸರ್ವಾ ದ್ವಿಜೋತ್ತಮಾಃ ।
ದಮಯಂತ್ಯಾಃ ಸಮಾಸಾದ್ಯ ಪ್ರಾಸಾದಂ ಸ್ನೇಹವತ್ಸಲಾಃ ॥ ೨೧ ॥
ಕುಂಕುಮಾಗರುಕರ್ಪೂರೈಃ ಪುಷ್ಪೈರ್ಗಂಧೈಃಪೃಥಗ್ವಿಧೈಃ ।
ತದರ್ಚಾಂ ಪೂಜಯಾಮಾಸುಃ ಸ ಚ ರಾಜಾ ದಿನೇದಿನೇ ॥ ೨೨ ॥
ಅಥ ತಾಃ ಪ್ರೋಚುರನ್ಯೋನ್ಯಂ ತಾಪಸ್ಯಸ್ತತ್ಪುರಃಸ್ಥಿತಾಃ ।
ತಸ್ಯ ಭೂಪಸ್ಯ ಸಂತೋಷಂ ಜನಯಂತ್ಯೋ ದ್ವಿಜೋತ್ತಮಾಃ ॥ ೨೩ ॥
ಯದಾಽಸ್ಮಾಕಂ ಗೃಹೇ ವೃದ್ಧಿಃ ಕದಾಚಿತ್ಸಂಭವಿಷ್ಯತಿ ।
ತದಗ್ರತಶ್ಚ ಪಶ್ಚಾಚ್ಚ ದಮಯಂತ್ಯಾಃ ಪ್ರಪೂಜನಂ ।
ಕರಿಷ್ಯಾಮೋ ನ ಸಂದೇಹಃ ಸರ್ವಕೃತ್ಯೇಷು ಸರ್ವದಾ ॥ ೨೪ ॥
ಏನಾಂ ದೃಷ್ಟ್ವಾ ಕುಮಾರೀ ಯಾ ವೇದಿಮಧ್ಯಂ ಗಮಿಷ್ಯತಿ ।
ಸಾ ಭವಿಷ್ಯತ್ಯಸಂದೇಹಃ ಪತ್ಯುಃಪ್ರಾಣಸಮಾ ಸದಾ ॥ ೨೫ ॥
ತಸ್ಮಾತ್ಸರ್ವಪ್ರಯತ್ನೇನ ಕನ್ಯಾಯಜ್ಞ ಉಪಸ್ಥಿತೇ ।
ದಮಯಂತೀ ಪ್ರದ್ರಷ್ಟವ್ಯಾ ಪೂಜನೀಯಾ ಪ್ರಯತ್ನತಃ ॥ ೨೬ ॥

---

೨೦. ದೊರೆಯು ಹೀಗೆ ಹೇಳಿ ತಾನೇ ಅವರ ಸಕಲ ಕಾರ್ಯಗಳನ್ನು ಹಗಲು ರಾತ್ರಿ ಆಲಸ್ಯವಿಲ್ಲದೆ ಮಾಡಿದನು.

೨೧–೨೨. ಬಳಿಕ ಆ ಬ್ರಾಹ್ಮಣೋತ್ತಮರ ಪತ್ನಿಯರೆಲ್ಲ ಸ್ನೇಹದಿಂದ ದಮಯಂತಿಯ ಆಲಯವನ್ನು ಹೊಂದಿ ಕುಂಕುಮ, ಗಂಧ, ಕರ್ಪೂರ, ಪುಷ್ಪ ಮೊದಲಾದುವುಗಳಿಂದ ಅವಳನ್ನು ಪೂಜಿಸಿದರು. ರಾಜನೂ ಪ್ರತಿದಿನವೂ ಅವಳನ್ನು ಪೂಜಿಸಿದನು.

೨೩. ದ್ವಿಜವರ್ಯರೆ! ಆ ದಮಯಂತಿಯ ಮುಂದೆ ನಿಂತಿರುವ ಆ ತಾಪಸಿಯರು ದೊರೆಗೆ ಆನಂದವನ್ನುಂಟುಮಾಡುತ್ತ ಪರಸ್ಪರವಾಗಿ ಹೀಗೆ ಮಾತಾಡಿಕೊಂಡರು.

೨೪. ಯಾವಾಗಲಾದರೂ ನಮ್ಮ ಮನೆಯಲ್ಲಿ ವಿವಾಹಾದಿ ಶುಭಕಾರ್ಯಗಳು ನಡೆದಲ್ಲಿ ಆ ಉತ್ಸವದ ಮೊದಲೂ, ಅನಂತರವೂ, ನಿಶ್ಚಯವಾಗಿಯೂ ದಮಯಂತಿಯನ್ನು ಪೂಜಿಸುವೆವು.

೨೫–೨೬. ಯಾವ ಕನ್ಯೆಯು ಇವಳನ್ನು ನೋಡಿ ವಿವಾಹವೇದಿಮಧ್ಯವನ್ನು ಹೊಂದುವಳೊ, ಅವಳು ನಿಶ್ಚಯವಾಗಿಯೂ ಪತಿಗೆ ಪ್ರಾಣಕ್ಕೆ ಸಮನಾಗುವಳು. ಆದುದರಿಂದ ವಿವಾಹದಲ್ಲಿ ಅವಶ್ಯವಾಗಿ ದಮಯಂತಿಯನ್ನು ನೋಡಿ ಪೂಜಿಸಬೇಕು.

ಸೂತ ಉವಾಚ :—

ಏವಂ ತತ್ರ ಪುರೇ ತೇನ ಭೂಭುಜಾ ಸುಮಹಾತ್ಮನಾ ।
ಅಷ್ಟಷಷ್ಟಿಂ ಚ ಸಂಸ್ಥಾಪ್ಯ ಗೋತ್ರಾಣಾಂ ನಿರ್ವೃತಿಃ ಕೃತಾ ॥ ೨೭ ॥
ತೇಷಾಮಪಿ ಚ ಚತ್ವಾರಿ ಗೋತ್ರಾಣ್ಯುರಗಜಾದ್ಭಯಾತ್ ।
ಗತಾನಿ ತತ್ರ ಯತ್ರಾಸ್ಯುಸ್ತಾನಿ ಪೂರ್ವೋದ್ಭವಾನಿ ಚ ।
ಚತುಃಷಷ್ಟಿಃ ಸ್ಥಿತಾ ತತ್ರ ಪುರೇ ಶೇಷಾ ದ್ವಿಜನ್ಮನಾಂ ॥ ೨೮ ॥

ಋಷಯ ಊಚುಃ :—

ಕೀದೃಙ್ನಾಗಭಯಂ ತೇಷಾಂ ಯೇನ ತೇ ವಿಗತಾ ವಿಭೋ ।
ಪರಿತ್ಯಜ್ಯ ನಿಜಂ ಸ್ಥಾನಮೇತನ್ನೋ ವಿಸ್ತರಾದ್ವದ ॥ ೨೯ ॥

ಸೂತ ಉವಾಚ :—

ಆನರ್ತಾಧಿಪತಿಃ ಪೂರ್ವಮಾಸೀನ್ನಾಮ್ನಾ ಪ್ರಭಂಜನಃ ।
ಧರ್ಮಜ್ಞಃ ಸುಪ್ರತಾಪೀ ಚ ಪರಪಕ್ಷಕ್ಷಯಾವಹಃ ॥ ೩೦ ॥
ತತಸ್ತಸ್ಯ ಸುತೋ ಜಜ್ಞೇ ಪ್ರಾಪ್ತೇ ವಯಸಿ ಪಶ್ಚಿಮೇ ।
ಅನಿಷ್ಟಸ್ಥಾನ ಸಂಸ್ಥೇಷು ಗ್ರಹೇಷು ದ್ವಿಜಸತ್ತಮಾಃ ॥ ೩೧ ॥
ತತಸ್ತೇನ ಸಮಾಹೂಯ ದೈವಜ್ಞಾಂಛಾಸ್ತ್ರಪಂಡಿತಾನ್ ।
ತೇಷಾಂ ನಿವೇದಿತಂ ಸರ್ವಂ ಕಾಲಂ ತಸ್ಯ ಸಮುದ್ಭವಂ ॥ ೩೨ ॥

---

೨೭. ಸೂತನು ಹೇಳುತ್ತಾನೆ:—ಮಹಾತ್ಮನಾದ ಆ ರಾಜನು ಹೀಗೆ ಆ ಪಟ್ಟಣದಲ್ಲಿ ಅರುವತ್ತೆಂಟು ಗೋತ್ರಗಳನ್ನು ಸ್ಥಾಪಿಸಿ ಸುಖಗೊಂಡನು.

೨೮. ಅವುಗಳಲ್ಲಿ ನಾಲ್ಕು ಗೋತ್ರದವರು ಸರ್ಪಭಯದಿಂದ ತಾವು ಹಿಂದೆ ಇದ್ದ ಸ್ಥಳಕ್ಕೆ ಹೋದರು. ಉಳಿದ ಆರುವತ್ತುನಾಲ್ಕು ಗೋತ್ರದವರು ಆ ಪಟ್ಟಣದಲ್ಲಿ ವಾಸಿಸಿದರು.

೨೯. ಋಷಿಗಳು ಹೇಳುತ್ತಾರೆ:—ಸ್ವಾಮಿ! ಆ ನಾಲ್ಕು ಗೋತ್ರದವರು ತಮ್ಮ ಸ್ಥಳವನ್ನು ಬಿಟ್ಟು ಆ ಸ್ಥಳಕ್ಕೆ ಹೋಗುವಂತಹ ಸರ್ಪಭಯವುಂಟಾದುದು ಹೇಗೆ. ಇದನ್ನು ನಮಗೆ ವಿಸ್ತಾರವಾಗಿ ಹೇಳು.

೩೦. ಸೂತನು ಹೇಳುತ್ತಾನೆ:—ಹಿಂದೆ ಈ ಆನರ್ತಾಧಿಪತಿಯು ಧರ್ಮವನ್ನರಿತವನೂ, ಪ್ರತಾಪಶಾಲಿಯೂ, ಶತ್ರುಪಕ್ಷದವರಿಗೆ ಭಯವನ್ನೆಸಗುವವನೂ ಆದ ಪ್ರಭಂಜನನೆಂಬ ರಾಜನಾಗಿದ್ದನು.

೩೧. ಅವನಿಗೆ ಮುಪ್ಪಿನಲ್ಲಿ ಸಮಸ್ತ ಗ್ರಹಗಳು ಅನಿಷ್ಟಸ್ಥಾನದಲ್ಲಿರಲು ಒಬ್ಬ ಮಗನು ಜನಿಸಿದನು.

೩೨. ತರುವಾಯ ಪ್ರಭಂಜನನು ಶಾಸ್ತ್ರ ನಿಷ್ಣಾತರಾದ ಜೋಯಿಸರನ್ನು ಕರೆಯಿಸಿ ಅವರಿಗೆ ಅವನು ಹುಟ್ಟಿದ ಕಾಲವನ್ನು ತಿಳಿಸಿದನು.

ದೈವಜ್ಞಾ ಊಚುಃ:—

ಏಷ ತೇ ಪೃಥಿವೀಪಾಲ ಜಾತಃ ಪುತ್ರಃ ಸುಗರ್ಹಿತೇ ।
ಕಾಲೇಽನಿಷ್ಟಪ್ರದೇ ರೌದ್ರೇ ಗಂಡಾಂತತ್ರಿತಯೋದ್ಭವೇ ॥ ೩೩ ॥
ಕಥಂಚಿದಪಿ ಯದ್ಯೇಷ ಜೀವಯಿಷ್ಯತಿ ಪಾರ್ಥಿವ ।
ಪಿತೃಮಾತೃಪುರಾರ್ಥೇಽಚ ದೇಶಾನುತ್ಸಾದಯಿಷ್ಯತಿ ॥ ೩೪ ॥

ರಾಜೋವಾಚ:—

ಅಸ್ತಿ ಕಶ್ಚಿದುಪಾಯೋಽತ್ರ ದೈವೋ ವಾ ಮಾನುಷೋಽಪಿ ವಾ ।
ಯೇನ ಸಂಜಾಯತೇ ಕ್ಷೇಮಂ ಪುತ್ರಸ್ಯ ವಿಷಯಸ್ಯ ಚ ॥ ೩೫ ॥

ಬ್ರಾಹ್ಮಣಾ ಊಚುಃ:—

ಯಥಾ ಸಮುತ್ಥಿತಂ ಯಂತ್ರಂ ಯಂತ್ರೇಣ ಪ್ರತಿಹನ್ಯತೇ ।
ಯಥಾ ಬಾಣಪ್ರಹಾರಾಣಾಂ ಕವಚಂ ವಾರಣಂ ಭವೇತ್ ।
ತಥಾ ಗ್ರಹವಿಕಾರಾಣಾಂ ಶಾಂತಿರ್ಭವತಿ ವಾರಣಂ ॥ ೩೬ ॥
ತಸ್ಮಾನ್ನಿತ್ಯಮನುದ್ವಿಗ್ನಃ ಶಾಂತಿಕಂ ಕುರು ಭೂಪತೇ ।
ಯೇನ ಸರ್ವೇ ಗ್ರಹಾಃ ಸೌಮ್ಯಾ ಜಾಯಂತೇ ಚ ಶುಭಾವಹಾಃ ॥ ೩೭ ॥
ಅನಿಷ್ಟಸ್ಥಾನಸಂಸ್ಥೇಷು ಗ್ರಹೇಷು ವಿಷಮೇಷು ಚ ।
ತತಃ ಸ ಸತ್ವರಂ ಗತ್ವಾ ಚಮತ್ಕಾರಪುರಂ ನೃಪಃ ॥ ೩೮ ॥

---

೩೩. ಜೋಯಿಸರು ಹೇಳುತ್ತಾರೆ:—ಮಹಾರಾಜ! ನಿನ್ನೀ ಪುತ್ರನು ನಿಂದ್ಯವೂ, ಅನಿಷ್ಟವನ್ನುಂಟುಮಾಡುವುದೂ, ಭಯಂಕರವೂ, ಮೂರು ಗಂಡಾಂತರವುಳ್ಳುದೂ ಆದ ಮುಹೂರ್ತದಲ್ಲಿ ಜನಿಸಿದ್ದಾನೆ.

೩೪. ಇವನು ಹೇಗಾದರೂ ಬದುಕಿದರೆ ತಾಯಿ, ತಂದೆ, ಪಟ್ಟಣಗಳಿಗಾಗಿ ದೇಶಗಳನ್ನು ಹಾಳುಮಾಡುವನು.

೩೫. ರಾಜನು ಹೇಳುತ್ತಾನೆ:—ಬ್ರಾಹ್ಮಣರೆ! ನನ್ನೀ ಮಗನಿಗೂ, ದೇಶಕ್ಕೂ ಕ್ಷೇಮವನ್ನುಂಟುಮಾಡುವ ದೇವ ಅಥವಾ ಮನುಷ್ಯ ಸಂಬಂಧವಾದ ಯಾವ ಉಪಾಯವಾದರೂ ಇದೆಯೆ?

೩೬. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ಯಂತ್ರವು ಯಂತ್ರವನ್ನೂ, ಕವಚವು ಬಾಣಗಳ ಹೊಡೆತಗಳನ್ನೂ ತಡೆಯುವಂತೆ ಗ್ರಹವಿಕಾರವನ್ನು ಶಾಂತಿಯು ನಿವಾರಿಸುವುದು.

೩೭—೩೯. ಆದುದರಿಂದ ದೊರೆಯೆ! ನಿರ್ಭಯನಾಗಿ ಶಾಂತಿಕರ್ಮಗಳನ್ನಾಚರಿಸು. ಅದರಿಂದ ಗ್ರಹಗಳು ಅನಿಷ್ಟಸ್ಥಾನಗಳಲ್ಲಿಯೂ, ವಿಷಮಸ್ಥಾನಗಳಲ್ಲಿಯೂ ಇದ್ದರೂ ಅವರು ಸೌಮ್ಯರೂ, ಶುಭದಾಯಕರೂ ಆಗುವರು. ದೊರೆಯು ಅದರಂತೆ ಶೀಘ್ರವಾಗಿ ಚಮತ್ಕಾರಪುರಕ್ಕೆ ಹೋಗಿ ಸಕಲ ಬ್ರಾಹ್ಮಣ

ತತ್ರ ವಿಪ್ರಾನ್ ಸಮಾವೇಶ್ಯ ಸರ್ವಾನ್ ಪ್ರೋವಾಚ ಸಾದರಂ ।
ವಯಂ ಯುಷ್ಮತ್ಪ್ರಸಾದೇನ ರಾಜ್ಯಂ ಕುರ್ಮಃ ಸದೈವ ಹಿ ॥ ೩೯ ॥
ಯೇಽತೀತಾ ಯೇ ಭವಿಷ್ಯಂತಿ ವಂಶೇಽಸ್ಮಾಕಂ ನೃಪೋತ್ತಮಾಃ ।
ಭವಂತೋಽತ್ರ ಗತಿಸ್ತೇಷಾಂ ಸಸ್ಯಾನಾಂ ನೀರದೋ ಯಥಾ ॥ ೪೦ ॥
ಯದತ್ರ ಮತ್ಸುತೋ ಜಾತೋ ದುಷ್ಟಸ್ಥಾನಸ್ಥಿತೈರ್ಗ್ರಹೈಃ ।
ದೈವಜ್ಞೈಃ ಶಾಂತಿಕಂ ಪ್ರೋಕ್ತಂ ತಸ್ಯಾಽನಿಷ್ಟಸ್ಯ ಶಾಂತಿದಂ ॥ ೪೧ ॥
ತಸ್ಮಾತ್ಕುರುತ ವಿಪ್ರೇಂದ್ರಾ ಯಥೋಕ್ತಂ ಶಾಂತಿಕಂ ಮಮ ।
ಯೇನ ಪುತ್ರಶ್ಚ ರಾಷ್ಟ್ರಂ ಚ ವಿಭವಶ್ಚ ವಿವರ್ಧತೇ ॥ ೪೨ ॥
ತತಸ್ತೇ ಬ್ರಾಹ್ಮಣಾಃ ಪ್ರೋಚುಃ ಸಂಮಂತ್ರ್ಯಾಽಥ ಪರಸ್ಪರಂ ।
ಕ್ಷೇಮಾಯ ತವ ಭೂನಾಥ ಕರಿಷ್ಯಾಮೋಽತ್ರ ಶಾಂತಿಕಂ ॥ ೪೩ ॥
ಸದೈವ ನಿಯತಾಃಸಂತಃ ಶಾಂತಾಃ ಷೋಡಶ ತೇ ದ್ವಿಜಾಃ ।
ಉಪಹಾರಾಃ ಸದಾ ಪ್ರೇಷ್ಯಾಸ್ತ್ವಯಾ ಭಕ್ತ್ಯಾ ಮಹೀಪತೇ ।
ಮಾಸಾಂತೇ ಚಾಽಭಿಷೇಕಶ್ಚ ಗ್ರಾಹ್ಯೋ ರುದ್ರಘಟೋದ್ಭವಃ ॥ ೪೪ ॥
ಏವಂ ಪ್ರಕುರ್ವತಸ್ತುಭ್ಯಂ ಪುತ್ರೋ ವೃದ್ಧಿಂ ಪ್ರಯಾಸ್ಯತಿ ।
ತಥಾ ರಾಷ್ಟ್ರಂ ಚ ಕೋಶಶ್ಚ ಯಚ್ಚಾಽನ್ಯದಪಿ ಕಿಂಚನ ॥ ೪೫ ॥

---

ರನ್ನು ಒಟ್ಟುಸೇರಿಸಿ ಪ್ರೀತಿಯಿಂದ ಇಂತೆಂದನು. "ನಾವು ನಿಮ್ಮ ಅನುಗ್ರಹದಿಂದ ಯಾವಾಗಲೂ ರಾಜ್ಯವನ್ನು ಆಳುತ್ತಿದ್ದೇವೆ.

೪೦. ನಮ್ಮ ವಂಶದಲ್ಲಿ ಹಿಂದೆ ಹುಟ್ಟಿದ ಮತ್ತು ಮುಂದೆ ಜನಿಸುವ ರಾಜರಿಗೆ ಸಸ್ಯಗಳಿಗೆ ಮೇಘದಂತೆ ನೀವೇ ಗತಿಯು.

೪೧. ನನ್ನೀ ಮಗನು ಗ್ರಹಗಳು ದುಷ್ಟಸ್ಥಾನಗಳಲ್ಲಿರುವಾಗ ಜನಿಸಿರುವುದರಿಂದ ಜೋಯಿಸರು ಆ ಅನಿಷ್ಟವನ್ನು ಶಾಂತಿಗೊಳಿಸುವುದಕ್ಕಾಗಿ ಶಾಂತಿಕರ್ಮವನ್ನು ಹೇಳಿರುತ್ತಾರೆ.

೪೨. ಬ್ರಾಹ್ಮಣವರ್ಯರೆ! ಆದುದರಿಂದ ವಿಹಿತವಾದ ಶಾಂತಿಕರ್ಮವನ್ನು ನೆರವೇರಿಸಿರಿ. ಅದರಿಂದ ಪುತ್ರ, ರಾಷ್ಟ್ರ, ಐಶ್ವರ್ಯಗಳು ವೃದ್ಧಿಯಾಗುವುವು."

೪೩–೪೪. ಬಳಿಕ ಆ ಬ್ರಾಹ್ಮಣರು ಪರಸ್ಪರ ಆಲೋಚಿಸಿ ಹೀಗೆಂದರು. "ನರೇಂದ್ರ! ನಿನ್ನ ಕ್ಷೇಮಕ್ಕಾಗಿ ನಾವು ಹದಿನಾರು ಮಂದಿ ಯಾವಾಗಲೂ ಶಾಂತರೂ, ವ್ರತಿಗಳೂ ಆಗಿ ಶಾಂತಿಕರ್ಮವನ್ನಾಚರಿಸುವೆವು. ನೀನು ಭಕ್ತಿಯಿಂದ ನಮಗೆ ಉಪಾಹಾರವನ್ನು ಕಳುಹಿಸು. ತಿಂಗಳ ಅಂತ್ಯದಲ್ಲಿ ರುದ್ರಘಟಾಭಿಷೇಕವನ್ನು ಸ್ವೀಕರಿಸಬೇಕು.

೪೫. ಹೀಗೆ ನಾವು ಮಾಡುತ್ತಿರುವುದರಿಂದ ನಿನ್ನ ಪುತ್ರನೂ, ರಾಜ್ಯಕೋಶಗಳೂ, ಇತರ ವಸ್ತುಗಳೂ ವೃದ್ಧಿಯನ್ನು ಹೊಂದುವುವು."

ತತಃ ಪ್ರಣಮ್ಯ ತಾನ್ ಹೃಷ್ಟೋ ಗತ್ವಾ ನಿಜನಿವೇಶನಂ ।
ಉತ್ಸವಂ ಪುತ್ರಜನ್ಮೋತ್ಥಂ ಚಕ್ರೇ ತೈಃ ಪ್ರೇರಿತಃ ಸದಾ ॥ ೪೬ ॥
ಸಂಭಾರಾನ್ ಪ್ರೇಷಯಾಮಾಸ ಚಮತ್ಕಾರಪುರೇ ತತಃ ।
ಮಾಸಾಂತೇ ಚಾಭಿಷೇಕಶ್ಚ ಗ್ರಾಹ್ಯೋ ವೈ ವಿಧಿಪೂರ್ವಕಂ ॥ ೪೭ ॥
ತೇಽಪಿ ಬ್ರಾಹ್ಮಣಶಾರ್ದೂಲಾಶ್ಚಾತುಶ್ಚರಣ ಸಂಭವಾಃ ।
ಕ್ರಮೇಣ ಶಾಂತಿಕಂ ಚಕ್ರುರ್ಬ್ರಹ್ಮಚರ್ಯಪರಾಯಣಾಃ ॥ ೪೮ ॥
ಮಾಸಂ ಮಾಸಂ ಪ್ರತಿ ಸದಾ ಶಾಂತಾ ದಾಂತಾ ಜಿತೇಂದ್ರಿಯಾಃ ।
ತತೋ ಮಾಸಾಽವಸಾನೇಽನ್ಯೇ ಚಕ್ರುಸ್ತಚ್ಛಾಂತಿಕಂ ದ್ವಿಜಾಃ ॥ ೪೯ ॥
ಸೋಽಪಿ ರಾಜಾಽಥಮಾಸಾಂತೇ ಸಮಾಗತ್ಯ ಸುಭಕ್ತಿತಃ ।
ಅಭಿಷೇಕಂ ಸಮಾದಾಯ ಪೂಜಯಿತ್ವಾ ದ್ವಿಜೋತ್ತಮಾನ್ ॥ ೫೦ ॥
ವಾಸೋಭಿರ್ಮುಕುಟೈಶ್ಚೈವ ಗೋಭೂದಾನೇನ ಕೇವಲಂ ।
ಸಂತರ್ಪ್ಯಾನ್ಯಾಂಸ್ತಥಾ ವಿಪ್ರಾನ್ ಸ್ವಸ್ಥಾನಂ ಯಾತಿ ಭೂಮಿಪಃ ॥ ೫೧ ॥
ಏವಂ ಪ್ರವರ್ತಮಾನೇ ಚ ಶಾಂತಿಕೇ ತತ್ರ ಭೂಪತೇಃ ।
ಜಗಾಮ ಸುಮಹಾನ್ ಕಾಲಃ ಕ್ಷೇಮಾರೋಗ್ಯಧನಾಗಮೈಃ ॥ ೫೨ ॥
ಕಸ್ಯಚಿತ್ತ್ವಥ ಕಾಲಸ್ಯ ಮಾಸಾದಾವಪಿ ಭೂಪತೇಃ ।
ಪ್ರಾರಬ್ಧೇ ಶಾಂತಿಕೇ ತಸ್ಮಿನ್ ಮಹಾವ್ಯಾಧಿರಜಾಯತ ॥ ೫೩ ॥

---

೪೬. ಬಳಿಕ ರಾಜನು ಸಂತೋಷಗೊಂಡು ಅವರನ್ನು ವಂದಿಸಿ ಅವರ ಪ್ರೇರಣೆಯಿಂದ ಮನೆಗೆ ಹೋಗಿ ಮಗನ ಜನ್ಮೋತ್ಸವವನ್ನು ಮಾಡಿದನು.

೪೭. ಬಳಿಕ ತಿಂಗಳ ಅಂತ್ಯದಲ್ಲಿ ಚಮತ್ಕಾರಪುರದಲ್ಲಿ ವಿಧಿಯಂತೆ ಅಭಿಷೇಕವನ್ನು ಸ್ವೀಕರಿಸುತ್ತೇನೆಂದು ಹೇಳಿ ಸಾಮಗ್ರಿಗಳನ್ನು ಕಳುಹಿಸಿದನು.

೪೮–೪೯. ಆ ಬ್ರಾಹ್ಮಣೋತ್ತಮರು ಬ್ರಹ್ಮಚರ್ಯನಿರತರೂ, ಶಾಂತರೂ, ಜಿತೇಂದ್ರಿಯರೂ ಆಗಿ ಪ್ರತಿತಿಂಗಳೂ ಕ್ರಮವಾಗಿ ಶಾಂತಿಕರ್ಮವನ್ನಾಚರಿಸಿದರು. ಒಂದು ತಿಂಗಳು ಮುಗಿದ ತರುವಾಯ ಇತರ ಬ್ರಾಹ್ಮಣರು ಆಚರಿಸುತ್ತಿದ್ದರು.

೫೦–೫೧. ಆ ರಾಜನೂ ಪ್ರತಿ ತಿಂಗಳ ಕೊನೆಯಲ್ಲಿ ಬಂದು ಭಕ್ತಿಯಿಂದ ಅಭಿಷೇಕವನ್ನು ಸ್ವೀಕರಿಸಿ ಆ ಬ್ರಾಹ್ಮಣರನ್ನು ಪೂಜಿಸಿ ಇತರ ಬ್ರಾಹ್ಮಣರನ್ನು ವಸ್ತ್ರ, ಕಿರೀಟ, ಗೋಭೂದಾನಗಳಿಂದ ಸಂತೋಷಗೊಳಿಸಿ ತನ್ನ ಸ್ಥಳಕ್ಕೆ ತೆರಳುತ್ತಿದ್ದನು.

೫೨. ಹೀಗೆ ಅಲ್ಲಿ ರಾಜನ ಶಾಂತಿಕರ್ಮವು ನಡೆಯುತ್ತಿರಲು ಕ್ಷೇಮ, ಆರೋಗ್ಯ, ಧನಪ್ರಾಪ್ತಿಗಳಿಂದ ಬಹುಕಾಲವು ಕಳೆಯಿತು.

೫೩. ಒಂದಾನೊಂದು ಕಾಲದಲ್ಲಿ ಆ ಶಾಂತಿಕರ್ಮವು ಆರಂಭಿಸಲ್ಪಡಲು ತಿಂಗಳ ಆರಂಭದಲ್ಲಿಯೇ ದೊರೆಗೆ ಮಹಾವ್ಯಾಧಿಯು ಸಂಭವಿಸಿತು.

ತತ್ಪುತ್ರಸ್ಯ ವಿಶೇಷೇಣ ತಥೈವಾಂತಃಪುರಸ್ಯ ಚ ।
ರಾಷ್ಟ್ರಸ್ಯ ಚ ಸಮಗ್ರಸ್ಯ ವಾಹನಾನಾಂ ತಥಾ ಕ್ಷಯಃ ॥ ೫೪ ॥
ಸ ತತಃ ಪ್ರೇಷಯಾಮಾಸ ಶಾಂತ್ಯರ್ಥಂ ತತ್ರ ಸತ್ಪುರೇ ।
ಸುಸಂಭಾರಾನ್ ವಿಶೇಷೇಣ ದಕ್ಷಿಣಾಶ್ಚ ವಿಶೇಷತಃ ॥ ೫೫ ॥
ಯಥಾ ಯಥಾ ದ್ವಿಜಾಸ್ತತ್ರ ಹೋಮಂ ಕುರ್ವಂತಿ ಪಾವಕೇ ।
ತಥಾ ಸರ್ವೇ ವಿಶೇಷೇಣ ರೋಗಾ ವರ್ಧಂತಿ ಸರ್ವಶಃ ॥ ೫೬ ॥
ಮ್ರಿಯಂತೇ ವಾಜಿನಸ್ತಸ್ಯ ಬೃಹನ್ತೋ ವಾರಣಾಸ್ತಥಾ ।
ಶತ್ರವಃ ಸರ್ವಕಾಷ್ಠಾಸು ವಿಗ್ರಹಾರ್ಥಮುಪಸ್ಥಿತಾಃ ॥ ೫೭ ॥
ತತಃ ಸ ವ್ಯಾಕುಲೀಭೂತೋ ರೋಗಗ್ರಸ್ತೋ ಮಹೀಪತಿಃ ।
ಚಮತ್ಕಾರಪುರಂ ಪ್ರಾಪ್ಯ ಸರ್ವಾನ್ ವಿಪ್ರಾನುವಾಚ ಹ ॥ ೫೮ ॥
ಯುಷ್ಮಾಭಿಃ ಸ್ವಾಮಿಭಿಃ ಸಂಸ್ಥೈರಾಪದೋಽಭಿಭವಂತಿ ಮಾಂ ।
ತತ್ಕಿಮೇತನ್ಮಹಾಭಾಗಾಃ ಕ್ಷೀಯಂತೇ ಮಮ ಸಂಪದಃ ।
ರೋಗಾಶ್ಚೈವ ವಿವರ್ಧಂತೇ ಶತ್ರುಸಂಘೈಃ ಸಮನ್ವಿತಾಃ ॥ ೫೯ ॥
ತಸ್ಮಾದ್ವಿಶೇಷತೋ ಹೋಮಃ ಕಾರ್ಯೋ ರೋಗಪ್ರಶಾಂತಯೇ ।
ದಾನಾನಿ ಚ ವಿಶಿಷ್ಟಾನಿ ಪ್ರದಾಸ್ಯಾಮಿ ದ್ವಿಜನ್ಮನಾಂ ॥ ೬೦ ॥

---

೫೪. ವಿಶೇಷವಾಗಿ ಅವನ ಪುತ್ರನಿಗೂ, ಅಂತಃಪುರದಲ್ಲಿ ವಾಸಿಸುವವರಿಗೂ, ದೇಶದ ಸಮಸ್ತ ಜನರಿಗೂ ರೋಗವು ಸಂಭವಿಸಿತು. ವಾಹನಗಳು ನಾಶ ಹೊಂದಿದುವು.

೫೫. ಬಳಿಕ ಆ ರಾಜನು ಶಾಂತಿಕರ್ಮಕ್ಕೋಸ್ಕರ ಚಮತ್ಕಾರಪುರಕ್ಕೆ ಹೆಚ್ಚಾಗಿ ಸಾಮಗ್ರಿಗಳನ್ನೂ, ದಕ್ಷಿಣೆಗಳನ್ನೂ ಕಳುಹಿಸಿದನು.

೫೬. ಅಗ್ನಿಯಲ್ಲಿ ಬ್ರಾಹ್ಮಣರು ಹೋಮಮಾಡಿದ ಹಾಗೆಲ್ಲ ಎಲ್ಲ ಕಡೆಯಲ್ಲಿಯೂ ರೋಗಗಳು ಅಭಿವೃದ್ಧಿಗೊಳ್ಳುತ್ತಿದ್ದುವು.

೫೭. ರಾಜನ ಕುದುರೆಗಳೂ, ಮಹಾಗಜಗಳೂ ಸಾಯುತ್ತಿದ್ದುವು. ಸಮಸ್ತ ದಿಕ್ಕುಗಳಲ್ಲಿ ಶತ್ರುಗಳು ಯುದ್ಧಕ್ಕಾಗಿ ಸಮೀಪಿಸಿದರು.

೫೮. ಅನಂತರ ರೋಗಪೀಡಿತನಾದ ರಾಯನು ವ್ಯಥೆಗೊಂಡವನಾಗಿ ಚಮತ್ಕಾರಪುರವನ್ನು ಹೊಂದಿ ಸಮಸ್ತ ಬ್ರಾಹ್ಮಣರನ್ನು ಕುರಿತು ಇಂತೆಂದನು.

೫೯. "ಮಹಾತ್ಮರೆ! ಪೂಜ್ಯರಾದ ನೀವು ಇರುತ್ತಿರಲು ನನಗೆ ಆಪತ್ತುಗಳು ಏತಕ್ಕೆ ಸಂಭವಿಸುತ್ತಿವೆ. ನನ್ನ ಸಂಪತ್ತುಗಳು ಕ್ಷಯಿಸುತ್ತಿವೆಯೇಕೆ?

೬೦. ಆದುದರಿಂದ ರೋಗಶಾಂತಿಗಾಗಿ ನೀವು ವಿಶೇಷವಾಗಿ ಹೋಮವನ್ನು ಮಾಡಿರಿ. ಬ್ರಾಹ್ಮಣರಿಗೆ ಉತ್ತಮವಾದ ದಾನಗಳನ್ನು ಕೊಡುವೆನು.

ತತಸ್ತೇ ಬ್ರಾಹ್ಮಣಾಃ ಸರ್ವೇ ಪ್ರತ್ಯಕ್ಷಂ ತಸ್ಯ ಭೂಪತೇಃ ।
ಚಕ್ರುಃ ಸಮಾಹಿತಾ ಭೂತ್ವಾ ಶಾಂತಿಕಂ ತದ್ಧಿತಾಯ ಚ ॥ ೬೧ ॥
ಯಥಾ ಯಥಾ ಪ್ರಯುಂಜೀರನ್ ಹೋಮಾಂತೇ ಸುಸಮಾಹಿತಾಃ ।
ತಥಾ ತಥಾಽಸ್ಯ ಭೂಪಸ್ಯ ವೃದ್ಧಿಂ ರೋಗಃ ಪ್ರಗಚ್ಛತಿ ॥ ೬೨ ॥
ಏತಸ್ಮಿನ್ನಂತರೇ ಕ್ರುದ್ಧಾಸ್ತೇ ಸರ್ವೇ ದ್ವಿಜಸತ್ತಮಾಃ ।
ಗ್ರಹಾನುದ್ದಿಶ್ಯ ಸೂರ್ಯಾದೀಂಛಾಪಾಯ ಕೃತನಿಶ್ಚಯಾಃ ॥ ೬೩ ॥

ಬ್ರಾಹ್ಮಣಾ ಊಚುಃ:—

ಪೂಜಿತಾ ಅಪಿ ಸದ್ಭಕ್ತ್ಯಾ ವಿಧಾನೇನ ತಥಾ ಗ್ರಹಾಃ ।
ಪೀಡಯಂತಿ ಪುರಂ ರಾಜ್ಞಃ ಸಪುತ್ರಪಶುಬಾಂಧವಂ ॥ ೬೪ ॥
ಏವಂ ತೇ ನಿಶ್ಚಯಂ ಕೃತ್ವಾ ಶುಚಿರ್ಭೂಯ ಸಮಾಹಿತಾಃ ।
ಯಾವದ್ಯಚ್ಛಂತಿ ತಚ್ಛಾಪಂ ಗ್ರಹೇಭ್ಯಃ ಕ್ರೋಧಮೂರ್ಛಿತಾಃ ॥ ೬೫ ॥
ತಾವದ್ವಹ್ನಿರುವಾಚೇದಂ ಮೂರ್ತೋ ಭೂತ್ವಾ ದ್ವಿಜೋತ್ತಮಾನ್ ।
ಮಾ ಪ್ರಯಚ್ಛತ ವಿಪ್ರೇಂದ್ರಾಃ ಶಾಪಂ ಕೋಪಾತ್ಕಥಂಚನ ॥ ೬೬ ॥
ಗ್ರಹೇಭ್ಯೋ ದೋಷಮುಕ್ತೇಭ್ಯಃ ಶ್ರೂಯತಾಂ ವಚನಂ ಮಮ ।
ಮಾಸಿ ಮಾಸಿ ಪ್ರಕುರ್ವಂತಿ ಹೋಮಂ ತೇ ಷೋಡಶದ್ವಿಜಾಃ ॥ ೬೭ ॥
ತೇಷಾಂ ಮಧ್ಯಸ್ಥಿತಶ್ಚೈಕಸ್ತ್ರಿಜಾತೋ ಬ್ರಾಹ್ಮಣಾಧಮಃ ।
ತೇನ ತದ್ದೂಷಿತಂ ದ್ರವ್ಯಂ ಸಮಗ್ರಂ ಹೋಮಸಂಭವಂ ॥ ೬೮ ॥

---

೬೧. ಅನಂತರ ಸಮಸ್ತ ಬ್ರಾಹ್ಮಣರೂ ಆ ರಾಜನ ಮುಂದೆ ಅವನ ಹಿತಕ್ಕಾಗಿ ಸಾವಧಾನ ಮನಸ್ಸಿನಿಂದ ಶಾಂತಿಕರ್ಮವನ್ನಾಚರಿಸಿದರು.

೬೨. ಅವರು ಹೋಮದ ಕೊನೆಯಲ್ಲಿ ಅಭಿಷೇಕೋದ್ಯುಕ್ತರಾದ ಹಾಗೆಲ್ಲ ದೊರೆಯ ರೋಗವು ವೃದ್ಧಿಯಾಯಿತು.

೬೩. ಇಷ್ಟರಲ್ಲಿ ಕುಪಿತರಾದ ಸಕಲ ಬ್ರಾಹ್ಮಣರೂ ಸೂರ್ಯಾದಿಗ್ರಹಗಳನ್ನುದ್ದೇಶಿಸಿ ಶಾಪವನ್ನೀಯಲು ನಿಶ್ಚಯಿಸಿದರು.

೬೪. ಬ್ರಾಹ್ಮಣರು ಹೇಳುತ್ತಾರೆ:—ನಾವು ಭಕ್ತಿಯಿಂದಲೂ, ವಿಧಿಯಿಂದಲೂ ಪೂಜಿಸಿದರೂ ಗ್ರಹಗಳು ಮಹಾರಾಜನ ಪಟ್ಟಣವನ್ನು ಪುತ್ರ, ಪಶು, ಬಾಂಧವರಿಂದ ಸಹಿತವಾಗಿ ಪೀಡಿಸುತ್ತಿದ್ದಾರೆ.

೬೫–೬೮. ಹೀಗೆ ಅವರು ನಿಶ್ಚಯಿಸಿ ಶುದ್ಧರಾಗಿ ಕೋಪದಿಂದ ಗ್ರಹಗಳಿಗೆ ಶಾಪವನ್ನು ಕೊಡುವಷ್ಟರಲ್ಲಿ ಅಗ್ನಿಯು ಶರೀರವನ್ನು ಧರಿಸಿ ಬ್ರಾಹ್ಮಣರನ್ನು ಕುರಿತು ಹೀಗೆಂದನು. "ಬ್ರಾಹ್ಮಣರೆ! ಕೋಪದಿಂದ ದೋಷವಿಲ್ಲದ ಗ್ರಹಗಳನ್ನು ಶಪಿಸಬೇಡಿರಿ. ನನ್ನ ಮಾತನ್ನು ಕೇಳಿರಿ. ಪ್ರತಿ ತಿಂಗಳೂ ಹೋಮವನ್ನು ಮಾಡುತ್ತಿರುವ ಹದಿನಾರು ಮಂದಿ ಬ್ರಾಹ್ಮಣರಲ್ಲಿ ಒಬ್ಬನು ವ್ಯಭಿಚಾರದಿಂದ ಜನಿಸಿದ ನೀಚ ಬ್ರಾಹ್ಮಣನಿರುವನು. ಅವನಿಂದ ಸಕಲ ಹೋಮದ್ರವ್ಯಗಳು ದೂಷಿತವಾಗಿರುವುವು.

ಮಯಾ ದತ್ತಂ ನ ಗೃಹ್ಣಂತಿ ತೇ ಗ್ರಹಾ ಭಾಸ್ಕರಾದಯಃ ।
ತೇನ ಕುರ್ವಂತಿ ಭೂಪಸ್ಯ ಪೀಡಾಮಪ್ಯಧಿಕಾಮಿಮಾಂ ॥ ೬೯ ॥
ತಸ್ಮಾದೇನಂ ಪರಿತ್ಯಜ್ಯ ಹೋಮಂ ಕುರುತ ಮಾಚಿರಂ ।
ಯೇನ ಪ್ರೀತಿಂ ಪರಾಂ ಯಾಂತಿ ಗ್ರಹಾಃ ಸರ್ವೇಽರ್ಕಪೂರ್ವಕಾಃ ॥ ೭೦ ॥
ಆರೋಗ್ಯಶ್ಚ ಭವೇದ್ರಾಜಾ ಗತಶತ್ರುಃ ಸುತಾನ್ವಿತಃ ।
ಸತತಂ ಸುಖಮಭ್ಯೇತಿ ಮಚ್ಛಾಂತಿಕಪ್ರಭಾವತಃ ॥ ೭೧ ॥
ಏವಮುಕ್ತ್ವಾ ಸಭಗವಾನ್ವಹ್ನಿಶ್ಚಾಽದರ್ಶನಂ ಗತಃ ।
ತೇಽಪಿ ವಿಪ್ರಾ ವಿಷಣ್ಣಾಸ್ಯಾ ಲಜ್ಜಯಾ ಪರಯಾವೃತಾಃ ॥ ೭೨ ॥
ತತಸ್ತಂ ಪಾವಕಂ ಭೂಯಃ ಸ್ತುವಂತಸ್ತತ್ರಚ ಸ್ಥಿತಾಃ ।
ಪ್ರೋಚುರ್ವೈಶ್ವಾನರಂ ಬ್ರೂಹಿ ತ್ರಿಜಾತೋ ಯೋಽತ್ರಚ ದ್ವಿಜಃ ॥ ೭೩ ॥
ಯೇನ ತಂ ಸಂಪರಿತ್ಯಜ್ಯ ಕುರ್ಮಃ ಕರ್ಮಪ್ರಶಾಂತಯೇ ।
ನಿಃಶೇಷಮೇವ ದೋಷಾಣಾಂ ಭೂಪಸ್ಯಾಸ್ಯ ಮಹಾತ್ಮನಃ ॥ ೭೪ ॥

ವಹ್ನಿರುವಾಚ :—

ನಾಽಹಂ ದೋಷಂ ದ್ವಿಜೇಂದ್ರಾಣಾಂ ಜಾನನ್ನಪಿ ಕಥಂಚನ ।
ಬ್ರವೀಮಿ ಬ್ರಾಹ್ಮಣಾ ವಂದ್ಯಾ ಮಮ ಸರ್ವೇ ಧರಾತಲೇ ॥ ೭೫ ॥

---

೬೯. ನಾನು ಕೊಟ್ಟ ಆ ದ್ರವ್ಯಗಳನ್ನು ಸೂರ್ಯ ಮೊದಲಾದ ಗ್ರಹಗಳು ಸ್ವೀಕರಿಸುವುದಿಲ್ಲ. ಆದುದರಿಂದಲೇ ಅವರು ದೊರೆಗೆ ಅಧಿಕ ಪೀಡೆಯನ್ನುಂಟು ಮಾಡುತ್ತಿರುವರು.

೭೦. ಆದುದರಿಂದ ಈ ಬ್ರಾಹ್ಮಣನನ್ನು ತ್ಯಜಿಸಿ ಹೋಮಮಾಡಿರಿ. ಸಾವಕಾಶಮಾಡಬೇಡಿರಿ. ಅದರಿಂದ ಸೂರ್ಯನೇ ಮೊದಲಾದ ಗ್ರಹಗಳು ಅತ್ಯಂತ ಸಂತೋಷಗೊಳ್ಳುವರು.

೭೧. ನನ್ನಲ್ಲಿ ಮಾಡಿದ ಹೋಮದ ಸಾಮರ್ಥ್ಯದಿಂದ ರಾಜನು ಆರೋಗ್ಯವುಳ್ಳವನೂ, ಶತ್ರುಗಳಿಲ್ಲದವನೂ, ಮಗನಿಂದ ಸಹಿತನೂ ಆಗಿ ಯಾವಾಗಲೂ ಸುಖಿಯಾಗುವನು.''

೭೨. ಅಗ್ನಿಯು ಹೀಗೆಂದು ನುಡಿದು ಅಡಗಿಹೋದನು. ಆ ಬ್ರಾಹ್ಮಣರು ಅತಿ ಲಜ್ಜೆಯಿಂದ ಖಿನ್ನಮುಖವುಳ್ಳವರಾದರು.

೭೩—೭೪. ಬಳಿಕ ಆ ಬ್ರಾಹ್ಮಣರು ಮರಳಿ ಅಗ್ನಿಯನ್ನು ಸ್ತುತಿಸುತ್ತ ಅಲ್ಲಿಯೇ ಇದ್ದು ಹೀಗೆಂದರು. ''ಈ ಸಮೂಹದಲ್ಲಿ ತ್ರಿಜಾತನಾದ ಬ್ರಾಹ್ಮಣನಾರು? ನೀನು ಹೇಳಿದರೆ ಅವನನ್ನು ತ್ಯಜಿಸಿ ಮಹಾತ್ಮನಾದ ಈ ದೊರೆಯ ದೋಷಶಾಂತಿಗಾಗಿ ಶಾಂತಿಕರ್ಮವನ್ನಾಚರಿಸುವೆವು.''

೭೫. ವಹ್ನಿಯು ಹೇಳುತ್ತಾನೆ:—ಪ್ರಪಂಚದಲ್ಲಿರುವ ಬ್ರಾಹ್ಮಣರೆಲ್ಲ ನನಗೆ ವಂದ್ಯರಾದ್ದರಿಂದ ನಾನು ತಿಳಿದಿದ್ದರೂ ಬ್ರಾಹ್ಮಣರ ದೋಷವನ್ನು ಹೇಳುವುದಿಲ್ಲ.

ಬ್ರಾಹ್ಮಣಾ ಊಚುಃ:—
ಯದಿ ತಂ ಬ್ರಾಹ್ಮಣಂ ವಹ್ನೇ ನಾಽಸ್ಮಾಕಂ ಕೀರ್ತಯಿಷ್ಯಸಿ ।
ತತ್ತೇ ಶಾಪಂ ಪ್ರದಾಸ್ಯಾಮಸ್ತಸ್ಮಾಚ್ಛೀಘ್ರಂ ವದಸ್ವ ನಃ ॥ ೭೬ ॥
ಸೂತ ಉವಾಚ:—
ತೇಷಾಂ ತದ್ವಚನಂ ಶ್ರುತ್ವಾ ವಹ್ನಿರ್ಭಯಸಮನ್ವಿತಃ ।
ಚಿರಂ ವಿಚಿಂತಯಾಮಾಸ ಕುರ್ವೇಽತಃ ಕಿಂ ಶುಭಾವಹಂ ॥ ೭೭ ॥
ಬ್ರಾಹ್ಮಣಂ ದೂಷಯಿಷ್ಯಾಮಿ ಯದಿ ತಾವಚ್ಚ ಪಾತಕಂ ।
ಭವಿಷ್ಯತಿ ನ ಸಂದೇಹಃ ಶಾಪಶ್ಚಾಽಪಿ ತದುದ್ಭವಃ ॥ ೭೮ ॥
ಕೀರ್ತಯಿಷ್ಯಾಮಿ ವಾ ನೈವ ವಿದ್ಯಮಾನಂ ದ್ವಿಜೋತ್ತಮಂ ।
ಶಪಿಷ್ಯಂತಿ ನ ಸಂದೇಹಃ ಕ್ರುದ್ಧಾ ಆಶೀವಿಷೋಪಮಾಃ ॥ ೭೯ ॥
ಏವಂ ಚಿಂತಯತಸ್ತಸ್ಯ ಗಾತ್ರೇ ಸ್ವೇದೋಽಭವನ್ಮಹಾನ್ ।
ಯೇನ ತತ್ಪೂರಿತಂ ಕುಂಡಂ ಹೋಮಾರ್ಥಂ ಯತ್ಪ್ರಕಲ್ಪಿತಂ ॥ ೮೦ ॥
ತತಃ ಪ್ರೋವಾಚ ತಾನ್ವಿಪ್ರಾನ್ ಕೃತಾಂಜಲಿಪುಟಃ ಸ್ಥಿತಃ ।
ವೇಪಮಾನೋ ಭಯತ್ರಸ್ತಃ ಕುಂಡಾನ್ನಿಷ್ಕ್ರಮ್ಯ ಪಾವಕಃ ॥ ೮೧ ॥
ನಾಽಹಂ ಸ್ವಜಿಹ್ವಯಾ ದೋಷಂ ಬ್ರಾಹ್ಮಣಸ್ಯ ಸಮುದ್ಭವಂ ।
ಕಥಂಚಿತ್ಕೀರ್ತಯಿಷ್ಯಾಮಿ ತಸ್ಮಾಚ್ಛೃಣ್ವಂತು ಭೋ ದ್ವಿಜಾಃ ॥ ೮೨ ॥

---

೭೬. ಬ್ರಾಹ್ಮಣರು ಹೇಳುತ್ತಾರೆ:—ಅಗ್ನಿಯೆ! ನೀನು ಆ ಬ್ರಾಹ್ಮಣನನ್ನು ತಿಳಿಸದಿದ್ದರೆ ನಿನಗೆ ಶಾಪವನ್ನು ಕೊಡುವೆವು. ಆದುದರಿಂದ ಶೀಘ್ರವಾಗಿ ನಮಗೆ ಹೇಳು.

೭೭. ಸೂತನು ಹೇಳುತ್ತಾನೆ:—ಅಗ್ನಿಯು ಆ ಬ್ರಾಹ್ಮಣರ ಮಾತನ್ನು ಕೇಳಿ ಭಯದಿಂದ ಹೀಗೆ ಚಿಂತಿಸಿದನು. "ಈಗ ನಾನು ಶುಭವನ್ನುಂಟುಮಾಡುವ ಯಾವ ಕಾರ್ಯವನ್ನೆಸಗಲಿ.

೭೮. ಬ್ರಾಹ್ಮಣನ ದೋಷವನ್ನು ಹೇಳಿದರೆ ನಿಶ್ಚಯವಾಗಿಯೂ ಪಾಪವೂ, ಅವನ ಶಾಪವೂ ಸಂಭವಿಸುವುದು.

೭೯. ಇಲ್ಲಿರುವ ತ್ರಿಜಾತ ಬ್ರಾಹ್ಮಣನನ್ನು ತಿಳಿಸದಿದ್ದರೆ ಸರ್ಪದಂತಿರುವ ಕ್ರುದ್ಧರಾದ ಈ ಬ್ರಾಹ್ಮಣರು ಶಪಿಸುವರು."

೮೦. ಅಗ್ನಿಯು ಹೀಗೆ ಚಿಂತಿಸುತ್ತಿರಲು ಅವನ ಶರೀರದಲ್ಲಿ ಬಹಳವಾಗಿ ಬೆವರುಂಟಾಯಿತು. ಅದರಿಂದ ಹೋಮಕ್ಕಾಗಿ ಕಲ್ಪಿಸಿದ ಹೋಮಕುಂಡವು ತುಂಬಿತು.

೮೧. ಬಳಿಕ ಭಯಗೊಂಡ ಅಗ್ನಿಯು ನಡುಗುತ್ತ ಕೈ ಜೋಡಿಸಿಕೊಂಡು ಕುಂಡದಿಂದ ಹೊರಗೆ ಬಂದು ಇಂತೆಂದನು.

೮೨. "ಬ್ರಾಹ್ಮಣರೆ! ನಾನು ನನ್ನ ನಾಲಿಗೆಯಿಂದ ಬ್ರಾಹ್ಮಣನ ದೋಷವನ್ನು ಹೇಳುವುದಿಲ್ಲ. ಆದುದರಿಂದ ನನ್ನ ಮಾತನ್ನು ಕೇಳಿರಿ.

ಅತ್ರ ಸ್ವೇದಜಲೇ ವಿಪ್ರಾ ಯೇ ಸ್ಥಿತಾಃ ಷೋಡಶದ್ವಿಜಾಃ ।
ತೇ ಸ್ನಾನಮದ್ಯ ಕುರ್ವಂತು ಪ್ರವಿಶುದ್ಧ್ಯರ್ಥಮಾತ್ಮನಃ ॥ ೮೩ ॥
ಏತೇಷಾಂ ಮಧ್ಯಗೋ ಯಶ್ಚ ತ್ರಿಜಾತಃ ಸ ಭವಿಷ್ಯತಿ ।
ತಸ್ಯ ವಿಸ್ಫೋಟಕೈರ್ಯುಕ್ತಂ ಸ್ನಾತಸ್ಯಾಂಗಂ ಭವಿಷ್ಯತಿ ॥ ೮೪ ॥
ತತಸ್ತೇ ಬ್ರಾಹ್ಮಣಾಃ ಸರ್ವೇ ಕ್ರಮಾತ್ತತ್ರ ನಿಮಜ್ಜನಂ ।
ಚಕ್ರುಃ ಶುದ್ಧಿಂ ಗತಾಶ್ಚಾಽಪಿ ಮುಕ್ತ್ವೈಕಂ ಬ್ರಾಹ್ಮಣಂ ತಥಾ ॥ ೮೫ ॥
ಹಾಹಾಕಾರಸ್ತತೋ ಜಜ್ಞೇ ಮಹಾಂಸ್ತತ್ರ ಜನೋದ್ಭವಃ ।
ದೃಷ್ಟ್ವಾ ವಿಸ್ಫೋಟಕೈರ್ಯುಕ್ತಮೇಕಸ್ಮಾತ್ರಂ ದ್ವಿಜೋತ್ತಮಂ ॥ ೮೬ ॥
ಸೋಽಪಿ ಲಜ್ಜಾನ್ವಿತೋ ವಿಪ್ರಃ ಕೃತ್ವಾಧೋವದನಂ ತತಃ ।
ನಿಷ್ಕ್ರಾಂತೋಽಥ ಸಭಾಮಧ್ಯಾತ್ಸ್ಥಾನಾದ್ವಿಪ್ರಸಮುದ್ಭವಾತ್ ॥ ೮೭ ॥

ವಹ್ನಿರುವಾಚ :—

ಏತದ್ವಃ ಸಾಧಿತಂ ಕೃತ್ಯಂ ಮಯಾ ಪೂರ್ವಂ ದ್ವಿಜೋತ್ತಮಾಃ ।
ತಸ್ಮಾದ್ಯಾಸ್ಯೇ ನಿಜಂ ಸ್ಥಾನಂ ಭವದ್ಭಿಃ ಪಾರಮಾಪಿತಃ ॥ ೮೮ ॥
ನ ವೃಥಾ ದರ್ಶನಂ ಮೇ ಸ್ಯಾದಪಿ ಸ್ವಪ್ನೇ ದ್ವಿಜೋತ್ತಮಾಃ ।
ತಸ್ಮಾತ್ಸಂಪ್ರಾರ್ಥ್ಯತಾಂ ಕಿಂಚಿದಭೀಷ್ಟಂ ಹೃದಿ ಸಂಸ್ಥಿತಂ ॥ ೮೯ ॥

---

೮೩. ಆ ಹದಿನಾರು ಮಂದಿ ಬ್ರಾಹ್ಮಣರು ತಮ್ಮ ಶುದ್ಧಿಗಾಗಿ ಈ ಬೆವರಿನ ನೀರಿನಲ್ಲಿ ಸ್ನಾನಮಾಡಲಿ.

೮೪. ಇವರ ಮಧ್ಯದಲ್ಲಿರುವ ತ್ರಿಜಾತನು ಇಲ್ಲಿ ಮಿಂದರೆ ಅವನ ಅಂಗವು ಗುಳ್ಳೆಗಳಿಂದ ಸಹಿತವಾಗುವುದು.''

೮೫. ಆಗ ಆ ಬ್ರಾಹ್ಮಣರೆಲ್ಲ ಅಲ್ಲಿ ಕ್ರಮವಾಗಿ ಮಿಂದರು. ತ್ರಿಜಾತನನ್ನು ಉಳಿದು ಬೇರೆಯವರೆಲ್ಲ ಶುದ್ಧರಾದರು.

೮೬. ಆಗ ಗುಳ್ಳೆಗಳೆದ್ದ ಆ ಬ್ರಾಹ್ಮಣನನ್ನು ನೋಡಿ ಜನರೆಲ್ಲ ಅಯ್ಯೊ! ಎಂದು ಗದ್ದಲಮಾಡಿದರು.

೮೭. ಆ ತ್ರಿಜಾತನು ನಾಚಿಕೆಯಿಂದ ಮುಖವನ್ನು ತಗ್ಗಿಸಿಕೊಂಡು ಬ್ರಾಹ್ಮಣರಿರುವ ಸಭೆಯಿಂದ ಹೊರಟುಹೋದನು.

೮೮. ವಹ್ನಿಯು ಹೇಳುತ್ತಾನೆ:—ದ್ವಿಜವರ್ಯರೆ! ನಾನು ನಿಮ್ಮ ಕೆಲಸವನ್ನು ನೆರವೇರಿಸಿದ್ದೇನೆ. ಆದುದರಿಂದ ನಿಮ್ಮಿಂದ ಬೀಳ್ಕೊಂಡ ನಾನು ನನ್ನ ಸ್ಥಾನಕ್ಕೆ ತೆರಳುವೆನು.

೮೯. ಬ್ರಾಹ್ಮಣೋತ್ತಮರೆ! ಸ್ವಪ್ನದಲ್ಲಿಯೂ ನನ್ನ ದರ್ಶನವು ವ್ಯರ್ಥವಾಗಲಾರದು. ಆದುದರಿಂದ ನಿಮ್ಮ ಮನೋಭೀಷ್ಟವನ್ನು ಕೇಳಿಕೊಳ್ಳಿರಿ.

ಬ್ರಾಹ್ಮಣಾ ಊಚುಃ:—
ಏತತ್ತ್ರವ ಜಲಂ ವಹ್ನೇ ಸ್ವೇದಜಂ ಸರ್ವದೈವತು ।
ಸ್ಥಿರಂ ಭವತು ಚಾತ್ರೈವ ವಿಶುದ್ಧ್ಯರ್ಥಂ ದ್ವಿಜನ್ಮನಾಂ ॥ ೯೦ ॥
ಅನ್ಯಜಾತೋ ನರೋ ಯೋಽತ್ರ ಪ್ರಕರೋತಿ ನಿಮಜ್ಜನಂ ।
ತಸ್ಯ ಚಿಹ್ನಂ ತ್ವಯಾ ಕಾರ್ಯಂ ವಿಸ್ಫೋಟಕಸಮುದ್ಭವಂ ॥ ೯೧ ॥
ಬಾಢಮಿತ್ಯೇವ ಸ ಪ್ರೋಚ್ಯ ಗತೋಂತರ್ಧಾನಮೇವ ಹಿ ।
ಪಾವಕಸ್ತೇ ದ್ವಿಜಾಃ ಸರ್ವೇ ಮಂತ್ರಂ ಚಕ್ರುಃ ಪರಸ್ಪರಂ ॥ ೯೨ ॥
ಅದ್ಯಪ್ರಭೃತಿ ಸರ್ವೇಷಾಂ ಬ್ರಾಹ್ಮಣಾನಾಂ ಸಮುದ್ಭವಂ ।
ಶುದ್ಧಿರತ್ರ ಪ್ರಕರ್ತವ್ಯಾ ಪಿತೃಮಾತೃಸಮುದ್ಭವಾ ॥ ೯೩ ॥
ಚಮತ್ಕಾರಪುರೋತ್ಥೋಽಯಃ ಕಶ್ಚಿದ್ವಿಪ್ರಃ ಪ್ರಕೀರ್ತಿತಃ ।
ಸೋಽತ್ರ ಸ್ನಾತೋ ವಿಶುದ್ಧಶ್ಚ ವಿಜ್ಞೇಯಃ ಕುಲಪುತ್ರಕಃ ॥ ೯೪ ॥
ತಸ್ಮೈ ಕನ್ಯಾ ಪ್ರದಾತವ್ಯಾ ಸ ಶ್ರಾದ್ಧಾರ್ಹೋ ಭವಿಷ್ಯತಿ ।
ಧರ್ಮಕೃತ್ಯೇಷು ಸರ್ವೇಷು ಯೋಜನೀಯಃ ಸ ಏವ ಹಿ ॥ ೯೫ ॥
ಅಷ್ಟಷಷ್ಟಿಷು ಗೋತ್ರೇಷು ಮಿಲಿತೇಷು ಯಥಾಕ್ರಮಂ ।
ತತ್ಪ್ರತ್ಯಕ್ಷಂ ವಿಶುದ್ಧೋ ಯಃ ಸಶುದ್ಧಃ ಪಂಕ್ತಿಪಾವನಃ ॥ ೯೬ ॥

---

೯೦. ಬ್ರಾಹ್ಮಣರು ಹೇಳುತ್ತಾರೆ:—ಅಗ್ನಿಯೆ! ಈ ನಿನ್ನ ಸ್ವೇದಜಲವು ಬ್ರಾಹ್ಮಣರ ಶುದ್ಧಿಗಾಗಿ ಇಲ್ಲಿಯೇ ಯಾವಾಗಲೂ ನೆಲೆಸಿರಲಿ.

೯೧. ಇಲ್ಲಿ ಪರರಿಂದ ಹುಟ್ಟಿದ ಮನುಷ್ಯನು ಮಿಂದರೆ ಅವನಿಗೆ ನೀನು ಗುಳ್ಳೆಯ ಚಿಹ್ನೆಯನ್ನುಂಟುಮಾಡು.

೯೨. ಅಗ್ನಿಯು ಹಾಗೆಯೇ ಆಗಲೆಂದು ಹೇಳಿ ಅದೃಶ್ಯನಾದನು. ಆ ಬ್ರಾಹ್ಮಣರೆಲ್ಲ ಪರಸ್ಪರ ಆಲೋಚಿಸಿದರು.

೯೩. "ಈ ದಿನ ಮೊದಲ್ಗೊಂಡು ಬ್ರಾಹ್ಮಣರು ಇಲ್ಲಿ ತಮ್ಮ ತಾಯಿತಂದೆಗಳಿಂದುಂಟಾದ ದೋಷವನ್ನು ಪರಿಹರಿಸಿಕೊಳ್ಳಲಿ.

೯೪. ಚಮತ್ಕಾರಪುರದಲ್ಲಿ ಜನಿಸಿದ ಬ್ರಾಹ್ಮಣನು ಇಲ್ಲಿ ಮಿಂದರೆ ಶುದ್ಧನಾಗಿ ಸತ್ಕುಲಪ್ರಸೂತನೆನ್ನಿಸಿಕೊಳ್ಳುವನು.

೯೫. ಅವನಿಗೆ ಕನ್ಯೆಯನ್ನು ಕೊಡತಕ್ಕದ್ದು. ಅವನು ಶ್ರಾದ್ಧಕ್ಕೆ ಅರ್ಹನಾಗುವನು. ಅವನನ್ನೇ ಸಮಸ್ತ ಧರ್ಮಕಾರ್ಯಗಳಲ್ಲಿ ನೇಮಿಸಬೇಕು.

೯೬. ಅರುವತ್ತೆಂಟು ಗೋತ್ರದ ಬ್ರಾಹ್ಮಣರು ಕ್ರಮವಾಗಿ ಒಟ್ಟು ಸೇರಿರಲು ಅವರ ಮುಂದೆ ಶುದ್ಧನಾದವನು ಪಂಕ್ತಿಯಲ್ಲಿ ಕುಳಿತುಕೊಳ್ಳಲು ಯೋಗ್ಯನು.

ಅಪವಾದಾಶ್ಚ ಯೇ ಕೇಚಿದ್ಬ್ರಹ್ಮಹತ್ಯಾದಿಕಾಃ ಸ್ಥಿತಾಃ ।
ಅನ್ಯೈಽಪಿ ದುರ್ಜನೈಃ ಪ್ರೋಕ್ತಾ ಧರ್ಮಸಂದೇಹಕಾರಕಾಃ ॥ ೯೭ ॥
ತೇ ಸರ್ವೇಽತ್ರ ವಿಶುದ್ಧಾಃಸ್ಯುರ್ವಿಜ್ಞೇಯಾಃ ಕುಲಪುತ್ರಕಾಃ ।
ಅಪವಾದಸ್ತಥಾಚಾಽನ್ಯೇ ನಾಶಂ ಯಾಸ್ಯಂತಿ ಚಾಖಿಲಾಃ ॥ ೯೮ ॥
ಯಾವನ್ನಾಽತ್ರ ಕೃತಂ ಸ್ನಾನಂ ಪ್ರತ್ಯಕ್ಷಂ ಚ ದ್ವಿಜನ್ಮನಾಂ ।
ಸರ್ವೇಷಾಂ ತಾವದೇವಾಽತ್ರ ನ ಸ ವಿಪ್ರೋ ಭವೇತ್ಸ್ಫುಟಂ ॥ ೯೯ ॥

ಸೂತ ಉವಾಚ :—

ಏವಂ ತೇ ಸಮಯಂ ಕೃತ್ವಾ ಚಮತ್ಕಾರಪುರೋದ್ಭವಾಃ ।
ಬ್ರಾಹ್ಮಣಾಃ ಶಾಂತಿಕಂ ಚಕ್ರುರ್ಹಿತಾರ್ಥಂ ತಸ್ಯ ಭೂಪತೇಃ ॥ ೧೦೦ ॥
ತಸ್ಮಿನ್ ಕುಂಡೇ ತತಃ ಸ್ನಾನಂ ಕೃತಂ ಸರ್ವೈರ್ಮಹಾತ್ಮಭಿಃ ।
ಭಯತ್ರಸ್ತೈರ್ವಿಶುದ್ಧ್ಯರ್ಥಂ ಶೇಷೈರಪಿ ಮಹಾತ್ಮಭಿಃ ॥ ೧೦೧ ॥
ತತೋ ನೀರೋಗತಾಂ ಪ್ರಾಪ್ತಃ ಸ ಭೂಪಸ್ತತ್ಕ್ಷಣಾದ್ದ್ವಿಜಾಃ ।
ಯಸ್ತತ್ರ ಕುರುತೇ ಸ್ನಾನಮದ್ಯಾಽಪಿ ದ್ವಿಜಸತ್ತಮಾಃ ॥ ೧೦೨ ॥
ಕಾರ್ತಿಕ್ಯಾಂ ಪರದಾರೋತ್ಥೈಃ ಸ ವಿಮುಚ್ಯೇತ ಪಾತಕೈಃ ।
ಏಷಾಂ ಯುಗತ್ರಯೇ ಶುದ್ಧಿರಾಸೀತ್ತತ್ರ ದ್ವಿಜನ್ಮನಾಂ ॥ ೧೦೩ ॥

---

೯೭–೯೮. ಬ್ರಹ್ಮಹತ್ಯೆ ಮೊದಲಾದ ಅಪವಾದಗಳೂ, ದುರ್ಜನರು ನುಡಿದ ಧರ್ಮಸಂದೇಹವನ್ನುಂಟುಮಾಡುವ ಇತರ ಅಪವಾದಗಳೂ ಇಲ್ಲಿ ನೀಗುವುವು. ಅವರೆಲ್ಲ ಶುದ್ಧರಾದ ಕುಲಪುತ್ರರೆಂದು ತಿಳಿಯಬೇಕು.

೯೯. ಇಲ್ಲಿ ಬ್ರಾಹ್ಮಣರ ಮುಂದೆ ದ್ವಿಜನು ಸ್ನಾನ ಮಾಡುವವರೆಗೆ ಅವನು ಬ್ರಾಹ್ಮಣನೆನ್ನಿಸಿಕೊಳ್ಳುವುದಿಲ್ಲ.

೧೦೦. ಸೂತನು ಹೇಳುತ್ತಾನೆ:—ಹೀಗೆ ಆ ಚಮತ್ಕಾರಪುರದ ಬ್ರಾಹ್ಮಣರು ಸಂಕೇತಮಾಡಿಕೊಂಡು ಆ ರಾಜನ ಹಿತಕ್ಕಾಗಿ ಶಾಂತಿಕರ್ಮವನ್ನಾಚರಿಸಿದರು.

೧೦೧. ಆ ಕುಂಡದಲ್ಲಿ ಭಯಗ್ರಸ್ತರಾದ ಇತರ ಮಹಾತ್ಮರೂ ತಮ್ಮ ಶುದ್ಧಿಗಾಗಿ ಮಿಂದರು.

೧೦೨–೧೦೩. ಸೂತನು ಹೇಳುತ್ತಾನೆ:–ಬ್ರಾಹ್ಮಣರೆ! ಬಳಿಕ ಆ ದೊರೆಯು ಕೂಡಲೆ ರೋಗರಹಿತನಾದನು. ಈಗಲೂ ಅಲ್ಲಿ ಕಾರ್ತಿಕ ಮಾಸದ ಪೂರ್ಣಿಮಾ ದಿನ ಮಿಂದವನು ಪರಪತ್ನಿಯರಿಂದುಂಟಾದ ದೋಷದಿಂದ ಮುಕ್ತನಾಗುವನು. ಈ ಬ್ರಾಹ್ಮಣರಿಗೂ, ಕುಲಶೀಲಗಳಿಲ್ಲದ ಇತರ ಪಾಪಿಗಳಿಗೂ ಅಲ್ಲಿ ಮೂರು ಯುಗಗಳಲ್ಲಿ ಶುದ್ಧಿಯಾಗುವುದು. ಬ್ರಾಹ್ಮಣರು ಪರಪತ್ನಿಯಲ್ಲಿ ಅನುರಾಗವನ್ನು

ಕುಲಶೀಲವಿಹೀನಾನಾಮನ್ಯೇಷಾಮಪಿ ಪಾಪ್ಮನಾಂ ।
ಮತ್ವಾ ಕಲಿಯುಗಂ ಘೋರಂ ಪರದಾರಸುರಂಜಿತಂ ।
ತತ್ರ ಶುದ್ಧಿಸ್ತತಃ ಸರ್ವೈಃ ಕೃತಾ ವಿಪ್ರೈಶ್ಚ ವಾಚಿಕಾ ॥ ೧೦೪ ॥
ಪುರತೋ ದೇವದೇವಸ್ಯ ಬ್ರಹ್ಮಣೋ ದ್ವಿಜಸತ್ತಮಾಃ ।
ಪಿತೃಮಾತೃಜವಂಶಸ್ಯ ವಿಶುದ್ಧ್ಯರ್ಥಮತಂದ್ರಿತೈಃ ॥ ೧೦೫ ॥
ಅದ್ಯಾಽಪಿ ಕುರುತೇ ತತ್ರ ಯಃ ಸ್ನಾನಂ ದ್ವಿಜಸತ್ತಮಾಃ ।
ತ್ರಿಜಾತೋ ದಹ್ಯತೇ ತತ್ರ ವಹ್ನಿನಾ ಸ ನ ಸಂಶಯಃ ॥ ೧೦೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಗ್ನಿಕುಂಡಮಾಹಾತ್ಮ್ಯವರ್ಣನಂ" ನಾಮ
ತ್ರಯೋದಶೋತ್ತರಶತತಮೋಽಧ್ಯಾಯಃ

---

ಉಂಟುಮಾಡುವ ಘೋರ ಕಲಿಯುಗವು ಬರುವುದೆಂದರಿತು ದೇವೋತ್ತಮನಾದ ಬ್ರಹ್ಮನ ಮುಂದೆ ಆಗಲೂ ಅಲ್ಲಿ ಪಿತೃಮಾತೃವಂಶದಲ್ಲುಂಟಾದ ದೋಷವು ಶುದ್ಧಿಯಾಗಬೇಕೆಂದು ಕೇಳಿಕೊಂಡರು.

೧೦೬. ದ್ವಿಜೋತ್ತಮರೆ! ಈಗಲೂ ಅಲ್ಲಿ ಮಿಂದ ತ್ರಿಜಾತನು ನಿಶ್ಚಯವಾಗಿಯೂ ಅಗ್ನಿಯಿಂದ ದಗ್ಧನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಗ್ನಿಕುಂಡಮಾಹಾತ್ಮ್ಯವರ್ಣನ"ವೆಂಬ
ನೂರಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋತ್ತರಶತತಮೋಽಧ್ಯಾಯಃ

### ನಗರಸಂಜ್ಞೋತ್ಪತ್ತಿವರ್ಣನಂ

ಸೂತ ಉವಾಚ :—

ಸೋಽಪಿ ವಿಪ್ರೋ ದ್ವಿಜಶ್ರೇಷ್ಠಾ ವಿಸ್ಫೋಟಕಪರಿಪ್ಲುತಃ ।
ಲಜ್ಜಯಾ ಪರಯಾಯುಕ್ತೋ ಗತ್ವಾಕಿಂಚಿದ್ವನಾಂತರಂ ॥ ೧ ॥
ತತೋ ವೈರಾಗ್ಯಮಾಪನ್ನೋ ರೌದ್ರೇ ತಪಸಿ ಸಂಸ್ಥಿತಃ ।
ತ್ಯಕ್ತ್ವಾ ಗೃಹಾದಿಕಂ ಸರ್ವಂ ಸ್ನೇಹಂ ದಾರಸುತೋದ್ಭವಂ ॥ ೨ ॥
ನಿಯಮೈಃ ಸಂಯಮೈಶ್ಚೈವ ಶೋಷಯನ್ನಾತ್ಮನಸ್ತನುಂ ।
ಕಿಂಚಿಜ್ಜಲಾಶ್ರಯಂ ಗತ್ವಾ ಸ್ಥಾಪಯಿತ್ವಾ ಮಹೇಶ್ವರಂ ॥ ೩ ॥
ತತಃ ಕಾಲೇನ ಮಹತಾ ತುಷ್ಟಸ್ತಸ್ಯ ಮಹೇಶ್ವರಃ ।
ಪ್ರೋವಾಚ ದರ್ಶನಂ ಗತ್ವಾ ಪ್ರಾರ್ಥಯಸ್ವ ಯಥೇಪ್ಸಿತಂ ॥ ೪ ॥

ತ್ರಿಜಾತ ಉವಾಚ :—

ಮಾತೃದೋಷಾದಹಂ ದೇವ ವೈಲಕ್ಷ್ಯಂ ಪರಮಂ ಗತಃ ।
ಮಧ್ಯೇ ಬ್ರಾಹ್ಮಣಮುಖ್ಯಾನಾಮಾನರ್ತಾಧಿಪತೇಸ್ತಥಾ ॥ ೫ ॥

---

## ಕನ್ನಡದ ಅನುವಾದ

### ನಗರಸಂಜ್ಞೋತ್ಪತ್ತಿವರ್ಣನ

೧–೩. ಸೂತನು ಹೇಳುತ್ತಾನೆ:—ಬ್ರಾಹ್ಮಣವರ್ಯರೆ! ಗುಳ್ಳೆಗಳಿಂದ ಕೂಡಿದ ಆ ತ್ರಿಜಾತಕ ಬ್ರಾಹ್ಮಣನು ಅತ್ಯಂತ ಲಜ್ಜೆಯಿಂದ ಒಂದು ಕಾಡಿನ ಮಧ್ಯವನ್ನು ಸೇರಿ ವೈರಾಗ್ಯಗೊಂಡು ಮನೆ ಮೊದಲಾದುವುಗಳನ್ನೂ, ಪತ್ನಿಪುತ್ರರ ಸ್ನೇಹವನ್ನೂ ತ್ಯಜಿಸಿ ವ್ರತ ಮತ್ತು ಇಂದ್ರಿಯ ಜಯಗಳಿಂದ ತನ್ನ ಶರೀರವನ್ನು ಒಣಗಿಸುತ್ತ ಒಂದು ಕೊಳಕ್ಕೆ ಹೋಗಿ ಮಹೇಶ್ವರನನ್ನು ಪ್ರತಿಷ್ಠೆಮಾಡಿ ಉಗ್ರ ತಪಸ್ಸನ್ನಾಚರಿಸಿದನು.

೪. ಅನಂತರ ಬಹಳ ಕಾಲದ ತರುವಾಯ ಪರಮೇಶ್ವರನು ಸಂತುಷ್ಟನಾಗಿ ಅವನಿಗೆ ದರ್ಶನವನ್ನಿತ್ತು ನಿನ್ನ ಇಷ್ಟಾರ್ಥವನ್ನು ಕೇಳಿಕೊ ಎಂದನು.

೫. ತ್ರಿಜಾತನು ಹೇಳುತ್ತಾನೆ:—ಸ್ವಾಮಿ! ನಾನು ತಾಯಿಯ ತಪ್ಪಿನಿಂದ ಬ್ರಾಹ್ಮಣೋತ್ತಮರ ಮತ್ತು ಆನರ್ತರಾಜನ ಮಧ್ಯದಲ್ಲಿ ಅತ್ಯಂತ ಲಜ್ಜೆಯನ್ನು ಹೊಂದಿದೆನು.

ಅಹಂ ಶಕ್ನೋಮಿ ನೋ ವಕ್ತ್ರಂ ಕಸ್ಯಚಿದ್ದರ್ಶಿತುಂ ವಿಭೋ ।
ತ್ರಿಜಾತೋಽಸ್ಮೀತಿ ವಿಜ್ಞಾಯ ಭೂರಿವಿದ್ಯಾನ್ವಿತೋಽಪಿ ಚ ॥ ೬ ॥
ತಸ್ಮಾತ್ಸರ್ವೋತ್ತಮಸ್ತೇಷಾಮಹಂ ಚೈವ ದ್ವಿಜನ್ಮನಾಂ ।
ಯಥಾ ಭವಾಮಿ ದೇವೇಶ ತಥಾ ನೀತಿರ್ವಿಧೀಯತಾಂ ॥ ೭ ॥

ಶ್ರೀ ಭಗವಾನುವಾಚ :—

ಚಮತ್ಕಾರಪುರೇ ವಿಪ್ರಾ ಯೇ ವಸಂತಿ ದ್ವಿಜೋತ್ತಮ ।
ತೇಷಾಂ ಸರ್ವೋತ್ತಮೋ ನೂನಂ ಮತ್ಪ್ರಸಾದಾದ್ಭವಿಷ್ಯಸಿ ॥ ೮ ॥
ತಸ್ಮಾತ್ಕಾಲಂ ಪ್ರತೀಕ್ಷಸ್ವ ಕಂಚಿತ್ತ್ವಂ ಬ್ರಾಹ್ಮಣೋತ್ತಮ ।
ಸಮಯೇ ಸಮನುಪ್ರಾಪ್ತೇ ತ್ವಾಂಚ ನೇಷ್ಯಾಮಿ ತತ್ರ ವೈ ॥ ೯ ॥
ಏವಮುಕ್ತ್ವಾತು ದೇವೇಶಸ್ತತಶ್ಚಾ ದರ್ಶನಂ ಗತಃ ।
ಬ್ರಾಹ್ಮಣೋಽಪಿ ತಪಸ್ತೇಪೇ ತಥಾ ಸಂಪೂಜಯನ್ ಹರಂ ॥ ೧೦ ॥
ಕಸ್ಯಚಿತ್ತ್ವಥ ಕಾಲಸ್ಯ ಚಮತ್ಕಾರಪುರೇ ದ್ವಿಜಾಃ ।
ಮೌದ್ಗಲ್ಯಾನ್ವಯ ಸಂಭೂತೋ ದೇವರಾತೋಽಭವದ್ದ್ವಿಜಃ ॥ ೧೧ ॥
ತಸ್ಯ ಪುತ್ರಃ ಕ್ರಥೋನಾಮ ಯೌವನೋದ್ಧತವಿಗ್ರಹಃ ।
ಸದಾ ಗರ್ವಸಮಾಯುಕ್ತಃ ಪೌರುಷೇಚ ವ್ಯವಸ್ಥಿತಃ ॥ ೧೨ ॥

---

೬. ನಾನು ಅತ್ಯಂತ ವಿದ್ವಾಂಸನಾಗಿದ್ದರೂ ತ್ರಿಜಾತನೆಂದು ತಿಳಿದು ಯಾರಿಗೂ ಮುಖವನ್ನು ತೋರಿಸಲು ಸಮರ್ಥನಾಗಿರುವುದಿಲ್ಲ.

೭. ದೇವ! ಆದುದರಿಂದ ನಾನು ಆ ಸಮಸ್ತ ಬ್ರಾಹ್ಮಣರಲ್ಲಿ ಉತ್ತಮನಾಗುವಂತೆ ಒಂದು ನ್ಯಾಯವನ್ನು ಏರ್ಪಡಿಸು.

೮. ಶ್ರೀ ಭಗವಂತನು ಹೇಳುತ್ತಾನೆ:—ದ್ವಿಜವರ್ಯನೆ! ನೀನು ನನ್ನ ಅನುಗ್ರಹದಿಂದ ಚಮತ್ಕಾರಪುರದಲ್ಲಿರುವ ಸಮಸ್ತ ಬ್ರಾಹ್ಮಣರಲ್ಲಿಯೂ ಉತ್ತಮನಾಗುವೆ.

೯. ನೀನು ಸ್ವಲ್ಪಕಾಲ ನಿರೀಕ್ಷಿಸು. ಸಮಯಬಂದಾಗ ನಾನು ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವೆನು.

೧೦. ಮಹೇಶ್ವರನು ಹೀಗೆ ಹೇಳಿ ಅದೃಶ್ಯನಾದನು. ಬ್ರಾಹ್ಮಣನು ಹಾಗೆಯೇ ಮಹೇಶ್ವರನನ್ನು ಪೂಜಿಸುತ್ತ ತಪಸ್ಸನ್ನು ಮಾಡಿದನು.

೧೧. ದ್ವಿಜರೆ! ಕೆಲವು ಕಾಲದ ಮೇಲೆ ಚಮತ್ಕಾರಪುರದಲ್ಲಿ ಮೌದ್ಗಲ್ಯ ವಂಶದ ದೇವರಾತನೆಂಬ ಬ್ರಾಹ್ಮಣನು ವಾಸವಾಗಿದ್ದನು.

೧೨. ಅವನಿಗೆ ಯೌವನದಿಂದ ಮತ್ತನೂ, ಅಹಂಕಾರಿಯೂ, ಪುರುಷ ಪ್ರಯತ್ನದಲ್ಲಿ ನಿರತನೂ ಆದ ಕ್ರಥನೆಂಬ ಮಗನಿದ್ದನು.

ಸ ಕದಾಚಿದ್ಯಯೌ ವಿಪ್ರೋ ನಾಗತೀರ್ಥಂ ಪ್ರತಿ ದ್ವಿಜಾಃ ।
ಶ್ರಾವಣಸ್ಯಾಽಸಿತೇ ಪಕ್ಷೇ ಪಂಚಮ್ಯಾಂ ಪರ್ಯಟನ್ ವನೇ ॥ ೧೩ ॥
ಅಥಾಽಪಶ್ಯತ್ಸ ನಾಗೇಂದ್ರತನಯಂ ಭೂರಿವರ್ಚಸಂ ।
ರುದ್ರಮಾಲಮಿತಿ ಖ್ಯಾತಂ ಜನನ್ಯಾ ಸಹ ಸಂಗತಂ ॥ ೧೪ ॥
ಅಥಾಽಸೌ ತಂ ಸಮಾಲೋಕ್ಯ ಸುಲಘುಂ ಸರ್ಪಪುತ್ರಕಂ ।
ಜಲಸರ್ಪಮಿತಿ ಜ್ಞಾತ್ವಾ ಲಗುಡೇನ ವ್ಯಪೋಥಯತ್ ॥ ೧೫ ॥
ಹನ್ಯಮಾನೇನ ತೇನಾಽಥ ಪ್ರಮುಕ್ತಃ ಸುಮಹಾನ್ ಸ್ವನಃ ।
ಹಾಮಾತಸ್ತಾತತಾತೇತಿ ವಿಪನ್ನೋಽಸ್ಮಿ ನಿರಾಗಸಃ ॥ ೧೬ ॥
ಸೋಽಪಿ ಶ್ರುತ್ವಾಽಥ ತಂ ಶಬ್ದಂ ಬ್ರಾಹ್ಮಣೋ ಮಾನುಷೋದ್ಭವಂ ।
ಸರ್ಪಸ್ಯ ಭಯಸಂತ್ರಸ್ತಃ ಸತ್ವರಂ ಸ್ವಗೃಹಂ ಯಯೌ ॥ ೧೭ ॥
ಅಥ ಸಾ ಜನನೀ ತಸ್ಯ ನಿಷ್ಕ್ರಾಂತಾ ಸಲಿಲಾಶ್ರಯಾತ್ ।
ಯಾವತ್ಪಶ್ಯತಿ ತೀರಸ್ಥಂ ತಾವತ್ಪುತ್ರಂ ನಿಪಾತಿತಂ ॥ ೧೮ ॥
ತತೋ ಮೂರ್ಛಾಮನುಪ್ರಾಪ್ತಾ ದೃಷ್ಟ್ವಾ ಪುತ್ರಂ ತಥಾವಿಧಂ ।
ಯಷ್ಟಿಪ್ರಹಾರನಿರ್ಭಿನ್ನಂ ಸರ್ವಾಂಗರುಧಿರೋಕ್ಷಿತಂ ॥ ೧೯ ॥
ಅಥ ಲಬ್ಧ್ವಾ ಪುನಃ ಸಂಜ್ಞಾಂ ಪ್ರಲಾಪಾನಕರೋದ್ಬಹೂನ್ ।
ಕರುಣಂ ಶೋಕಸಂತಪ್ತಾ ಬಾಷ್ಪಪರ್ಯಾಕುಲೇಕ್ಷಣಾ ॥ ೨೦ ॥

---

೧೩. ಬ್ರಾಹ್ಮಣರೆ! ಅವನು ಒಂದಾನೊಂದು ಸಲ ಶ್ರಾವಣ ಬಹುಳ ಪಂಚಮೀ ದಿನ ಅರಣ್ಯದಲ್ಲಿ ಸಂಚರಿಸುತ್ತಾ ನಾಗತೀರ್ಥಕ್ಕೆ ಹೋದನು.

೧೪. ಅಲ್ಲಿ ಅವನು ನಾಗರಾಜನ ಸುತನೂ, ಅತಿ ತೇಜಸ್ವಿಯೂ, ತಾಯಿಯೊಡನೆ ಇರುವವನೂ ಆದ ರುದ್ರಮಾಲನೆಂಬ ನಾಗನನ್ನು ಕಂಡನು.

೧೫. ಅವನು ಆ ಸಣ್ಣ ಸರ್ಪದ ಮರಿಯನ್ನು ಕಂಡು ಅದು ನೀರಿನ ಸರ್ಪವೆಂದರಿತು ದೊಣ್ಣೆಯಿಂದ ಹೊಡೆದನು.

೧೬. ಅವನು ಹೊಡೆದ ಕೂಡಲೆ ಆ ಸರ್ಪದ ಮರಿಯು, "ಅಮ್ಮ! ಅಪ್ಪ! ತಪ್ಪಿಲ್ಲದ ನಾನು ಸಾಯುತ್ತಿದ್ದೇನೆ" ಎಂದು ಗಟ್ಟಿಯಾಗಿ ಕೂಗಿಕೊಂಡಿತು.

೧೭. ಆ ಕ್ರಥ ಬ್ರಾಹ್ಮಣನು ಆ ಸರ್ಪದ ಮನುಷ್ಯ ಶಬ್ದವನ್ನು ಕೇಳಿ ಭಯಗೊಂಡು ಶೀಘ್ರವಾಗಿ ಮನೆಗೆ ಹೋದನು.

೧೮. ಬಳಿಕ ಆ ರುದ್ರಮಾಲನ ತಾಯಿಯು ಸರೋವರದಿಂದ ಮೇಲಕ್ಕೆ ಬಂದು ದಡದಲ್ಲಿ ನೆಲದಮೇಲೆ ಬಿದ್ದಿರುವ ಪುತ್ರನನ್ನು ನೋಡಿದಳು.

೧೯. ಅವಳು ದೊಣ್ಣೆಯ ಏಟಿನಿಂದ ರಕ್ತದಿಂದ ಒದ್ದೆಯಾದ ಸೀಳಿದ ಶರೀರವುಳ್ಳ ಅಂತಹ ಮಗನನ್ನು ಕಂಡು ಮೂರ್ಛೆಗೊಂಡಳು.

೨೦. ಅನಂತರ ಅವಳು ಚೇತರಿಸಿಕೊಂಡು ಶೋಕಪೀಡಿತಳಾಗಿ ಕಣ್ಣೀರಿನಿಂದ ತುಂಬಿದ ಕಣ್ಣುಗಳುಳ್ಳವಳಾಗಿ ಬಹುವಿಧವಾಗಿ ಗೋಳಾಡಿದಳು.

ಹಾಹಾ ಪುತ್ರ ಪರಿತ್ಯಕ್ತ್ವಾ ಮಾಂ ಚ ಕ್ವಾಽಸಿ ವಿನಿರ್ಗತಃ ।
ಅನಾವೃತ್ತಿ ಕರಂ ಸ್ಥಾನಂ ಕಿಂಸ್ನೇಹೋ ನಾಽಸ್ತಿ ತೇ ಮಯಿ ॥ ೨೧ ॥
ಕೇನ ತ್ವಂ ನಿಹತಃ ಪುತ್ರ ಪಾಪೇನ ಚ ದುರಾತ್ಮನಾ ।
ನಿಷ್ಪಾಪೋಽಪಿ ಚ ಪುತ್ರತ್ವಂ ಕಸ್ಯಕ್ರುದ್ಧೋಽದ್ಯ ವೈ ಯಮಃ ॥ ೨೨ ॥
ಸಪುರಸ್ಯ ಸರಾಷ್ಟ್ರಸ್ಯ ಸಕುಟುಂಬಸ್ಯ ದುರ್ಮತೇಃ ।
ಯೇನ ತ್ವಂ ನಿಹತೋಽದ್ಯಾಽಪಿ ಪಂಚಮ್ಯಾಂ ಪೂಜಿತೋ ನ ಚ ॥ ೨೩ ॥
ರಜಸಾ ಕ್ರೀಡಯಿತ್ವಾಽದ್ಯ ಸಮಾಗತ್ಯ ಚಿರಾದಥ ।
ಕಾಮೇನೋತ್ಸಂಗ ಮಾಗತ್ಯ ಗ್ಲಾನಿಂ ನೈಷ್ಯತಿ ಚಾಂಬರಂ ॥ ೨೪ ॥
ಗದ್ಗದಾನಿ ಮನೋಜ್ಞಾನಿ ಜನಹಾಸ್ಯಕರಾಣಿ ಚ ।
ತ್ವಯಾ ವಿನಾಽದ್ಯ ವಾಕ್ಯಾನಿ ಕೋ ವದಿಷ್ಯತಿ ಮೇ ಪುರಃ ॥ ೨೫ ॥
ಪಿತುರುತ್ಸಂಗ ಮಾಶ್ರಿತ್ಯ ಕೂರ್ಚಾಕರ್ಷಣಪೂರ್ವಕಂ ।
ಕಃ ಕರಿಷ್ಯತಿ ಪುತ್ರಾಽದ್ಯ ಸಂತೋಷಂ ಭವತಾ ವಿನಾ ॥ ೨೬ ॥
ನಿಷಿದ್ಧೋಽಪಿ ಮಯಾ ವತ್ಸ ತ್ವಮಾಯಾತೋಽನು ಪೃಷ್ಠತಃ ।
ಮರ್ತ್ಯಲೋಕಮಿಮಂ ತಾತ ಬಹುದೋಷ ಸಮಾಕುಲಂ ॥ ೨೭ ॥

---

೨೧. ಅಯ್ಯೋ! ಮಗುವೆ! ನೀನು ನನ್ನನ್ನು ತ್ಯಜಿಸಿ ಹಿಂದಿರುಗದ ಯಾವ ಸ್ಥಳಕ್ಕೆ ಹೋಗಿರುವೆ? ನಿನಗೆ ನನ್ನಲ್ಲಿ ಪ್ರೀತಿಯಿಲ್ಲವಾಯಿತೆ!

೨೨–೨೩. ಪಾಪವಿಲ್ಲದ ನಿನ್ನನ್ನು ಪಾಪಿಯಾದ ಯಾವ ದುಷ್ಟನು ಕೊಂದನು? ಮಗು! ನಗರ, ದೇಶ, ಕುಟುಂಬಗಳೊಡನೆ ಹಾಳುಮಾಡಲು ಯಮನು ಯಾವನಲ್ಲಿ ಕುಪಿತನಾಗಿರುವನು? ಯಾವನು ಪಂಚಮಿ ದಿನ ನಿನ್ನನ್ನು ಪೂಜಿಸದೆ ಕೊಂದಿರುವನು?

೨೪. ಈಗ ಸ್ವೇಚ್ಛೆಯಾಗಿ ಧೂಳಿನಲ್ಲಿ ಆಡಿ ಬಂದು ನನ್ನ ತೊಡೆಯಲ್ಲಿ ಕುಳಿತು ಏತಕ್ಕೆ ಬಟ್ಟೆಯನ್ನು ಕೊಳೆಗೊಳಿಸುವುದಿಲ್ಲ?

೨೫. ನನ್ನ ಮುಂದೆ ಗದ್ಗದವೂ, ಮನೋಹರವೂ, ಜನರಿಗೆ ಹಾಸ್ಯವನ್ನು ಉಂಟುಮಾಡುವುದೂ ಆದ ಮಾತುಗಳನ್ನು ನಿನ್ನ ಹೊರತು ಯಾರುತಾನೆ ಆಡುವರು?

೨೬. ಮಗು! ಈಗ ನಿನ್ನ ಹೊರತು ತಂದೆಯ ತೊಡೆಯಲ್ಲಿ ಕುಳಿತು ಗಡ್ಡವನ್ನು ಎಳೆದು ಯಾರು ಸಂತೋಷವನ್ನುಂಟುಮಾಡುವರು?

೨೭. ಮಗು! ನಾನು ತಡೆದರೂ ನನ್ನ ಹಿಂದೆ ನೀನು ಅನೇಕ ಕೇಡುಗಳಿಗೆ ಬೀಡಾದ ಈ ಮನುಷ್ಯಲೋಕಕ್ಕೆ ಬಂದಿರುವೆ.

ಏವಂ ವಿಲಪ್ಯ ನಾಗೀ ಸಾ ಸಂಕ್ರುದ್ಧಾ ಶೋಕ ಕರ್ಷಿತಾ ।
ತಂ ಮೃತಂ ಸುತಮಾದಾಯ ಜಗಾಮಾಽನಂತಸನ್ನಿಧೌ ॥ ೨೮ ॥
ತತಸ್ತದಗ್ರತಃ ಕ್ಷಿಪ್ತ್ವಾ ತಂ ಮೃತಂ ನಿಜಬಾಲಕಂ ।
ಪ್ರಲಾಪಾನಕರೋದ್ದೀನಾ ವಿಯುಕ್ತಾ ಕುರರೀ ಯಥಾ ॥ ೨೯ ॥
ನಾಗರಾಜೋಽಪಿ ತಂ ದೃಷ್ಟ್ವಾ ಸ್ವಪುತ್ರಂ ವಿನಿಪಾತಿತಂ ।
ಜಗಾಮ ಸೋಽಪಿ ಮೂರ್ಛಾಂ ಚ ಪುತ್ರಶೋಕೇನ ಪೀಡಿತಃ ॥ ೩೦ ॥
ತತಃ ಸಿಕ್ತೋ ಜಲೈಃ ಶೀತೈಃ ಸಂಜ್ಞಾಂ ಲಬ್ಧ್ವಾ ಸಕೃಚ್ಛ್ರತಃ ।
ಪ್ರಲಾಪಾನ್ ಕೃಪಣಾಂಶ್ಚಕ್ರೇ ಪ್ರಾಕೃತಃ ಪುರುಷೋ ಯಥಾ ॥ ೩೧ ॥
ಏತಸ್ಮಿನ್ನಂತರೇ ನಾಗಾಃ ಸರ್ವೇ ತತ್ರ ಸಮಾಗತಾಃ ।
ರುರುದುರ್ದುಃಖಿತಾಃ ಸಂತೋ ಬಾಷ್ಪಪರ್ಯಾಕುಲೇಕ್ಷಣಾಃ ॥ ೩೨ ॥
ವಾಸುಕಿಃ ಪದ್ಮಜಃ ಶಂಖಸ್ತಕ್ಷಕಶ್ಚ ಮಹಾವಿಷಃ ।
ಶಂಖಚೂಡಃ ಸಚೂಡಶ್ಚ ಪುಂಡರೀಕಶ್ಚ ದಾರುಣಃ ॥ ೩೩ ॥
ಅಂಜನೋ ವಾಮನಶ್ಚೈವ ಕುಮುದಶ್ಚ ತಥಾಪರಃ ।
ಕಂಬಲಾಶ್ವತರೌ ನಾಗೌ ನಾಗಃ ಕರ್ಕೋಟಕಸ್ತಥಾ ॥ ೩೪ ॥
ಪುಷ್ಪದಂತಃ ಸುದಂತಶ್ಚ ಮೂಷಕೋ ಮೂಷಕಾದನಃ ।
ಏಲಾಪತ್ರಃ ಸುಪತ್ರಶ್ಚ ದೀರ್ಘಾಸ್ಯಃ ಪುಷ್ಪವಾಹನಃ ॥ ೩೫ ॥

---

೨೮. ಆ ನಾಗಾಂಗನೆಯು ಹೀಗೆ ಗೋಳಾಡಿ ಕುಪಿತಳೂ, ದುಃಖಗೊಂಡವಳೂ ಆಗಿ ಮೃತನಾದ ಆ ಬಾಲಕನನ್ನು ತೆಗೆದುಕೊಂಡು ಅನಂತನಾಗನ ಹತ್ತಿರ ಹೋದಳು.

೨೯. ಅನಂತರ ಆ ಮೃತ ಬಾಲಕನನ್ನು ಅನಂತನ ಮುಂದೆ ಎಸೆದು ದೀನಳಾಗಿ ಅಗಲಿದ ಕುರರಿಯಂತೆ ಗೋಳಾಡಿದಳು.

೩೦. ನಾಗರಾಜನೂ ತನ್ನ ಮೃತಪುತ್ರನನ್ನು ನೋಡಿ ಸುತಶೋಕದಿಂದ ಪೀಡಿತನಾಗಿ ಮೂರ್ಛೆಗೊಂಡನು.

೩೧. ಬಳಿಕ ಅವನು ತಣ್ಣೀರಿನ ಸೇಚನದಿಂದ ಅತಿ ಕಷ್ಟದಿಂದ ಜ್ಞಾನವನ್ನು ಹೊಂದಿ ಸಾಮಾನ್ಯ ಮನುಷ್ಯನಂತೆ ದೈನ್ಯದಿಂದ ಗೋಳಾಡಿದನು.

೩೨. ಈ ಸಮಯದಲ್ಲಿ ಅಲ್ಲಿಗೆ ಬಂದ ಸಕಲ ಸರ್ಪಗಳು ದುಃಖದಿಂದ ಕಣ್ಣೀರನ್ನು ಸುರಿಸುತ್ತ ರೋದಿಸಿದುವು.

೩೩–೩೬. ವಾಸುಕಿ, ಪದ್ಮಜ, ಶಂಖ, ತಕ್ಷಕ, ಮಹಾವಿಷ, ಶಂಖಚೂಡ, ಸಚೂಡ, ಪುಂಡರೀಕ, ಅಂಜನ, ವಾಮನ, ಕುಮುದ, ಕಂಬಲ, ಅಶ್ವತರ, ಕರ್ಕೋಟಕ, ಪುಷ್ಪದಂತ, ಸುದಂತ, ಮೂಷಕ, ಮೂಷಕಾದನ, ಏಲಾಪತ್ರ, ಸುಪತ್ರ, ದೀರ್ಘಾಸ್ಯ, ಪುಷ್ಪವಾಹನ ಇವೇ ಮೊದಲಾದ ಸಾವಿರಾರು

ಏತೇ ಚಾಽನ್ಯೇ ತಥಾ ನಾಗಾಸ್ತತ್ರಾಯಾತಾಃ ಸಹಸ್ರಶಃ ।
ಪುತ್ರಶೋಕಾಭಿಸಂತಪ್ತಂ ಜ್ಞಾತ್ವಾ ತಂ ಪನ್ನಗಾಧಿಪಂ ॥ ೩೬ ॥
ತತಃ ಸಂಬೋಧ್ಯ ತೇ ಸರ್ವೇ ತಮಿಳಾಶಂ ಪವನಾಶನಂ ।
ಪೂರ್ವವೃತ್ತೈಃ ಕಥೋದ್ಭೇದೈರ್ದೃಷ್ಟಾಂತೈರ್ವಿವಿಧೈರಪಿ ॥ ೩೭ ॥
ಏವಂ ಸಂಬೋಧಿತಸ್ತೈಸ್ತು ಚಿರಾತ್ಪನ್ನಗ ಸತ್ತಮಃ ।
ಅಗ್ನಿದಾಹ್ಯಂ ತತಶ್ಚಕ್ರೇ ತಸ್ಯ ಪುತ್ರಸ್ಯ ದುಃಖಿತಃ ॥ ೩೮ ॥
ಜಲದಾನಸ್ಯ ಕಾಲೇ ಚ ಸರ್ಪಾನ್ ಸರ್ವಾನುವಾಚ ಸಃ ।
ಸರ್ವಾನ್ನಾಗಾನ್ ಪ್ರದಾನಾರ್ಥಂ ತೋಯಸ್ಯ ಸಮುಪಸ್ಥಿತಾನ್ ॥ ೩೯ ॥
ನಾಽಹಂ ತೋಯಂ ಪ್ರದಾಸ್ಯಾಮಿ ಸ್ವಪುತ್ರಸ್ಯ ಕಥಂಚನ ।
ಭವದ್ಭಿಃ ಪ್ರೇರಿತೋಽಪ್ಯೇವಂ ತಥಾಽನ್ಯೈರಪಿ ಬಾಂಧವೈಃ ॥ ೪೦ ॥
ಯಾವತ್ತಸ್ಯ ನ ದುಷ್ಟಸ್ಯ ಮಮ ಪುತ್ರಾಂತಕಾರಿಣಃ ।
ಸದಾರಪುತ್ರಭೃತ್ಯಸ್ಯ ವಿಹಿತೋ ನ ಪರಿಕ್ಷಯಃ ॥ ೪೧ ॥
ಏವಮುಕ್ತ್ವಾ ತತಃ ಶೇಷಃ ಶೋಧಯಾಮಾಸ ತಂ ದ್ವಿಜಂ ।
ಯೇನ ಸಂಸೂದಿತಃ ಪುತ್ರೋ ದಂಡಕಾಷ್ಠೇನ ಪಾಪ್ಮನಾ ॥ ೪೨ ॥
ತತಃ ಪ್ರೋವಾಚ ತಾನ್ ನಾಗಾನ್ ಪಾರ್ಶ್ವಸ್ಥಾನ್ ಪನ್ನಗಾಧಿಪಃ ।
ಹಾಟಕೇಶ್ವರಜೇ ಕ್ಷೇತ್ರೇ ಯಾಂತು ಮೇ ಸುಹೃದುತ್ತಮಾಃ ॥ ೪೩ ॥

---

ಸರ್ಪಗಳು ನಾಗರಾಜನು ಪುತ್ರಶೋಕಪೀಡಿತನಾಗಿರುವುದನ್ನು ಕೇಳಿ ಅಲ್ಲಿಗೆ ಬಂದುವು.

೩೭–೩೮. ಆ ಸರ್ಪಗಳು ನಾಗರಾಜನನ್ನು ಹಿಂದಿನ ಅನೇಕ ಕಥೆಗಳಿಂದಲೂ, ಬಗೆ ಬಗೆಯ ದೃಷ್ಟಾಂತಗಳಿಂದಲೂ ಎಚ್ಚರಿಸಲು ಅವನು ಬಹಳ ಹೊತ್ತಿನ ತರುವಾಯ ದುಃಖದಿಂದ ಮೃತಸುತನನ್ನು ದಹನಮಾಡಿದನು.

೩೯. ಆ ನಾಗರಾಜನು ಜಲವನ್ನು ದಾನಮಾಡುವ ಸಮಯದಲ್ಲಿ (ಧರ್ಮೋದಕವನ್ನು ಕೊಡುವ ಸಮಯದಲ್ಲಿ) ಅದಕ್ಕಾಗಿ ಬಂದಿರುವ ಸಮಸ್ತ ನಾಗಗಳನ್ನೂ ಕುರಿತು ಇಂತೆಂದನು.

೪೦–೪೧. "ನೀವೂ, ಇತರ ಬಂಧುಗಳೂ ಪ್ರೇರಿಸಿದರೂ ನನ್ನ ಪುತ್ರನನ್ನು ಸಂಹರಿಸಿದ ಪಾಪಿಯು ಪತ್ನಿ, ಪುತ್ರ, ಭೃತ್ಯರೊಡನೆ ನಾಶವಾಗುವವರೆಗೆ ನಾನು ನನ್ನ ಮಗನಿಗೆ ಧರ್ಮೋದಕವನ್ನು ಕೊಡುವುದಿಲ್ಲ."

೪೨. ಶೇಷನು ಹೀಗೆಂದು ದೊಣ್ಣೆಯಿಂದ ತನ್ನ ಮಗನನ್ನು ಕೊಂದ ಪಾಪಿಯಾದ ಬ್ರಾಹ್ಮಣನನ್ನು ಹುಡುಕಿಸಿದನು.

೪೩. ಅನಂತರ ಅವನು ಸಮೀಪದಲ್ಲಿರುವ ಸಮಸ್ತ ಸರ್ಪಗಳನ್ನು ಕುರಿತು "ಮಿತ್ರವರ್ಯರೆ! ನೀವು ಹಾಟಕೇಶ್ವರಕ್ಷೇತ್ರಕ್ಕೆ ತೆರಳಿರಿ.

ಪುತ್ರಘ್ನಂ ತಂ ನಿಹತ್ಯಾಶು ಸಕುಟುಂಬಪರಿಗ್ರಹಂ ।
ಚಮತ್ಕಾರಪುರಂ ಸರ್ವಂ ಭಕ್ಷಣೀಯಂ ತತಃ ಪರಂ ॥ ೪೪ ॥
ತತ್ರೈವ ವಸತಿಃ ಕಾರ್ಯಾ ಸಮಸ್ತೈಃ ಪನ್ನಗೋತ್ತಮೈಃ ।
ಯಥಾ ಭೂಯೋ ವಸೇನ್ನೈವ ತಥಾಕಾರ್ಯಂ ಚ ತತ್ಪರಂ ॥ ೪೫ ॥
ಏವಮುಕ್ತ್ವಾಸ್ತತಸ್ತೇನ ನಾಗಾಃ ಪ್ರಾಧಾನ್ಯತಃ ಶ್ರುತಾಃ ।
ಗತ್ವಾಽಥ ಸತ್ವರಂ ತತ್ರ ಪ್ರಥಮಂ ತಂ ದ್ವಿಜೋತ್ತಮಂ ॥ ೪೬ ॥
ದೇವರಾತಸುತಂ ಸುಪ್ತಂ ಭಕ್ಷಯಿತ್ವಾ ತತಃ ಪರಂ ।
ತತ್ಕುಟುಂಬಂ ಸಮುಗ್ರಂ ಚ ಕ್ರೋಧೇನ ಮಹತಾನ್ವಿತಾಃ ॥ ೪೭ ॥
ತತೋಽನ್ಯಾನಪಿ ಸಂಕ್ರುದ್ಧಾ ಬಾಲಾನ್ ವೃದ್ಧಾನ್ ಕುಮಾರಕಾನ್ ।
ಭಕ್ಷಯಾಮಾಸುಃ ಸರ್ವೇ ತೇ ತಿರ್ಯಗ್ಯೋನಿಗತಾ ಅಪಿ ॥ ೪೮ ॥
ಏತಸ್ಮಿನ್ನಂತರೇ ಜಾತಃ ಪುರೇ ತತ್ರ ಸುದಾರುಣಃ ।
ಆಕ್ರಂದೋ ಬ್ರಾಹ್ಮಣೇಂದ್ರಾಣಾಂ ಸರ್ವಭಕ್ಷಣಸಂಭವಃ ॥ ೪೯ ॥
ತತ್ರ ಭೂಮೌ ತಥಾಽನ್ಯಚ್ಚ ಯತ್ಕಿಂಚಿದಪಿ ದೃಶ್ಯತೇ ।
ತತ್ಸರ್ವಂ ಪನ್ನಗೈರ್ವ್ಯಾಪ್ತಂ ರೌದ್ರೈಃ ಕೃಷ್ಣವಪುರ್ಧರೈಃ ॥ ೫೦ ॥
ಏತಸ್ಮಿನ್ನಂತರೇ ಪ್ರಾಪ್ತಾಃ ಕೇಚಿನ್ಮೃತ್ಯುವಶಂ ಗತಾಃ ।
ವಿಷಸಂಘೂರ್ಣಿತಾಃ ಕೇಚಿತ್ಪತಿತಾ ಧರಣೀತಲೇ ॥ ೫೧ ॥

---

೪೪. ನೀವು ನನ್ನ ಮಗನನ್ನು ಕೊಂದ ಪಾಪಿಯನ್ನು ಕುಂಟುಂಬ ಪರಿವಾರ ದೊಡನೆ ಶೀಘ್ರವಾಗಿ ಕೊಂದು ಚಮತ್ಕಾರಪುರವನ್ನೆಲ್ಲ ಭಕ್ಷಿಸಿರಿ.

೪೫. ನೀವೆಲ್ಲ ಅಲ್ಲಿಯೇ ವಾಸಿಸುತ್ತ ಬೇರೆ ಯಾರೂ ಅಲ್ಲಿ ವಾಸಮಾಡ ದಂತೆ ಮಾಡಿರಿ'' ಎಂದನು.

೪೬–೪೮. ಮುಖ್ಯವಾಗಿ ಅವನು ಹೇಳಿದ ಮಾತನ್ನು ಕೇಳಿ ಸರ್ಪಗಳೆಲ್ಲ ಆ ಹಾಟಕಕ್ಷೇತ್ರಕ್ಕೆ ಶೀಘ್ರವಾಗಿ ಹೋಗಿ ಕೋಪದಿಂದ, ಮೊದಲು ಮಲಗಿರುವ ದೇವರಾತನ ಮಗನನ್ನೂ, ಬಳಿಕ ಅವನ ಸಕಲ ಕುಟುಂಬವನ್ನೂ, ಇತರ ಬಾಲಕರು, ಮುದುಕರು, ಕುಮಾರರು ಇವರನ್ನೂ ತಿಂದುವು.

೪೯. ಈ ಸಮಯದಲ್ಲಿ ಆ ಪಟ್ಟಣದಲ್ಲಿ ಸರ್ಪಗಳು ಎಲ್ಲರನ್ನೂ ಭಕ್ಷಿಸಿದುದ ರಿಂದ ಬ್ರಾಹ್ಮಣವರ್ಯರು ದಾರುಣವಾಗಿ ರೋದಿಸಲಾರಂಭಿಸಿದರು.

೫೦. ಆ ಕ್ಷೇತ್ರದಲ್ಲಿರುವ ಸಕಲ ವಸ್ತುಗಳನ್ನೂ ಕೃಷ್ಣವಾದ ಶರೀರವನ್ನು ಧರಿಸಿದ ಸರ್ಪಗಳು ವ್ಯಾಪಿಸಿದುವು.

೫೧. ಈ ಸಮಯದಲ್ಲಿ ಕೆಲವು ಬ್ರಾಹ್ಮಣರು ಮಡಿದರು. ಕೆಲವರು ವಿಷವೇರಿ ನೆಲದಮೇಲೆ ಬಿದ್ದರು.

ಅನ್ಯೇ ಗೃಹಾದಿಕಂ ಸರ್ವಂ ಪರಿತ್ಯಜ್ಯ ಸುತಾದಿ ಚ ।
ವಿತ್ರಸ್ತಾಃ ಪರಿಧಾವಂತಿ ವನಮುದ್ದಿಶ್ಯ ದೂರತಃ ॥ ೫೨ ॥
ಅನ್ಯೇ ಮಂತ್ರವಿದೋ ವಿಪ್ರಾಃ ಪ್ರಯತಂತೇ ಸಮಂತತಃ ।
ಮಂದಂ ಧಾವಂತಿ ಸಂತ್ರಸ್ತಾ ಗೃಹೀತ್ವೌಷಧಯಃ ಪರೇ ॥ ೫೩ ॥
ಏವಂ ತತ್ಪುರಮುದ್ದಿಶ್ಯ ಸರ್ವೇ ತೇ ಪನ್ನಗೋತ್ತಮಾಃ ।
ಪ್ರಚರಂತಿ ಯಥಾ ಕಶ್ಚಿನ್ನ ತತ್ರ ಬ್ರಾಹ್ಮಣೋ ವಸೇತ್ ॥ ೫೪ ॥
ಅಥಶೂನ್ಯಂ ಪುರಂ ಕೃತ್ವಾ ಸರ್ವೇ ತೇ ಪನ್ನಗೋತ್ತಮಾಃ ।
ವ್ಯಚರನ್ ಸ್ವೇಚ್ಛಯಾ ತತ್ರ ತೀರ್ಥೇಷ್ವಾಯತನೇಷು ಚ ॥ ೫೫ ॥
ನ ಕಶ್ಚಿತ್ಪನ್ನಗಃ ಕ್ಷೇತ್ರಾತ್ತ್ಯಕ್ತ್ವಾ ನಿರ್ಯಾತಿ ಬಾಹ್ಯತಃ ।
ಪ್ರವಿಶೇನ್ನ ಪರಃ ಕಶ್ಚಿತ್ತಸ್ಮಿನ್ ಕ್ಷೇತ್ರೇ ಚ ಮಾನವಃ ॥ ೫೬ ॥
ವ್ಯವಸ್ಥೈವಂ ಸಮುದ್ಭೂತಾ ಸರ್ಪಾಣಾಂ ಮಾನುಷೈಃ ಸಹ ।
ವಧಭಕ್ಷಣಜಾಽನ್ಯೋನ್ಯಂ ಬಾಹ್ಯಾಭ್ಯಂತರ ಸಂಭವಾ ॥ ೫೭ ॥
ಏತಸ್ಮಿನ್ನಂತರೇ ಶೇಷೋ ಮುಕ್ತ್ವಾ ದುಃಖಂ ಸುತೋದ್ಭವಂ ।
ಪ್ರಹೃಷ್ಟಃ ಪ್ರದದೌ ತೋಯಂ ತಸ್ಯ ಜಾತಿಭಿರನ್ವಿತಃ ॥ ೫೮ ॥

---

೫೨. ಇನ್ನು ಕೆಲವರು ಮನೆ, ಮಕ್ಕಳು ಮೊದಲಾದುವುಗಳನ್ನೆಲ್ಲ ತ್ಯಜಿಸಿ ಭಯದಿಂದ ದೂರದಲ್ಲಿರುವ ಕಾಡಿಗೆ ಓಡಿದರು.

೫೩. ಮತ್ತೆ ಕೆಲವು ಮಂತ್ರಜ್ಞರಾದ ಬ್ರಾಹ್ಮಣರು ಸುತ್ತಲೂ ತಡೆಯಲು ಪ್ರಯತ್ನಿಸಿದರು. ಕೆಲವರು ಭಯಗೊಂಡು ಔಷಧಗಳನ್ನು ಹಿಡಿದುಕೊಂಡು ಮೆಲ್ಲನೆ ಓಡಿದರು.

೫೪. ಹೀಗೆ ಒಬ್ಬ ಬ್ರಾಹ್ಮಣನೂ ಆ ಪಟ್ಟಣದಲ್ಲಿ ವಾಸಮಾಡದಂತೆ ಸರ್ಪಗಳೆಲ್ಲ ಸಂಚರಿಸಿದುವು.

೫೫. ಅವು ಪಟ್ಟಣವನ್ನು ಬರಿದುಮಾಡಿ ಸ್ವೇಚ್ಛೆಯಿಂದ ತೀರ್ಥ ಮತ್ತು ದೇವಾಲಯಗಳಲ್ಲಿಯೂ ಸಂಚಾರ ಮಾಡಿದುವು.

೫೬. ಒಂದು ಸರ್ಪವೂ ಆ ಕ್ಷೇತ್ರವನ್ನು ತ್ಯಜಿಸಿ ಹೊರಗೆ ಹೋಗಲಿಲ್ಲ. ಒಬ್ಬ ಮಾನವನೂ ಅದನ್ನು ಪ್ರವೇಶಿಸಲಿಲ್ಲ.

೫೭. ಹೀಗೆ ಆ ಕ್ಷೇತ್ರದಲ್ಲಿ ಬ್ರಾಹ್ಮಣರು ಸರ್ಪಗಳನ್ನು ಕೊಲ್ಲುತ್ತಿದ್ದರು. ಸರ್ಪಗಳು ಬ್ರಾಹ್ಮಣರನ್ನು ತಿನ್ನುತ್ತಿದ್ದುವು. ಇಂತಹ ಸ್ಥಿತಿಯೊದಗಿತು.

೫೮. ಈ ಸಮಯದಲ್ಲಿ ಶೇಷನು ಪುತ್ರಶೋಕವನ್ನು ತ್ಯಜಿಸಿ ಸಂತೋಷದಿಂದ ತನ್ನ ಜಾತಿಯ ಸರ್ಪಗಳೊಡನೆ ಧರ್ಮೋದಕವನ್ನಿತ್ತನು.

ಅಥ ತೇ ಬ್ರಾಹ್ಮಣಾಃ ಕೇಚಿತ್ಸರ್ಪೇಭ್ಯೋ ಭಯವಿಹ್ವಲಾಃ ।
ಸ ಶೋಕಾ ದಿಙ್ಮುಖಾನ್ಯಾಶು ತೇ ಸರ್ವೇ ಸಂಗತಾ ಮಿಥಃ ॥ ೪೯ ॥
ತತೋ ವನಂ ಸಮಾಜಗ್ಮುಸ್ತ್ರಿಜಾತೋ ಯತ್ರ ಸಂಸ್ಥಿತಃ ।
ಹರಲಬ್ಧವರೋ ಹೃಷ್ಟಃ ಸುಮಹತ್ತಪಸಿ ಸ್ಥಿತಃ ॥ ೫೦ ॥
ಸ ದೃಷ್ಟ್ವಾ ತಾಂಜನಾನ್ಸರ್ವಾಂಸ್ತಥಾ ದುಃಖಪರಿಪ್ಲುತಾನ್ ।
ಪುತ್ರದಾರಾದಿಕಂ ಸ್ಮೃತ್ವಾ ರುದತಃ ಕರುಣಂ ಬಹು ॥ ೫೧ ॥
ಸೋಽಪಿ ದುಃಖಸಮಾಯುಕ್ತೋ ದೃಷ್ಟ್ವಾ ತಾನ್ ಸ್ವಪುರೋದ್ಭವಾನ್ ।
ಬ್ರಾಹ್ಮಣೇಂದ್ರಾಂಸ್ತತಃ ಪ್ರಾಹ ಬಾಷ್ಪವ್ಯಾಕುಲಲೋಚನಃ ॥ ೫೨ ॥
ಶೃಣ್ವಂತು ಬ್ರಾಹ್ಮಣಾಃ ಸರ್ವೇ ವಚನಂ ಮಮ ಸಾಂಪ್ರತಂ ।
ಮಯಾ ವಿನಿರ್ಗತೇನೈವ ತತ್ಪುರಾತ್ತೋಷಿತೋ ಹರಃ ॥ ೫೩ ॥
ತೇನ ಮಹ್ಯಂ ವರೋ ದತ್ತೋ ವಾಂಛಿತೋ ದ್ವಿಜಸತ್ತಮಾಃ ।
ಗೃಹೀತೋ ನ ಮಯಾಽದ್ಯಾಽಪಿ ಪ್ರಾರ್ಥಯಿಷ್ಯಾಮಿ ಸಾಂಪ್ರತಂ ॥ ೫೪ ॥
ಯಥಾ ಸ್ಯಾತ್ಸಂಕ್ಷಯಸ್ತೇಷಾಂ ನಾಗಾನಾಂ ಸುದುರಾತ್ಮನಾಂ ।
ಯೈಃ ಕೃತಂ ನಃ ಪುರಂ ಕೃತ್ಸ್ನಮುದ್ವಸಂ ಪಾಪಕರ್ಮಭಿಃ ॥ ೫೫ ॥
ಏವಮುಕ್ತ್ವಾಽಥ ವಿಪ್ರಃ ಸ ತ್ರಿಜಾತಃ ಪರಮೇಶ್ವರಂ ।
ಪ್ರಾರ್ಥಯಾಮಾಸ ಮೇ ದೇವ ತಂ ವರಂ ಯಚ್ಛ ಸಾಂಪ್ರತಂ ॥ ೫೬ ॥

---

೪೯–೫೦. ಬಳಿಕ ಸರ್ಪದ ಭಯದಿಂದಲೂ, ದುಃಖದಿಂದಲೂ ದಿಕ್ಕು ದಿಕ್ಕುಗಳಿಗೆ ಓಡಿದ ಬ್ರಾಹ್ಮಣರು ಒಂದುಗೂಡಿ ಮಹೇಶ್ವರನಿಂದ ವರವನ್ನು ಪಡೆದು ಸಂತೋಷದಿಂದ ತಪವನ್ನಾಚರಿಸುತ್ತಿರುವ ತ್ರಿಜಾತನಿರುವ ಕಾಡಿಗೆ ಬಂದರು.

೫೧–೫೨. ಆ ತ್ರಿಜಾತನು ಹೆಂಡತಿ ಮಕ್ಕಳನ್ನು ಸ್ಮರಿಸಿಕೊಂಡು ದೀನವಾಗಿ ಗೋಳಾಡುತ್ತಿರುವ ಆ ಬ್ರಾಹ್ಮಣರನ್ನೆಲ್ಲ ಕಂಡು ದುಃಖಿತನಾಗಿ ತನ್ನ ನಗರದ ಆ ಬ್ರಾಹ್ಮಣರನ್ನು ಕುರಿತು ಕಣ್ಣೀರನ್ನು ಸುರಿಸುತ್ತ ಇಂತೆಂದನು.

೫೩. "ಎಲೈ ಬ್ರಾಹ್ಮಣರೆ! ನೀವೆಲ್ಲ ಈಗ ನನ್ನ ಮಾತನ್ನು ಕೇಳಿರಿ. ಆ ಪಟ್ಟಣದಿಂದ ಹೊರಟುಬಂದ ನಾನು ಶಿವನನ್ನು ತಪಸ್ಸಿನಿಂದ ಸಂತೋಷಗೊಳಿಸಿದೆನು.

೫೪. ಅವನು ನನಗಿಷ್ಟವಾದ ವರವನ್ನಿತ್ತನು. ಅದನ್ನು ನಾನು ಈವರೆಗೂ ಸ್ವೀಕರಿಸಲಿಲ್ಲ. ಈಗ ಕೇಳಿಕೊಳ್ಳುತ್ತೇನೆ.

೫೫. ಆದರಿಂದ ನಮ್ಮ ಪಟ್ಟಣದಲ್ಲಿ ಜನರು ವಾಸಮಾಡದಂತೆ ಮಾಡಿರುವ ಪಾಪಿಗಳಾದ ಸರ್ಪಗಳು ನಾಶವಾಗುವುವು."

೫೬. ಆ ತ್ರಿಜಾತನು ಹೀಗೆ ಹೇಳಿ ಸ್ವಾಮಿ! ಈಗ ನನಗೆ ಆ ವರವನ್ನು ಕೊಡೆಂದು ಪರಮೇಶ್ವರನನ್ನು ಬೇಡಿಕೊಂಡನು.

ತತಃ ಪ್ರೋವಾಚ ದೇವೇಶಃ ಪ್ರಾರ್ಥಯಸ್ವ ದ್ರುತಂ ದ್ವಿಜ ।
ಯೇನಾಽಭೀಷ್ಟಂ ಪ್ರಯಚ್ಛಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೬೭ ॥

ತ್ರಿಜಾತ ಉವಾಚ :—

ನಾಗೈರಸ್ಮತ್ಪುರಂ ಕೃತ್ಸ್ನಂ ಕೃತಂ ಜನವಿವರ್ಜಿತಂ ।
ತತ್ತಸ್ಮಾತ್ತೇ ಕ್ಷಯಂ ಯಾಂತು ಸರ್ವೇ ವೃಷಭವಾಹನ ॥ ೬೮ ॥
ಯೇನ ತತ್ಪೂರ್ಯತೇ ವಿಪ್ರೈರ್ಭೂಯೋಽಪಿ ಸುರಸತ್ತಮ ।
ಮಮಾಽಪಿ ಜಾಯತೇ ಕೀರ್ತಿಃ ಸ್ವಸ್ಥಾನೋದ್ಧರಣೋದ್ಭವಾ ॥ ೬೯ ॥

ಶ್ರೀ ಭಗವಾನುವಾಚ :—

ನಾಽಯುಕ್ತಂ ವಿಹಿತಂ ವಿಪ್ರ ಪನ್ನಗೈಸ್ತೈರ್ಮಹಾತ್ಮಭಿಃ ।
ನಿರ್ದೋಷಶ್ಚಾಽಪಿ ಪುತ್ರೋಽತ್ರ ಯೇಷಾಂ ವಿಪ್ರೇಣ ಸೂದಿತಃ ॥ ೭೦ ॥
ವಿಶೇಷೇಣ ದ್ವಿಜಶ್ರೇಷ್ಠ ಸಂಪ್ರಾಪ್ತೇ ಪಂಚಮೀ ದಿನೇ ।
ತತ್ರಾಽಪಿ ಶ್ರಾವಣೇ ಮಾಸಿ ಪೂಜ್ಯಂತೇ ಯತ್ರ ಪನ್ನಗಾಃ ॥ ೭೧ ॥
ತಸ್ಮಾತ್ತೇಽಹಂ ಪ್ರವಕ್ಷ್ಯಾಮಿ ಸಿದ್ಧಮಂತ್ರಮನುತ್ತಮಂ ।
ಯಸ್ಯೋಚ್ಚಾರಣಮಾತ್ರೇಣ ಸರ್ಪಾಣಾಂ ನಶ್ಯತೇ ವಿಷಂ ॥ ೭೨ ॥
ತಂ ಮಂತ್ರಂ ತತ್ರ ಗತ್ವಾ ತ್ವಂ ತದ್ವಿಪ್ರೈರಖಿಲೈರ್ವೃತಃ ।
ಶ್ರಾವಯಸ್ವ ಮಹಾಭಾಗ ತಾರಶಬ್ದೇನ ಸರ್ವಶಃ ॥ ೭೩ ॥

---

೬೭. ಅನಂತರ ಮಹಾದೇವನು, "ಬ್ರಾಹ್ಮಣ! ಶೀಘ್ರವಾಗಿ ಬೇಡಿಕೊ. ನಿನ್ನ ಇಷ್ಟಾರ್ಥವು ದುರ್ಲಭವಾಗಿದ್ದರೂ ಅದನ್ನು ಕೊಡುವೆನು" ಎಂದನು.

೬೮. ತ್ರಿಜಾತನು ಹೇಳುತ್ತಾನೆ:—ಮಹೇಶ್ವರ! ಸರ್ಪಗಳು ನಮ್ಮ ಪಟ್ಟಣವನ್ನೆಲ್ಲ ಜನರಿಲ್ಲದ ಹಾಗೆ ಮಾಡಿರುವುವು. ಆದುದರಿಂದ ಅವುಗಳೆಲ್ಲ ಸಾಯಲಿ.

೬೯. ಅದರಿಂದ ಮರಳಿ ಆ ಪಟ್ಟಣದಲ್ಲಿ ಬ್ರಾಹ್ಮಣರು ತುಂಬುವರು. ನನಗೂ ನಮ್ಮ ಸ್ಥಳವನ್ನು ಉದ್ಧಾರಮಾಡಿದ ಕೀರ್ತಿಯು ದೊರೆಯುವುದು.

೭೦. ಶ್ರೀ ಭಗವಂತನು ಹೇಳುತ್ತಾನೆ:—ಬ್ರಾಹ್ಮಣ! ತಪ್ಪಿಲ್ಲದ ಸರ್ಪ ಬಾಲಕನನ್ನು ಬ್ರಾಹ್ಮಣನು ಕೊಂದುದರಿಂದ ಮಹಾತ್ಮರಾದ ಸರ್ಪಗಳು ಮಾಡಿರುವುದು ಸರಿಯಾದುದು.

೭೧. ಇನ್ನೂ ವಿಶೇಷವಾಗಿ ಶ್ರಾವಣ ಮಾಸದ ಪಂಚಮೀ ದಿನ ಸರ್ಪಗಳನ್ನು ಪೂಜಿಸುತ್ತಾರೆ.

೭೨. ಆದುದರಿಂದ ನಾನು ನಿನಗೆ ಉತ್ತಮವಾದ ಸಿದ್ಧಮಂತ್ರವನ್ನು ಹೇಳುವೆನು. ಅದನ್ನು ಉಚ್ಚರಿಸುವುದರಿಂದಲೇ ಸರ್ಪಗಳ ವಿಷವು ನೀಗುವುದು.

೭೩. ನೀನು ಅಲ್ಲಿಗೆ ಹೋಗಿ ಸಮಸ್ತ ಬ್ರಾಹ್ಮಣರೊಡನೆ ಉಚ್ಚಸ್ವರದಿಂದ ಎಲ್ಲೆಡೆಯಲ್ಲಿಯೂ ಕೇಳುವಂತೆ ಆ ಮಂತ್ರವನ್ನುಚ್ಚರಿಸು.

ತಂ ಶ್ರುತ್ವಾ ಯೇ ನ ಯಾಸ್ಯಂತಿ ಪಾತಾಲಂ ಪನ್ನಗಾಽಧಮಾಃ ।
ಯುಷ್ಮದ್ವಾಕ್ಯಾದ್ಭವಿಷ್ಯಂತಿ ನಿರ್ವಿಷಾಸ್ತೇ ನ ಸಂಶಯಃ ॥ ೭೪ ॥

ತ್ರಿಜಾತ ಉವಾಚ:—

ಬ್ರೂಹಿ ತಂ ಮೇ ಮಹಾಮಂತ್ರಂ ಸರ್ವತೀಕ್ಷ್ಣವಿನಾಶನಂ ।
ಯೇನ ಗತ್ವಾ ನಿಜಂ ಸ್ಥಾನಂ ಸರ್ಪಾನುತ್ಸಾದಯಾಮ್ಯಹಂ ॥ ೭೫ ॥

ಶ್ರೀ ಭಗವಾನುವಾಚ :—

ಗರಂ ವಿಷಮಿತಿ ಪ್ರೋಕ್ತಂ ನ ತತ್ರಾಽಸ್ತೀಹ ಸಾಂಪ್ರತಂ ।
ಮತ್ಪ್ರಸಾದಾತ್ತ್ವಯಾಹ್ಯೇತದುಚ್ಚಾರ್ಯಂ ಬ್ರಾಹ್ಮಣೋತ್ತಮ ॥ ೭೬ ॥
ನ ಗರಂ ನ ಗರಂ ಚೈತಚ್ಛ್ರುತ್ವಾ ಯೇ ಪನ್ನಗಾಽಧಮಾಃ ।
ತತ್ರ ಸ್ಥಾಸ್ಯಂತಿ ತೇ ವಧ್ಯಾ ಭವಿಷ್ಯಂತಿ ಯಥಾ ಸುಖಂ ॥ ೭೭ ॥
ಅದ್ಯಪ್ರಭೃತಿ ತತ್ಸ್ಥಾನಂ ನಗರಾಖ್ಯಂ ಧರಾತಲೇ ।
ಭವಿಷ್ಯತಿ ಸುವಿಖ್ಯಾತಂ ತವ ಕೀರ್ತಿವಿವರ್ಧನಂ ॥ ೭೮ ॥
ತಥಾಽನ್ಯೋಽಪಿ ಚ ಯೋ ವಿಪ್ರೋ ನಾಗರಃ ಶುದ್ಧವಂಶಜಃ ।
ನಗರಾಖ್ಯೇನ ಮಂತ್ರೇಣ ಅಭಿಮಂತ್ರ್ಯ ತ್ರಿಧಾಜಲಂ ॥ ೭೯ ॥
ಪ್ರಾಣಿನಂ ಕಾಲಸಂದಷ್ಟಮಪಿ ಮೃತ್ಯುವಶಂ ಗತಂ ।
ಪ್ರಕರಿಷ್ಯತಿ ಜೀವಾಢ್ಯಂ ಪ್ರಕ್ಷಿಪ್ಯವದನೇ ಸ್ವಯಂ ॥ ೮೦ ॥

---

೭೪. ಆ ಮಂತ್ರವನ್ನು ಕೇಳಿ ಪಾತಾಳಕ್ಕೆ ಹೋಗದ ನೀಚ ನಾಗಗಳು ನಿಮ್ಮ ಮಾತಿನಿಂದ ವಿಷವಿಲ್ಲದವುಗಳಾಗುವುವು.

೭೫. ತ್ರಿಜಾತನು ಹೇಳುತ್ತಾನೆ:—ಮಹೇಶ್ವರ! ಸಕಲ ತೈಕ್ಷ್ಣ್ಯವನ್ನು ನಿವಾರಿಸುವ ಆ ಮಂತ್ರವನ್ನು ನನಗೆ ಹೇಳು. ಅದರಿಂದ ನಾನು ನನ್ನ ಸ್ಥಳಕ್ಕೆ ಹಿಂದಿರುಗಿ ಸರ್ಪಗಳನ್ನು ಕೊಲ್ಲುವೆನು.

೭೬. ಶ್ರೀ ಭಗವಂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮ! ನನ್ನ ಅನುಗ್ರಹದಿಂದ ಗರವೆನ್ನಿಸಿಕೊಳ್ಳುವ ವಿಷವು ಈಗ ಅಲ್ಲಿಲ್ಲ. ನೀನು ಇದನ್ನು ಉಚ್ಚರಿಸು.

೭೭. ಅಲ್ಲಿ ವಾಸಿಸುವ ನೀಚ ಸರ್ಪಗಳು ನ ಗರಂ, ನ ಗರಂ ಎಂಬ ಮಂತ್ರವನ್ನು ಕೇಳಿದ ಕೂಡಲೆ ಸುಖವಾಗಿ ಕೊಲ್ಲಲು ಶಕ್ಯವಾಗುವುವು.

೭೮. ಈ ದಿನ ಮೊದಲ್ಗೊಂಡು ನಗರವೆಂದು ಹೆಸರಾಂತ ಆ ಕ್ಷೇತ್ರವು ಭೂಮಿಯಲ್ಲಿ ನಿನ್ನ ಕೀರ್ತಿಯನ್ನು ಹೆಚ್ಚಿಸುತ್ತ ಪ್ರಖ್ಯಾತವಾಗುವುದು.

೭೯—೮೦. ಹಾಗೆಯೇ ಶುದ್ಧವಂಶದಲ್ಲಿ ಜನಿಸಿದ ಈ ನಗರ ಕ್ಷೇತ್ರದ ಬ್ರಾಹ್ಮಣನು ನ ಗರವೆಂಬ ಈ ಮಂತ್ರದಿಂದ ಮೂರುಸಾರಿ ನೀರನ್ನು ಅಭಿಮಂತ್ರಿಸಿ ಸರ್ಪದಷ್ಟವಾದ ಮತ್ತು ಮೃತವಾದ ಪ್ರಾಣಿಯ ಬಾಯಿಯಲ್ಲಿ ಹಾಕಿದರೆ ಆ ಪ್ರಾಣಿಯು ಬದುಕುವುದು.

ಅನ್ಯತ್ರಾಽಪಿ ಸ್ಥಿತೋ ಮರ್ತ್ಯೋ ಮಂತ್ರಮೇತಂ ತ್ರಿರಕ್ಷರಂ ।
ಯಃ ಸ್ಮರಿಷ್ಯತಿ ಸಂಸುಪ್ತೋ ನ ಹಿಂಸ್ಯಃ ಸ್ಯಾದಹೇರ್ಹಿ ಸಃ ॥ ೮೧ ॥
ಸ್ಥಾವರಂ ಜಂಗಮಂ ವಾಽಪಿ ಕೃತ್ರಿಮಂ ವಾ ಗರಂ ಹಿ ತತ್ ।
ತದನೇನ ಚ ಮಂತ್ರೇಣ ಸಂಸ್ಪೃಷ್ಟಂ ತ್ವಮೃತಾಯಿತಂ ॥ ೮೨ ॥
ಅಜೀರ್ಣಪ್ರಭವಾ ರೋಗಾ ಯೇಚಾಽಸ್ಯೇ ಜಠರೋದ್ಭವಾಃ ।
ಮಂತ್ರಸ್ಯಾಸ್ಯ ಪ್ರಭಾವೇನ ಸರ್ವೇ ಯಾಂತಿ ದ್ರುತಂ ಕ್ಷಯಂ ॥ ೮೩ ॥
ಏವಮುಕ್ತ್ವಾಽಥ ತಂ ವಿಪ್ರಂ ಭಗವಾನ್ ವೃಷಭಧ್ವಜಃ ।
ಜಗಾಮಾಽದರ್ಶನಂ ಪಶ್ಚಾದ್ಯಥಾ ದೀಪೋ ವಿತೈಲಕಃ ॥ ೮೪ ॥
ತ್ರಿಜಾತೋಽಪಿ ಸಮಂ ವಿಪ್ರೈರ್ಹತಶೇಷೈಸ್ತು ತೈರ್ದ್ರುತಂ ।
ಜಗಾಮ ಸಂಪ್ರಹೃಷ್ಟಾತ್ಮಾ ಚಮತ್ಕಾರಪುರಂ ಪ್ರತಿ ॥ ೮೫ ॥
ಏವಂ ತೇ ಬ್ರಾಹ್ಮಣಾಃ ಸರ್ವೇ ತ್ರಿಜಾತೇನ ಸಮನ್ವಿತಾಃ ।
ನ ಗರಂ ನ ಗರಂ ಪ್ರೋಚ್ಚೈರುಚ್ಚರಂತಃ ಸಮಾಯಯುಃ ॥ ೮೬ ॥
ಹಾಟಕೇಶ್ವರಜಂ ಕ್ಷೇತ್ರಂ ತತ್ತದ್ವ್ಯಾಪ್ತಂ ಸಮಂತತಃ ।
ರೌದ್ರೈರಾಶೀವಿಷೈಃ ಕ್ರೂರೈಃ ಶೇಷಸ್ಯಾದೇಶಮಾಶ್ರಿತೈಃ ॥ ೮೭ ॥
ಅಥ ತೇ ಪನ್ನಗಾಃ ಶ್ರುತ್ವಾ ಸಿದ್ಧಮಂತ್ರಂ ಶಿವೋದ್ಭವಂ ।
ನಿರ್ವಿಷಾಸ್ತೇಜಸಾ ಹೀನಾಃ ಸಮಂತಾತ್ತೇ ಪ್ರದುದ್ರುವುಃ ॥ ೮೮ ॥

---

೮೧. ಇತರ ಕಡೆಯಲ್ಲಿ ವಾಸಮಾಡುತ್ತಿರುವ ಮಾನವನು ಈ ಮೂರಕ್ಷರವುಳ್ಳ ಮಂತ್ರವನ್ನು ಸ್ಮರಿಸಿ ಮಲಗಿದರೆ ಅವನನ್ನು ಸರ್ಪವು ಹಿಂಸಿಸುವುದಿಲ್ಲ.

೮೨. ಈ ಮಂತ್ರದ ಸ್ಪರ್ಶವನ್ನು ಪಡೆದ ಸ್ಥಾವರ ಜಂಗಮ ಅಥವಾ ಕೃತ್ರಿಮ ವಿಷವು ಅಮೃತದಂತಾಗುವುದು.

೮೩. ಅಜೀರ್ಣದಿಂದಾದ ಅಥವಾ ಇತರ ಉದರರೋಗಗಳು ಈ ಮಂತ್ರದ ಪ್ರಭಾವದಿಂದ ಶೀಘ್ರವಾಗಿ ನೀಗುವುವು.

೮೪. ಮಹೇಶ್ವರನು ಆ ಬ್ರಾಹ್ಮಣನನ್ನು ಕುರಿತು ಇಂತೆಂದು ನುಡಿದು ಎಣ್ಣೆಯಿಲ್ಲದ ದೀಪದಂತೆ ಅದೃಶ್ಯನಾದನು.

೮೫. ತ್ರಿಜಾತನೂ ಮಡಿದುಳಿದ ಆ ಬ್ರಾಹ್ಮಣರೊಡನೆ ಸಂತೋಷದಿಂದ ಚಮತ್ಕಾರಪುರಕ್ಕೆ ಹೋದನು.

೮೬–೮೭. ಹೀಗೆ ಆ ಬ್ರಾಹ್ಮಣರೆಲ್ಲ ತ್ರಿಜಾತನೊಡನೆ ನ ಗರಂ ನ ಗರಂ ಎಂದು ಗಟ್ಟಿಯಾಗಿ ಕೂಗುತ್ತ ಮಹಾಶೇಷನ ಅಪ್ಪಣೆಯನ್ನು ಪಡೆದ ಕ್ರೂರವಾದ ಸರ್ಪಗಳು ವ್ಯಾಪಿಸಿದ ಆ ಹಾಟಕೇಶ್ವರಕ್ಷೇತ್ರಕ್ಕೆ ಬಂದರು.

೮೮. ಬಳಿಕ ಆ ಸರ್ಪಗಳು ಶಿವನು ಹೇಳಿದ ಸಿದ್ಧಮಂತ್ರವನ್ನು ಕೇಳಿ ವಿಷವಿಲ್ಲದೆ ತೇಜೋಹೀನವಾಗಿ ಸುತ್ತಲೂ ಓಡಿದುವು.

ವಲ್ಮೀಕಾನ್ ಕೇಚಿದಾಸಾದ್ಯ ಚಿತ್ರರಂಧ್ರಾಂತರೋದ್ಭವಾನ್ ।
ಅನ್ಯೇಚಾಽಪಿ ಪ್ರಜಗ್ಮುಶ್ಚ ಪಾತಾಲಂ ದಂದಶೂಕಕಾಃ ॥ ೮೯ ॥
ಯೇ ಕೇಚಿದ್ಭಯಸಂತ್ರಸ್ತಾ ವಾರ್ಧಕ್ಯೇನ ನಿಪೀಡಿತಾಃ ।
ಬಾಲತ್ವೇನ ತಥಾ ಚಾಽನ್ಯೇ ಶಕ್ನುವಂತಿ ನ ಸರ್ಪಿತುಂ ॥ ೯೦ ॥
ತೇ ಸರ್ವೇ ಬ್ರಾಹ್ಮಣೇಂದ್ರೈಸ್ತೈಃ ಕೃತಸ್ಯಪ್ರತಿಕಾರಕೈಃ ।
ನಿಹತಾಃ ಪನ್ನಗಾಸ್ತತ್ರ ದಂಡಕಾಷ್ಠೈಃ ಸಹಸ್ರಶಃ ॥ ೯೧ ॥
ಏವಮುತ್ಸಾದ್ಯ ತಾನ್ ಸರ್ವಾನ್ ಬ್ರಾಹ್ಮಣಾಸ್ತೇ ಗತವ್ಯಥಾಃ ।
ತಂ ತ್ರಿಜಾತಂ ಪುರಸ್ಕೃತ್ಯ ಸ್ಥಾನಕೃತ್ಯಾನಿ ಚಕ್ರಿರೇ ॥ ೯೨ ॥
ಏವಂ ತನ್ನಗರಂ ಜಾತಮುಸ್ಮಾತ್ಕಾಲಾದನಂತರಂ ।
ದೇವದೇವಸ್ಯ ಭರ್ಗಸ್ಯ ಪ್ರಸಾದೇನ ದ್ವಿಜೋತ್ತಮಾಃ ॥ ೯೩ ॥
ಏತದ್ಯಃ ಪಠತೇ ನಿತ್ಯಮಾಖ್ಯಾನಂ ನಗರೋದ್ಭವಂ ।
ನ ತಸ್ಯ ಸರ್ಪಜಂ ಕಾಽಪಿ ಕಥಂಚಿಜ್ಜಾಯತೇ ಭಯಂ ॥ ೯೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಗರಸಂಜ್ಞೋತ್ಪತ್ತಿವರ್ಣನಂ" ನಾಮ
ಚತುರ್ದಶೋತ್ತರಶತತಮೋಽಧ್ಯಾಯಃ

---

೮೯. ಕೆಲವು ನಾನಾ ರಂಧ್ರಗಳುಳ್ಳ ಹುತ್ತಗಳನ್ನೂ, ಇನ್ನು ಕೆಲವು ಪಾತಾಳವನ್ನೂ ಸೇರಿದುವು.

೯೦–೯೧. ಭಯಗೊಂಡುವೂ, ಮುದಿಯೂ, ಮರಿಗಳೂ ಆಗಿರುವುದರಿಂದ ಸರಿಯಲಾಗದ ಕೆಲವು ಸರ್ಪಗಳನ್ನು ಸೇಡನ್ನು ತೀರಿಸಲುದ್ಯುಕ್ತರಾದ ಬ್ರಾಹ್ಮಣರು ದೊಣ್ಣೆಯಿಂದ ಹೊಡೆದು ಕೊಂದರು.

೯೨–೯೩. ಹೀಗೆ ಆ ಬ್ರಾಹ್ಮಣರು ಆ ಎಲ್ಲ ಸರ್ಪಗಳನ್ನೂ ಕೊಂದು ವ್ಯಥೆಯಿಲ್ಲದವರಾಗಿ ಆ ತ್ರಿಜಾತನನ್ನು ಮುಂದಿರಿಸಿಕೊಂಡು ಕ್ಷೇತ್ರಕಾರ್ಯಗಳನ್ನು ನಡೆಸಿದರು. ಈ ರೀತಿಯಾಗಿ ಆ ಕ್ಷೇತ್ರವು ಅಂದಿನಿಂದ ಮಹೇಶ್ವರನ ಅನುಗ್ರಹದಿಂದ ನಗರವಾಯಿತು.

೯೪. ಈ ನಗರೋಪಾಖ್ಯಾನವನ್ನು ನಿತ್ಯವೂ ಪಠಿಸುವ ಮಾನವನಿಗೆ ಎಲ್ಲಿಯೂ ಸರ್ಪಭಯವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಗರಸಂಜ್ಞೋತ್ಪತ್ತಿವರ್ಣನ" ವೆಂಬ
ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋತ್ತರಶತತಮೋಽಧ್ಯಾಯಃ

## ಮುನಿಗೋತ್ರವರ್ಣನಂ

ಋಷಯ ಊಚುಃ :—

ತ್ರಿಜಾತೋ ಬ್ರಾಹ್ಮಣಸ್ತತ್ರ ಕಿನ್ನಾಮ್ನಾ ಕಸ್ಯ ಸಂಭವಃ ।
ಕಿಂ ಗೋತ್ರಶ್ಚೈವ ಕಿಂ ಸಂಜ್ಞಃ ಕೀರ್ತಯಸ್ವ ಮಹಾಮತೇ ॥ ೧ ॥
ಕಿಂ ಕುಲೀನೈರ್ಗುಣಾಢ್ಯೈರ್ವಾ ತೇಜೋವಿದ್ಯಾವಿಚಕ್ಷಣೈಃ ।
ತ್ರಿಜಾತೋಽಪಿ ವರಂ ಸೋಽಪಿ ಸ್ವಂ ಸ್ಥಾನಂ ಯೇನ ಚೋದ್ಧೃತಂ ॥ ೨ ॥

ಸೂತ ಉವಾಚ :—

ಸಾಂಕೃತ್ಯಸ್ಯ ಮುನೇರ್ವಂಶೇ ಸ ಸಂಭೂತೋ ದ್ವಿಜೋತ್ತಮಃ ।
ಪ್ರಭಾವ ಇತಿ ವಿಖ್ಯಾತೋ ದತ್ತ ಸಂಜ್ಞೋ ನಿಮೇಃ ಸುತಃ ॥ ೩ ॥
ಸ ಏವಂ ಸ್ಥಾನಮುದ್ಧೃತ್ಯ ಚಕಾರಾಯತನಂ ಶುಭಂ ।
ತ್ರಿಜಾತೇಶ್ವರ ನಾಮ್ನಾ ಚ ದೇವದೇವಸ್ಯ ಶೂಲಿನಃ ॥ ೪ ॥
ತಮಾರಾಧ್ಯ ದಿವಾನಕ್ತಂ ಸಮ್ಯಕ್ ಶ್ರದ್ಧಾಸಮನ್ವಿತಃ ।
ಸಶರೀರೋ ಗತಃ ಸ್ವರ್ಗಃ ತತಃ ಕಾಲೇನ ಕೇನಚಿತ್ ॥ ೫ ॥

---

## ಕನ್ನಡದ ಅನುವಾದ

### ಮುನಿಗೋತ್ರವರ್ಣನ

೧. ಋಷಿಗಳು ಹೇಳುತ್ತಾರೆ:—ಪ್ರಾಜ್ಞನೆ! ಆ ತ್ರಿಜಾತ ಬ್ರಾಹ್ಮಣನ ಹೆಸರೇನು? ಅವನು ಯಾರ ಮಗನು? ಅವನ ಗೋತ್ರವಾವುದು? ನಮಗೆ ಹೇಳು.

೨. ಸತ್ಕುಲಜಾತರೂ, ಗುಣವಂತರೂ, ತೇಜಸ್ವಿಗಳೂ, ವಿದ್ಯಾಚತುರರೂ ಆದ ಬ್ರಾಹ್ಮಣರಿಂದೇನು ಪ್ರಯೋಜನ? ಅವನು ತ್ರಿಜಾತನಾದರೂ ತನ್ನ ಸ್ಥಾನವನ್ನು ಉದ್ಧರಿಸಿರುವನು.

೩. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣೋತ್ತಮನು ಸಾಂಕೃತ್ಯನೆಂಬ ಮುನಿಯ ವಂಶದಲ್ಲಿ ಜನಿಸಿದನು. ಪ್ರಭಾವನೆಂದು ಪ್ರಸಿದ್ಧನಾದನು. ನಿಮಿಯ ಮಗನು ದತ್ತನಾಮಕನು.

೪. ಅವನು ಹೀಗೆ ಆ ಕ್ಷೇತ್ರವನ್ನುದ್ಧರಿಸಿ ತ್ರಿಜಾತೇಶ್ವರನೆಂಬ ಮಹೇಶ್ವರನ ಮಂಗಳಕರವಾದ ಆಲಯವನ್ನು ನಿರ್ಮಿಸಿದನು.

೫. ಅವನು ಆ ಶಂಕರನನ್ನು ಹಗಲು ರಾತ್ರಿ ಶ್ರದ್ಧೆಯಿಂದ ಆರಾಧಿಸಿ ಒಂದಾನೊಂದು ಕಾಲದಲ್ಲಿ ಶರೀರ ಸಹಿತನಾಗಿ ಸ್ವರ್ಗಕ್ಕೆ ಹೋದನು.

ಯಸ್ತಂ ಪಶ್ಯತಿ ಸದ್ಭಕ್ತ್ಯಾ ಸ್ನಾಪಯೇದ್ವಿಷುವೇ ಸದಾ ।
ನ ತ್ರಿಜಾತಃ ಕುಲೇ ತಸ್ಯ ಕಥಂಚಿದಪಿ-ಜಾಯತೇ ॥ ೬ ॥
ಋಷಯ ಊಚುಃ:—
ಯಾನಿ ಗೋತ್ರಾಣಿ ನಷ್ಟಾನಿ ಯಾನಿ ಸಂಸ್ಥಾಪಿತಾನಿ ಚ ।
ನಾಮತಸ್ತಾನಿ ನೋ ಬ್ರೂಹಿ ತತ್ಪುರೇ ಸೂತನಂದನ ॥ ೭ ॥
ಸೂತ ಉವಾಚಃ—
ತತ್ರೋಪಮನ್ಯುಗೋತ್ರಾ ಯೇ ಕ್ರೌಂಚಗೋತ್ರಸಮುದ್ಭವಾಃ ।
ಕೈಶೋರ್ಯಗೋತ್ರ ಸಂಭೂತಾಸ್ತ್ರೈವಣೇಯಾ ದ್ವಿಜೋತ್ತಮಾಃ ॥ ೮ ॥
ತೇ ಭೂಯೋಽಪಿ ನ ಸಂಪ್ರಾಪ್ತಾ ಯಥಾ ಗೋತ್ರಚತುಷ್ಟಯಂ ।
ತತ್ಪೂರ್ವಕಂ ಶುಕಾದೀನಾಂ ಯನ್ನಷ್ಟಂ ನಾಗಜಾದ್ಭಯಾತ್ ॥ ೯ ॥
ಶೇಷಾನ್ವಃ ಸಂಪ್ರವಕ್ಷ್ಯಾಮಿ ಬ್ರಾಹ್ಮಣಾನ್ ಗೋತ್ರಸಂಭವಾನ್ ।
ಕೌಶಿಕಾನ್ವಯ ಸಂಭೂತಾಃ ಷಡ್ವಿಂಶತಿಶ್ಚ ತೇ ಸ್ಮೃತಾಃ ॥ ೧೦ ॥
ಕಶ್ಯಪಾನ್ವಯ ಸಂಭೂತಾಃ ಸಪ್ತಾಶೀತಿರ್ದ್ವಿಜೋತ್ತಮಾಃ ।
ಲಕ್ಷ್ಮಣಾನ್ವಯ ಸಂಭೂತಾ ಏಕವಿಂಶತಿರಾಗತಾಃ ॥ ೧೧ ॥
ತತ್ರ ನಷ್ಟಾಃ ಪುನಃ ಪ್ರಾಪ್ತಾಸ್ತಸ್ಮಿನ್ ಸ್ಥಾನೇ ಸುದುಃಖಿತಾಃ ।
ಭಾರದ್ವಾಜಾಸ್ತ್ರಯಃ ಪ್ರಾಪ್ತಾಃ ಕೌಂಡನೀಯಾಶ್ಚತುರ್ದಶ ॥ ೧೨ ॥

---

೬. ಆ ತ್ರಿಜಾತೇಶ್ವರನನ್ನು ಭಕ್ತಿಯಿಂದ ದರ್ಶನ ಮಾಡಿದವನೂ, ವರ್ಷಾದಿಯಲ್ಲಿ ಅಭಿಷೇಕ ಮಾಡಿದವನೂ ಆದ ಮಾನವನ ವಂಶದಲ್ಲಿ ತ್ರಿಜಾತನು ಜನಿಸುವುದಿಲ್ಲ.

೭. ಋಷಿಗಳು ಹೇಳುತ್ತಾರೆ:—ಸೂತತನಯ! ಆ ಪಟ್ಟಣದಲ್ಲಿ ಯಾವ ಗೋತ್ರಗಳು ಹಾಳಾದುವು? ಯಾವ ಗೋತ್ರಗಳು ಸ್ಥಾಪಿತವಾದುವು? ಅವುಗಳ ಹೆಸರನ್ನು ನಮಗೆ ಹೇಳು.

೮–೯. ಸೂತನು ಹೇಳುತ್ತಾನೆ:—ಬ್ರಾಹ್ಮಣವರ್ಯರೆ! ಅಲ್ಲಿ ಉಪಮನ್ಯು, ಕ್ರೌಂಚ, ಕೈಶೋರ್ಯ, ಕೌಶಿಕವೆಂಬ ನಾಲ್ಕು ಗೋತ್ರದ ಬ್ರಾಹ್ಮಣರು ಹೊರಟು ಹೋದವರು ಮರಳಿ ಹಿಂದಿರುಗಲಿಲ್ಲ. ಶುಕಾದಿಗಳ ಗೋತ್ರದವರೂ ನಾಗಭಯದಿಂದ ನಾಶವಾದರು.

೧೦–೧೧. ಉಳಿದ ಗೋತ್ರದ ಬ್ರಾಹ್ಮಣರನ್ನು ನಿಮಗೆ ಹೇಳುವೆನು. ಕೌಶಿಕವಂಶದ ಇಪ್ಪತ್ತಾರು ಮಂದಿ, ಕಶ್ಯಪವಂಶದ ಎಂಬತ್ತೇಳು ಮಂದಿ, ಲಕ್ಷ್ಮಣ ವಂಶದ ಇಪ್ಪತ್ತೊಂದು ಮಂದಿ ಬ್ರಾಹ್ಮಣರು ಹಿಂದಿರುಗಿದರು.

೧೨–೧೫. ಮತ್ತು ಮೂರು ಜನ ಭಾರದ್ವಾಜಗೋತ್ರದವರೂ, ಹದಿನಾಲ್ಕು ಜನ ಕೌಂಡನೀಯರೂ, ಇಪ್ಪತ್ತು ಜನ ರೈತಿಕರೂ, ಎಂಟು ಜನ ಪಾರಾಶರ್ಯರೂ,

ಶೈತಿಕಾನಾಂ ತಥಾ ವಿಂಶತ್ಪಾರಾಶರ್ಯಾಷ್ಟಕಂ ತಥಾ ।
ಗರ್ಗಾಣಾಂ ದ್ವಿವಿಂಶಂ ಚ ಹಾರೀತಾನಾಂ ತ್ರಿವಿಂಶತಿಃ ॥ ೧೩ ॥
ಔರ್ವಭಾರ್ಗವಗೋತ್ರಾಣಾಂ ಪಂಚವಿಂಶದುದಾಹೃತಾಃ ।
ಗೌತಮಾನಾಂ ಚ ಷಡ್ವಿಂಶಮಾಲೂಭಾಯನ ವಿಂಶತಿಃ ॥ ೧೪ ॥
ಮಾಂಡವ್ಯಾನಾಂ ತ್ರಿವಿಂಶಚ್ಚ ಬಹ್ವೃಚಾನಾಂ ತ್ರಿವಿಂಶತಿಃ ।
ಸಾಂಕೃತ್ಯಾನಾಂ ವಿಶಿಷ್ಟಾನಾಂ ಪೃಥಕ್ತ್ವೇನ ದಶೈವತು ॥ ೧೫ ॥
ತಥೈವಾಂಗಿರಸಾನಾಂ ಚ ಪಂಚ ಚೈವ ಪ್ರಕೀರ್ತಿತಾಃ ।
ಆತ್ರೇಯಾ ದಶ ಸಂಖ್ಯಾತಾಃ ಶುಕ್ಲಾತ್ರೇಯಾಸ್ತಥೈವ ಚ ॥ ೧೬ ॥
ವಾತ್ಸ್ಯಾಃ ಪಂಚ ಸಮಾಖ್ಯಾತಾಃ ಕೌತ್ಸಾಶ್ಚ ನವಸಪ್ತವೈ ।
ಶಾಂಡಿಲ್ಯಾ ಭಾರ್ಗವಾಃ ಪಂಚ ಮೌದ್ಗಲ್ಯಾವಿಂಶತಿಃ ಸ್ಮೃತಾಃ ॥ ೧೭ ॥
ಬೌಧಾಯನಾಃ ಕೌಶಲಾಶ್ಚ ತ್ರಿಂಶನ್ಮಾತ್ರಾಃ ಪ್ರಕೀರ್ತಿತಾಃ ।
ಅಥರ್ವಾಃ ಪಂಚ ಪಂಚಾಶನ್ಮೌನಸಾಃ ಸಪ್ತಸಪ್ತತಿಃ ॥ ೧೮ ॥
ಯಾಜುಷಾಸ್ತ್ರಿಂಶತಿಃ ಖ್ಯಾತಾಶ್ಚ್ಯಾವನಾಃ ಸಪ್ತವಿಂಶತಿಃ ।
ಆಗಸ್ತ್ಯಾಶ್ಚ ತ್ರಯಸ್ತ್ರಿಂಶಜ್ಜೈಮಿನೇಯಾ ದಶೈವತು ॥ ೧೯ ॥
ನೈರ್ವೃತಾಃ ಪಂಚಪಂಚಾಶತ್ಪಾಠೀನಾಃ ಸಪ್ತತಿರ್ದ್ವಿಜಾಃ ।
ಗೋಭಿಲಾಶ್ಚಾಽಪಿ ಕಾಕ್ವಾಶ್ಚ ಪಂಚ ಪಂಚ ದ್ವಿಜಾಃ ಸ್ಮೃತಾಃ ॥ ೨೦ ॥
ಔಶನಸಾಶ್ಚ ದಾಶಾರ್ಹಾಸ್ತ್ರಯಸ್ತ್ರಯ ಉದಾಹೃತಾಃ ।
ಲೋಕಾಖ್ಯಾನಾಂ ತಥಾ ಷಷ್ಟಿರ್ಶೈಣಿಶಾನಾಂ ದ್ವಿಸಪ್ತತಿಃ ॥ ೨೧ ॥

---

ಇಪ್ಪತ್ತೆರಡು ಜನ ಗರ್ಗರೂ, ಇಪ್ಪತ್ತಮೂರು ಜನ ಹಾರೀತರೂ, ಇಪ್ಪತ್ತೈದು ಮಂದಿ ಔರ್ವ, ಭಾರ್ಗವರೂ, ಇಪ್ಪತ್ತಾರು ಜನ ಗೌತಮರೂ, ಇಪ್ಪತ್ತು ಜನ ಆಲೂಭಾಯನರೂ, ಇಪ್ಪತ್ತಮೂರು ಜನ ಮಾಂಡವ್ಯರೂ, ಬಹ್ವೃಚರೂ, ಹತ್ತು ಜನ ವಿಶಿಷ್ಟಸಾಂಕೃತ್ಯರೂ, ಅವಿಷ್ಟಸಾಂಕೃತ್ಯರೂ, ಐದು ಜನ ಆಂಗಿರಸರೂ, ಹತ್ತು ಮಂದಿ ಆತ್ರೇಯಶುಕ್ಲಾತ್ರೇಯರೂ, ಐದು ಜನ ವಾತ್ಸ್ಯರೂ, ಹದಿನಾರು ಮಂದಿ ಕೌತ್ಸರೂ, ಐದುಜನ ಶಾಂಡಿಲ್ಯರೂ, ಭಾರ್ಗವರೂ, ಇಪ್ಪತ್ತು ಮಂದಿ ಮೌದ್ಗಲ್ಯರೂ, ಮೂವತ್ತು ಮಂದಿ ಬೋಧಾಯನರೂ, ಕೌಶಲರೂ, ಐವತ್ತೈದು ಜನ ಅಥರ್ವರೂ, ಎಪ್ಪತ್ತೇಳು ಜನ ಮೌನಸರೂ, ಮೂವತ್ತು ಮಂದಿ ಯಾಜುಷರೂ, ಇಪ್ಪತ್ತೇಳು ಮಂದಿ ಚ್ಯಾವನರೂ, ಮೂವತ್ತಮೂರು ಜನ ಆಗಸ್ತ್ಯರೂ, ಹತ್ತು ಮಂದಿ ಜೈಮಿನೇಯರೂ, ಐವತ್ತೈದು ಜನ ನೈರ್ವೃತರೂ, ಎಪ್ಪತ್ತು ಜನ ಪಾಠೀನರೂ, ಐದೈದು ಮಂದಿ ಗೋಭಿಲರೂ, ಕಾಕ್ವರೂ, ಮೂರು ಮೂರು ಮಂದಿ ಔಶನಸರೂ, ದಾಶಾರ್ಹರೂ, ಅರುವತ್ತು ಮಂದಿ ಲೋಕರೂ, ಎಪ್ಪತ್ತೆರಡು ಜನ

ಕಾಪಿಷ್ಠಲಾಃ ಶಾರ್ಕರಾಖ್ಯಾ ದತ್ತಾಖ್ಯಾಃ ಸಪ್ತಸಪ್ತತಿಃ ।
ಶಾರ್ಕವಾಸಾಂ ಶತಂ ಪ್ರೋಕ್ತಂ ದಾರ್ಜ್ಯಾನಾಂ ಸಪ್ತಸಪ್ತತಿಃ ॥ ೨೨ ॥
ಕಾತ್ಯಾಯನಾಸ್ತ್ರಯೋಽಧಿಷ್ಟಾ ವೈದಿಶಾಶ್ಚ ತ್ರಯಃ ಸ್ಮೃತಾಃ ।
ಕೃಷ್ಣಾತ್ರೇಯಾಸ್ತಥಾ ಪಂಚ ದತ್ತಾತ್ರೇಯಾಸ್ತಥೈವ ಚ ॥ ೨೩ ॥
ನಾರಾಯಣಾಃ ಶೌನಕೇಯಾ ಜಾಬಾಲಾಃ ಶತಸಂಖ್ಯಯಾ ।
ಗೋಪಾಲಾ ಜಾಮದಗ್ನ್ಯಾಶ್ಚ ಶಾಲಿಹೋತ್ರಾಶ್ಚ ಕರ್ಣಿಕಾಃ ॥ ೨೪ ॥
ಭಾಗುರಾಯಣಕಾಶ್ಚೈವ ಮಾತೃಕಾಸ್ತ್ರೈಣವಾಸ್ತಥಾ ।
ಸರ್ವೇ ತೇ ಬ್ರಾಹ್ಮಣಶ್ರೇಷ್ಠಾಃ ಕ್ರಮೇಣ ದ್ವಿಜಸತ್ತಮಾಃ ॥ ೨೫ ॥
ಏತೇಷಾಮೇವ ಸರ್ವೇಷಾಂ ಸಂಸ್ಕಾರಾಯ ದ್ವಿಜೋತ್ತಮಾಃ ।
ಚತ್ವಾರಿಂಶತ್ತಥಾಽಷ್ಟೌ ಚ ಪುರಾ ಪ್ರೋಕ್ತಾಃ ಸ್ವಯಂಭುವಾ ॥ ೨೬ ॥
ತೇ ಸರ್ವೇಽಚ ಪೃಥಕ್ತ್ವೇನ ನಿರ್ದಿಷ್ಟಾಃ ಪದ್ಮಯೋನಿನಾ ।
ಸಂಧ್ಯಾತರ್ಪಣಕೃತ್ಯಾನಿ ವೈಶ್ವದೇವೋದ್ಭವಾನಿ ಚ ।
ಶ್ರಾದ್ಧಾನಿ ಪಕ್ಷಕೃತ್ಯಾನಿ ಪಿತೃಪಿಂಡಾಂಸ್ತಥೈವ ಚ ॥ ೨೭ ॥
ಯಜ್ಞೋಪವೀತ ಸಂಯುಕ್ತಾಃ ಪ್ರವರಾಶ್ಚೈವ ಕೃತ್ಸ್ನಶಃ ।
ತಥಾ ಮೌಂಜೀವಿಶೇಷಾಶ್ಚ ಶಿಖಾಭೇದಾಃ ಪ್ರಕೀರ್ತಿತಾಃ ॥ ೨೮ ॥
ತ್ರಿಜಾತೇನ ಸಮಾರಾಧ್ಯ ದೇವದೇವಂ ಪಿತಾಮಹಂ ।
ತೇಷಾಂ ಕೃತ್ವಾ ದ್ವಿಜೇಂದ್ರಾಣಾಮಾತ್ಮಕೀರ್ತಿಕೃತೇ ತದಾ ॥ ೨೯ ॥

---

ಐಣಿಶರೂ, ಎಪ್ಪತ್ತೇಳು ಮಂದಿ ಕಾಪಿಷ್ಠಲರೂ, ಶಾರ್ಕರರೂ, ದತ್ತರೂ, ನೂರು ಜನ ಶಾರ್ಕವರೂ, ಎಪ್ಪತ್ತೇಳು ಮಂದಿ ದಾರ್ಜ್ಯರೂ, ಮೂರು ಮಂದಿ ಕಾತ್ಯಾಯನರೂ, ಮೂರು ಮಂದಿ ಅಧಿಷ್ಠರೂ, ವೈದಿಶರೂ, ಐದು ಮಂದಿ ಕೃಷ್ಣಾತ್ರೇಯರೂ, ದತ್ತಾತ್ರೇಯರೂ, ನೂರು ಜನ ನಾರಾಯಣರೂ, ಶೌನಕೇಯರೂ, ಜಾಬಾಲರೂ, ಗೋಪಾಲರೂ, ಜಾಮದಗ್ನ್ಯರೂ, ಶಾಲಿಹೋತ್ರರೂ, ಕರ್ಣಿಕರೂ, ಭಾಗುರಾಯಣಕರೂ, ಮಾತೃಕರೂ, ತ್ರೈಣವರೂ ಅಲ್ಲಿಗೆ ದುಃಖದಿಂದ ಹಿಂದಿರುಗಿದರು.

೨೬–೨೮. ದ್ವಿಜೋತ್ತಮರೆ! ಈ ಸಮಸ್ತ ಬ್ರಾಹ್ಮಣರಿಗೆ ಬ್ರಹ್ಮನು ಸಂಧ್ಯಾ, ತರ್ಪಣ, ವೈಶ್ವದೇವ, ಶ್ರಾದ್ಧ ಪಕ್ಷಕಾರ್ಯ, ಪಿತೃಪಿಂಡ, ಯಜ್ಞೋಪವೀತ, ಮೌಂಜೀಶಿಖಾ ಮೊದಲಾದ ನಲವತ್ತೆಂಟು ಸಂಸ್ಕಾರಗಳನ್ನು ಪ್ರತ್ಯೇಕವಾಗಿ ಕಲ್ಪಿಸಿರುವನು.

೨೯. ತ್ರಿಜಾತನು ತನ್ನ ಕೀರ್ತಿಗಾಗಿಯೂ, ಆ ಬ್ರಾಹ್ಮಣರಿಗಾಗಿಯೂ ಬ್ರಹ್ಮನನ್ನು ಆರಾಧಿಸಿ ಒಲಿಸಿಕೊಂಡಿದ್ದನು.

ಋಷಯ ಊಚುಃ :—

ಕಥಂ ಸಂತೋಷಿತೋ ಬ್ರಹ್ಮಾ ತ್ರಿಜಾತೇನ ಮಹಾತ್ಮನಾ ।
ಕರ್ಮಕಾಂಡಂ ಕಥಂ ಭಿನ್ನಂ ಕೃತಂ ತೇನ ಮಹಾತ್ಮನಾ ।
ಸರ್ವಂ ವಿಸ್ತರತೋ ಬ್ರೂಹಿ ಪರಂ ಕೌತೂಹಲಂ ಹಿ ನಃ ॥ ೩೦ ॥

ಸೂತ ಉವಾಚ :—

ತಸ್ಯಾರ್ಥೇ ಬ್ರಾಹ್ಮಣೈಃ ಸರ್ವೈಸ್ತೋಷಿತಃ ಪ್ರಪಿತಾಮಹಃ ।
ಅನೇನೈವೋದ್ಧೃತಂ ಸ್ಥಾನಮಸ್ಮಾಕಂ ಸಕಲಂ ವಿಭೋ ॥ ೩೧ ॥
ತಸ್ಮಾದಸ್ಯ ವಿಭೋ ಯಚ್ಛ ವೇದಜ್ಞಾನ ಮನುತ್ತಮಂ ।
ಯೇನ ಕರ್ಮವಿಶೇಷಾಶ್ಚ ಜಾಯಂತೇಽತ್ರಪುರೋತ್ತಮೇ ॥ ೩೨ ॥
ಏತಸ್ಯ ಚ ಗುರುತ್ವಂ ಚ ಪ್ರಸಾದಾತ್ತವ ಪದ್ಮಜ ।
ಯಥಾ ಭವತಿ ದೇವೇಶ ತಥಾ ನೀತಿರ್ವಿಧೀಯತಾಂ ॥ ೩೩ ॥
ಬ್ರಹ್ಮಾ ದದೌ ತತಸ್ತಸ್ಯ ಮಂತ್ರಗ್ರಾಮಮನುತ್ತಮಂ ।
ಯೇನ ವಿಜ್ಞಾಯತೇ ಸರ್ವಂ ವೇದಾರ್ಥೋ ಯಜ್ಞಕರ್ಮ ಚ ॥ ೩೪ ॥
ತತಃ ಪ್ರೋವಾಚ ತಾನ್‌ಸರ್ವಾನ್ ಪ್ರಹೃಷ್ಟೇನಾಂತರಾತ್ಮನಾ ।
ಏಷ ವೇದಾರ್ಥಸಂಪನ್ನೋ ಭವಿಷ್ಯತಿ ಮಹಾಯಶಾಃ ॥ ೩೫ ॥

---

೩೦. ಋಷಿಗಳು ಹೇಳುತ್ತಾರೆ:—ಸೂತ! ಮಹಾತ್ಮನಾದ ತ್ರಿಜಾತನು ಬ್ರಹ್ಮನನ್ನು ಹೇಗೆ ಒಲಿಸಿಕೊಂಡನು. ಅವನು ಕರ್ಮಕಾಂಡವನ್ನು ಹೇಗೆ ವ್ಯತ್ಯಾಸಗೊಳಿಸಿದನು? ನಮಗೆ ಬಹಳ ಕೌತೂಹಲವುಂಟಾಗಿದೆ. ಆದುದರಿಂದ ಎಲ್ಲವನ್ನೂ ವಿಸ್ತಾರವಾಗಿ ಹೇಳು.

೩೧. ಸೂತನು ಹೇಳುತ್ತಾನೆ:—ಆ ತ್ರಿಜಾತನಿಗಾಗಿ ಸಕಲ ಬ್ರಾಹ್ಮಣರು ಬ್ರಹ್ಮನನ್ನು ಸಂತೋಷಗೊಳಿಸಿ ಇಂತೆಂದರು. "ಸ್ವಾಮಿ! ಇವನಿಂದಲೇ ನಮ್ಮ ಸ್ಥಾನವು ಉದ್ಧೃತವಾಗಿದೆ.

೩೨. ಆದುದರಿಂದ ಇವನಿಗೆ ಉತ್ತಮವಾದ ವೇದಜ್ಞಾನವನ್ನು ಕೊಡು, ಅದರಿಂದ ಈ ಉತ್ತಮವಾದ ಪಟ್ಟಣದಲ್ಲಿ ಶ್ರೇಷ್ಠಕರ್ಮಗಳು ನಡೆಯುವುವು.

೩೩. ನಿನ್ನ ಅನುಗ್ರಹದಿಂದ ಇವನಿಗೆ ಗುರುತ್ವವುಂಟಾಗುವಂತೆ ನ್ಯಾಯವನ್ನು ಏರ್ಪಡಿಸು."

೩೪. ಬಳಿಕ ಬ್ರಹ್ಮನು ಆ ತ್ರಿಜಾತನಿಗೆ ವೇದಾರ್ಥ, ಯಜ್ಞಕರ್ಮಗಳನ್ನು ತಿಳಿಸುವ ಉತ್ತಮವಾದ ಮಂತ್ರಸಮೂಹವನ್ನು ಕೊಟ್ಟನು.

೩೫. ಬಳಿಕ ಬ್ರಹ್ಮನು ಸಂತೋಷಗೊಂಡ ಮನಸ್ಸುಳ್ಳವನಾಗಿ ಈ ತ್ರಿಜಾತನು ವೇದಾರ್ಥಜ್ಞಾನವುಳ್ಳವನೂ, ಅತ್ಯಂತ ಯಶಸ್ವಿಯೂ ಆಗುವನು.

ಭರ್ತೃಯಜ್ಞ ಇತಿ ಖ್ಯಾತೋ ಯಜ್ಞಕರ್ಮವಿಚಕ್ಷಣಃ ।
ಯದೇವ ವಕ್ತಿ ಯುಷ್ಮಾಕಂ ಕ್ರಿಯಾಕಾಂಡಮಶಂಕಿತೈಃ ॥ ೩೬ ॥
ತತ್ಕಾರ್ಯಂ ಸ್ವರ್ಗಮೋಕ್ಷಾಯ ಮಮ ವಾಕ್ಯಾತ್ಪ್ರಬೋಧಿತೈಃ ।
ವೇದಾರ್ಥಾನೇಷ ಸರ್ವೇಷಾಂ ಯುಷ್ಮಾಕಂ ಯೋಜಯಿಷ್ಯತಿ ॥ ೩೭ ॥
ಯೇ ಚಾನ್ಯೇಷು ಚ ದೇಶೇಷು ಸ್ಥಾನೇಷು ಚ ಗತಾಃ ಕ್ವಚಿತ್ ।
ಏತತ್ ಸ್ಥಾನಂ ಪರಿತ್ಯಜ್ಯ ಸತ್ಯಮೇತದ್ದ್ವಿಜೋತ್ತಮಾಃ ॥ ೩೮ ॥
ವೇದಸ್ಥಾನೇ ಚ ಬುದ್ಧ್ಯೈಷ ಯತ್ಕರ್ಮ ಪ್ರಚರಿಷ್ಯತಿ ।
ನಾಽನೃತೇ ವಾಽಥ ಪಾಪೇ ಚ ವಾಣೀ ಚಾಽಸ್ಯ ಚರಿಷ್ಯತಿ ॥ ೩೯ ॥
ಏವಮುಕ್ತ್ವಾ ಸ ದೇವೇಶೋ ವಿರರಾಮ ಪಿತಾಮಹಃ ।
ಭರ್ತೃಯಜ್ಞೋಽಪಿ ತಾಃ ಸರ್ವಾಶ್ಚಕ್ರೇ ಯಜ್ಞಕ್ರಿಯಾಃ ಶುಭಾಃ ॥ ೪೦ ॥
ಬ್ರಾಹ್ಮಣಾನಾಂ ಹಿತಾರ್ಥಾಯ ಶ್ರುತ್ಯರ್ಥಂ ತಸ್ಯ ಕೇವಲಂ ।
ದಶ ಪ್ರಮಾಣಾಃ ಸಂಪ್ರೋಕ್ತಾಃ ಸರ್ವೇ ತೇ ಬ್ರಾಹ್ಮಣೋತ್ತಮಾಃ ॥೪೧॥
ಚತುಃಷಷ್ಟಿಷು ಗೋತ್ರೇಷು ಹ್ಯೇವಂ ತೇ ಬ್ರಾಹ್ಮಣೋತ್ತಮಾಃ ।
ತೇನ ತತ್ರ ಸಮಾನೀತಾಸ್ತ್ರಿಜಾತೇನ ಮಹಾತ್ಮನಾ ॥ ೪೨ ॥
ತೇಷಾಮೇಕತ್ರ ಜಾತಾನಿ ದಶಪಂಚಶತಾನಿ ಚ ।
ಸಾಮಾನ್ಯಭೋಗಮೋಕ್ಷಾಣಿ ತಾನಿ ತೇನ ಕೃತಾನಿ ಚ ॥ ೪೩ ॥

---

೩೬–೩೮. ಭರ್ತೃಯಜ್ಞನೆಂದು ಪ್ರಸಿದ್ಧನಾಗಿ ಯಜ್ಞಕರ್ಮಗಳಲ್ಲಿ ಕುಶಲನಾದ ಇವನು ಹೇಳಿದ ಕ್ರಿಯಾಕಾಂಡವನ್ನು ನೀವು ಶಂಕೆಯಿಲ್ಲದೆ ನನ್ನ ಮಾತಿನಂತೆ ಸ್ವರ್ಗಮೋಕ್ಷಗಳಿಗಾಗಿ ಅನುಷ್ಠಾನಮಾಡಿರಿ. ಇವನು ನಿಮ್ಮೆಲ್ಲರಿಗೂ, ಈ ಸ್ಥಳವನ್ನು ತ್ಯಜಿಸಿ ಇತರ ದೇಶಗಳಿಗೆ ಹೋದವರಿಗೂ ವೇದಾರ್ಥಗಳನ್ನು ತಿಳಿಸುವನು. ಇದು ನಿಜ.

೩೯. ಇವನು ಈ ಸ್ಥಳದಲ್ಲಿ ಸದ್ಬುದ್ಧಿಯಿಂದ ಕರ್ಮವನ್ನಾಚರಿಸುವುದರಿಂದ ಇವನ ಮಾತು ಸುಳ್ಳು ಮತ್ತು ಪಾಪದಲ್ಲಿ ಪ್ರವರ್ತಿಸುವುದಿಲ್ಲ.

೪೦–೪೧. ಬ್ರಹ್ಮನು ಹೀಗೆ ಹೇಳಿ ಸುಮ್ಮನಾದನು. ಭರ್ತೃಯಜ್ಞನೂ ಬ್ರಾಹ್ಮಣರ ಹಿತಕ್ಕಾಗಿ ಮಂಗಳಕರವಾದ ಆ ಸಮಸ್ತ ಯಜ್ಞಕ್ರಿಯೆಗಳನ್ನು ನೆರವೇರಿಸಿದನು. ವೇದಾರ್ಥವನ್ನೂ ಬೋಧಿಸಿದನು. ಅವರೆಲ್ಲ ದಶಪ್ರಮಾಣರೆನ್ನಿಸಿಕೊಂಡರು.

೪೨. ಬ್ರಾಹ್ಮಣವರ್ಯರೆ! ಮಹಾತ್ಮನಾದ ತ್ರಿಜಾತನು ಹೀಗೆ ಅರುವತ್ತನಾಲ್ಕು ಗೋತ್ರದ ಬ್ರಾಹ್ಮಣರನ್ನು ಆ ಕ್ಷೇತ್ರಕ್ಕೆ ಕರೆತಂದನು.

೪೩–೪೪. ಆ ಕ್ಷೇತ್ರದಲ್ಲಿ ಮೊದಲು ಅರುವತ್ತೆಂಟು ಬಗೆಯಾಗಿದ್ದ ಗೋತ್ರ

ಅಷ್ಟಷಷ್ಟಿವಿಭಾಗೇನ ಪೂರ್ವಮಾಯುವ್ಯಯೋಽಪ್ಯವಂ ।
ತತ್ರಾಽಽಸೀದಥ ಗೋತ್ರೇ ಚ ಪುರುಷಾಣಾಂ ಪ್ರಸಂಖ್ಯಯಾ ॥ ೪೪ ॥
ತತಃ ಪ್ರಭೃತಿ ಸರ್ವೇಷಾಂ ಸಾಮಾನ್ಯೇನ ವ್ಯವಸ್ಥಿತಂ ।
ತ್ರಿಜಾತಸ್ಯ ಚ ವಾಕ್ಯೇನ ಯೇನ ದೂರಾದಪಿ ದ್ರುತಂ ॥ ೪೫ ॥
ಸಮಾಗಚ್ಛಂತಿ ವಿಪ್ರೇಂದ್ರಾಃ ಪುರವೃದ್ಧಿಃ ಪ್ರಜಾಯತೇ ।
ನ ಕಶ್ಚಿದ್ಯಾತಿ ಸಂತ್ಯಕ್ತ್ವಾ ದೌಃಸ್ಥ್ಯಾದನ್ಯತ್ರಚ ದ್ವಿಜಾಃ ॥ ೪೬ ॥
ತತಸ್ತೇಷಾಂ ಸುತೈಃ ಪೌತ್ರೈರ್ನಪ್ತೃಭಿಶ್ಚ ಸಹಸ್ರಶಃ ।
ದೌಹಿತ್ರೈರ್ಭಾಗಿನೇಯೈಶ್ಚ ಭೂಯೋ ಭೂರಿ ಪ್ರಪೂರಿತಂ ॥ ೪೭ ॥
ತತ್ಪುರಂ ವೃದ್ಧಿಮಾಯಾತಿ ದೂರ್ವಾಂಕುರೈರಿವ ದ್ವಿಜಾಃ ।
ಕಾಂಡಾತ್ಕಾಂಡಾತ್ಪ್ರರೋಹದ್ಭಿಃ ಸಂಖ್ಯಾಹೀನೈರನೇಕಧಾ ॥ ೪೮ ॥
ಸೂತ ಉವಾಚ:—
ಏತದ್ವಃ ಸರ್ವಮಾಖ್ಯಾತಂ ಗೋತ್ರಸಂಖ್ಯಾನಕಂ ಶುಭಂ ।
ಋಷೀಣಾಂ ಕೀರ್ತನಂ ಚಾಽಪಿ ಸರ್ವಪಾತಕನಾಶನಂ ॥ ೪೯ ॥
ಯಶ್ಚೈತತ್ಪಠತೇ ನಿತ್ಯಂ ಶೃಣುಯಾದ್ವಾ ಪ್ರಭಕ್ತಿತಃ ।
ನ ಸ್ಯಾತ್ತಸ್ಯ ಕುಲಚ್ಛೇದಃ ಕದಾಚಿದಪಿ ಭೂತಲೇ ॥ ೫೦ ॥

---

ದಲ್ಲಿ ಹೆಚ್ಚುಕಡಮೆಯಾಗುವುದರಿಂದ ಸಾಮಾನ್ಯ ಭೋಗಮೋಕ್ಷಗಳುಳ್ಳ ಐನೂರೈದು ಮಂದಿ ಬ್ರಾಹ್ಮಣರು ಉಂಟಾದರು.

೪೫–೪೬. ಅದು ಮೊದಲ್ಗೊಂಡು ಅವರ ಗೋತ್ರಗಳು ಸಾಮಾನ್ಯವಾಗಿದ್ದುವು. ತ್ರಿಜಾತನ ಮಾತಿನಿಂದ ದೂರದಿಂದ ಬ್ರಾಹ್ಮಣರು ಬಂದು ಪಟ್ಟಣವು ವೃದ್ಧಿಯಾಯಿತು. ಅಲ್ಲಿ ಕಷ್ಟವನ್ನನುಭವಿಸಿ ಯಾವ ಬ್ರಾಹ್ಮಣನೂ ಬೇರೆ ಕಡೆಗೆ ಹೋಗಲಿಲ್ಲ.

೪೭–೪೮. ಅನಂತರ ಆ ಪಟ್ಟಣವು ಪ್ರತಿ ಕಾಂಡಗಳಲ್ಲಿಯೂ ಮೊಳೆಯುವ ಗರಿಕೆ ಮೊಳಕೆಯಂತಿರುವ ಆ ಬ್ರಾಹ್ಮಣರ ಅಸಂಖ್ಯಾತರಾದ ಮಕ್ಕಳು, ಮೊಮ್ಮಕ್ಕಳು, ದೌಹಿತ್ರರು, ಸೋದರಳಿಯಂದಿರು ಇವರಿಂದ ತುಂಬಿ ವೃದ್ಧಿಗೊಂಡಿತು.

೪೯. ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ನಿಮಗೆ ಮಂಗಳಕರವಾದ ಗೋತ್ರಸಂಖ್ಯೆಯನ್ನೂ, ಸಮಸ್ತ ಪಾಪಗಳನ್ನು ನೀಗಿಸುವ ಋಷಿಗಳ ನಾಮಕೀರ್ತನೆಯನ್ನೂ ಹೇಳಿರುತ್ತೇನೆ.

೫೦. ಭೂಮಿಯಲ್ಲಿ ನಿತ್ಯವೂ ಭಕ್ತಿಯಿಂದ ಇದನ್ನು ಪಠಿಸುವ ಅಥವಾ ಕೇಳುವವನ ವಂಶವು ಯಾವಾಗಲೂ ವಿಚ್ಛಿನ್ನವಾಗುವುದಿಲ್ಲ.

ತಥಾ ವಿಮುಚ್ಯತೇ ಪಾಪೈ ರಾಜನ್ಮರಣೋದ್ಭವೈಃ ।
ನ ಪಶ್ಯತಿ ವಿಯೋಗಂ ಚ ಕದಾಚಿತ್ಪ್ರಿಯಸಂಭವಂ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮುನಿಗೋತ್ರವರ್ಣನಂ" ನಾಮ
ಪಂಚದಶೋತ್ತರಶತತಮೋಽಧ್ಯಾಯಃ

---

೫೧. ಹಾಗೆಯೇ ಅವನು ಹುಟ್ಟಿದ ಮೊದಲ್ಗೊಂಡು ಸಾಯುವವರೆಗೆ ಮಾಡಿದ ಪಾಪಗಳು ಪರಿಹಾರವಾಗುವುವು. ಒಂದು ವೇಳೆಯೂ ಪ್ರಿಯರಿಂದ ಅಗಲುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ-
ಮಾಹಾತ್ಮ್ಯದಲ್ಲಿ "ಮುನಿಗೋತ್ರವರ್ಣನ" ವೆಂಬ
ನೂರಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷೋಡಶೋತ್ತರಶತತಮೋಽಧ್ಯಾಯಃ

## ಅಂಬಾರೇವತೀ ತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾಽನ್ಯಾಽಪಿ ಚ ತತ್ರಾಽಸ್ತಿ ಸುವಿಖ್ಯಾತಾಂಬರೇವತೀ ।
ದೇವೀ ಕಾಮಪ್ರದಾ ಪುಂಸಾಂ ಬಾಲಕಾನಾಂ ಸುಖಪ್ರದಾ ॥ ೧ ॥
ಯಾಂ ದೃಷ್ಟ್ವಾ ಪೂಜಯಿತ್ವಾಽಥ ಚೈತ್ರಾಽಷ್ಟಮ್ಯಾಂ ವಿಶೇಷತಃ ।
ಶುಕ್ಲಾಯಾಂ ನಾಪ್ನುಯಾನ್ಮರ್ತ್ಯಃ ಕುಟುಂಬವ್ಯಸನಂ ಕ್ವಚಿತ್ ॥ ೨ ॥

ಋಷಯ ಊಚುಃ :—

ಕೇನ ವಾ ಸ್ಥಾಪಿತಾ ತತ್ರ ಸಾ ದೇವೀ ಚಾಂಬರೇವತೀ ।
ಕಿಂ ಪ್ರಭಾವಾ ಕಿಂ ಸ್ವರೂಪಾ ಸೂತಪುತ್ರ ವದಸ್ವನಃ ॥ ೩ ॥

ಸೂತ ಉವಾಚ :—

ಯದಾ ಶೇಷೇಣ ಸಂದಿಷ್ಟಾ ನಾನಾ ನಾಗಾ ವಿಷೋಲ್ಬಣಾಃ ।
ಪುರಸ್ಯಾಸ್ಯ ವಿನಾಶಾಯ ಕ್ರೋಧಸಂರಕ್ತಲೋಚನಾಃ ।
ತದಾ ತಸ್ಯ ಪ್ರಿಯಾ ಸಾಚ ಪುತ್ರಶೋಕೇನ ಪೀಡಿತಾ ॥ ೪ ॥

---

## ಕನ್ನಡದ ಅನುವಾದ

### ಅಂಬಾರೇವತೀ ತೀರ್ಥಮಾಹಾತ್ಮ್ಯವರ್ಣನೆ

೧. ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ಆ ಕ್ಷೇತ್ರದಲ್ಲಿ ಮನುಷ್ಯರಿಗೆ ಇಷ್ಟಾರ್ಥವನ್ನೂ, ಬಾಲಕರಿಗೆ ಸುಖವನ್ನೂ ಕೊಡುವ ಪ್ರಸಿದ್ಧಳಾದ ಅಂಬಾರೇವತೀದೇವಿಯು ಇರುವಳು.

೨. ಚೈತ್ರ ಶುದ್ಧ ಅಷ್ಟಮೀ ದಿನ ಅವಳನ್ನು ಪೂಜಿಸಿದ ಮಾನವನು ಒಂದೆಡೆಯಲ್ಲಿಯೂ ಕುಟುಂಬವ್ಯಸನವನ್ನು ಹೊಂದುವುದಿಲ್ಲ.

೩. ಋಷಿಗಳು ಹೇಳುತ್ತಾರೆ:—ಸೂತಪುತ್ರ! ಆ ಅಂಬಾರೇವತಿಯನ್ನು ಯಾರು ಪ್ರತಿಷ್ಠೆಮಾಡಿದರು? ಅವಳ ಮಾಹಾತ್ಮ್ಯವೂ, ಸ್ವರೂಪವೂ ಎಂಥಾದ್ದು? ಅದನ್ನು ನಮಗೆ ಹೇಳು.

೪–೫. ಸೂತನು ಹೇಳುತ್ತಾನೆ:—ಮಹಾಶೇಷನು ವಿಷದಿಂದ ಉಲ್ಬಣಗಳೂ, ಕೋಪದಿಂದ ಕೆಂಪೇರಿದ ಮುಖವುಳ್ಳವೂ ಆದ ಸರ್ಪಗಳನ್ನು ಈ ಪಟ್ಟಣವನ್ನು ನಾಶಗೊಳಿಸಲು ಆಜ್ಞೆಮಾಡಲು ಅವನ ಪತ್ನಿಯು ಪುತ್ರಶೋಕದಿಂದ

ಸ್ವಯಮೇವಾಗ್ರತೋ ಗತ್ವಾ ಭಕ್ಷಯಾಮಾಸ ತಂ ದ್ವಿಜಂ ।
ಕುಟುಂಬೇನ ಸಮಾಯುಕ್ತಂ ಯೇನ ಪುತ್ರೋ ನಿಪಾತಿತಃ ॥ ೫ ॥
ಅಥ ತಸ್ಯ ದ್ವಿಜೇಂದ್ರಸ್ಯ ಬಾಲವೈಧವ್ಯಸಂಯುತಾ ।
ಅನುಜಾಽಽಸೀತ್ತಪೋಯುಕ್ತಾ ಬ್ರಹ್ಮಚರ್ಯಕೃತಕ್ಷಣಾ ॥ ೬ ॥
ಸಾ ದೃಷ್ಟ್ವಾ ಭಕ್ಷಿತಂ ಸರ್ವಂ ಭಟ್ಟಿಕಾಖ್ಯಾ ಕುಟುಂಬಕಂ ।
ನಾಗಪತ್ನ್ಯೈ ತತಃಪ್ರಾಹ ಜಲಮಾದಾಯ ಪಾಣಿನಾ ॥ ೭ ॥
ಯಸ್ಮಾತ್ತ್ವಯಾ ಕುಟುಂಬಂ ಮೇ ನಾಶಂ ನೀತಂ ದ್ವಿಜಿಹ್ವಕೇ ।
ದರ್ಶಿತಂ ಚ ಮಹದ್ದುಃಖಂ ಮಮ ಬಂಧುಜನೋದ್ಭವಂ ॥ ೮ ॥
ತಥಾ ತ್ವಮಪಿ ಸಂಪ್ರಾಪ್ಯ ಮಾನುಷತ್ವಂ ಸುಗರ್ಹಿತಂ ।
ಮಾನುಷಂ ಪತಿಮಾಸಾದ್ಯ ಪುತ್ರಪೌತ್ರಾನವಾಪ್ಯ ಚ ॥ ೯ ॥
ತೇಷಾಂ ವಿನಾಶಜಂ ದುಃಖಂ ಮಾನುಷೇ ತ್ವಮವಾಪ್ಸ್ಯಸಿ ।
ನಾಗತ್ವೇ ವರ್ತಮಾನಾಯಾಃ ಶಾಪಂ ತೇಽಮುಂ ದದಾಮ್ಯಹಂ ॥ ೧೦ ॥
ಸಾಽಪಿ ಶ್ರುತ್ವಾಽಥ ತಂ ಶಾಪಂ ರೇವತೀ ಭಟ್ಟಿಕೋದ್ಭವಂ ।
ಕ್ರೋಧೇನ ಮಹತಾವಿಷ್ಟಾ ಹೃದಶತ್ತಾಂ ದ್ರುತಂ ತತಃ ॥ ೧೧ ॥
ಅಥ ತಸ್ಯಾಸ್ತನ್ರಂ ಪ್ರಾಪ್ಯ ನಾಗೀ ದಂಷ್ಟ್ರಾ ವಿಷೋಲ್ಬಣಾ ।
ಜಗಾಮ ಶತಧಾ ನಾಶಂ ಬಿಭಿದೇ ನ ತ್ವಚಂ ಕ್ವಚಿತ್ ॥ ೧೨ ॥

---

ವ್ಯಥೆಗೊಂಡವಳಾಗಿ ತಾನೇ ಮುಂದೆ ಹೋಗಿ ತನ್ನ ಮಗನನ್ನು ಕೊಂದ ಬ್ರಾಹ್ಮಣನನ್ನು ಕುಟುಂಬಸಹಿತವಾಗಿ ತಿಂದಳು.

೬. ಆ ಬ್ರಾಹ್ಮಣನಿಗೆ ಬಾಲವಿಧವೆಯೂ, ತಪಸ್ವಿನಿಯೂ, ಬ್ರಹ್ಮಚಾರಿಣಿಯೂ ಆದ ಓರ್ವ ತಂಗಿಯಿದ್ದಳು.

೭. ಭಟ್ಟಿಕೆಯೆಂಬ ಅವಳು ಎಲ್ಲವೂ ಭಕ್ಷಿತವಾಗಿರುವುದನ್ನು ನೋಡಿ ಕೈಯಿಂದ ನೀರನ್ನು ಹಿಡಿದು ನಾಗಪತ್ನಿಯನ್ನು ಕುರಿತು ಇಂತೆಂದಳು.

೮–೧೦. "ಎಲೌ ನಾಗಾಂಗನೆಯೆ! ನೀನು ನನ್ನ ಕುಟುಂಬವನ್ನು ನಾಶಗೊಳಿಸಿ ನನಗೆ ಬಂಧುವಿಯೋಗದ ದುಃಖವನ್ನುಂಟುಮಾಡಿದ ಕಾರಣ ನೀನೂ ನಿಂದ್ಯವಾದ ಮಾನುಷಜನ್ಮವನ್ನು ಪಡೆದು ಮನುಷ್ಯಪತಿಯಿಂದ ಮಕ್ಕಳು ಮೊಮ್ಮಕ್ಕಳನ್ನೂ ಹೊಂದಿ ಅವರ ನಾಶದಿಂದ ದುಃಖವನ್ನು ಪಡೆಯುವೆ. ಸರ್ಪಿಣಿಯಾದ ನಿನಗೆ ಈಗ ನಾನು ಶಾಪಕೊಡುವೆನು."

೧೧. ಆ ರೇವತಿಯು ಭಟ್ಟಿಕೆಯಿತ್ತ ಶಾಪವನ್ನು ಕೇಳಿ ಅತ್ಯಂತ ಕೋಪಗೊಂಡು ಶೀಘ್ರವಾಗಿ ಅವಳನ್ನು ಕಚ್ಚಿದಳು.

೧೨. ಆದರೆ ಅವಳ ಹಲ್ಲುಗಳು ಭಟ್ಟಿಕೆಯ ಶರೀರಕ್ಕೆ ತಗಲಿ ನೂರು ವಿಧವಾಗಿ ಚೂರಾದುವು. ಒಂದೆಡೆಯಲ್ಲಿಯೂ ತೊಗಲನ್ನು ಸೀಳಲಿಲ್ಲ.

ತತಃ ಸಾ ಲಜ್ಜಯಾವಿಷ್ಟಾ ಸ್ವರಕ್ತಸ್ರಾವಿತಾನನಾ ।
ವಿಷಣ್ಣಾ ನಿಷಸಾದಾಽಥ ಸನ್ನಿವಿಷ್ಟಾ ಧರಾತಲೇ ॥ ೧೩ ॥
ಏತಸ್ಮಿನ್ನಂತರೇ ನಾಗಾಸ್ತಥಾಽನ್ಯೇ ಯೇ ಸಮಾಗತಾಃ ।
ರೇವತೀಂ ತೇ ಸಮಾಲೋಕ್ಯ ತಥಾರೂಪಾಂ ಭಯಾನ್ವಿತಾಂ ।
ಪ್ರೋಚುಶ್ಚ ಕಿಮಿದಂ ದೇವಿ ತವ ವಕ್ತ್ರೇ ರುಜಾಸ್ಪದಂ ॥ ೧೪ ॥
ಅಥವಾ ಕಿಂ ಪ್ರಭಾವೋಽಯಂ ಕಸ್ಯಚಿದ್ರಕ್ತಸಂಪದಃ ॥ ೧೫ ॥

ರೇವತ್ಯುವಾಚ :—

ಯೇಯಂ ದುಷ್ಟತಮಾ ಕಾಚಿದ್ದೃಶ್ಯತೇ ದುಷ್ಟತಾಪಸೀ ।
ಅಸ್ಯಾ ಜಾತೋ ವಿಕಾರೋಽಯಂ ಮಮಾಸ್ಯೇ ನಾಗಸತ್ತಮಾಃ ॥ ೧೬ ॥
ತಸ್ಮಾದೇನಾಂ ಮಹಾದುಷ್ಟಾಂ ಭಗಿನೀಂ ತಸ್ಯ ದುರ್ಮತೇಃ ।
ಯೇನ ಮೇ ನಿಹತಃ ಪುತ್ರೋ ದ್ವಿಜಪುತ್ರೇಣ ಸಾಂಪ್ರತಂ ॥ ೧೭ ॥
ಭಕ್ಷ್ಯತಾಂ ಭಕ್ಷ್ಯತಾಂ ಶೀಘ್ರಂ ಮಮ ನಾಶಾಯ ಸಂಸ್ಥಿತಾಂ ।
ಸಾಂಪ್ರತಂ ಮನ್ಮುಖೇ ತೇನ ರುಧಿರಂ ಪನ್ನಗೋತ್ತಮಾಃ ॥ ೧೮ ॥
ಅಥ ತೇ ಪನ್ನಗಾಃ ಕ್ರುದ್ಧಾ ದದಂಶುಸ್ತಾಂ ತಪಸ್ವಿನೀಂ ।
ಸಮಂ ಸರ್ವೇಷು ಗಾತ್ರೇಷು ಯಥಾಽನ್ಯಾಂ ಪ್ರಾಕೃತಾಂ ಸ್ತ್ರಿಯಂ ॥ ೧೯ ॥
ತತಸ್ತೇಷಾಮಪಿ ತಥಾ ಮುಖಾದ್ದಂಷ್ಟ್ರಾ ವಿನಿರ್ಗತಾಃ ।
ರುಧಿರಂ ಚ ತತೋ ಜಜ್ಞೇ ಶೇಷಪತ್ನ್ಯಾ ಯಥಾ ತಥಾ ॥ ೨೦ ॥

---

೧೩. ಅನಂತರ ರೇವತಿಯು ನಾಚಿಕೆಗೊಂಡು ತನ್ನ ರಕ್ತದಿಂದ ಸಿಕ್ತವಾದ ಮುಖವುಳ್ಳವಳಾಗಿ ವಿಷಾದದಿಂದ ನೆಲದಮೇಲೆ ಕುಳಿತಳು.

೧೪–೧೫. ಈ ಸಮಯದಲ್ಲಿ ಇತರ ಸರ್ಪಗಳು ಅಲ್ಲಿಗೆ ಬಂದು ಹಾಗೆ ಭಯಗೊಂಡಿರುವ ರೇವತಿಯನ್ನು ನೋಡಿ, "ದೇವಿ! ನಿನ್ನ ಮುಖವು ಏಕೆ ರೋಗಕ್ಕೀಡಾಗಿದೆ? ಅಥವಾ ಇದು ಯಾವುದಾದರೊಂದು ರಕ್ತಸಂಪತ್ತಿನ ಪ್ರಭಾವವೊ?"

೧೬. ರೇವತಿಯು ಹೇಳುತ್ತಾಳೆ:—ನಾಗೋತ್ತಮರೆ! ಈ ಮುಂದೆ ಕಾಣುತ್ತಿರುವ ದುಷ್ಟತಾಪಸಿಯಿಂದ ನನ್ನ ಮುಖದಲ್ಲಿ ಈ ವಿಕಾರವುಂಟಾಗಿದೆ.

೧೭–೧೮. ಆದುದರಿಂದ ಈಗ ನೀವು ನನ್ನ ಸುತನನ್ನು ಕೊಂದ ದ್ವಿಜಕುಮಾರನ ಸಹೋದರಿಯೂ, ನನ್ನನ್ನು ಕೊಲ್ಲಲುದ್ಯುಕ್ತಳೂ ಆದ ಇವಳನ್ನು ಶೀಘ್ರವಾಗಿ ಭಕ್ಷಿಸಿರಿ. ಇವಳ ಕಾರಣದಿಂದಲೇ ನನ್ನ ಮುಖದಲ್ಲಿ ರಕ್ತವು ಕಾಣುತ್ತಿರುವುದು.

೧೯. ಬಳಿಕ ಆ ಸರ್ಪಗಳೆಲ್ಲ ಒಟ್ಟುಗೂಡಿ ಕೋಪದಿಂದ ಆ ಭಟ್ಟಿಕೆಯ ದೇಹವನ್ನು ಸಾಮಾನ್ಯ ಹೆಂಗಸಿನ ದೇಹದಂತೆ ಕಚ್ಚಿದುವು.

೨೦. ಅದರಿಂದ ರೇವತಿಯಂತೆಯೇ ಅವುಗಳ ಬಾಯಿಯಿಂದ ಹಲ್ಲುಗಳು ಬಿದ್ದುಹೋದುವು. ರಕ್ತವು ಸುರಿಯಿತು.

ಅಥ ತಸ್ಯಾಃ ಪ್ರಭಾವಂ ತಂ ದೃಷ್ಟ್ವಾ ತೇ ನಾಗಸತ್ತಮಾಃ ।
ಶೇಷಾ ಭಯಪರಿತ್ರಸ್ತಾಃ ಪ್ರಜಗ್ಮುಶ್ಚ ದಿಶೋ ದಶ ॥ ೨೧ ॥
ಭಟ್ಟಿಕಾಽಪಿ ಜಗಾಮಾಽಽಶು ಸ್ವಾಶ್ರಮಂಪ್ರತಿ ದುಃಖಿತಾ ।
ಭಯತ್ರಸ್ತೈಃ ಸಮಂತಾಚ್ಚ ವೀಕ್ಷ್ಯಮಾಣಾ ಮಹೋರಗೈಃ ॥ ೨೨ ॥
ತತಃ ಸರ್ವಂ ಸಮಾಲೋಕ್ಯ ತಾಪ್ಯಮಾನಂ ಮಹೋರಗೈಃ ।
ತತ್ ಸ್ಥಾನಂ ಸ್ವಜನೈರ್ಮುಕ್ತಂ ದುಃಖೇನ ಮಹತಾನ್ವಿತೈಃ ॥ ೨೩ ॥
ಜಗಾಮಾಽನ್ಯತ್ರ ಸಾ ಸಾಧ್ವೀ ಸಮ್ಯಗ್ವ್ರತಪರಾಯಣಾ ।
ತೀರ್ಥಯಾತ್ರಾಂ ಪ್ರಕುರ್ವಾಣಾ ಪರಿಬಭ್ರಾಮ ಮೇದಿನೀಂ ॥ ೨೪ ॥
ಏವಮುದ್ವಾಸಿತೇ ಸ್ಥಾನೇ ತಸ್ಮಿನ್ ಸಾ ರೇವತಿ ತದಾ ।
ಸ್ಮೃತ್ವಾ ತಂ ಭಟ್ಟಿಕಾಶಾಪಂ ದುಃಖೇನ ಮಹತಾನ್ವಿತಾ ॥ ೨೫ ॥
ಕಥಂ ಮೇ ಮಾನುಷೀಗರ್ಭೇ ಶಾಪಾದ್ವಾಸೋ ಭವಿಷ್ಯತಿ ।
ಮಾನುಷ್ಯೇಣ ಚ ಕಾಂತೇನ ಪ್ರಭವಿಷ್ಯತಿ ಸಂಗಮಃ ॥ ೨೬ ॥
ನೈತತ್ಪುತ್ರೋದ್ಭವಂ ದುಃಖಂ ತಥಾ ಮಾಂ ಬಾಧತೇ ಹೃದಿ ।
ಯಥೇದಂ ಮಾನುಷೇಗರ್ಭೇ ಸಂವಾಸೋ ಮಾನುಷಂ ಪ್ರತಿ ॥ ೨೭ ॥
ತಥಾ ದಶನಸಂತ್ಯಕ್ತಾ ಕಥಂ ಭರ್ತುಃ ಸ್ವಮಾನನಂ ।
ದರ್ಶಯಿಷ್ಯಾಮಿ ಭೂಯೋಽಪಿ ಕ್ಷತೇ ಕ್ಷಾರೋಽತ್ರ ಮೇ ಸ್ಥಿತಃ ॥ ೨೮ ॥

---

೨೧. ಅನಂತರ ಉಳಿದ ನಾಗಗಳು ಭಟ್ಟಿಕೆಯ ಸಾಮರ್ಥ್ಯವನ್ನು ಕಂಡು ಭಯದಿಂದ ದಿಕ್ಕು ದಿಕ್ಕುಗಳಿಗೆ ಓಡಿಹೋದುವು.

೨೨. ಭಟ್ಟಿಕೆಯೂ ಭಯಗೊಂಡ ಹಾವುಗಳು ನೋಡುತ್ತಿರುವಾಗಲೇ ದುಃಖದಿಂದ ಶೀಘ್ರವಾಗಿ ತನ್ನ ಆಶ್ರಮಕ್ಕೆ ತೆರಳಿದಳು.

೨೩–೨೪. ಅನಂತರ ಸರ್ಪಪೀಡೆಯ ದುಃಖದಿಂದ ತನ್ನ ಬಂಧುಗಳು ತ್ಯಜಿಸಿರುವ ಆ ಸ್ಥಳವನ್ನು ನೋಡಿ ಬೇರೆ ಸ್ಥಳಕ್ಕೆ ಹೋಗಿ ವ್ರತ ನಿರತಳಾಗಿ ತೀರ್ಥಯಾತ್ರೆಯನ್ನು ಮಾಡುತ್ತ ಭೂಮಿಯಲ್ಲಿ ಸಂಚರಿಸಿದಳು.

೨೫–೨೬. ಹೀಗೆ ಆ ಸ್ಥಳದಲ್ಲಿ ಯಾರೂ ವಾಸಮಾಡದಿರಲು ಆ ರೇವತಿಯು ಆ ಭಟ್ಟಿಕೆಯ ಶಾಪವನ್ನು ನೆನೆದುಕೊಂಡು ಅತ್ಯಂತ ದುಃಖದಿಂದ ಹೀಗೆ ಚಿಂತಿಸಿದಳು. "ನನಗೆ ಆ ತಾಪಸಿಯ ಶಾಪದಿಂದ ಮನುಷ್ಯಸ್ತ್ರೀಗರ್ಭದಲ್ಲಿ ವಾಸವೂ, ಮನುಷ್ಯಪತಿಯ ಸಹವಾಸವೂ ಹೇಗೆ ಸಂಭವಿಸುವುದು?

೨೭. ನನಗೆ ಮನುಷ್ಯ ಗರ್ಭವಾಸವು ದುಃಖಗೊಳಿಸಿದಂತೆ ಪುತ್ರ ಮರಣ ದಿಂದ ದುಃಖವಾಗಲಿಲ್ಲ.

೨೮. ನಾನು ಹಲ್ಲಿಲ್ಲದ ನನ್ನ ಮುಖವನ್ನು ಪತಿಗೆ ಹೇಗೆ ತೋರಿಸಲಿ. ನನಗೆ ಈಗ ಈ ದುಃಖವು ಗಾಯದಲ್ಲಿ ಉಪ್ಪನ್ನು ಹಾಕಿದಂತಾಗಿದೆ.

ತಸ್ಮಾತ್ಪರಿಚರಿಷ್ಯಾಮಿ ಕ್ಷೇತ್ರೇಽತ್ರೈವ ವ್ಯವಸ್ಥಿತಾ ।
ಕಿಂ ಕರಿಷ್ಯಾಮಿ ಸಂಪ್ರಾಪ್ಯ ಗೃಹಂ ಪುತ್ರಂ ವಿನಾ ಕೃತಾ ॥ ೨೯ ॥
ತತಶ್ಚಾರಾಧಯಾಮಾಸ ಸಮ್ಯಕ್ ಶ್ರದ್ಧಾಸಮನ್ವಿತಾ ।
ಅಂಬಿಕಾಂ ಸಾ ತದಾ ದೇವೀಂ ಸ್ಥಾಪಯಿತ್ವಾ ಸುರೇಶ್ವರೀಂ ॥ ೩೦ ॥
ಗಂಧಪುಷ್ಪೋಪಹಾರೇಣ ನೈವೇದ್ಯೈರ್ವಿವಿಧೈರಪಿ ।
ಗೀತನೃತ್ಯೈಸ್ತಥಾ ವಾದ್ಯೈರ್ಮನೋಹಾರಿಭಿರೇವ ಚ ॥ ೩೧ ॥
ತತಃ ಕತಿಪಯಾಹಸ್ಯ ತಸ್ಯಾಸ್ತುಷ್ಟಾ ಸುರೇಶ್ವರೀ ।
ಪ್ರೋವಾಚ ವರದಾಽಸ್ಮೀತಿ ಪ್ರಾರ್ಥಯಸ್ವ ಹೃದಿಸ್ಥಿತಂ ॥ ೩೨ ॥

ರೇವತ್ಯುವಾಚ :—

ಅಹಂ ಶಪ್ತಾ ಪುರಾ ದೇವಿ ಬ್ರಾಹ್ಮಣ್ಯಾ ಕಾರಣಾಂತರೇ ।
ಯತ್ತ್ವಂ ಮಾನುಷಮಾಸಾದ್ಯ ಸ್ವಯಂ ಭೂತ್ವಾಚ ಮಾನುಷೀ ॥ ೩೩ ॥
ತತಃ ಸಂಪ್ರಾಪ್ಸ್ಯಸಿ ಫಲಂ ತೇಷಾಂ ನಾಶಸಮುದ್ಭವಂ ।
ಮಹದ್ದುಃಖಂ ಸ್ವಪುತ್ರೋತ್ಥಂ ಮಮ ಶಾಪೇನ ಪೀಡಿತಾ ॥ ೩೪ ॥
ತಥಾ ಮಮ ಮುಖಾದ್ದಂಷ್ಟ್ರಾಃ ಸನ್ನೀತಾಶ್ಚ ಸುರೇಶ್ವರಿ ।
ತೇಷಾಂ ಚ ಸಂಭವಸ್ತಾವತ್ಕಥಂ ಸ್ಯಾತ್ತ್ವತ್ಪ್ರಭಾವತಃ ॥ ೩೫ ॥
ಭವಂತು ತನಯಾ ನಶ್ಚ ತಥಾ ವಂಶವಿವರ್ಧನಾಃ ।
ಏತನ್ಮೇ ವಾಂಛಿತಂ ದೇವಿ ನಾಽನ್ಯತ್ಸಂಪ್ರಾರ್ಥಯಾಮ್ಯಹಂ ॥ ೩೬ ॥

---

೨೯. ಆದುದರಿಂದ ಈ ಕ್ಷೇತ್ರದಲ್ಲಿಯೇ ಸಂಚರಿಸುವೆನು. ಮಗನಿಲ್ಲದ ಮನೆಯನ್ನು ಸೇರಿ ಏನನ್ನು ಮಾಡಲಿ?

೩೦–೩೧. ಅನಂತರ ಅವಳು ಅತಿ ಶ್ರದ್ಧೆಯಿಂದ ಸುರೇಶ್ವರಿಯಾದ ಅಂಬಿಕೆಯನ್ನು ಪ್ರತಿಷ್ಠೆಮಾಡಿ ಗಂಧ, ಪುಷ್ಪ, ಕಾಣಿಕೆ, ನಾನಾವಿಧ ನೈವೇದ್ಯ, ಗೀತ, ನೃತ್ಯ, ಇಂಪಾದ ವಾದ್ಯ ಇವುಗಳಿಂದ ಪೂಜಿಸಿದಳು.

೩೨. ಬಳಿಕ ಕೆಲವು ದಿವಸಗಳಾದಮೇಲೆ ಸುರೇಶ್ವರಿಯು ಸಂತುಷ್ಟಳಾಗಿ ವರವನ್ನು ಕೊಡುವೆನು. ಮನಸ್ಸಿನಲ್ಲಿರುವುದನ್ನು ಬೇಡಿಕೊ ಎಂದಳು.

೩೩–೩೪. ರೇವತಿಯು ಹೇಳುತ್ತಾಳೆ:—ದೇವಿ! ಹಿಂದೆ ಒಬ್ಬ ಬ್ರಾಹ್ಮಣಿಯು ಯಾವುದೋ ಒಂದು ಕಾರಣದಿಂದ ನನ್ನನ್ನು ಕುರಿತು ನೀನು ಮನುಷ್ಯಸ್ತ್ರೀಯಾಗಿ ಜನಿಸಿ ನನ್ನ ಶಾಪದಿಂದ ಪುತ್ರಾದಿಗಳ ನಾಶದಿಂದುಂಟಾದ ದುಃಖರೂಪ ಫಲವನ್ನು ಪಡೆಯುವೆ ಎಂದು ಶಪಿಸಿದ್ದಾಳೆ.

೩೫–೩೬. ಹಾಗೆಯೇ ನನ್ನ ಬಾಯಿಯ ಹಲ್ಲುಗಳನ್ನು ಹಾಳುಮಾಡಿದ್ದಾಳೆ. ಸುರೇಶ್ವರಿ! ನೀನು ನಿನ್ನ ಸಾಮರ್ಥ್ಯದಿಂದ ಆ ಹಲ್ಲುಗಳು ಮರಳಿ ಹುಟ್ಟುವಂತೆಯೂ, ವಂಶವನ್ನು ಅಭಿವೃದ್ಧಿಗೊಳಿಸುವ ಮಕ್ಕಳು ಜನಿಸುವಂತೆಯೂ ಅನುಗ್ರಹಿಸು. ಇದು ನನ್ನ ಇಷ್ಟಾರ್ಥವು, ನಾನು ಬೇರಾವುದನ್ನೂ ಬೇಡುವುದಿಲ್ಲ.

ದೇವ್ಯುವಾಚ :—

ನಾಽತ್ರ ತ್ರಾಸಸ್ತ್ವಯಾ ಕಾರ್ಯಃ ಕಥಂಚಿದಪಿ ಶೋಭನೇ ।
ಮನುಷ್ಯಗರ್ಭಸಂವಾಸೋ ಭರ್ತಾ ಚ ಭವಿತಾ ನರಃ ॥ ೩೭ ॥
ತಸ್ಮಾಚ್ಛೃಣುಷ್ವ ಮೇ ವಾಕ್ಯಂ ಯತ್ತ್ವಾಂ ವಕ್ಷ್ಯಾಮಿ ಸಾಂಪ್ರತಂ ।
ದುಃಖನಾಶಕರಂ ತುಭ್ಯಂ ಸತ್ಯಂ ಚ ವರವರ್ಣಿನಿ ॥ ೩೮ ॥
ಉತ್ಪತ್ಸ್ಯತಿ ನ ಸಂದೇಹೋ ದೇವಕಾರ್ಯಪ್ರಸಿದ್ಧಯೇ ।
ತವ ಭರ್ತಾ ತ್ರಿಲೋಕೇಽಸ್ಮಿನ್ ಕೃತ್ವಾ ಮಾನುಷವಿಗ್ರಹಂ ॥ ೩೯ ॥
ತಕ್ಷಕಾಖ್ಯಸ್ತಥಾ ನಾಗೋ ದ್ವಿಜಶಾಪವಶಾಚ್ಛುಭೇ ।
ಸೌರಾಷ್ಟ್ರವಿಷಯೇ ರಾಜಾ ರೈವತಾಖ್ಯೋ ಭವಿಷ್ಯತಿ ॥ ೪೦ ॥
ತಸ್ಯ ಕ್ಷೇಮಕರೀ ಭಾರ್ಯಾ ನಾಮವಂಶಸಮುದ್ಭವಾ ।
ಭವಿಷ್ಯತಿ ನ ಸಂದೇಹೋ ವಿಶಿಷ್ಟಾ ವಿಪ್ರಶಾಪತಃ ॥ ೪೧ ॥
ತಸ್ಯಾ ಗರ್ಭಂ ಸಮಾಸಾದ್ಯ ತ್ವಂ ಜನ್ಮ ಸಮವಾಪ್ಸ್ಯಸಿ ।
ರಾಮರೂಪಸ್ಯ ಶೇಷಸ್ಯ ಪುನರ್ಭಾರ್ಯಾ ಭವಿಷ್ಯಸಿ ॥ ೪೨ ॥
ತಸ್ಮಾತ್ತ್ವಂ ದೇವಿ ಮಾ ಶೋಕಂ ಕಾರ್ಯೇಽಸ್ಮಿನ್ ಕುರು ಶೋಭನೇ ।
ತೇನ ಮಾನುಷಜೇ ಗರ್ಭೇ ಸಂಭೂತಿಃ ಸಂಭವಿಷ್ಯತಿ ॥ ೪೩ ॥

---

೩೭. ದೇವಿಯು ಹೇಳುತ್ತಾಳೆ:—ಮಂಗಳಕರಳೆ! ನೀನು ಈ ವಿಷಯದಲ್ಲಿ ಯಾವ ರೀತಿಯಿಂದಲೂ ಹೆದರಬೇಡ. ನಿನಗೆ ಮನುಷ್ಯಗರ್ಭವಾಸವುಂಟಾಗುವುದು, ಮನುಷ್ಯಪತಿಯು ಆಗುವನು.

೩೮. ಆದುದರಿಂದ ನಾನು ನಿನಗೆ ಈಗ ದುಃಖವನ್ನು ನಾಶಗೊಳಿಸುವುದೂ, ಸತ್ಯವೂ ಆದ ಮಾತನ್ನು ಹೇಳುತ್ತೇನೆ. ಅದನ್ನು ಕೇಳು.

೩೯. ನಿನ್ನ ಪತಿಯು ದೇವಕಾರ್ಯಸಿದ್ಧಿಗಾಗಿ ಈ ತ್ರೈಲೋಕ್ಯದಲ್ಲಿ ಮನುಷ್ಯಶರೀರದಿಂದ ನಿಜವಾಗಿಯೂ ಹುಟ್ಟುವನು.

೪೦. ಹಾಗೆಯೇ ತಕ್ಷಕನೆಂಬ ನಾಗನು ಬ್ರಾಹ್ಮಣ ಶಾಪದಿಂದ ಸೌರಾಷ್ಟ್ರ ದೇಶದಲ್ಲಿ ರೈವತನೆಂಬ ರಾಜನಾಗಿ ಜನಿಸುವನು.

೪೧. ಅವನಿಗೆ ವಿಪ್ರಶಾಪದಿಂದ ನಾಮವಂಶದಲ್ಲಿ ಜನಿಸಿದ ಕ್ಷೇಮಕರೀ ಎಂಬುವಳು ಪತ್ನಿಯಾಗುವಳು.

೪೨. ನೀನು ಅವಳ ಗರ್ಭವನ್ನು ಸೇರಿ ಜನಿಸಿ ರಾಮರೂಪಿಯಾದ ಶೇಷನಿಗೆ ಪತ್ನಿಯಾಗುವೆ.

೪೩. ದೇವಿ! ಆದುದರಿಂದ ಮಾನುಷ ಜನ್ಮೋತ್ಪತ್ತಿರೂಪವಾದ ಈ ಕಾರ್ಯದಲ್ಲಿ ದುಃಖಿಸಬೇಡ.

ತತ್ರ ಪಶ್ಯಸಿ ಯನ್ನಾಶಂ ಸ್ವಕುಟುಂಬಸಮುದ್ಭವಂ ।
ಹಿತಾಯ ತದವಸ್ಥಾಯಾಸ್ತದ್ಭವಿಷ್ಯತ್ಯಸಂಶಯಂ ॥ ೪೪ ॥
ತತಃ ಪರಂ ಯುಗಂ ಪಾಪಂ ಯತೋ ಭೀರು ಭವಿಷ್ಯತಿ ।
ತದೂರ್ಧ್ವಂ ಮರ್ತ್ಯಧರ್ಮಾಣೋ ಮ್ಲೇಚ್ಛಾಃ ಸ್ಥಾಸ್ಯಂತಿ ಸರ್ವತಃ ॥ ೪೫ ॥
ತತಃ ಸ್ವರ್ಗನಿವಾಸಾರ್ಥಂ ಭಗವಾನ್ ದೇವಕೀಸುತಃ ।
ಸಂಹರ್ತಾ ಸ್ವಕುಲಂ ಸರ್ವಂ ಸ್ವಯಮೇವ ನ ಸಂಶಯಃ ॥ ೪೬ ॥
ಭವಿಷ್ಯಂತಿ ಪುನರ್ದಂಷ್ಟ್ರಾಸ್ತವ ವಕ್ತ್ರೇ ಮನೋರಮಾಃ ।
ತಸ್ಮಾತ್ತ್ವಂ ಗಚ್ಛ ಪಾತಾಲಂ ಸ್ವಭರ್ತಾ ಯತ್ರ ತಿಷ್ಠತಿ ॥ ೪೭ ॥
ಅನ್ಯಚ್ಚಾಽಪಿ ಯದಿಷ್ಟಂ ತೇ ಕಿಂಚಿಚ್ಚಿತ್ತೇ ವ್ಯವಸ್ಥಿತಂ ।
ತತ್ಕೀರ್ತಯಸ್ವ ಕಲ್ಯಾಣಿ ಮಹಾಂಸ್ತೋಷೋ ಮಮ ಸ್ಥಿತಃ ॥ ೪೮ ॥

ರೇವತ್ಯುವಾಚ:—

ಸ್ಥಾನೇ ಸ್ಥೇಯಂ ಸದಾಽತ್ರೈವ ಮಮ ನಾಮ್ನಾ ಸುರೇಶ್ವರಿ ।
ಯೇನ ಮೇ ಜಾಯತೇ ಕೀರ್ತಿಸ್ತ್ರೈಲೋಕ್ಯೇ ಸಚರಾಚರೇ ॥ ೪೯ ॥
ತಥಾಽಹಂ ನಾಗಲೋಕಾಚ್ಚ ಚತುರ್ದಶ್ಯಷ್ಟಮೀಷು ಚ ।
ಸದಾ ತ್ವಾಂ ಪೂಜಯಿಷ್ಯಾಮಿ ವಿಶೇಷಾನ್ನವಮೀ ದಿನೇ ॥ ೫೦ ॥

---

೪೪. ಅಲ್ಲಿ ನೀನು ನೋಡುವ ಕುಟುಂಬನಾಶವು ಆ ಸ್ಥಿತಿಯಲ್ಲಿರುವ ನಿನ್ನ ಹಿತಕ್ಕಾಗಿಯೇ ಆಗುವುದು.

೪೫. ಭಯಶೀಲಳೆ! ಮುಂದೆ ಕಲಿಯುಗವು ಸಂಭವಿಸುವುದು. ಆಗ ಮನುಷ್ಯರು ಮ್ಲೇಚ್ಛರಾಗುವರು.

೪೬. ಅನಂತರ ಪೂಜ್ಯನಾದ ಶ್ರೀಕೃಷ್ಣನು ಸ್ವರ್ಗವಾಸಕ್ಕಾಗಿ ತಾನೇ ತನ್ನ ಕುಲವನ್ನೆಲ್ಲ ಸಂಹರಿಸುವನು.

೪೭. ನಿನ್ನ ಬಾಯಿಯಲ್ಲಿ ಮರಳಿ ಮನೋಹರವಾದ ಹಲ್ಲುಗಳು ಹುಟ್ಟುವುವು. ಆದುದರಿಂದ ನೀನು ನಿನ್ನ ಪತಿಯಿರುವ ಪಾತಾಳಲೋಕಕ್ಕೆ ತೆರಳು.

೪೮. ಮಂಗಳಕರಳೆ! ನಿನ್ನ ಮನೋಭೀಷ್ಟವು ಬೇರೆ ಯಾವುದಿದೆ? ಅದನ್ನು ಹೇಳು. ನನಗೆ ಬಹಳ ಸಂತೋಷವಾಗಿದೆ.

೪೯. ರೇವತಿಯು ಹೇಳುತ್ತಾಳೆ:—ಸುರೇಶ್ವರಿ! ನೀನು ನನ್ನ ಹೆಸರಿನಿಂದ ಇಲ್ಲಿರು. ಅದರಿಂದ ನನಗೆ ಚರಾಚರಾತ್ಮಕವಾದ ಮೂರು ಲೋಕಗಳಲ್ಲಿ ಕೀರ್ತಿಯುಂಟಾಗುವುದು.

೫೦. ನಾನು ನಾಗಲೋಕದಲ್ಲಿಯೇ ಇದ್ದು ಚತುರ್ದಶೀ, ಅಷ್ಟಮೀ, ನವಮೀ ದಿನಗಳಲ್ಲಿ ಯಾವಾಗಲೂ ನಿನ್ನನ್ನು ಪೂಜಿಸುವೆನು.

ಆಶ್ವಿನಸ್ಯ ಸಿತೇ ಪಕ್ಷೇ ಸರ್ವೈರ್ನಾಗೈಃ ಸಮನ್ವಿತಾ ।
ಪ್ರಪೂಜಾಂ ತೇ ವಿಧಾಸ್ಯಾಮಿ ಶ್ರದ್ಧಯಾ ಪರಯಾ ಯುತಾ ॥ ೫೧ ॥
ತಸ್ಮಿನ್ನಹನಿ ಯೇಽನ್ಯೇಽಪಿ ಪೂಜಾಂ ದಾಸ್ಯಂತಿ ತೇ ನರಾಃ ।
ಮಾ ಪಶ್ಯಂತು ಪ್ರಸಾದಾತ್ತೇ ನರಾಸ್ತೇ ವಲ್ಲಭಕ್ಷಯಂ ॥ ೫೨ ॥

ದೇವ್ಯುವಾಚ :—

ಏವಂ ಭದ್ರೇ ಕರಿಷ್ಯಾಮಿ ವಾಸೋ ಮೇಽತ್ರ ಭವಿಷ್ಯತಿ ।
ತ್ವನ್ನಾಮ್ನಾ ಪೂಜಕಾನಾಂ ಚ ಶ್ರೇಯೋ ದಾಸ್ಯಾಮಿ ತೇ ಸದಾ ।
ಮಹಾನವಮಿಜೇ ಚಾಽಹ್ನಿ ವಿಶೇಷೇಣ ಶುಚಿಸ್ಮಿತೇ ॥ ೫೩ ॥

ಸೂತ ಉವಾಚ :—

ಏವಮುಕ್ತ್ವಾ ತಯಾ ಸಾಽಥ ರೇವತೀ ಶೇಷವಲ್ಲಭಾ ।
ಜಗಾಮ ಸ್ವಗೃಹಂ ಪಶ್ಚಾದ್ಧರ್ಷೇಣ ಮಹತಾನ್ವಿತಾ ॥ ೫೪ ॥
ತತಃ ಪ್ರಭೃತಿ ಸಾ ದೇವೀ ತಸ್ಮಿನ್ ಕ್ಷೇತ್ರೇ ವ್ಯವಸ್ಥಿತಾ ।
ತನ್ನಾಮ್ನಾ ಕಾಮದಾ ನೄಣಾಂ ಸರ್ವವ್ಯಸನನಾಶಿನೀ ॥ ೫೫ ॥
ಅಂಬಾ ಸಾ ಕೀರ್ತ್ಯತೇ ದುರ್ಗಾ ರೇವತೀ ಸೋರಗಪ್ರಿಯಾ ।
ತತಃ ಸಂಕೀರ್ತ್ಯತೇ ಲೋಕೇ ಭೂತಲೇ ಚಾಂಬರೇವತೀ ॥ ೫೬ ॥

---

೫೧. ಆಶ್ವಯುಜ ಮಾಸದ ಶುಕ್ಲ ಪಕ್ಷದಲ್ಲಿ ಸಕಲ ನಾಗಗಳೊಡನೆ ಅತಿ ಶ್ರದ್ಧೆಯಿಂದ ನಿನ್ನನ್ನು ಪೂಜಿಸುವೆನು.

೫೨. ಆ ದಿನ ನಿನ್ನನ್ನು ಪೂಜಿಸಿದ ಇತರ ಮಾನವರೂ ನಿನ್ನ ಅನುಗ್ರಹದಿಂದ ಪ್ರಿಯರ ನಾಶವನ್ನು ನೋಡದಿರಲಿ.

೫೩. ದೇವಿಯು ಹೇಳುತ್ತಾಳೆ:—ಮಂಗಳಕರಳೆ! ನಾನು ಹೀಗೆಯೇ ಮಾಡುವೆನು. ನಿನ್ನ ಹೆಸರಿನಿಂದ ಇಲ್ಲಿ ವಾಸಿಸುವೆನು. ಮಹಾನವಮಿ ದಿನ ನನ್ನನ್ನು ವಿಶೇಷವಾಗಿ ಪೂಜಿಸುವವರಿಗೆ ಯಾವಾಗಲೂ ಶ್ರೇಯಸ್ಸನ್ನುಂಟು ಮಾಡುವೆನು.

೫೪. ಸೂತನು ಹೇಳುತ್ತಾನೆ:—ದೇವಿಯು ಹೀಗೆ ಹೇಳಲು ಶೇಷನ ಪತ್ನಿಯಾದ ರೇವತಿಯು ಬಹಳ ಸಂತೋಷದಿಂದ ತನ್ನ ಮನೆಗೆ ಹೋದಳು.

೫೫. ಅದು ಮೊದಲ್ಗೊಂಡು ಆ ದೇವಿಯು ಆ ಕ್ಷೇತ್ರದಲ್ಲಿ ಸರ್ಪಾಂಗನೆಯ ಹೆಸರಿನಿಂದ ನೆಲೆಸಿ ಇಷ್ಟಾರ್ಥವನ್ನೀಯುವವಳೂ, ಸಮಸ್ತರ ವ್ಯಸನವನ್ನು ನಾಶಗೊಳಿಸುವವಳೂ ಆದಳು.

೫೬. ಅನಂತರ ಅವಳು ಭೂಲೋಕದಲ್ಲಿ ಅಂಬಾ, ದುರ್ಗಾ, ರೇವತೀ, ಉರಗಪ್ರಿಯಾ, ಅಂಬಾರೇವತೀ ಎಂದು ಪ್ರಸಿದ್ಧಳಾದಳು.

ಯಸ್ತಾಂ ಶ್ರದ್ಧಾಸಮೋಪೇತಃ ಶುಚಿರ್ಭೂತ್ವಾ ಪ್ರಪೂಜಯೇತ್ ।
ನವಮ್ಯಾಮಾಶ್ವಿನೇ ಮಾಸಿ ಶುಕ್ಲಪಕ್ಷೇ ಸಮಾಹಿತಃ ।
ನ ಸ ಸಂವತ್ಸರಂ ಯಾವದ್ವ್ಯಸನಂ ಸ್ವಕುಲೋದ್ಭವಂ ॥ ೫೭ ॥
ದೃಷ್ಟ್ವಾಗ್ರೇ ಛಿದ್ರಕಂ ವ್ಯಾಲಯುಕ್ತಂ ದೋಷೈರ್ವಿಮುಚ್ಯತೇ ।
ಗ್ರಹಭೂತಪಿಶಾಚೋತ್ಥೈಸ್ತಥಾಽನ್ಯೈರಪಿ ಚಾಽಽಪದೈಃ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಂಬಾರೇವತೀ ತೀರ್ಥಮಾಹಾತ್ಮ್ಯವರ್ಣನಂ" ನಾಮ
ಷೋಡಶೋತ್ತರಶತತಮೋಽಧ್ಯಾಯಃ

---

೫೭. ಆಶ್ವಯುಜ ಶುದ್ಧ ನವಮೀ ದಿನ ಶುದ್ಧನಾಗಿ ಶ್ರದ್ಧೆಯಿಂದ ಅವಳನ್ನು ಪೂಜಿಸಿದವನು ಒಂದು ವರ್ಷದವರೆಗೆ ತನ್ನ ವಂಶದಿಂದುಂಟಾದ ದುಃಖವನ್ನು ನೋಡುವುದಿಲ್ಲ.

೫೮. ಸರ್ಪಗಳಿರುವ ಬಿಲವನ್ನು ನೋಡಿದವನು ಗ್ರಹ, ಭೂತ, ಪಿಶಾಚಗಳಿಂದುಂಟಾದ ದೋಷಗಳಿಂದಲೂ, ಇತರ ಆಪತ್ತುಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಂಬಾರೇವತೀ ತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋತ್ತರಶತತಮೋಽಧ್ಯಾಯಃ

### ಭಟ್ಟಿಕಾತೀರ್ಥೋತ್ಪತ್ತಿಮಾಹಾತ್ಮ್ಯಕಥನಂ

ಋಷಯ ಊಚುಃ:—

ಭಟ್ಟಿಕಾಖ್ಯಾ ಪುರಾ ಪ್ರೋಕ್ತಾ ಯಾ ತ್ವಯಾ ಸೂತನಂದನ ।
ಕಸ್ಮಾತ್ತಸ್ಯಾಃ ಶರೀರಾಂತಾದ್ದಂಷ್ಟ್ರಾ ನಾಗಸಮುದ್ಭವಾಃ ॥ ೧ ॥
ವಿಶೀರ್ಣಾಃ ಕಿಂ ಪ್ರಭಾವಶ್ಚ ತಪಸಃ ಸೂತನಂದನ ।
ಕಿಂವಾ ಮಂತ್ರಪ್ರಭಾವಶ್ಚ ಏತನ್ನಃ ಕೌತುಕಂ ಪರಂ ॥ ೨ ॥
ಯಸ್ಮಾನ್ಮನುಷಶರೀರೇಽಪಿ ವಿಶೀರ್ಣಾಸ್ತಾ ವಿಷೋಲ್ಬಣಾಃ ।
ನಾಗಾನಾಂ ತು ವಿಶೇಷೇಣ ತಸ್ಮಾತ್ಸರ್ವಂ ಪ್ರಕೀರ್ತಯ ॥ ೩ ॥

ಸೂತ ಉವಾಚ:—

ಸಾ ಪುರಾ ಬ್ರಾಹ್ಮಣೀ ಬಾಲ್ಯೇ ವರ್ತಮಾನಾ ಪಿತುರ್ಗೃಹೇ ।
ವೈಧವ್ಯೇನ ಸಮಾಯುಕ್ತಾ ಜಾತಾ ಕರ್ಮವಿಪಾಕತಃ ॥ ೪ ॥
ತತೋ ಬಾಲ್ಯೇಽಪಿ ಶುಶ್ರಾವ ಶಾಸ್ತ್ರಾಣಿ ವಿವಿಧಾನಿ ಚ ।
ದೇವಯಾತ್ರಾಂ ಪ್ರಚಕ್ರೇಽಥ ತೀರ್ಥೇ ಸ್ನಾತಿ ಸಮಾಹಿತಾ ॥ ೫ ॥

---

### ಕನ್ನಡದ ಅನುವಾದ

#### ಭಟ್ಟಿಕಾತೀರ್ಥೋತ್ಪತ್ತಿಮಾಹಾತ್ಮ್ಯಕಥನ

೧-೨. ಋಷಿಗಳು ಹೇಳುತ್ತಾರೆ:—ಸೂತ! ನೀನು ಹಿಂದೆ ಹೇಳಿದ ಭಟ್ಟಿಕೆಯ ಶರೀರದೊಳಗಿನಿಂದ ನಾಗಗಳ ಹಲ್ಲುಗಳು ಏಕೆ ಉದುರಿದುವು? ಅದು ತಪಸ್ಸಿನ ಸಾಮರ್ಥ್ಯವೊ? ಮಂತ್ರ ಸಾಮರ್ಥ್ಯವೊ? ನಮಗೆ ಬಹಳ ಕುತೂಹಲ ವುಂಟಾಗಿದೆ.

೩. ವಿಷದಿಂದ ಕುದಿಯುತ್ತಿರುವ ನಾಗಗಳ ಹಲ್ಲುಗಳು ಮನುಷ್ಯಶರೀರ ದಿಂದ ಸೀಳಿ ಉದುರಿದುವಷ್ಟೆ. ಇದನ್ನೆಲ್ಲ ನಮಗೆ ಹೇಳು.

೪. ಸೂತನು ಹೇಳುತ್ತಾನೆ:—ಆ ದ್ವಿಜಾಂಗನೆಯು ಕರ್ಮವಶದಿಂದ ಬಾಲ್ಯದಲ್ಲಿಯೇ ವಿಧವೆಯಾಗಿ ತಂದೆಯ ಮನೆಯಲ್ಲಿರುತ್ತಿದ್ದಳು.

೫. ಅವಳು ಬಾಲ್ಯದಲ್ಲಿಯೇ ವಿವಿಧ ಶಾಸ್ತ್ರಗಳನ್ನು ಕೇಳಿದಳು. ದೇವರ ಯಾತ್ರೆ ಮಾಡಿದಳು. ಸಾವಧಾನ ಮನಸ್ಸಿನಿಂದ ತೀರ್ಥದಲ್ಲಿ ಮಿಂದಳು.

ತತ್ರ ಕೇದಾರದೇವಂ ಚ ಗತ್ವಾ ನಿತ್ಯಂ ಸಮಾಹಿತಾ ।
ಪ್ರಾತರುತ್ಥಾಯ ಗೀತಂ ಚ ಭಕ್ತ್ಯಾ ಚಕ್ರೇ ತದಗ್ರತಃ ॥ ೬ ॥
ತತಸ್ತದ್ಗೀತಲೌಲ್ಯೇನ ಪಾತಾಲಾತ್ಸಮುಪೇತ್ಯ ಚ ।
ತಕ್ಷಕೋ ವಾಸುಕಿಶ್ಚೈವ ದ್ವಿಜರೂಪಧರಾವುಭೌ ॥ ೭ ॥
ಸಾಽಪಿ ತತ್ರ ಮಹದ್ಗೀತಂ ತಾನೈಃ ಸರ್ವೈರಲಂಕೃತಂ ।
ಮೂರ್ಛನಾಭಿಃ ಸಮೋಪೇತಂ ಸಪ್ತಸ್ವರವಿರಾಜಿತಂ ॥ ೮ ॥
ಯತಿಭಿಶ್ಚ ತಥಾ ಗ್ರಾಮೈರ್ವರ್ಣಗ್ರಾಮೈಃ ಪೃಥಗ್ವಿಧೈಃ ।
ತತಂ ಚ ವಿತತಂ ಚೈವ ಘನಂ ಸುಷಿರಮೇವ ಚ ॥ ೯ ॥
ತಾಲಕಾಲಕ್ರಿಯಾಮಾನ ವರ್ಧಮಾನಾದಿಕಂ ಚ ಯತ್ ।
ಅವಿದಗ್ಧಾಽಪಿ ಸಾ ತೇಷಾಂ ಗೀತಾಂಗಾನಾಂ ದ್ವಿಜಾಂಗನಾ ।
ಕೇವಲಂ ಕಂಠಸಂಶುದ್ಧ್ಯಾ ತಾಭ್ಯಾಂ ತೋಷಂ ಸಮಾದಧೇ ॥ ೧೦ ॥
ತತಸ್ತದ್ಗೀತಲೋಭೇನ ಸರ್ವೇ ತತ್ಪುರವಾಸಿನಃ ।
ಪ್ರಾತರುತ್ಥಾಯ ಕೇದಾರಂ ಸಮಾಗಚ್ಛಂತಿ ಕೌತುಕಾತ್ ॥ ೧೧ ॥
ಕಸ್ಯ ಚಿತ್ತ್ವಥ ಕಾಲಸ್ಯ ನಾಗೌ ತೌ ಸ್ವಪುರಂ ಪ್ರತಿ ।
ನಿನ್ಯುರ್ಬಲಾತ್ಸಮುದ್ಯಮ್ಯ ಸರ್ವಲೋಕಸ್ಯ ಪಶ್ಯತಃ ॥ ೧೨ ॥
ನಾಗರೂಪಂ ಸಮಾಧಾಯ ರೌದ್ರಂ ಜನವಿಭೀಷಣಂ ।
ಭೋಗಾಗ್ರ್ಯೇಣ ಚ ಸಂವೇಷ್ಟ್ಯ ಪಾತಾಲತಲಮಭ್ಯಯುಃ ॥ ೧೩ ॥

---

೬. ನಿತ್ಯವೂ ಬೆಳಗ್ಗೆ ಎದ್ದು ಕೇದಾರದೇವನೆಡೆಗೆ ಹೋಗಿ ಅವನ ಮುಂದೆ ಭಕ್ತಿಯಿಂದ ಹಾಡನ್ನು ಹಾಡಿದಳು.

೭. ಬಳಿಕ ಪಾತಾಳವಾಸಿಗಳಾದ ತಕ್ಷಕ ವಾಸುಕಿಯರು ಸಂಗೀತದ ಆಶೆಯಿಂದ ಬ್ರಾಹ್ಮಣರೂಪವನ್ನು ಧರಿಸಿ ಅಲ್ಲಿಗೆ ಬಂದರು.

೮–೧೦. ಆ ದ್ವಿಜಾಂಗನೆಯು ಸಂಗೀತದಲ್ಲಿ ಚತುರಳಲ್ಲದಿದ್ದರೂ ಸರ್ವವಿಧ ತಾನ, ಮೂರ್ಛನಾ, ಸಪ್ತ ಸ್ವರಗಳು, ಯತಿ, ಗ್ರಾಮ, ವರ್ಣಗ್ರಾಮ ಇವುಗಳಿಂದ ಕೂಡಿದ ತತ, ವಿತತ, ಘನ, ಸುಷಿರ, ತಾಲ, ಕಾಲ, ಕ್ರಿಯಾಮಾನ, ವರ್ಧಮಾನ ಮೊದಲಾದ ಸಂಗೀತಗಳನ್ನು ಕೋಮಲ ಕಂಠಶುದ್ಧಿಯಿಂದ ಹಾಡಿ ತಕ್ಷಕ ವಾಸುಕಿಯರಿಗೆ ಆನಂದವನ್ನುಂಟುಮಾಡಿದಳು.

೧೧. ಆ ಪಟ್ಟಣದ ನಿವಾಸಿಗಳೆಲ್ಲ ಸಂಗೀತದ ಆಶೆಯಿಂದ ಬೆಳಗ್ಗೆ ಎದ್ದು ನಿತ್ಯವೂ ಕೇದಾರಕ್ಕೆ ಕುತೂಹಲದಿಂದ ಬರುತ್ತಿದ್ದರು.

೧೨–೧೩. ಒಂದಾನೊಂದು ದಿನ ಆ ನಾಗಗಳು ಜನರಿಗೆ ಭಯಂಕರವಾದ ನಾಗರೂಪವನ್ನು ತಾಳಿ ಆ ದ್ವಿಜ ಸ್ತ್ರೀಯನ್ನು ಸಮಸ್ತ ಜನರು ನೋಡುತ್ತಿರುವಾಗಲೇ ಬಲಾತ್ಕಾರದಿಂದ ಎತ್ತಿಕೊಂಡು ತಮ್ಮ ಶರೀರದಿಂದ ಸುತ್ತಿ ತಮ್ಮ ಪಟ್ಟಣಕ್ಕೆ ತೆಗೆದುಕೊಂಡು ಹೋದುವು.

ಅಥ ತಾಂ ಸ್ವಗೃಹಂ ನೀತ್ವಾ ಪ್ರೋಚತುಃ ಕಾಮಪೀಡಿತೌ ।
ಭವಾಽಽವಾಭ್ಯಾಂ ವಿಶಾಲಾಕ್ಷಿ ಭಾರ್ಯಾ ಧರ್ಮಪರಾಯಣಾ ।
ಏತದರ್ಥಂ ಸಮಾನೀತಾ ತ್ವಂ ಪಾತಾಲೇ ಮಹೀತಲಾತ್ ॥ ೧೪ ॥

ಭಟ್ಟಿಕೋವಾಚ :—

ಯತ್ತ್ವಂ ತಕ್ಷಕ ಮಾಂ ಶಾಂತಾಮನಪೇಕ್ಷಾಂ ರತೋತ್ಸವೇ ।
ಆನೈಷೀರಪಹೃತ್ಯಾಽಽಶು ಬ್ರಾಹ್ಮಣಾನ್ವಯಸಂಭವಾಂ ॥ ೧೫ ॥
ಮಾನುಷಂ ರೂಪಮಾಸ್ಥಾಯ ಪುರಾ ಮಾಂ ತ್ವಂ ಸಮಾಶ್ರಿತಃ ।
ಕಾಮೋಪಹೃತಚಿತ್ತಾತ್ಮಾ ತಸ್ಮಾನ್ಮರ್ತ್ಯೋ ಭವಿಷ್ಯಸಿ ॥ ೧೬ ॥
ಯದಿ ಮಾಂ ತ್ವಂ ದುರಾಚಾರ ಧರ್ಷಯಿಷ್ಯಸಿ ವೀರ್ಯತಃ ।
ಶತಧಾ ತವ ಮೂರ್ಧಾಽಯಂ ಸದ್ಯ ಏವ ಭವಿಷ್ಯತಿ ॥ ೧೭ ॥
ತಂ ಶ್ರುತ್ವಾ ಸುಮಹಾಶಾಪಂ ತಸ್ಯಾಃ ಸ ಭಯವಿಹ್ವಲಃ ।
ತತಃ ಪ್ರಸಾದಯಾಮಾಸ ಕೃತಾಂಜಲಿಪುಟಃ ಸ್ಥಿತಃ ॥ ೧೮ ॥
ಮಯಾ ತ್ವಂ ಕಾಮಸಕ್ತೇನ ಸಮಾನೀತಾ ಸುಮೋಹತಃ ।
ತಸ್ಮಾತ್ಕುರು ಪ್ರಸಾದಂ ಮೇ ಶಾಪಸ್ಯಾಂತೋ ಯಥಾ ಭವೇತ್ ॥ ೧೯ ॥

---

೧೪. ಬಳಿಕ ಆ ನಾಗಗಳು ಅವಳನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಕಾಮಪೀಡಿತರಾಗಿ ಅವಳನ್ನು ಕುರಿತು ವಿಶಾಲಾಕ್ಷಿ! ನೀನು ನಮ್ಮಿಬ್ಬರಿಗೆ ಪತ್ನಿಯಾಗು. ಇದಕ್ಕಾಗಿಯೇ ನಾವು ನಿನ್ನನ್ನು ಭೂಮಿಯಿಂದ ಪಾತಾಳಕ್ಕೆ ಕರೆ ತಂದೆವು, ಎಂದುವು.

೧೫–೧೬. ಭಟ್ಟಿಕೆಯು ಹೇಳುತ್ತಾಳೆ:—ತಕ್ಷಕ! ನೀನು ಹಿಂದೆ ಮನುಷ್ಯ ರೂಪವನ್ನು ತಾಳಿ ನನ್ನೆಡೆಗೆ ಬಂದು ಕಾಮಪೀಡಿತನಾಗಿ ಶಾಂತಳೂ, ರತಿಕ್ರೀಡೆ ಯಲ್ಲಿ ಆಶೆಯಿಲ್ಲದವಳೂ, ಬ್ರಾಹ್ಮಣಪುತ್ರಿಯೂ ಆದ ನನ್ನನ್ನು ಅಪಹರಿಸಿ ಪಾತಾಳಕ್ಕೆ ಕರೆತಂದುದರಿಂದ ಮನುಷ್ಯನಾಗುವೆ.

೧೭. ದುರುಳ! ನೀನು ಬಲಾತ್ಕಾರದಿಂದ ನನ್ನನ್ನು ಕೆಡಿಸಿದರೆ ನಿನ್ನ ತಲೆಯು ನೂರು ವಿಧವಾಗಿ ಒಡೆಯುವುದು.

೧೮. ತಕ್ಷಕನು ಅವಳ ಭಯಂಕರ ಶಾಪವನ್ನು ಕೇಳಿ ಹೆದರಿ ಕೈಮುಗಿದು ಕೊಂಡು ಅವಳನ್ನು ಸಮಾಧಾನಗೊಳಿಸಿದನು.

೧೯. ಬ್ರಾಹ್ಮಣಿ! ಕಾಮಪೀಡಿತನಾದ ನಾನು ಮೋಹದಿಂದ ನಿನ್ನನ್ನು ಇಲ್ಲಿಗೆ ತಂದೆನು. ಆದುದರಿಂದ ನನ್ನ ಶಾಪವು ಕೊನೆಗೊಳ್ಳುವಂತೆ ಅನುಗ್ರಹ ಮಾಡು.

ಸೂತ ಉವಾಚ :—

ಏವಂ ಪ್ರಸಾದಿತಾ ತೇನ ತಕ್ಷಕೇಣ ದ್ವಿಜಾತ್ಮಜಾ ।
ತತಃ ಪ್ರೋವಾಚ ತಂ ನಾಗಂ ಬಾಷ್ಪವ್ಯಾಕುಲಲೋಚನಾ ॥ ೨೦ ॥
ಯದಿ ಮಾಂ ಮರ್ತ್ಯಲೋಕೇ ತ್ವಂ ಭೂಯೋ ನಯಸಿ ತಕ್ಷಕ ।
ತತ್ರ ಶಾಪಸ್ಯ ಪರ್ಯಂತಂ ಕರಿಷ್ಯಾಮಿ ನ ಸಂಶಯಃ ॥ ೨೧ ॥
ಏತಸ್ಮಿನ್ನಂತರೇ ಜ್ಞಾತ್ವಾ ಮಾನುಷೀಂ ಸ್ವಗೃಹಾಗತಾಂ ।
ತಕ್ಷಕೇಣ ಸಮಾನೀತಾಂ ಕಾಮೋಪಹತಚೇತಸಾ ॥ ೨೨ ॥
ತತಸ್ತಸ್ಯ ಕಲತ್ರಾಣಿ ಮಹೇರ್ಷ್ಯಾಸಂಶ್ರಿತಾನಿ ಚ ।
ತಸ್ಯಾ ನಾಶಾರ್ಥಮಾಜಗ್ಮುಃ ಕೋಪರಕ್ತೇಕ್ಷಣಾನಿ ಚ ॥ ೨೩ ॥
ಅಥ ತಾಸಾಂ ಪರಿಜ್ಞಾಯ ತಕ್ಷಕಃ ಸ ವಿಚೇಷ್ಟಿತಂ ।
ವಾಂಛಂ ಛಾಪಸ್ಯ ಪರ್ಯಂತಂ ತತ್ಪಾರ್ಶ್ವಾದ್ಭಯಸಂಯುತಃ ॥ ೨೪ ॥
ವಜ್ರಾಂ ನಾಮಾಸ್ಮರದ್ವಿದ್ಯಾಂ ತಸ್ಯಾ ಗಾತ್ರಂ ತತಸ್ತಯಾ ।
ಯೋಜಯಾಮಾಸ ರಕ್ಷಾರ್ಥಂ ಪ್ರಾಪ್ತಾ ಚಾಥ ಭುಜಂಗಮಾ ॥ ೨೫ ॥
ಅದಶತ್ತಾಂ ತತಃ ಕ್ರುದ್ಧಾ ಬ್ರಾಹ್ಮಣಸ್ಯ ಸುತಾಂ ಸತೀಂ ।
ಸಪತ್ನೀಂ ಮನ್ಯಮಾನೋಚ್ಚೈಃ ಶೀರ್ಣದಂಷ್ಟ್ರಾ ವ್ಯಜಾಯತ ॥ ೨೬ ॥
ಅಥ ತಾಮಪಿ ಸಾ ಕ್ರುದ್ಧಾ ಶಶಾಪ ದ್ವಿಜಸಂಭವಾ ।
ದೃಷ್ಟ್ವಾ ಸಾಪತ್ನ್ಯಜೈರ್ಭಾವೈರ್ವರ್ತಮಾನಾಂ ಸಹೇರ್ಷ್ಯಯಾ ॥ ೨೭ ॥

---

೨೦. ಸೂತನು ಹೇಳುತ್ತಾನೆ:—ತಕ್ಷಕನು ಹೀಗೆ ಸಮಾಧಾನಗೊಳಿಸಲು ದ್ವಿಜತನಯೆಯು ಕಣ್ಣೀರನ್ನು ಸುರಿಸುತ್ತ ಆ ನಾಗನನ್ನು ಕುರಿತು ಇಂತೆಂದಳು.

೨೧. ತಕ್ಷಕ! ನೀನು ನನ್ನನ್ನು ಮರಳಿ ಭೂಲೋಕಕ್ಕೆ ಕರೆದುಕೊಂಡು ಹೋಗಿಬಿಟ್ಟರೆ ನಿಶ್ಚಯವಾಗಿಯೂ ನಿನ್ನ ಶಾಪವನ್ನು ಕೊನೆಗೊಳಿಸುವೆನು.

೨೨–೨೩. ಇಷ್ಟರಲ್ಲಿ ಆ ತಕ್ಷಕನ ಪತ್ನಿಯರು ಕೆಂಪೇರಿದ ಕಣ್ಣುಗಳುಳ್ಳವರಾಗಿ ಅಸೂಯೆಯಿಂದ ಕಾಮಾಂಧನಾದ ತಮ್ಮ ಗಂಡನು ಭೂಮಿಯಿಂದ ಮನುಷ್ಯ ಸ್ತ್ರೀಯನ್ನು ಕರೆತಂದುದನ್ನು ತಿಳಿದು ಅವಳನ್ನು ಕೊಲ್ಲಲು ಬಂದರು.

೨೪–೨೫. ಆಗ ತಕ್ಷಕನು ಅವರ ಕೆಲಸವನ್ನು ತಿಳಿದು ಶಾಪದ ಪರಿಹಾರವನ್ನು ಬಯಸುವವನಾಗಿ ಭಯದಿಂದ ವಜ್ರವೆಂಬ ವಿದ್ಯೆಯನ್ನು ಸ್ಮರಿಸಿ ಅದರಿಂದ ಆ ಬ್ರಾಹ್ಮಣಿಯ ಶರೀರವನ್ನು ರಕ್ಷಿಸಿದನು. ತರುವಾಯ ಅವನ ಪತ್ನಿಯು ಅಲ್ಲಿಗೆ ಬಂದಳು.

೨೬. ಅವಳು ಪತಿವ್ರತೆಯಾದ ಬ್ರಾಹ್ಮಣಿಯು ತನ್ನ ಸವತಿಯೆಂದರಿತು ಅವಳನ್ನು ಕಚ್ಚಲು ಹಲ್ಲುಗಳು ಪುಡಿಯಾದುವು.

೨೭–೨೮. ಬಳಿಕ ಆ ಬ್ರಾಹ್ಮಣಿಯು ಕುಪಿತಳಾಗಿ ತನ್ನನ್ನು ಸವತಿಯೆಂದು ತಿಳಿದುಕೊಂಡಿರುವ ಆ ತಕ್ಷಕನ ಪತ್ನಿಯನ್ನು ಕುರಿತು ಪಾಪಿಷ್ಠಳೆ! ನೀನು

ಯಸ್ಮಾತ್ತ್ವಂ ದೋಷಹೀನಾಂ ಮಾಂ ಸದೋಷಾಮಿವ ಮನ್ಯಸೇ ।
ತಸ್ಮಾದ್ಭವ ದ್ರುತಂ ಪಾಪೇ ಮಾನುಷೀ ದುಃಖಭಾಗಿನೀ ॥ ೨೮ ॥
ಅಥ ತಾಂ ಸಂಗೃಹೀತ್ವಾ ಸ ತಕ್ಷಕೋ ನಾಗಸತ್ತಮಃ ।
ಕೇದಾರಾಯತನೇ ತಸ್ಮಿನ್ನರ್ಧರಾತ್ರೇ ಮುಮೋಚ ಹ ॥ ೨೯ ॥
ತತಃ ಪ್ರೋವಾಚ ತಾಂ ದೇವೀಂ ಕೃತಾಂಜಲಿಪುಟಃ ಸ್ಥಿತಃ ।
ಶಾಪಾಂತಂ ಕುರು ಮೇ ಸಾಧ್ವಿ ಸ್ವಗೃಹಂ ಯೇನ ಯಾಮ್ಯಹಂ ॥ ೩೦ ॥

ಭಟ್ಟಿಕೋವಾಚ :—

ಸೌರಾಷ್ಟ್ರವಿಷಯೇ ರಾಜಾ ತ್ವಂ ಭವಿಷ್ಯಸಿ ಪನ್ನಗ ।
ಭೂಮೌ ರೈವತಕೋ ನಾಮ ಭೋಗಾನಾಂ ಭಾಜನಂ ಸದಾ ॥ ೩೧ ॥
ತತಶ್ಚೈವ ತನುಂ ತ್ಯಕ್ತ್ವಾ ಕ್ಷೇತ್ರೇಷ್ವಾಶ್ರಮಮಧ್ಯತಃ ।
ಸಂಪ್ರಾಪ್ಸ್ಯಸಿ ನಿಜಂ ಸ್ಥಾನಂ ತತ್ಕ್ಷೇತ್ರಸ್ಯ ಪ್ರಭಾವತಃ ॥ ೩೨ ॥

ತಕ್ಷಕ ಉವಾಚ :—

ಏಷಾ ಮಮ ಪ್ರಿಯಾ ಕಾಂತಾ ತ್ವಯಾ ಶಾಪೇನ ಯೋಜಿತಾ ।
ಯಾ ಸಾ ಭವತು ಮೇ ಭಾರ್ಯಾ ಮಾನುಷತ್ವೇಽಪಿ ವರ್ತಿತೇ ॥ ೩೩ ॥
ಏತತ್ಕುರು ಪ್ರಸಾದಂ ಮೇ ದೀನಸ್ಯ ಪರಿಯಾಚತಃ ।
ಮಾಽಸ್ಯಾ ಭವತು ಚಾಽನ್ಯೇನ ಪುರುಷೇಣ ಸಮಾಗಮಃ ॥ ೩೪ ॥

---

ದೋಷವಿಲ್ಲದ ನನ್ನನ್ನು ದುಷ್ಟಳನ್ನಾಗಿ ತಿಳಿದಿರುವುದರಿಂದ ಶೀಘ್ರವಾಗಿ ಮನುಷ್ಯ ಸ್ತ್ರೀಯಾಗಿ ದುಃಖಪಡು ಎಂದು ಶಪಿಸಿದಳು.

೨೯. ಅನಂತರ ನಾಗೋತ್ತಮನಾದ ತಕ್ಷಕನು ಆ ಬ್ರಾಹ್ಮಣಿಯನ್ನು ಕರೆದುಕೊಂಡುಹೋಗಿ ಅರ್ಧರಾತ್ರಿವೇಳೆ ಕೇದಾರಾಲಯದಲ್ಲಿ ಬಿಟ್ಟನು.

೩೦. ಅನಂತರ ತಕ್ಷಕನು ಆ ಬ್ರಾಹ್ಮಣಿಯನ್ನು ಕುರಿತು ಕೈಮುಗಿದುಕೊಂಡು ಪತಿವ್ರತೆಯೆ! ನನ್ನ ಶಾಪವನ್ನು ಕೊನೆಗಾಣಿಸು. ಅದರಿಂದ ನಾನು ನನ್ನ ಮನೆಗೆ ಹೋಗುತ್ತೇನೆ ಎಂದನು.

೩೧. ಭಟ್ಟಿಕೆಯು ಹೇಳುತ್ತಾಳೆ:—ತಕ್ಷಕ! ನೀನು ಸೌರಾಷ್ಟ್ರ ದೇಶದಲ್ಲಿ ಭೋಗಗಳಿಗೆ ಆಶ್ರಯನಾದ ರೈವತಕನೆಂಬ ರಾಜನಾಗುವೆ.

೩೨. ಬಳಿಕ ನೀನು ಕ್ಷೇತ್ರದಲ್ಲಿ ಆಶ್ರಮದ ನಡುವೆ ಶರೀರವನ್ನು ತ್ಯಜಿಸಿ ಆ ಕ್ಷೇತ್ರದ ಸಾಮರ್ಥ್ಯದಿಂದ ನಿನ್ನ ಸ್ಥಳವನ್ನು ಸೇರುವೆ.

೩೩. ತಕ್ಷಕನು ಹೇಳುತ್ತಾನೆ:—ನಿನ್ನಿಂದ ಶಾಪವನ್ನು ಹೊಂದಿದ ನನ್ನ ಪ್ರಿಯಪತ್ನಿಯು ಮನುಷ್ಯ ಜನ್ಮದಲ್ಲಿಯೂ ನನಗೆ ಭಾರ್ಯೆಯಾಗಲಿ.

೩೪. ಬೇಡುತ್ತಿರುವ ದೀನನಾದ ನನಗೆ ಹೀಗೆ ಅನುಗ್ರಹಮಾಡು. ಈ ನನ್ನ ಪತ್ನಿಗೆ ಅನ್ಯಪುರುಷರ ಸಂಗಮವಾಗದಿರಲಿ.

ಭಟ್ಟಿಕೋವಾಚ :—

ಆನರ್ತಾಧಿಪತೇರೇಷಾ ಭವಿತ್ರೀ ದುಹಿತಾ ಶುಭಾ ।
ತತಃ ಪಾಣಿಗ್ರಹಂ ಪ್ರಾಪ್ಯ ಭಾರ್ಯಾ ತವ ಭವಿಷ್ಯತಿ ॥ ೩೫ ॥
ಕ್ಷೇಮಂಕರೀತಿ ವಿಖ್ಯಾತಾ ರೂಪಯೌವನಶಾಲಿನೀ ।
ತ್ವಯಾ ಸಾರ್ಧಂ ಬಹೂನ್ ಭೋಗಾನ್ ಭುಕ್ತ್ವಾಽಥ ಪೃಥಿವೀತಲೇ ।
ಪರಲೋಕೇ ಪುನಸ್ತ್ವಾಂ ವೈ ಚಾಽನುಯಾಸ್ಯತಿ ಶೋಭನಾ ॥ ೩೬ ॥

ಸೂತ ಉವಾಚ :—

ಏವಂ ಚ ಸ ತಯಾ ಪ್ರೋಕ್ತಃ ಕ್ಷಮ್ಯತಾಮಿತಿ ಸಾದರಂ ।
ಪ್ರಣಿಪತ್ಯ ಜಗಾಮಾಽಥ ನಿಜಂ ಸ್ಥಾನಂ ಪ್ರಹರ್ಷಿತಃ ॥ ೩೭ ॥
ಸಾಽಪಿ ಪ್ರಾಪ್ತೇ ನಿಶಾಶೇಷೇ ಕೇದಾರಸ್ಯ ಪುರಃ ಸ್ಥಿತಾ ।
ಪುನಶ್ಚಕ್ರೇ ಚ ತದ್ಗೀತಂ ಶ್ರುತಿಸೌಖ್ಯಕರಂ ಪರಂ ॥ ೩೮ ॥
ಅಥ ತಸ್ಯ ಸಮಾಯಾತಾಃ ಕೇದಾರಸ್ಯ ದಿದೃಕ್ಷವಃ ।
ಪುನಃ ಕೇದಾರಭಕ್ತ್ಯಾಢ್ಯಾ ಬ್ರಾಹ್ಮಣಾಃ ಶತಶಃ ಪರಂ ॥ ೩೯ ॥
ತೇ ತಾಂ ದೃಷ್ಟ್ವಾ ಸಮಾಯಾತಾಂ ಭಟ್ಟಿಕಾಂ ತಾಂ ದ್ವಿಜೋದ್ಭವಾಂ ।
ವಿಸ್ಮಯೇನ ಸಮಾಯುಕ್ತಾಃ ಪಪ್ರಚ್ಛುಸ್ತದನಂತರಂ ॥ ೪೦ ॥
ಕೋಽಸೌ ಬ್ರಾಹ್ಮಣರೂಪೇಣ ನಾಗಃಪ್ರಾಪ್ತಃ ಸುಶೋಭನೇ ।
ತೇನ ತ್ವಂ ಕುತ್ರ ನೀತಾಽಸಿ ಕಿಮರ್ಥಂ ಚ ವದಸ್ವ ಸಃ ॥ ೪೧ ॥

---

೩೫. ಭಟ್ಟಿಕೆಯು ಹೇಳುತ್ತಾಳೆ:—ಇವಳು ಆನರ್ತದೇಶದ ದೊರೆಯ ಮಗಳಾಗಿ ಜನಿಸಿ ನಿನ್ನ ಕೈಯನ್ನು ಹಿಡಿದು ಪತ್ನಿಯಾಗುವಳು.

೩೬. ರೂಪಯೌವನಗಳಿಂದ ಕಂಗೊಳಿಸುವ ಇವಳು ಕ್ಷೇಮಂಕರೀ ಎಂದು ವಿಖ್ಯಾತಳಾಗಿ ಭೂಮಿಯಲ್ಲಿ ನಿನ್ನೊಡನೆ ಬಹು ಭೋಗಗಳನ್ನನುಭವಿಸಿ ಪರ ಲೋಕದಲ್ಲಿ ನಿನ್ನನ್ನು ತಿರುಗಿ ಸೇರುವಳು.

೩೭. ಸೂತನು ಹೇಳುತ್ತಾನೆ:—ಅವಳು ಹೀಗೆ ಹೇಳಲು ಆ ತಕ್ಷಕನು ಕ್ಷಮಿಸೆಂದು ಹೇಳಿ ನಮಸ್ಕರಿಸಿ ಸಂತೋಷದಿಂದ ತನ್ನ ಸ್ಥಾನಕ್ಕೆ ತೆರಳಿದನು.

೩೮–೩೯. ಆ ಭಟ್ಟಿಕೆಯೂ ಬೆಳಗ್ಗೆ ಕೇದಾರನ ಮುಂದೆ ನಿಂತು ಮರಳಿ ಕಿವಿಗೆ ಇಂಪಾದ ಸಂಗೀತವನ್ನು ಹಾಡಿದಳು. ಬಳಿಕ ಕೇದಾರನ ಭಕ್ತರಾದ ನೂರಾರು ಮಂದಿ ಬ್ರಾಹ್ಮಣರು ನೋಡಲು ಅಲ್ಲಿಗೆ ಬಂದರು.

೪೦. ಅವರು ಆ ಬ್ರಾಹ್ಮಣತನಯಳಾದ ಭಟ್ಟಿಕೆಯನ್ನು ಕಂಡು ಆಶ್ಚರ್ಯ ದಿಂದ ಪ್ರಶ್ನಿಸಿದರು.

೪೧. ಮಂಗಳಕರಳೆ! ಇಲ್ಲಿಗೆ ಬ್ರಾಹ್ಮಣರೂಪದಿಂದ ಬಂದ ನಾಗನಾರು? ಅವನು ನಿನ್ನನ್ನು ಎಲ್ಲಿಗೆ, ಏತಕ್ಕೆ ತೆಗೆದುಕೊಂಡು ಹೋದನು? ಅದನ್ನು ನಮಗೆ ಹೇಳು.

ಕಸ್ಮಾತ್ತ್ವನಃ ಪ್ರಮುಕ್ತಾಽಸಿ ಸರ್ವಂ ವದ ಯಥಾತಥಂ ।
ಅತ್ರ ನಃ ಕೌತುಕಂ ಜಾತಂ ಸುಮಹತ್ತ್ವನ ಕಾರಣಾತ್ ॥ ೪೨ ॥
ಸೂತ ಉವಾಚ :—
ತತಃ ಸಾ ಕಥಯಾಮಾಸ ಸರ್ವಂ ತಕ್ಷಕಸಂಭವಂ ।
ವೃತ್ತಾಂತಂ ನಾಗಸಂಭೂತಂ ಶಾಪಾಽನುಗ್ರಹಜಂ ತಥಾ ॥ ೪೩ ॥
ಏತಸ್ಮಿನ್ನಂತರೇ ಪ್ರಾಪ್ತಂ ಸರ್ವಂ ತಸ್ಯಾಃ ಕುಟುಂಬಕಂ ।
ರೋರೂಯಮಾಣಂ ದುಃಖಾರ್ತಂ ಶ್ರುತ್ವಾ ತಾಂ ತತ್ರ ಚಾಽಽಗತಾಂ॥೪೪॥
ಅಥ ಸಾ ಜನನೀ ತಸ್ಯಾ ಬಾಷ್ಪಪರ್ಯಾಕುಲೇಕ್ಷಣಾ ।
ಸಸ್ವಜೇ ತಾಂ ತಥಾ ಚಾನ್ಯಾಃ ಸಖ್ಯಃ ಸ್ನಿಗ್ಧೇನ ಚೇತಸಾ ॥ ೪೫ ॥
ತತೋ ನಿನ್ಯುರ್ಗೃಹಂ ಸ್ವಂ ಚ ಶೃಣ್ವಂತಶ್ಚ ಮುಹುರ್ಮುಹುಃ ।
ನಾಗಲೋಕೋದ್ಭವಾಂ ವಾರ್ತಾಂ ವಿಸ್ಮಯಾವಿಷ್ಟಚೇತಸಃ ॥ ೪೬ ॥
ಅಥ ತತ್ರ ಪುರೇ ಪೌರಾಃ ಸರ್ವೇ ಪ್ರೋಚುಃ ಪರಸ್ಪರಂ ।
ಅಯುಕ್ತಂ ಕೃತಮೇತೇನ ಬ್ರಾಹ್ಮಣೇನ ದುರಾತ್ಮನಾ ॥ ೪೭ ॥
ಯದಾನೀತಾ ಸುತರುಣೀ ಪರಹರ್ಮ್ಯೇಷಿತಾ ಸುತಾ ।
ಅನ್ಯೇಷಾಮಪಿ ವಿಪ್ರಾಣಾಂ ಸಂತಿ ನಾರ್ಯೋಹ್ಯನೇಕಶಃ ॥ ೪೮ ॥

---

೪೨. ಮರಳಿ ಅವನು ನಿನ್ನನ್ನು ಏತಕ್ಕೆ ಬಿಟ್ಟನು? ಎಲ್ಲವನ್ನೂ ನಡೆದಂತೆಯೇ ಹೇಳು. ನಿನ್ನ ವಿಷಯದಲ್ಲಿ ನಮಗೆ ಬಹಳ ಕುತೂಹಲವುಂಟಾಗಿದೆ.

೪೩. ಸೂತನು ಹೇಳುತ್ತಾನೆ:—ಬಳಿಕ ಅವಳು ತಕ್ಷಕನ ಎಲ್ಲಾ ವೃತ್ತಾಂತವನ್ನೂ, ಶಾಪಾನುಗ್ರಹಸಮಾಚಾರವನ್ನೂ ಹೇಳಿದಳು.

೪೪. ಈ ಸಮಯದಲ್ಲಿ ಈ ಸಮಾಚಾರವನ್ನೂ ಕೇಳಿ ದುಃಖಗೊಂಡ ಅವಳ ಕುಟುಂಬದವರೆಲ್ಲ ಅಲ್ಲಿಗೆ ಬಂದರು.

೪೫. ಅವಳ ತಾಯಿಯು ಕಣ್ಣೀರನ್ನು ಸುರಿಸುತ್ತ ಅವಳನ್ನುತಬ್ಬಿಕೊಂಡಳು. ಇತರ ಸಖಿಯರೂ ಸ್ನೇಹದಿಂದ ಆಲಿಂಗಿಸಿದರು.

೪೬. ಬಳಿಕ ನಾಗಲೋಕದ ವಾರ್ತೆಯನ್ನು ಕೇಳಿ ಆಶ್ಚರ್ಯಗೊಂಡವರಾಗಿ ಪುನಃ ಪುನಃ ಕೇಳುತ್ತ ಅವಳನ್ನು ಮನೆಗೆ ಕರೆದುಕೊಂಡು ಹೋದರು.

೪೭—೪೮. ಅನಂತರ ಆ ಪಟ್ಟಣದ ಜನರೆಲ್ಲರೂ ಪರಸ್ಪರವಾಗಿ ಹೀಗೆ ಹೇಳಿದರು. ಈ ದುಷ್ಟ ಬ್ರಾಹ್ಮಣನು ಇತರರ ಮನೆಯಲ್ಲಿ ವಾಸಮಾಡಿದ ಯುವತಿಯಾದ ಮಗಳನ್ನು ಮನೆಗೆ ಮರಳಿ ಕರೆತಂದು ದುಷ್ಕಾರ್ಯವನ್ನು ಮಾಡಿದ್ದಾನೆ. ಇಲ್ಲಿ ಇತರ ಬ್ರಾಹ್ಮಣರಿಗೂ ಅನೇಕ ಮಂದಿ ಹೆಣ್ಣು ಮಕ್ಕಳಿದ್ದಾರೆ.

ತರುಣ್ಯೋ ರೂಪವತ್ಯಶ್ಚ ವೈಧವ್ಯೇನ ಸಮನ್ವಿತಾಃ ।
ತಾಸಾಮಪಿ ಚ ಸರ್ವಾಸಾಮೇಷ ನ್ಯಾಯೋ ಭವಿಷ್ಯತಿ ।
ಯೋನಿಸಂಕರಜೋ ನೂನಂ ತಸ್ಮಾನ್ನಿರ್ವಾಸ್ಯತಾಮಿತಿ ॥ ೪೯ ॥
ಏಕೀಭೂಯ ತತಃ ಸರ್ವೇ ಬ್ರಾಹ್ಮಣಂ ತಂ ದ್ವಿಜೋತ್ತಮಾಃ ।
ಸಾಮಪೂರ್ವಮಿದಂ ವಾಕ್ಯಂ ಪ್ರೋಚುಃ ಶಾಸ್ತ್ರಸಮುದ್ಭವಂ ॥ ೫೦ ॥
ಏಷಾ ತವ ಸುತಾ ವಿಪ್ರ ತರುಣೀ ರೂಪಸಂಯುತಾ ।
ಸಾಽನುರಾಗೇಣ ನಾಗೇನ ಪಾತಾಲೇ ಚ ಸಮಾಹೃತಾ ॥ ೫೧ ॥
ತದ್ವಕ್ಷ್ಯತಿ ಪ್ರಮುಕ್ತಾಽಹಂ ನಿರ್ದೋಷಾ ತೇನ ರಾಗಿಣಾ ।
ನ ಶ್ರದ್ಧಾಂ ಯಾತಿ ಲೋಕೋಽಯಂ ಶುದ್ಧೈಷಾ ಸಮುದಾಹೃತಾ ॥ ೫೨ ॥
ತಸ್ಮಾಚ್ಛುದ್ಧಿಂ ದ್ವಿಜೇಂದ್ರಾಣಾಂ ಪ್ರಯಚ್ಛತು ದ್ವಿಜೋತ್ತಮ ।
ಯೇನಾಽನ್ಯೇಷಾಮಪಿ ಪ್ರಾಜ್ಞ ವಿನಶ್ಯಂತಿ ನ ಯೋಷಿತಃ ॥ ೫೩ ॥
ಬಾಢಮಿತ್ಯೇವ ಸ ಪ್ರೋಕ್ತ್ವಾ ತತಸ್ತಾಂ ವಿಜನೇ ಸುತಾಂ ।
ಪಪ್ರಚ್ಛ ಯದಿ ತೇ ದೋಷಃ ಕಶ್ಚಿದಸ್ತಿ ಪ್ರಕೀರ್ತಯ ॥ ೫೪ ॥
ನೋ ಚೇತ್ಪ್ರಯಚ್ಛ ಸಂಶುದ್ಧಿಂ ಬ್ರಾಹ್ಮಣಾನಾಂ ಪ್ರತುಷ್ಟಯೇ ॥ ೫೫ ॥

---

೪೯. ತರುಣಿಯರೂ, ಸುಂದರಿಯರೂ, ವಿಧವೆಯರೂ ಆದ ಅವರಿಗೆ ಇದೇ ಜಾತಿ ಸಾಂಕರ್ಯ ನ್ಯಾಯವು ಸಂಬಂಧಿಸುವುದು. ಆದುದರಿಂದ ಇವಳನ್ನು ಮನೆಯಿಂದ ಹೊರಡಿಸಬೇಕು.

೫೦. ಅನಂತರ ಆ ಬ್ರಾಹ್ಮಣರೆಲ್ಲ ಒಂದುಗೂಡಿ ಆ ಬ್ರಾಹ್ಮಣನನ್ನು ಕುರಿತು ಸಮಾಧಾನದಿಂದ ಶಾಸ್ತ್ರಸಂಬಂಧವಾದ ಈ ಮಾತನ್ನು ಹೇಳಿದರು.

೫೧. ಬ್ರಾಹ್ಮಣ! ಸುಂದರಿಯೂ, ತರುಣಿಯೂ ಆದ ಈ ನಿನ್ನ ಮಗಳನ್ನು ಕಾಮೋದ್ರಿಕ್ತನಾದ ನಾಗರಾಜನು ಪಾತಾಳಕ್ಕೆ ಕರೆದುಕೊಂಡು ಹೋದನು.

೫೨. ಇವಳು ಆ ನಾಗನು ನನ್ನನ್ನು ಬಿಟ್ಟನು. ನಾನು ದೋಷವಿಲ್ಲದವಳು ಎನ್ನುತ್ತಾಳೆ. ಇವಳು ನಾನು ಶುದ್ಧಳು ಎಂದು ಹೇಳುವುದನ್ನು ಜನರು ನಂಬುವುದಿಲ್ಲ.

೫೩. ಬ್ರಾಹ್ಮಣೋತ್ತಮ! ಆದುದರಿಂದ ಇವಳು ತನ್ನ ಶುದ್ಧಿಯ ವಿಷಯದಲ್ಲಿ ನಂಬಿಕೆಯನ್ನು ಉಂಟುಮಾಡಲಿ. ಅದರಿಂದ ಇತರ ಹೆಂಗಸರು ಕೆಡುವುದಿಲ್ಲ.

೫೪–೫೫. ಆ ಬ್ರಾಹ್ಮಣನು ಹಾಗೆಯೇ ಆಗಲೆಂದು ಹೇಳಿ ತನ್ನ ಮಗಳನ್ನು ಕುರಿತು ನಿನ್ನಲ್ಲಿ ಯಾವುದಾದರೂ ದೋಷವಿದ್ದರೆ ಹೇಳು. ಇಲ್ಲದಿದ್ದರೆ ಬ್ರಾಹ್ಮಣರ ಸಂತೋಷಕ್ಕಾಗಿ ಶುದ್ಧಿಯ ವಿಷಯದಲ್ಲಿ ಆಧಾರಗಳನ್ನು ಕೊಡು.

ಭಟ್ಟಿಕೋವಾಚ :—

ಯುಕ್ತಮುಕ್ತಂ ತ್ವಯಾ ತಾತ ತಥಾಽನ್ಯೈರಪಿ ಚ ದ್ವಿಜೈಃ ।
ಯುಕ್ತಾ ಸ್ಯಾದ್ಯೋಷಿತಃ ಶುದ್ಧಿರ್ದಾರಾತಿಕ್ರಮಣಾದಪಿ ॥ ೫೬ ॥
ಕಿಂ ಪುನಃ ಪರದೇಶಂ ಚ ಗತಾಯಾ ರಾಗಿಣಾ ಸಹ ।
ತಸ್ಮಾದಹಂ ನ ಸಂದೇಹಃ ಪ್ರಾತಃ ಸ್ನಾತಾ ಹುತಾಶನಂ ॥ ೫೭ ॥
ಪ್ರವಿಶ್ಯ ಸರ್ವವಿಪ್ರಾಣಾಂ ಶುದ್ಧಿಂ ದಾಸ್ಯಾಮ್ಯಸಂಶಯಂ ।
ಅಹಮನ್ನಂ ಚ ಪಾನಂ ಚ ಯಚ್ಚಾಽನ್ಯದಪಿ ಕಿಂಚನ ।
ಪ್ರಾಶಯಿಷ್ಯಾಮಿ ಸಂಪ್ರಾಪ್ಯ ಶುದ್ಧಿಂ ಚೈವ ಹುತಾಶನಾತ್ ॥ ೫೮ ॥
ಏವಮುಕ್ತಸ್ತಯಾ ಸೋಽಥ ಹರ್ಷೇಣ ಮಹತಾನ್ವಿತಃ ।
ಪ್ರಾತರುತ್ಥಾಯ ದಾರೂಣಿ ಪುರಬಾಹ್ಯೇ ನ್ಯಯೋಜಯತ್ ॥ ೫೯ ॥
ಭಟ್ಟಿಕಾಽಪಿ ತತಃ ಸ್ನಾತ್ವಾ ಶುಕ್ಲಾಂಬರಧರಾ ಶುಚಿಃ ।
ಸರ್ವೈಃ ಪರಿಜನೈಃ ಸಾರ್ಧಂ ತಥಾ ನಿಜಕುಟುಂಬಕೈಃ ॥ ೬೦ ॥
ಪ್ರಸನ್ನವದನಾ ಹೃಷ್ಟಾ ವಿಷ್ಣುಧ್ಯಾನಪರಾಯಣಾ ।
ಜಗಾಮ ತತ್ರ ಯತ್ರಾಸ್ತೇ ಸುಮಹಾನ್ ದಾರುಪರ್ವತಃ ॥ ೬೧ ॥
ತತೋ ವಹ್ನಿಂ ಸಮಾಧಾಯ ಸ್ವಯಂ ತತ್ರ ದ್ವಿಜೋತ್ತಮಾಃ ।
ಪ್ರದಕ್ಷಿಣಾತ್ರಯಂ ಕೃತ್ವಾ ಪ್ರಾಹ ಚೈವ ಕೃತಾಂಜಲಿಃ ॥ ೬೨ ॥

---

೫೬. ಭಟ್ಟಿಕೆಯು ಹೇಳುತ್ತಾಳೆ:—ಅಪ್ಪ! ನೀನೂ, ಇತರ ಬ್ರಾಹ್ಮಣರೂ ಉಚಿತವಾದ ಮಾತನ್ನಾಡಿದ್ದೀರಿ. ದಾರಿತಪ್ಪಿದ ಸ್ತ್ರೀ ಜನರಿಗೇ ಶುದ್ಧಿಯು ಉಚಿತವಾದುದು.

೫೭–೫೮. ಕಾಮಿಯೊಡನೆ ಪರದೇಶಕ್ಕೆ ಹೋದ ಸ್ತ್ರೀಯ ವಿಷಯದಲ್ಲಿ ಏನು ಹೇಳತಕ್ಕುದು. ಆದುದರಿಂದ ನಾನು ಬೆಳಗ್ಗೆ ಮಿಂದು ನಿಶ್ಚಯವಾಗಿಯೂ ಸಮಸ್ತ ಬ್ರಾಹ್ಮಣರಿಗೆ ಶುದ್ಧಿಯ ವಿಷಯದಲ್ಲಿ ನಂಬಿಕೆಯನ್ನು ಹುಟ್ಟಿಸುವೆನು. ನಾನು ಹಾಗೆ ಶುದ್ಧಳಾದಮೇಲೆ ಅನ್ನಪಾನಗಳನ್ನೂ, ಇತರ ವಸ್ತುಗಳನ್ನೂ ಸ್ವೀಕರಿಸುವೆನು.

೫೯. ಅವಳು ಹೀಗೆ ಹೇಳಲು ತಂದೆಯು ಬಹಳ ಸಂತೋಷಗೊಂಡು ಬೆಳಗ್ಗೆ ಎದ್ದು ಊರಿನ ಹೊರಗೆ ಕಟ್ಟಿಗೆಗಳನ್ನು ಜೋಡಿಸಿಟ್ಟನು.

೬೦–೬೧. ಭಟ್ಟಿಕೆಯೂ ಮಿಂದು ಶುದ್ಧಳಾಗಿ ಬಿಳಿ ಬಟ್ಟೆಯನ್ನುಟ್ಟು ನಗು ಮುಖದಿಂದ ವಿಷ್ಣುವನ್ನು ಧ್ಯಾನಿಸುತ್ತ ಸಮಸ್ತ ಪರಿಜನರು ಮತ್ತು ಕುಟುಂಬದವರೊಡನೆ ಕಟ್ಟಿಗೆಯ ರಾಶಿ ಇರುವ ಕಡೆಗೆ ಹೋದಳು.

೬೨. ದ್ವಿಜವರ್ಯರೆ! ಬಳಿಕ ಅವಳು ಅಲ್ಲಿ ತಾನೇ ಅಗ್ನಿಯನ್ನು ಪ್ರಜ್ವಲಿಸಿ ಮೂರು ಪ್ರದಕ್ಷಿಣೆಮಾಡಿ ಕೈ ಮುಗಿದುಕೊಂಡು ಹೀಗೆಂದಳು.

ಯದಿ ಮೇಽಸ್ತಿ ಕ್ವಚಿದ್ದೋಷಃ ಕಾಮಜೋಽಲ್ಪೋಽಪಿ ಗಾತ್ರಕೇ ।
ಕೃತೋ ವಾಽಪಿ ಬಲಾತ್ತೇನ ತಕ್ಷಕೇಣ ದುರಾತ್ಮನಾ ॥ ೬೩ ॥
ಅನ್ಯೇನಾಽಪಿ ಚ ಕೇನಾಽಪಿ ಭವಿಷ್ಯತ್ಯಥವಾ ಪರಃ ।
ತಸ್ಮಾತ್ಪ್ರದಹತು ಕ್ಷಿಪ್ರಂ ಸಮಿದ್ಧೋಽಯಂ ಹುತಾಶನಃ ॥ ೬೪ ॥
ಏವಮುಕ್ತ್ವಾಽಥ ಸಾ ಸಾಧ್ವೀ ಪ್ರವಿಷ್ಟಾ ನಿಜಹರ್ಮ್ಯವತ್ ।
ಸುಸಮಿದ್ಧೋ ಹುತೋ ವಹ್ನಿರ್ಜಾತೋ ಜಲಮಯಃ ಕ್ಷಣಾತ್ ॥ ೬೫ ॥
ಸಾ ಚ ಪಶ್ಯತಿ ಚಾತ್ಮಾನಂ ಜಲಮಧ್ಯಗತಾಂ ಶುಭಾ ।
ಪಪಾತಾಽಥ ಮಹಾವೃಷ್ಟಿಃ ಕುಸುಮಾನಾಂ ನಭಸ್ತಲಾತ್ ॥ ೬೬ ॥
ದೇವದೂತೋ ವಿಮಾನಸ್ಥ ಇದಂ ವಾಕ್ಯಮುವಾಚ ಹ ।
ಶುದ್ಧಾಽಸಿ ತ್ವಂ ಮಹಾಭಾಗೇ ಚಾರಿತ್ರೈರ್ನಿಜಗಾತ್ರಜೈಃ ॥ ೬೭ ॥
ನ ತ್ವಯಾ ಸದೃಶೀ ಚಾಽನ್ಯಾ ಕಾಚಿನ್ನಾರೀ ಭವಿಷ್ಯತಿ ।
ತಿಸ್ರಃ ಕೋಟ್ಯೋಽರ್ಧಕೋಟೀ ಚ ಯಾನಿ ಲೋಮಾನಿ ಮಾನುಷೇ ।
ಪ್ರಭವಂತಿ ಮಹಾಭಾಗೇ ಸರ್ವಗಾತ್ರೇಷು ಸರ್ವದಾ ॥ ೬೮ ॥
ತೇಷಾಂ ಮಧ್ಯೇ ನ ತೇ ಸಾಧ್ವಿ ಪಾಪಮೇಕಮಪಿ ಕ್ವಚಿತ್ ।
ತಸ್ಮಾಚ್ಛೀಘ್ರಂ ಗೃಹಂ ಗಚ್ಛ ನಿಜಂ ಬಾಂಧವಸಂಯುತಾ ॥ ೬೯ ॥

---

೬೩–೬೪. ನನ್ನ ಶರೀರದಲ್ಲಿ ದುಷ್ಟನಾದ ತಕ್ಷಕನು ಅಥವಾ ಬೇರೆ ಯಾರಾದರೂ ಮಾಡಿದ ಕಾಮದ ದೋಷವಾಗಲಿ, ಇತರ ದೋಷವಾಗಲಿ ಇದ್ದರೆ ಉರಿಯುತ್ತಿರುವ ಬೆಂಕಿಯು ನನ್ನನ್ನು ಸುಡಲಿ.

೬೫. ಆ ಪತಿವ್ರತೆಯು ಹೀಗೆ ಹೇಳಿ ಆ ಬೆಂಕಿಯನ್ನು ತನ್ನ ಮನೆಯಂತೆ ಪ್ರವೇಶಿಸಿದಳು. ಅತ್ಯಂತ ಜ್ವಲಿಸುತ್ತಿರುವ ಬೆಂಕಿಯು ಕೂಡಲೆ ನೀರಿನಂತಾಯಿತು.

೬೬. ಅವಳು ತಾನು ನೀರಿನ ಮಧ್ಯದಲ್ಲಿರುವೆನೆಂದು ತಿಳಿದಳು. ಅನಂತರ ಆಕಾಶದಿಂದ ಪುಷ್ಪವೃಷ್ಟಿಯಾಯಿತು.

೬೭. ವಿಮಾನಾರೂಢನಾದ ದೇವದೂತನು ಇಂತೆಂದನು. ಭಾಗ್ಯವಂತಳೆ! ನೀನು ಶರೀರದ ನಡತೆಗಳಿಂದ ಶುದ್ಧಳಾಗಿದ್ದೀಯೆ.

೬೮. ಯಾವ ಹೆಂಗಸೂ ನಿನಗೆ ಸಮಾನಳಾಗುವುದಿಲ್ಲ. ಮನುಷ್ಯಶರೀರದಲ್ಲಿ ಮೂರೂವರೆಕೋಟಿ ಕೂದಲುಗಳು ಇರುವುವು.

೬೯. ಪತಿವ್ರತೆಯೆ! ನಿನ್ನ ಶರೀರದಲ್ಲಿರುವ ಆ ಕೂದಲುಗಳಲ್ಲಿ ಒಂದೂ ಪಾಪವುಳ್ಳದ್ದಾಗಿಲ್ಲ. ಆದುದರಿಂದ ನೀನು ಶೀಘ್ರವಾಗಿ ಬಂಧುಗಳೊಡನೆ ಮನೆಗೆ ಹೋಗು.

ಕುರು ಕೃತ್ಯಾನಿ ಪುಣ್ಯಾನಿ ಸಮಾರಾಧಯ ಕೇಶವಂ ।
ಏತಚ್ಚೈವ ಚಿತೇಃ ಸ್ಥಾನಂ ತ್ವದೀಯಂ ಜಲಪೂರಿತಂ ॥ ೨೦ ॥
ತವ ನಾಮ್ನಾ ಸುವಿಖ್ಯಾತಂ ತೀರ್ಥಂ ಲೋಕೇ ಭವಿಷ್ಯತಿ ।
ಯೇಽತ್ರ ಸ್ನಾನಂ ಕರಿಷ್ಯಂತಿ ಶಯನೇ ಬೋಧನೇ ಹರೇಃ ॥ ೨೧ ॥
ತೇ ಯಾಸ್ಯಂತಿ ಪರಾಂ ಸಿದ್ಧಿಂ ದುಷ್ಪ್ರಾಪ್ಯಾ ಯಾಽಮರೈರಪಿ ।
ಉಕ್ತ್ವೈವಂ ವಿರತಾ ವಾಣೀ ದೇವದೂತಸಮುದ್ಭವಾ ॥ ೨೨ ॥
ಭಟ್ಟಿಕಾ ತು ತತೋ ಹೃಷ್ಟಾ ಪ್ರಣಮ್ಯ ಜನಕಂ ನಿಜಂ ।
ನಾಽಹಂ ಗೃಹಂ ಗಮಿಷ್ಯಾಮಿ ಕಿಂ ಕರಿಷ್ಯಾಮ್ಯಹಂ ಗೃಹೇ ॥ ೨೩ ॥
ಅತ್ರೈವಾಽಽರಾಧಯಿಷ್ಯಾಮಿ ನಿಜತೀರ್ಥೇ ಸದಾಽಚ್ಯುತಂ ।
ತಥಾ ತಪಃ ಕರಿಷ್ಯಾಮಿ ಭಿಕ್ಷಾನ್ನಕೃತಭೋಜನಾ ॥ ೨೪ ॥
ತಸ್ಮಾತ್ತಾತ ಗೃಹಂ ಗಚ್ಛ ಸ್ಥಿತಾಽಹಂ ಚಾಽತ್ರ ಸಂಶ್ರಯೇ ॥ ೨೫ ॥
ತತಃ ಸ ಜನಕಸ್ತಸ್ಯಾಸ್ತೇ ಚಾಽಪಿ ಪುರವಾಸಿನಃ ।
ಸಂಪ್ರಹೃಷ್ಟಾ ಗೃಹಃ ಜಗ್ಮುಃ ಶಂಸಂತಸ್ತಾಂ ಪೃಥಕ್ ಪೃಥಕ್ ॥ ೨೬ ॥
ತಯಾ ತ್ರೈವಿಕ್ರಮೀ ತತ್ರ ಪ್ರತಿಮಾ ಪ್ರಾಗ್ವಿನಿರ್ಮಿತಾ ।
ಪಶ್ಚಾನ್ಮಾಹೇಶ್ವರಂ ಲಿಂಗಂ ಕೃತ್ವಾ ಪ್ರಾಸಾದಮುತ್ತಮಂ ॥ ೨೭ ॥

---

೨೦–೨೨. ನೀನು ಪುಣ್ಯಕಾರ್ಯಗಳನ್ನೆಸಗು. ಕೇಶವನನ್ನಾರಾಧಿಸು. ನೀರಿನಿಂದ ತುಂಬಿರುವ ಈ ನಿನ್ನ ಚಿತಿಯ ಸ್ಥಾನವು ಲೋಕದಲ್ಲಿ ನಿನ್ನ ಹೆಸರಿನಿಂದ ವಿಖ್ಯಾತವಾದ ತೀರ್ಥವಾಗುವುದು. ಶಯನದ್ವಾದಶೀ ಮತ್ತು ಉತ್ಥಾನದ್ವಾದಶೀ ದಿನ ಇಲ್ಲಿ ಮಿಂದವರು ದೇವತೆಗಳಿಗೆ ಹೊಂದಲಾಗದ ಉತ್ತಮಸಿದ್ಧಿಯನ್ನು ಪಡೆಯುವರು. ಹೀಗೆ ಹೇಳಿ ದೇವದೂತನ ವಾಣಿಯು ಸುಮ್ಮನಾಯಿತು.

೨೩. ಭಟ್ಟಿಕೆಯು ಅನಂತರ ಸಂತೋಷಗೊಂಡವಳಾಗಿ ತನ್ನ ತಂದೆಯನ್ನು ನಮಸ್ಕರಿಸಿ ನಾನು ಮನೆಗೆ ಹೋಗುವುದಿಲ್ಲ. ಅಲ್ಲಿ ನಾನು ಏನನ್ನು ಮಾಡಲಿ?

೨೪. ನನ್ನೀತೀರ್ಥದಲ್ಲಿಯೇ ಯಾವಾಗಲೂ ವಿಷ್ಣುವನ್ನು ಪೂಜಿಸುವೆನು. ಹಾಗೆಯೇ ಭಿಕ್ಷಾನ್ನವನ್ನು ತಿಂದು ತಪವನ್ನಾಚರಿಸುವೆನು.

೨೫. ತಂದೆಯೆ! ಆದುದರಿಂದ ನೀನು ಮನೆಗೆ ಹೋಗು. ನಾನಿಲ್ಲಿ ನೆಲೆಸುವೆನು.

೨೬. ಬಳಿಕ ಅವಳ ತಂದೆಯೂ, ಆ ಪಟ್ಟಣಿಗರೂ ಸಂತೋಷಗೊಂಡು ಅವಳನ್ನು ಹೊಗಳುತ್ತ ಮನೆಗೆ ಹೋದರು.

೨೭. ಆ ಭಟ್ಟಿಕೆಯು ಮೊದಲು ತ್ರಿವಿಕ್ರಮನ ಪ್ರತಿಮೆಯನ್ನೂ, ಅನಂತರ ಮಾಹೇಶ್ವರಲಿಂಗವನ್ನೂ ನಿರ್ಮಿಸಿ ಉತ್ತಮವಾದ ದೇವಾಲಯವನ್ನೂ ಕಟ್ಟಿಸಿದಳು.

ತತಃ ಪರಂ ತಪಶ್ಚಕ್ರೇ ಭಿಕ್ಷಾನ್ನಕೃತಭೋಜನಾ ।
ಶಂಸ್ಯಮಾನಾ ಜನೈಃ ಸರ್ವೈಶ್ಚಮತ್ಕಾರಪುರೋದ್ಭವೈಃ ॥ ೭೮ ॥

ಸೂತ ಉವಾಚ:—

ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಯಥಾ ತಸ್ಯಾ ದೃಢಂ ಕಾಯಮಭೇದ್ಯಂ ಸಂಸ್ಥಿತಂ ಸದಾ ॥ ೭೯ ॥
ಸರ್ಪಾಣಾಂ ಚ ತಥಾಽನ್ಯೇಷಾಂ ಶಸ್ತ್ರಾದೀನಾಮಪಿ ದ್ವಿಜಾಃ ।
ಯಶ್ಚೈತತ್ಪಠತೇ ನಿತ್ಯಂ ಭಟ್ಟಿಕಾಖ್ಯಾನಮುತ್ತಮಂ ।
ನಾಽಪವಾದೋ ಭವೇತ್ತಸ್ಯ ಕುಕೃತೋ ದ್ವಿಜಸತ್ತಮಾಃ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಭಟ್ಟಿಕಾತೀರ್ಥೋತ್ಪತ್ತಿಮಾಹಾತ್ಮ್ಯಕಥನಂ" ನಾಮ
ಸಪ್ತದಶೋತ್ತರಶತತಮೋಽಧ್ಯಾಯಃ

---

೭೮. ಅಲ್ಲಿ ಚಮತ್ಕಾರಪುರದ ಜನರಿಂದ ಹೊಗಳಿಸಿಕೊಳ್ಳುತ್ತ, ಭಿಕ್ಷಾನ್ನವನ್ನು ತಿನ್ನುತ್ತ ತಪಸ್ಸನ್ನು ಮಾಡಿದಳು.

೭೯—೮೦. ಸೂತನು ಹೇಳುತ್ತಾನೆ:—ದ್ವಿಜವರ್ಯರೇ! ನೀವು ಕೇಳಿದ ಅವಳ ಶರೀರವು ಸರ್ಪಗಳಿಗೂ, ಆಯುಧ ಮೊದಲಾದುವುಗಳಿಗೂ ಹೇಗೆ ಅಭೇದ್ಯವಾಗಿ ದೃಢವಾಗಿರುವುದೆಂಬುದನ್ನು ಹೇಳಿದ್ದೇನೆ. ಈ ಉತ್ತಮವಾದ ಭಟ್ಟಿಕಾಖ್ಯಾನವನ್ನು ನಿತ್ಯವೂ ಪಠಿಸುವವನಿಗೆ ಕುತ್ಸಿತ ಅಪವಾದವು ಉಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಭಟ್ಟಿಕಾತೀರ್ಥೋತ್ಪತ್ತಿಮಾಹಾತ್ಮ್ಯಕಥನ"ವೆಂಬ
ನೂರಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಷ್ಟಾದಶೋತ್ತರಶತತಮೋಽಧ್ಯಾಯಃ

### ಕ್ಷೇಮಂಕರೀರೈವತೇಶ್ವರೋತ್ಪತ್ತಿವರ್ಣನಂ

ಋಷಯ ಊಚುಃ :—

ಯತ್ತ್ವಯಾ ಸೂತಜ ಪ್ರೋಕ್ತಂ ತಕ್ಷಕಃ ಸಂಭವಿಷ್ಯತಿ ।
ಸೌರಾಷ್ಟ್ರವಿಷಯೇ ರಾಜಾ ರೈವತಾಖ್ಯೋ ಮಹಾಬಲಃ ॥ ೧ ॥
ತಥಾ ತಸ್ಯ ಪ್ರಿಯಾ ಭಾರ್ಯಾ ನಾಮ್ನಾ ಕ್ಷೇಮಂಕರೀತಿ ಯಾ ।
ಆನರ್ತಾಧಿಪತೇರ್ಹರ್ಮ್ಯೇ ಸಂಭವಿಷ್ಯತಿ ಭಾಮಿನೀ ॥ ೨ ॥
ತಾಭ್ಯಾಂ ಸರ್ವಂ ಸಮಾಚಕ್ಷ್ವ ವೃತ್ತಾಂತಂ ಸೂತನಂದನ ।
ಅತ್ರ ನಃ ಕೌತುಕಂ ಜಾತಂ ವಿಚಿತ್ರಂ ಜಲ್ಪತಸ್ತವ ॥ ೩ ॥
ಕೇದಾರಶ್ಚ ಶ್ರುತೋಽಸ್ಮಾಭಿಃ ಸೂತಪುತ್ರ ಹಿಮಾಚಲೇ ।
ಸ ಕಥಂ ತತ್ರ ಸಂಜಾತಃ ಸರ್ವಂ ವಿಸ್ತರತೋ ವದ ॥ ೪ ॥

ಸೂತ ಉವಾಚ :—

ಅತ್ರ ವಃ ಕೀರ್ತಯಿಷ್ಯಾಮಿ ಸರ್ವಂ ಬ್ರಾಹ್ಮಣಸತ್ತಮಾಃ ।
ಯಥಾ ಮಯಾ ಶ್ರುತಂ ಪೂರ್ವಂ ನಿಜತಾತಮುಖಾದ್ದ್ವಿಜಾಃ ॥ ೫ ॥
ಪೂರ್ವಂ ತಚ್ಛಾಪದೋಷೇಣ ತಕ್ಷಕೋ ಧರಣೀತಲೇ ।
ಸೌರಾಷ್ಟ್ರಾಧಿಪತೇರ್ಹರ್ಮ್ಯೇ ರೈವತಾಖ್ಯೋ ಬಭೂವ ಹ ॥ ೬ ॥

---

### ಕನ್ನಡದ ಅನುವಾದ

#### ಕ್ಷೇಮಂಕರೀರೈವತೇಶ್ವರೋತ್ಪತ್ತಿವರ್ಣನ

೧–೨. ಋಷಿಗಳು ಹೇಳುತ್ತಾರೆ :—ಸೂತ! ನೀನು ತಕ್ಷಕನು ಸೌರಾಷ್ಟ್ರ ದೇಶದಲ್ಲಿ ರೈವತನೆಂಬ ರಾಜನಾಗಿಯೂ, ಅವನ ಪ್ರಿಯಭಾರ್ಯೆಯು ಆನರ್ತ ರಾಜನ ಅರಮನೆಯಲ್ಲಿ ಕ್ಷೇಮಂಕರಿಯೆಂಬ ಕನ್ಯೆಯಾಗಿಯೂ ಜನಿಸುವರೆಂದು ಹೇಳಿರುವೆ.

೩. ಅವರ ಸಕಲ ವೃತ್ತಾಂತವನ್ನು ನಮಗೆ ಹೇಳು. ನೀನು ಆಶ್ಚರ್ಯ ಕರವಾಗಿ ಹೇಳುತ್ತಿರುವಾಗ ನಮಗೆ ಕೌತೂಹಲವುಂಟಾಗಿದೆ.

೪. ಸೂತತನಯ! ಹಿಮಾಚಲದಲ್ಲಿ ಕೇದಾರವಿದೆಯೆಂದು ಕೇಳಿದ್ದೇವೆ. ಅದು ಅಲ್ಲಿ ಹೇಗುಂಟಾಯಿತು? ಎಲ್ಲವನ್ನೂ ವಿಸ್ತಾರವಾಗಿ ನಮಗೆ ಹೇಳು.

೫. ಸೂತನು ಹೇಳುತ್ತಾನೆ :—ಬ್ರಾಹ್ಮಣವರ್ಯರೆ! ನಾನು ನನ್ನ ತಂದೆಯ ಮುಖದಿಂದ ಕೇಳಿದ ಆ ಎಲ್ಲ ವಿಷಯವನ್ನು ನಿಮಗೆ ಹೇಳುತ್ತೇನೆ.

೬. ಹಿಂದೆ ತಕ್ಷಕನು ಭಟ್ಟಿಕೆಯ ಶಾಪದಿಂದ ಭೂಮಿಯಲ್ಲಿ ಸೌರಾಷ್ಟ್ರ ರಾಜನ ಅರಮನೆಯಲ್ಲಿ ರೈವತನೆಂಬ ರಾಜನಾಗಿ ಜನಿಸಿದನು.

ಆನರ್ತಾಽಧಿಪತೇಶ್ಚಾಽಪಿ ಸಂಜಾತಾ ತನಯಾ ಗೃಹೇ ।
ತಸ್ಯಾಶ್ಚಾಽಪಿ ಸುವಿಖ್ಯಾತಂ ನಾಮ ಜಾತಂ ಧರಾತಲೇ ॥ ೭ ॥
ಕ್ಷೇಮಂಕರೀತಿ ವಿಪ್ರೇಂದ್ರಾಃ ಕರ್ಮಣಾ ಪ್ರಕಟೀಕೃತಂ ।
ಆನರ್ತಾಧಿಪತಿಃ ಪೂರ್ವಮಾಸೀದ್ರಾಜಾ ಪ್ರಭಂಜನಃ ॥ ೮ ॥
ತಸ್ಯ ವೈರಂ ಸಮುತ್ಪನ್ನಂ ಬಹುಭಿಃ ಸಹ ಭೂಮಿಪೈಃ ।
ತತೋ ನಿರ್ವಾಸ್ಯತೇ ದೇಶೋ ನೀಯಂತೇ ಪಶವೋ ಬಲಾತ್ ।
ಶತ್ರುಭಿರ್ಜಾಯತೇ ಯುದ್ಧಂ ದಿವಾನಕ್ತಂ ದ್ವಿಜೋತ್ತಮಾಃ ॥ ೯ ॥
ತತಃ ಕತಿಪಯಾಽಹಸ್ಯ ತಸ್ಯ ಭಾರ್ಯಾ ಪ್ರಿಯಂವದಾ ।
ಋತುಸ್ನಾತಾ ದಧಾರಾಽಥ ಗರ್ಭಂ ಪುಣ್ಯಂ ನಿಜೋದರೇ ॥ ೧೦ ॥
ಯತಃ ಪ್ರಭೃತಿ ತಸ್ಯಾಃ ಸ ಗರ್ಭೋಽಭೂದುದರಾಶ್ರಯಃ ।
ತತಃ ಪ್ರಭೃತಿ ರಾಷ್ಟ್ರಸ್ಯ ಕ್ಷೇಮಂ ಜಾತಂ ತಥಾ ಪುರೇ ॥ ೧೧ ॥
ಏಕೇ ಸಂಖ್ಯೇ ಜಿತಾಸ್ತೇನ ಶತ್ರವೋಽಪಿ ಸುದುರ್ಜಯಾಃ ।
ನಿಹತಾಶ್ಚ ತಥೈವಾಽನ್ಯೇ ಮಿತ್ರಭಾವಂ ಸಮಾಶ್ರಿತಾಃ ॥ ೧೨ ॥
ತತೋ ಜಜ್ಞೇ ಶುಭಾ ಕನ್ಯಾ ತಸ್ಯಾಃ ಪದ್ಮಾಯತೇಕ್ಷಣಾ ।
ಅಂಧಕಾರೇಽಪಿ ಯದ್ರಾತ್ರ್ಯಾಂ ದ್ಯೋತಿತಂ ಸೂತಿಕಾಗೃಹಂ ॥ ೧೩ ॥

---

೭–೮. ಆನರ್ತರಾಜನಾದ ಪ್ರಭಂಜನನ ಅರಮನೆಯಲ್ಲಿಯೂ ತನ್ನ ಕಾರ್ಯದಿಂದಲೇ ಕ್ಷೇಮಂಕರಿಯೆಂದು ಪ್ರಸಿದ್ಧಳಾದ ಕನ್ಯೆಯು ಹುಟ್ಟಿದಳು.

೯. ದ್ವಿಜವರ್ಯರೆ! ಆ ಆನರ್ತರಾಜನಿಗೆ ಬಹು ಮಂದಿ ರಾಜರೊಡನೆ ವೈರವು ಬೆಳೆಯಿತು. ಅದರಿಂದ ಶತ್ರುಗಳು ಅವನ ದೇಶದಿಂದ ಪಶುಗಳನ್ನು ಬಲಾತ್ಕಾರವಾಗಿ ಒಯ್ದು ಪೀಡಿಸಿದರು. ಹಗಲು ರಾತ್ರಿ ಅವರೊಡನೆ ಯುದ್ಧವು ನಡೆಯಿತು.

೧೦. ಕೆಲವು ಕಾಲದ ಮೇಲೆ ಪ್ರಿಯಂವದೆಯೆಂಬ ಅವನ ಭಾರ್ಯೆಯು ಋತುಸ್ನಾತಳಾಗಿ ಉದರದಲ್ಲಿ ಪವಿತ್ರವಾದ ಗರ್ಭವನ್ನು ಧರಿಸಿದಳು.

೧೧. ಅವಳ ಉದರದಲ್ಲಿ ಗರ್ಭವು ನೆಲೆಸಿದ ದಿನದಿಂದ ರಾಜನ ದೇಶದಲ್ಲಿಯೂ, ಪಟ್ಟಣದಲ್ಲಿಯೂ, ಕ್ಷೇಮವುಂಟಾಯಿತು.

೧೨. ಅವನು ದುರ್ಜಯರಾದ ಕೆಲವು ಮಂದಿ ಶತ್ರುಗಳನ್ನು ಯುದ್ಧದಲ್ಲಿ ಗೆದ್ದನು. ಕೆಲವರನ್ನು ಕೊಂದನು. ಇನ್ನು ಕೆಲವರು ಅವನಿಗೆ ಮಿತ್ರರಾದರು.

೧೩. ಬಳಿಕ ಪ್ರಿಯಂವದೆಗೆ ಸುಂದರಿಯಾದ ಕನ್ಯೆಯು ಜನಿಸಿದಳು. ಅವಳು ಜನಿಸಿದಂದು ರಾತ್ರಿವೇಳೆ ಕತ್ತಲೆಯಲ್ಲಿಯೂ ಪ್ರಸವದ ಮನೆಯು ಪ್ರಕಾಶಗೊಂಡಿತು.

ಅಥಾಽಸೌ ಪಾರ್ಥಿವಶ್ಚಕ್ರೇ ಸುತವತ್ಸುಮಹೋತ್ಸವಂ ।
ತಸ್ಯಾಸ್ತೋಷಸಮಾಯುಕ್ತೋ ಗೀತವಾದ್ಯಾದಿನಿಃಸ್ವನೈಃ ॥ ೧೪ ॥
ದಿನೇ ತ್ರಯೋದಶೇ ಪ್ರಾಪ್ತೇ ನಾಮ ತಸ್ಯಾ ಯಥೋಚಿತಂ ।
ವಿಹಿತಂ ಭೂಭುಜಾ ತೇನ ವಿಪ್ರಾಣಾಂ ಪುರತೋ ದ್ವಿಜಾಃ ॥ ೧೫ ॥
ಯಸ್ಮಾತ್ಕ್ಷೇಮಂ ಸಮುತ್ಪನ್ನಂ ಗರ್ಭವಾಸೇಽಪಿ ಸಂಸ್ಥಯಾ ।
ಅನಯಾ ಕ್ಷೇಮಂಕರೀ ನಾಮ ತಸ್ಮಾದೇಷಾ ಭವೇದ್ದ್ವಿಜಾಃ ॥ ೧೬ ॥
ಏವಂ ಸುವಿಹಿತಾ ಖ್ಯಾತಾ ವೃದ್ಧಿಂ ಯಾತಿ ದಿನೇ ದಿನೇ ।
ಶುಕ್ಲಪಕ್ಷೇ ಕಲಾ ಚೇಂದೋರ್ಯಥೈವ ಗಗನಾಂಗಣೇ ॥ ೧೭ ॥
ತತಸ್ತಾಂ ಯೌವನೋಪೇತಾಂ ರೈವತಾಯ ಮಹೀಪತಿಃ ।
ದದೌ ಸೌರಾಷ್ಟ್ರನಾಥಾಯ ಕಾಲೇ ವೈವಾಹಿಕೇ ಶುಭೇ ॥ ೧೮ ॥
ಅಥ ತಾಭ್ಯಾಂ ಸುತಾ ಜಾತಾ ರೇವತೀ ನಾಮ ವಿಶ್ರುತಾ ।
ಭಟ್ಟಿಕಾಶಾಪದೋಷೇಣ ಶೇಷಪತ್ನೀ ಯಶಸ್ವಿನೀ ॥ ೧೯ ॥
ಯಾತೂಢಾ ರಾಮರೂಪೇಣ ನಾಗರಾಜೇನ ಧೀಮತಾ ।
ಪುತ್ರಪೌತ್ರವತೀ ಜಾತಾ ಸೌಭಾಗ್ಯಮದಗರ್ವಿತಾ ॥ ೨೦ ॥
ನ ಚ ತಾಭ್ಯಾಂ ಸುತೋ ಜಾತಃ ಕಥಂಚಿದಪಿ ವಂಶಜಃ ।
ವಯಸೋಽಂತೇಽಪಿ ವಿಪ್ರೇಂದ್ರಾಸ್ತತೋ ದುಃಖಂ ವ್ಯಜಾಯತ ॥ ೨೧ ॥

---

೧೪. ದೊರೆಯು ಸಂತೋಷಗೊಂಡು ಆ ಕನ್ಯೆಗೆ ಗೀತವಾದ್ಯಾದಿಗಳಿಂದ ಗಂಡು ಮಗುವಿಗೆ ಮಾಡುವಂತೆ ಮಹೋತ್ಸವವನ್ನು ಮಾಡಿದನು.

೧೫. ಬ್ರಾಹ್ಮಣರೆ! ದೊರೆಯು ಆ ಕನ್ಯೆಗೆ ಹದಿಮೂರನೆಯ ದಿನ ಬ್ರಾಹ್ಮಣರ ಸನ್ನಿಧಿಯಲ್ಲಿ ಉಚಿತರೀತಿಯಿಂದ ನಾಮಕರಣ ಮಾಡಿದನು.

೧೬. ಈ ಕನ್ಯೆಯು ಗರ್ಭದಲ್ಲಿರುವಾಗಲೇ ರಾಜ್ಯಕ್ಕೆ ಕ್ಷೇಮವುಂಟಾದುದರಿಂದ ಇವಳು ಕ್ಷೇಮಂಕರಿಯೆಂದು ಹೆಸರನ್ನು ಪಡೆದಳು.

೧೭–೧೮. ಹೀಗೆ ಅವಳು ಶುಕ್ಲಪಕ್ಷದಲ್ಲಿ ಆಕಾಶದಲ್ಲಿ ಚಂದ್ರನ ಕಲೆಯಂತೆ ಪ್ರತಿದಿನವೂ ಬೆಳೆದಳು. ಅನಂತರ ಪ್ರಭಂಜನ ರಾಜನು ಯುವತಿಯಾದ ಮಗಳನ್ನು ಶುಭಲಗ್ನದಲ್ಲಿ ಸೌರಾಷ್ಟ್ರ ರಾಜನಿಗೆ ವಿವಾಹ ಮಾಡಿಕೊಟ್ಟನು.

೧೯. ಬಳಿಕ ಆ ದಂಪತಿಗಳಿಗೆ ಭಟ್ಟಿಕೆಯ ಶಾಪದೋಷದಿಂದ ಆ ಶೇಷನ ಪತ್ನಿಯು ರೇವತಿಯೆಂಬ ಮಗಳಾದಳು.

೨೦. ಅವಳನ್ನು ರಾಮರೂಪಿಯಾದ ನಾಗರಾಜನು ವಿವಾಹ ಮಾಡಿಕೊಂಡನು. ಅವಳು ಪುತ್ರ, ಪೌತ್ರರನ್ನು ಪಡೆದು ಸೌಭಾಗ್ಯಮದದಿಂದ ಬೆಳಗಿದಳು.

೨೧. ಅವರಿಗೆ ವಯಸ್ಸಾದರೂ ವಂಶಕರನಾದ ಸುತನು ಜನಿಸಲಿಲ್ಲ. ಅದರಿಂದ ಆ ದಂಪತಿಗಳು ಬಹುವಾಗಿ ದುಃಖಗೊಂಡರು.

ಅಥ ತೌ ಮಂತ್ರಿವರ್ಗಸ್ಯ ರಾಜ್ಯಂ ಸರ್ವಮಶೇಷತಃ ।
ಅರ್ಪಯಿತ್ವಾತು ಪುತ್ರಾರ್ಥಂ ತಪೋಽರ್ಥಮಿಹ ಚಾಽಽಗತೌ ॥ ೨೨ ॥
ತತಃ ಸ್ವಮಾಶ್ರಮಂ ಗತ್ವಾ ಸ್ಥಿತೌ ತತ್ರ ಸಮಾಹಿತೌ ।
ದೇವೀಂ ಕಾತ್ಯಾಯನೀಂ ಸ್ಥಾಪ್ಯ ತದಾರಾಧನತತ್ಪರೌ ॥ ೨೩ ॥
ಯಯಾ ವಿನಿಹತೋ ರೌದ್ರೋ ಮಹಿಷಾಖ್ಯೋ ಮಹಾಽಸುರಃ ।
ಕೌಮಾರವ್ರತಧಾರಿಣ್ಯಾ ತಸ್ಮಿನ್ವಿಂಧ್ಯೇ ಮಹಾಚಲೇ ॥ ೨೪ ॥
ತತಸ್ತಾಭ್ಯಾಂ ದದೌ ತುಷ್ಟಾ ಸಾ ಪುತ್ರಂ ವಂಶವರ್ಧನಂ ।
ನಾಮ್ನಾ ಕ್ಷೇಮಜಿತಂ ಖ್ಯಾತಂ ಪರಪಕ್ಷಕ್ಷಯಾವಹಂ ॥ ೨೫ ॥
ತತಃ ಸ್ವಂ ರಾಜ್ಯಮಾಸಾದ್ಯ ಭೂಯೋಽಪಿ ಸ ಮಹೀಪತಿಃ ।
ಸ್ವ ಪುತ್ರಂ ವರ್ಧಯಾಮಾಸ ಹರ್ಷೇಣ ಮಹತಾನ್ವಿತಃ ॥ ೨೬ ॥
ಯದಾ ಸ ಯೌವನೋಪೇತಃ ಸಂಜಾತಃ ಕ್ಷೇಮಜಿತ್ಸುತಃ ।
ತಂ ಚ ರಾಜ್ಯೇ ನಿಯೋಜ್ಯಾಽಥ ಸ್ವಸ್ಥಾನಂ ಸ ಪುನರ್ಯಯೌ ॥ ೨೭ ॥
ಹಾಟಕೇಶ್ವರಜಂ ಕ್ಷೇತ್ರಂ ತದೇತದ್ದ್ವಿಜಸತ್ತಮಾಃ ।
ಭಾರ್ಯಯಾ ಸಹಿತಸ್ತ್ಯಕ್ತ್ವಾ ಶೇಷಮನ್ಯಂ ಪರಿಚ್ಛದಂ ॥ ೨೮ ॥
ತತ್ರ ಸಂಸ್ಥಾಪಯಾಮಾಸ ಲಿಂಗಂ ದೇವಸ್ಯ ಶೂಲಿನಃ ।
ಪ್ರಾಸಾದಂ ಚ ಮನೋಹಾರಿ ತತಶ್ಚಕ್ರೇ ಸಮಾಹಿತಃ ॥ ೨೯ ॥

---

೨೨. ಬಳಿಕ ಅವರಿಬ್ಬರೂ ಸಮಸ್ತ ರಾಜ್ಯವನ್ನೂ ಮಂತ್ರಿಗಳಿಗೆ ಒಪ್ಪಿಸಿ ಪುತ್ರನನ್ನು ಪಡೆಯಲು ತಪವನ್ನಾಚರಿಸುವುದಕ್ಕಾಗಿ ಇಲ್ಲಿಗೆ ಬಂದರು.

೨೩–೨೪. ಅವರು ತಮ್ಮ ಆಶ್ರಮಕ್ಕೆ ಹೋಗಿ ಸಾವಧಾನ ಮನಸ್ಸಿನಿಂದ ವಿಂಧ್ಯಾಚಲದಲ್ಲಿ ಕೌಮಾರವ್ರತದಿಂದ ಮಹಿಷಾಸುರನನ್ನು ಸದೆಬಡಿದ ಕಾತ್ಯಾಯನೀ ದೇವಿಯನ್ನು ಪ್ರತಿಷ್ಠೆಮಾಡಿ ಅವಳನ್ನು ಪೂಜಿಸುತ್ತಿದ್ದರು.

೨೫. ಅನಂತರ ಆ ಕಾತ್ಯಾಯನಿಯು ಸಂತುಷ್ಟಳಾಗಿ ಆ ದಂಪತಿಗಳಿಗೆ ಶತ್ರುಸೈನ್ಯವನ್ನು ನಾಶಗೊಳಿಸುವ ಕ್ಷೇಮಜಿತನೆಂಬ ವಂಶೋದ್ಧಾರಕನಾದ ಮಗನನ್ನು ಕೊಟ್ಟಳು.

೨೬. ಆ ದೊರೆಯು ಬಳಿಕ ಮರಳಿ ತನ್ನ ರಾಜ್ಯವನ್ನು ಹೊಂದಿ ಅತ್ಯಂತ ಸಂತೋಷದಿಂದ ತನ್ನ ಮಗನನ್ನು ಬೆಳೆಯಿಸಿದನು.

೨೭–೨೮. ಕ್ಷೇಮಜಿತನು ಯೌವನವನ್ನು ಹೊಂದಲು ಅವನನ್ನು ರಾಜ್ಯದಲ್ಲಿ ಸ್ಥಾಪಿಸಿ ತಾನು ಸಕಲ ಸಾಮಗ್ರಿಯನ್ನು ತ್ಯಜಿಸಿ ಪತ್ನಿಯೊಡನೆ ತನ್ನ ಸ್ಥಾನವಾದ ಹಾಟಕೇಶ್ವರಕ್ಷೇತ್ರಕ್ಕೆ ಹೋದನು.

೨೯. ಅಲ್ಲಿ ಮಹೇಶ್ವರ ಲಿಂಗವನ್ನು ಸ್ಥಾಪಿಸಿ ಸಾವಧಾನ ಮನಸ್ಸಿನಿಂದ ಮನೋಹರವಾದ ದೇವಾಲಯವನ್ನು ನಿರ್ಮಿಸಿದನು.

ರೈವತೇಶ್ವರಮಿತ್ಯುಕ್ತಂ ಸರ್ವಪಾತಕನಾಶನಂ ।
ದರ್ಶನಾದೇವ ಸರ್ವೇಷಾಂ ದೇಹಿನಾಂ ದ್ವಿಜಸತ್ತಮಾಃ ॥ ೩೦ ॥
ಯಾ ಪೂರ್ವಂ ಸ್ಥಾಪಿತಾ ದುರ್ಗಾ ತಸ್ಮಿನ್‌ಕ್ಷೇತ್ರೇ ಮಹೀಭುಜಾ ।
ತಸ್ಯಾಃ ಕ್ಷೇಮಂಕರೀ ಚಕ್ರೇ ಪ್ರಾಸಾದಂ ಶ್ರದ್ಧಯಾನ್ವಿತಾ ॥ ೩೧ ॥
ಸಾಽಪಿ ಕ್ಷೇಮಂಕರೀ ನಾಮ ತತಃ ಪ್ರಭೃತಿ ಕೀರ್ತ್ಯತೇ ।
ಕಾತ್ಯಾಯನ್ಯಪಿ ಯಾ ಪ್ರೋಕ್ತಾ ಮಹಿಷಾಸುರಮರ್ದಿನೀ ॥ ೩೨ ॥
ಯಸ್ತಾಂ ಚೈತ್ರಸಿತೇ ಪಕ್ಷೇ ಸಂಪಶ್ಯೇದಷ್ಟಮೀ ದಿನೇ ।
ತಸ್ಯಾಽಭೀಷ್ಟಾ ಭವೇತ್ಸಿದ್ಧಿಃ ಸರ್ವದೈವ ದ್ವಿಜೋತ್ತಮಾಃ ॥ ೩೩ ॥
ಏತದ್ವಃ ಸರ್ವಮಾಖ್ಯಾತಂ ರೈವತೇಶ್ವರವರ್ಣನಂ ।
ಕ್ಷೇಮಂಕರ್ಯಾಃ ಪ್ರಭಾವಂ ಚ ಸರ್ವಪಾತಕನಾಶನಂ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕ್ಷೇಮಂಕರೀರೈವತೇಶ್ವರೋತ್ಪತ್ತಿವರ್ಣನಂ" ನಾಮ
ಅಷ್ಟಾದಶೋತ್ತರಶತತಮೋಽಧ್ಯಾಯಃ

---

೩೦. ದ್ವಿಜವರ್ಯರೆ! ದರ್ಶನದಿಂದಲೇ ಆ ರೈವತೇಶ್ವರನು ಸಮಸ್ತ ಪ್ರಾಣಿಗಳ ಸಕಲ ಪಾಪಗಳನ್ನು ಪರಿಹರಿಸುವನು.

೩೧. ದೊರೆಯು ಹಿಂದೆ ಸ್ಥಾಪಿಸಿದ ದುರ್ಗಾದೇವಿಗೆ ಕ್ಷೇಮಂಕರಿಯು ಶ್ರದ್ಧೆಯಿಂದ ಆಲಯವನ್ನು ಕಟ್ಟಿಸಿದಳು.

೩೨. ಅದು ಮೊದಲ್ಗೊಂಡು ಮಹಿಷಾಸುರಮರ್ದಿನಿಯಾದ ಕಾತ್ಯಾಯನಿಯೂ ಕ್ಷೇಮಂಕರಿಯೆಂದು ಹೇಳಿಸಿಕೊಳ್ಳುವಳು.

೩೩. ದ್ವಿಜೋತ್ತಮರೆ! ಆ ಕ್ಷೇಮಂಕರಿಯನ್ನು ಚೈತ್ರಮಾಸದ ಅಷ್ಟಮೀ ದಿನ ದರ್ಶನಮಾಡಿದ ಮಾನವನ ಅಭೀಷ್ಟವು ಕೈಗೂಡುವುದು.

೩೪. ನಿಮಗೆ ಈ ರೈವತೇಶ್ವರನ ವರ್ಣನೆಯೆಲ್ಲವನ್ನೂ, ಸಕಲ ಪಾಪವನ್ನು ನಿವಾರಿಸುವ ಕ್ಷೇಮಂಕರಿಯ ಮಾಹಾತ್ಮ್ಯವನ್ನೂ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕ್ಷೇಮಂಕರೀರೈವತೇಶ್ವರೋತ್ಪತ್ತಿವರ್ಣನ"ವೆಂಬ
ನೂರಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶತ್ಯುತ್ತರಶತತಮೋಽಧ್ಯಾಯಃ

### ದೇವಸೇನಾಪರಾಜಯವರ್ಣನಂ

ಋಷಯ ಊಚುಃ :—

ಯತ್ತ್ವಯಾ ಸೂತಜ ಪ್ರೋಕ್ತಂ ದೇವೀ ಕಾತ್ಯಾಯನೀ ಚ ಸಾ ।
ಮಹಿಷಾಂತಕರೀ ಜಾತಾ ಕಥಂ ಸಾ ಮೇ ಪ್ರಕೀರ್ತಯ ॥ ೧ ॥
ಕೀದೃಗ್ದಾನವವರ್ಯಃ ಸ ಮಾಹಿಷಂ ರೂಪಮಾಶ್ರಿತಃ ।
ಕಸ್ಮಾತ್ಸ ಸೂದಿತೋ ದೇವ್ಯಾ ತನ್ಮೇ ವಿಸ್ತರತೋ ವದ ॥ ೨ ॥

ಸೂತ ಉವಾಚ :—

ಅತ್ರ ವಃ ಕೀರ್ತಯಿಷ್ಯಾಮಿ ದೇವ್ಯಾ ಮಾಹಾತ್ಮ್ಯಮುತ್ತಮಂ ।
ಶ್ರುತಮಾತ್ರೇಽಪಿ ಮರ್ತ್ಯಾನಾಂ ಯೇನ ಶತ್ರುಕ್ಷಯೋ ಭವೇತ್ ॥ ೩ ॥
ಹಿರಣ್ಯಾಕ್ಷಸುತಃ ಪೂರ್ವಂ ಮಹಿಷೋ ನಾಮ ದಾನವಃ ।
ಆಸೀನ್ಮಹಿಷರೂಪೇಣ ಯೇನ ಭುಕ್ತಂ ಜಗತ್ತ್ರಯಂ ॥ ೪ ॥

---

## ಕನ್ನಡದ ಅನುವಾದ

### ದೇವಸೇನಾಪರಾಜಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಕಾತ್ಯಾಯನಿಯೆಂದು ಹೇಳಿದೆಯಷ್ಟೆ. ಅವಳು ಹೇಗೆ ಮಹಿಷಾಸುರಮರ್ದಿನಿಯಾದಳು? ಅದನ್ನು ನಮಗೆ ಹೇಳು.

೨. ಯಾವ ದಾನವನು ಕೋಣನ ರೂಪವನ್ನು ಧರಿಸಿದನು? ದೇವಿಯು ಅವನನ್ನು ಏಕೆ ಕೊಂದಳು? ಅದನ್ನು ವಿಸ್ತಾರವಾಗಿ ನಮಗೆ ಹೇಳು.

೩. ಸೂತನು ಹೇಳುತ್ತಾನೆ:—ಇಲ್ಲಿ ನಾನು ನಿಮಗೆ ದೇವಿಯ ಉತ್ತಮ ಮಾಹಾತ್ಮ್ಯವನ್ನು ಹೇಳುವೆನು. ಮಾನವರು ಇದನ್ನು ಕೇಳಿದಕೂಡಲೆ ಅವರ ಶತ್ರುಗಳು ನಾಶವಾಗುವರು.

೪. ಹಿಂದೆ ಹಿರಣ್ಯಾಕ್ಷನ ಮಗನಾದ ಮಹಿಷನೆಂಬ ದಾನವನು ಮಹಿಷ ರೂಪನಾಗಿ ಮೂರು ಲೋಕವನ್ನು ಆಕ್ರಮಿಸಿದನು.

ಋಷಯ ಊಚುಃ:—

ಮಾಹಿಷೇಣ ಸ್ವರೂಪೇಣ ಕಿಂ ಜಾತಃ ಸೂತನಂದನ।
ಅಥವಾ ಶಾಪ ದೋಷೇಣ ಸಂಜಾತಃ ಕೇನಚಿದ್ವದ ॥ ೫ ॥

ಸೂತ ಉವಾಚ:—

ಸಂಜಾತೋ ಹಿ ಸುರೂಪಾಢ್ಯಃ ಶತಪತ್ರ ನಿಭಾನನಃ।
ದೀರ್ಘಬಾಹುಃ ಪೃಥುಗ್ರೀವಃ ಸರ್ವಲಕ್ಷಣಲಕ್ಷಿತಃ।
ನಾಮ್ನಾ ಚಿತ್ರಸಮಃ ಪ್ರೋಕ್ತಸ್ತೇಜೋವೀರ್ಯಸಮನ್ವಿತಃ ॥ ೬ ॥
ಸ ಬಾಲ್ಯಾತ್ಪ್ರಭೃತಿ ಪ್ರಾಯೋ ಮಹಿಷಾಣಾಂ ಪ್ರಬೋಧನಂ।
ಕರೋತಿ ಸಂಪರಿತ್ಯಜ್ಯ ಸರ್ವಮಶ್ವಾದಿವಾಹನಂ ॥ ೭ ॥
ಕದಾಚಿನ್ಮಹಿಷಾರೂಢಃ ಸ ಪ್ರತಸ್ಥೇ ದನೋಃ ಸುತಃ।
ಜಾಹ್ನವೀತೀರಮಾಸಾದ್ಯ ವಿನಿಘ್ನನ್ ಜಲಪಕ್ಷಿಣಃ ॥ ೮ ॥
ಅಥಾಸೀತ್ತುಸಮಾಧಿಸ್ಥೋ ದುರ್ವಾಸಾ ಮುನಿಸತ್ತಮಃ।
ಗಂಗಾತೀರೇ ವಿಧಾಯೋಚ್ಚೈಃ ಪದ್ಮಾಸನಮನುತ್ತಮಂ ॥ ೯ ॥
ವಿಹಂಗಾಸಕ್ತಚಿತ್ತೇನ ಶೂನ್ಯೇನ ಸ ಮುನೀಶ್ವರಃ।
ದೃಷ್ಟೋ ನ ಮಹಿಷಕ್ಷುಣ್ಣಃ ಖುರೈರ್ವೇಗವಶಾದ್ದ್ವಿಜಃ ॥ ೧೦ ॥

---

೫. ಋಷಿಗಳು ಹೇಳುತ್ತಾರೆ:—ಸೂತ! ಆ ದಾನವನು ಮಹಿಷರೂಪನಾಗಿಯೇ ಹುಟ್ಟಿದನೊ? ಅಥವಾ ಯಾವುದಾದರೂ ಶಾಪದ ದೋಷದಿಂದ ಹಾಗಾದನೊ?

೬. ಸೂತನು ಹೇಳುತ್ತಾನೆ:—ಚಿತ್ರಸಮನೆಂಬ ಅವನು ಸುಂದರನೂ, ಕಮಲದಂತೆ ಮುಖವುಳ್ಳವನೂ, ದೀರ್ಘವಾದ ತೋಳುಳ್ಳವನೂ, ವಿಶಾಲವಾದ ಕುತ್ತಿಗೆಯುಳ್ಳವನೂ, ಸಮಸ್ತ ಲಕ್ಷಣಗಳಿಂದ ಕೂಡಿದವನೂ, ತೇಜೋವೀರ್ಯಗಳಿಂದ ಸಹಿತನೂ ಆಗಿ ಹುಟ್ಟಿದನು.

೭. ಅವನು ಬಾಲ್ಯದಿಂದ ಕುದುರೆ ಮೊದಲಾದ ವಾಹನಗಳನ್ನು ಬಿಟ್ಟು ವಾಹನಕ್ಕಾಗಿ ಕೋಣಗಳನ್ನೇ ಕಟ್ಟುತ್ತಿದ್ದನು.

೮. ಒಂದಾನೊಂದು ದಿನ ಆ ದಾನವನು ಕೋಣವನ್ನೇರಿ ಗಂಗೆಯ ದಡದಲ್ಲಿ ಜಲಚರಪಕ್ಷಿಗಳನ್ನು ಕೊಲ್ಲುತ್ತ ಪ್ರಯಾಣಮಾಡುತ್ತಿದ್ದನು.

೯. ಆಗ ದುರ್ವಾಸನೆಂಬ ಮುನಿವರ್ಯನು ಗಂಗಾತೀರದಲ್ಲಿ ಪದ್ಮಾಸನದಲ್ಲಿ ಕುಳಿತು ಸಮಾಧಿನಿರತನಾಗಿದ್ದನು.

೧೦. ಪಕ್ಷಿಯಲ್ಲಿಟ್ಟ ಮನಸ್ಸುಳ್ಳ ಆ ದಾನವನು ವೇಗದಿಂದ ಕೋಣನ ಗೊರಸಿನಿಂದ ತುಳಿಯಲ್ಪಟ್ಟ ದುರ್ವಾಸ ಮುನಿಯನ್ನು ನೋಡಲಿಲ್ಲ.

ತತಃ ಕ್ಷತಜದಿಗ್ಧಾಂಗಃ ಸ ದೃಷ್ಟ್ವಾ ದಾನವಂ ಪುರಃ ।
ಅಥ ದೃಷ್ಟ್ವಾ ಪ್ರಣಾಮೇನ ರಹಿತಂ ಕೋಪಮಾವಿಶತ್ ॥ ೧೧ ॥
ತತಃ ಪ್ರೋವಾಚ ತಂ ಕ್ರುದ್ಧಸ್ತೋಯಮಾದಾಯ ಪಾಣಿನಾ ।
ಯಸ್ಮಾತ್ಪಾಪ ಮಮ ಕ್ಷುಣ್ಣಂ ಗಾತ್ರಂ ಮಹಿಷಜೈಃ ಖುರೈಃ ॥ ೧೨ ॥
ಸಮಾಧೇಶ್ಚ ಕೃತೋ ಭಂಗಸ್ತಸ್ಮಾತ್ತ್ವಂ ಮಹಿಷೋ ಭವ ।
ಯಾವಜ್ಜೀವಸಿ ದುರ್ಬುದ್ಧೇ ಸಮ್ಯಗ್ಜ್ಞಾನ ಸಮನ್ವಿತಃ ॥ ೧೩ ॥
ಅಥಾಽಸೌ ಮಹಿಷೋ ಜಾತಃ ಕೃಷ್ಣಗಾತ್ರಧರೋಮಹಾನ್ ।
ಅತಿ ದೀರ್ಘವಿಷಾಣಶ್ಚ ಅಂಜನಾದ್ರಿರಿವಾಽಪರಃ ॥ ೧೪ ॥
ತತಃ ಪ್ರಸಾದಯಾಮಾಸ ತಂ ಮುನಿಂ ವಿನಯಾನ್ವಿತಃ ।
ಶಾಪಾಂತಂ ಕುರು ಮೇ ವಿಪ್ರ ಬಾಲ್ಯಭಾವಾದಜಾನತಃ ॥ ೧೫ ॥
ಅಥ ತಂ ಸ ಮುನಿಃ ಪ್ರಾಹ ನ ಮೇ ಸ್ಯಾದ್ವಚನಂ ವೃಥಾ ।
ತಸ್ಮಾದ್ಯಾವತ್ಸ್ಥಿತಾಃ ಪ್ರಾಣಾಸ್ತಾವದಿತ್ಥಂ ಭವಿಷ್ಯತಿ ॥ ೧೬ ॥
ಮಹಿಷಸ್ಯ ಸ್ವರೂಪೇಣ ನಿಂದಿತಸ್ಯ ಸುದುರ್ಮತೇ ।
ಏವಮುಕ್ತ್ವಾ ಪರಿತ್ಯಜ್ಯ ಗಂಗಾತೀರಂ ಮುನೀಶ್ವರಃ ।
ಜಗಾಮಾಽನ್ಯತ್ರ ಸೋಽಪ್ಯಾಽಽಶು ಗತ್ವಾ ಶುಕ್ರಮುವಾಚ ಹ ॥ ೧೭ ॥

---

೧೧. ಅನಂತರ ರಕ್ತವು ಸುರಿಯುತ್ತಿರುವ ಶರೀರವುಳ್ಳ ಆ ದುರ್ವಾಸ ಮುನಿಯು ನಮಸ್ಕಾರ ಮಾಡದೆ ಮುಂದೆ ನಿಂತಿರುವ ದಾನವನನ್ನು ಕಂಡು ಕುಪಿತನಾದನು.

೧೨–೧೩. ತರುವಾಯ ಮುನಿಯು ಕೋಪಗೊಂಡು ಕೈಯಿಂದ ನೀರನ್ನು ತೆಗೆದುಕೊಂಡು, 'ಪಾಪಿಷ್ಠ! ನೀನು ಕೋಣನ ಗೊರಸುಗಳಿಂದ ನನ್ನ ಶರೀರವನ್ನು ತುಳಿಸಿದ್ದರಿಂದಲೂ, ಸಮಾಧಿಯನ್ನು ಭಂಗಗೊಳಿಸಿದ್ದರಿಂದಲೂ ಜ್ಞಾನ ಸಹಿತನಾಗಿ ಜೀವಿಸಿರುವವರೆಗೆ ಕೋಣನಾಗು.' ಎಂದನು.

೧೪–೧೫. ಅನಂತರ ಆ ರಾಕ್ಷಸನು ಕಪ್ಪು ಶರೀರವನ್ನು ಧರಿಸಿದವನೂ, ಉದ್ದವಾದ ಕೊಂಬುಳ್ಳವನೂ, ಇನ್ನೊಂದು ಕಾಡಿಗೆಯ ಪರ್ವತವೋ ಎಂಬಂತಿರುವವನೂ ಆದ ಕೋಣನಾದನು. ಅನಂತರ ಮಹಿಷನು ಬಾಲ್ಯದಿಂದ ತಿಳುವಳಿಕೆಯಿಲ್ಲದ ನನ್ನ ಶಾಪವನ್ನು ಕೊನೆಗಾಣಿಸು ಎಂದು ಆ ಮುನಿಯನ್ನು ವಿನಯದಿಂದ ಸಮಾಧಾನಗೊಳಿಸಿದನು.

೧೬–೧೭. ತರುವಾಯ ಆ ಮುನಿಯು ಅವನನ್ನು ಕುರಿತು ಇಂತೆಂದನು. "ನನ್ನ ಮಾತು ವ್ಯರ್ಥವಾಗುವುದಿಲ್ಲ. ದುರುಳ! ನೀನು ಬದುಕಿರುವವರೆಗೆ ಹೀಗೆಯೇ ನಿಂದ್ಯವಾದ ಕೋಣನ ರೂಪವುಳ್ಳವನಾಗಿರುವೆ." ಹೀಗೆ ಹೇಳಿ ಆ ಮುನಿವರ್ಯನು ಗಂಗಾತೀರವನ್ನು ತ್ಯಜಿಸಿ ಬೇರೆ ಕಡೆಗೆ ಹೋದನು. ಆ ಮಹಿಷನೂ ಶೀಘ್ರವಾಗಿ ಶುಕ್ರಾಚಾರ್ಯರ ಹತ್ತಿರ ಹೋಗಿ ಹೀಗೆಂದನು.

ಅಹಂ ದುರ್ವಾಸಸಾ ಶಪ್ತಃ ಕಸ್ಮಿಂಶ್ಚಿತ್ಕಾರಣಾಂತರೇ ।
ಮಹಿಷತ್ವಂ ಸಮಾನೀತಸ್ತಸ್ಮಾತ್ತ್ವಂ ಮೇ ಗತಿರ್ಭವ ॥ ೧೮ ॥
ಯಥಾ ಸ್ಯಾತ್ಪೂರ್ವಜಂ ದೇಹಂ ತಿರ್ಯಕ್ತ್ವಂ ನಶ್ಯತೇ ಯಥಾ ।
ಪ್ರಸಾದಾತ್ತವ ವಿಪ್ರೇಂದ್ರ ತಥಾ ನೀತಿರ್ವಿಧೀಯತಾಂ ॥ ೧೯ ॥
ಶುಕ್ರ ಉವಾಚ :—
ತಸ್ಯ ಶಾಪೋಽನ್ಯಥಾ ಕರ್ತುಂ ನೈವ ಶಕ್ಯಃ ಕಥಂಚನ ।
ಕೇನಾಽಪಿ ಸಂಪರಿತ್ಯಜ್ಯ ದೇವಮೇಕಂ ಮಹೇಶ್ವರಂ ॥ ೨೦ ॥
ತಸ್ಮಾದಾರಾಧಯಾಽಽಶು ತ್ವಂ ಗತ್ವಾ ಲಿಂಗಮನುತ್ತಮಂ ।
ಹಾಟಕೇಶ್ವರಜೇ ಕ್ಷೇತ್ರೇ ಸರ್ವಸಿದ್ಧಿಪ್ರದಾಯಕೇ ॥ ೨೧ ॥
ತತ್ರ ಸಂಜಾಯತೇ ಸಿದ್ಧಿಃ ಶೀಘ್ರಂ ದಾನವಸತ್ತಮ ।
ಅಪಿ ಪಾಪಯುಗೇ ಪ್ರಾಪ್ತೇ ಕಿಂ ಪುನಃ ಪ್ರಥಮೇ ಯುಗೇ ॥ ೨೨ ॥
ಏವಮುಕ್ತಃ ಸ ಶುಕ್ರೇಣ ದಾನವಃ ಸತ್ವರಂ ಯಯೌ
ಹಾಟಕೇಶ್ವರಜಂ ಕ್ಷೇತ್ರಂ ತಪಸ್ತೇಪೇ ತತಃ ಪರಂ ॥ ೨೩ ॥
ಸ್ಥಾಪಯಿತ್ವಾ ಮಹಲ್ಲಿಂಗಂ ಭಕ್ತ್ಯಾ ದೇವಸ್ಯ ಶೂಲಿನಃ ।
ಪ್ರಾಸಾದಂ ಚ ತತಶ್ಚಕ್ರೇ ಕೈಲಾಸಶಿಖರೋಪಮಂ ॥ ೨೪ ॥

---

೧೮. "ದುರ್ವಾಸ ಮುನಿಯು ಯಾವುದೋ ಒಂದು ಕಾರಣದಿಂದ ನನ್ನನ್ನು ಶಪಿಸಿ ಕೋಣನನ್ನಾಗಿ ಮಾಡಿದ್ದಾನೆ. ಆದುದರಿಂದ ನೀನೇ ನನಗೆ ಗತಿಯು.

೧೯. ವಿಪ್ರೇಂದ್ರ! ನಿನ್ನ ಅನುಗ್ರಹದಿಂದ ನನ್ನ ಈ ಪಶುತ್ವವು ಹೋಗಿ ಹಿಂದಿನ ನನ್ನ ಶರೀರವು ಬರುವಂತೆ ಮಾಡು."

೨೦. ಶುಕ್ರನು ಹೇಳುತ್ತಾನೆ:—ಆ ದುರ್ವಾಸನ ಶಾಪವನ್ನು ಮಹೇಶ್ವರನನ್ನು ಹೊರತು ಬೇರೆ ಯಾರೂ ವ್ಯತ್ಯಾಸಗೊಳಿಸಲು ಸಮರ್ಥರಲ್ಲ.

೨೧. ಆದುದರಿಂದ ನೀನು ಸಕಲ ಸಿದ್ಧಿಯನ್ನೀಯುವ ಹಾಟಕೇಶ್ವರ ಕ್ಷೇತ್ರಕ್ಕೆ ಶೀಘ್ರವಾಗಿ ಹೋಗಿ ಅಲ್ಲಿರುವ ಶ್ರೇಷ್ಠವಾದ ಲಿಂಗವನ್ನು ಆರಾಧಿಸು.

೨೨. ದಾನವೋತ್ತಮ! ಅಲ್ಲಿ ಕಲಿಯುಗದಲ್ಲಿಯೂ ಶೀಘ್ರವಾಗಿ ಸಿದ್ಧಿಯಾಗುವುದು. ಕೃತಯುಗದ ವಿಷಯವನ್ನು ಹೇಳತಕ್ಕದ್ದೇನು.

೨೩. ಶುಕ್ರನು ಹೀಗೆನ್ನಲು ಆ ದಾನವನು ಶೀಘ್ರವಾಗಿ ಹಾಟಕೇಶ್ವರ ಕ್ಷೇತ್ರಕ್ಕೆ ಹೋಗಿ ತಪಸ್ಸನ್ನು ಮಾಡಿದನು.

೨೪. ಅವನು ಅಲ್ಲಿ ಭಕ್ತಿಯಿಂದ ಮಹೇಶ್ವರನ ಲಿಂಗವನ್ನು ಸ್ಥಾಪಿಸಿ ಅದಕ್ಕೆ ಕೈಲಾಸಶಿಖರದಂತಿರುವ ದೇವಾಲಯವನ್ನು ಕಟ್ಟಿಸಿದನು.

ತಸ್ಯೈವಂ ವರ್ತಮಾನಸ್ಯ ತಪಃಸ್ಥಸ್ಯ ಮಹಾತ್ಮನಃ ।
ಜಗಾಮ ಸುಮಹಾನ್ ಕಾಲಃ ಕೃಚ್ಛ್ರೇ ತಪಸಿ ವರ್ತತಃ ॥ ೨೫ ॥
ತತಸ್ತುಷ್ಟೋ ಮಹಾದೇವೋ ಗತ್ವಾ ತದ್ದೃಷ್ಟಿಗೋಚರಂ ।
ಪ್ರೋವಾಚ ಪರಿತುಷ್ಟೋಽಸ್ಮಿ ವರಂ ವರಯ ದಾನವ ॥ ೨೬ ॥

ಮಹಿಷ ಉವಾಚ :—

ಅಹಂ ದುರ್ವಾಸಸಾ ಶಪ್ತೋ ಮಹಿಷತ್ವೇ ನಿಯೋಜಿತಃ ।
ತಿರ್ಯಕ್ತ್ವಂ ನಾಶಮಾಯಾತು ತಸ್ಮಾನ್ಮೇ ತ್ವತ್ಪ್ರಸಾದತಃ ॥ ೨೭ ॥

ಶ್ರೀ ಭಗವಾನುವಾಚ :—

ನಾಽನ್ಯಥಾ ಶಕ್ಯತೇ ಕರ್ತುಂ ತಸ್ಯ ವಾಕ್ಯಂ ಕಥಂಚನ ।
ತಸ್ಮಾತ್ತವ ಕರಿಷ್ಯಾಮಿ ಸುಖೋಪಾಯಂ ಶೃಣುಷ್ವ ತಂ ॥ ೨೮ ॥
ಯೇ ಕೇಚಿನ್ಮಾನವಾ ಭೋಗಾ ದೈವಿಕಾ ಯೇ ತಥಾಽಸುರಾಃ ।
ತೇ ಸರ್ವೇ ತವಗಾತ್ರೇಽತ್ರ ಸಂಪ್ರಯಾಸ್ಯಂತಿ ಸಂಶ್ರಯಂ ॥ ೨೯ ॥
ಭೋಗಾರ್ಥಮಿಷ್ಯತೇ ಕಾಯಂ ಯತೋ ಮರ್ತ್ಯಂ ಸುರಾಽಸುರೈಃ ।
ಸಮವಾಪ್ಸ್ಯಸಿ ತಾನ್ ಸರ್ವಾಂಸ್ತಸ್ಮಾತ್ತವ ಕಲೇವರಂ ॥ ೩೦ ॥

ಮಹಿಷ ಉವಾಚ :—

ಯದ್ಯೇವಂ ದೇವದೇವೇಶ ಭೋಗಪ್ರಾಪ್ತಿರ್ಭವೇನ್ಮಮ ।
ತಸ್ಮಾದವಧ್ಯಮೇವಾಽಸ್ತು ಗಾತ್ರಮೇತನ್ಮಮ ಪ್ರಭೋ ॥ ೩೧ ॥

---

೨೫. ಮಹಾತ್ಮನಾದ ಆ ದಾನವನು ಹೀಗೆ ಕಠಿನ ತಪಸ್ಸನ್ನಾಚರಿಸಲು ಬಹುಕಾಲ ಕಳೆಯಿತು.

೨೬. ಅನಂತರ ಸಂತುಷ್ಟನಾದ ಮಹಾದೇವನು ಅವನಿಗೆ ಪ್ರತ್ಯಕ್ಷನಾಗಿ "ದಾನವ! ನಿನಗೆ ಮೆಚ್ಚಿರುವೆನು. ವರವನ್ನು ಕೇಳಿಕೊ" ಎಂದನು.

೨೭. ಮಹಿಷನು ಹೇಳುತ್ತಾನೆ:—ನನ್ನನ್ನು ದುರ್ವಾಸನು ಶಪಿಸಿ ಮಹಿಷನನ್ನಾಗಿ ಮಾಡಿದ್ದಾನೆ. ಆದುದರಿಂದ ನನ್ನ ಆ ಪಶುತ್ವವು ನಿನ್ನ ಅನುಗ್ರಹದಿಂದ ಪರಿಹಾರವಾಗಲಿ.

೨೮–೨೯. ಶ್ರೀ ಭಗವಂತನು ಹೇಳುತ್ತಾನೆ:—ದುರ್ವಾಸನ ಆ ಮಾತನ್ನು ವ್ಯತ್ಯಾಸಗೊಳಿಸಲು ಶಕ್ಯವಲ್ಲ. ಆದುದರಿಂದ ನಿನಗೆ ಸುಖವುಂಟಾಗಲು ಉಪಾಯವನ್ನು ಮಾಡುವೆನು. ಅದನ್ನು ಕೇಳು. ದೈವ, ಮಾನುಷ, ಅಸುರ ಭೋಗಗಳೆಲ್ಲ ನಿನ್ನೀ ಶರೀರದಲ್ಲಿ ಉಂಟಾಗುವುವು.

೩೦. ದೇವ ದಾನವರು ಸುಖಭೋಗಕ್ಕಾಗಿ ಮನುಷ್ಯಶರೀರವನ್ನು ಅಪೇಕ್ಷಿಸುವುದರಿಂದ ನಿನ್ನ ಶರೀರವು ಆ ಎಲ್ಲ ಭೋಗಗಳನ್ನು ಪಡೆಯುವುದು.

೩೧–೩೨. ಮಹಿಷನು ಹೇಳುತ್ತಾನೆ:–ದೇವೇಶ! ನನಗೆ ಸುಖಭೋಗಗಳು ಈ ಶರೀರದಲ್ಲಿಯೇ ಉಂಟಾಗುವುದಾದರೆ ಈ ನನ್ನ ದೇಹವು ಹತ್ತು ವಿಧ

ದಶಾನಾಂ ದೇವಯೋನೀನಾಂ ಮನುಷ್ಯಾಣಾಂ ವಿಶೇಷತಃ ।
ತಿರ್ಯಗ್ಜಾನಾಂ ಚ ನಾಗಾನಾಂ ಪಕ್ಷಿಣಾಂ ಸುರಸತ್ತಮ ॥ ೩೨ ॥
ಶ್ರೀ ಭಗವಾನುವಾಚ :—
ನಾಽವಧ್ಯೋಽಸ್ತಿ ಧರಾಪೃಷ್ಠೇ ಕಶ್ಚಿದ್ದೇಹೀ ಚ ದಾನವ ।
ತಸ್ಮಾದೇಕಂ ಪರಿತ್ಯಕ್ತ್ವಾ ಶೇಷಾನ್ಪ್ರಾರ್ಥಯ ದೈತ್ಯಪ ॥ ೩೩ ॥
ತತಃ ಸ ಸುಚಿರಂ ಧ್ಯಾತ್ವಾ ಪ್ರೋವಾಚ ವೃಷಭಧ್ವಜಂ ।
ಸ್ತ್ರಿಯಮೇಕಾಂ ಪರಿತ್ಯಕ್ತ್ವಾ ನಾಽನ್ಯೇಭ್ಯಸ್ತು ವಧೋ ಮಮ ॥ ೩೪ ॥
ತಥಾಽತ್ರ ಮಾಮಕೇ ತೀರ್ಥೇ ಯಃಕಶ್ಚಿಚ್ಛ್ರದ್ಧಯಾಽನರಃ ।
ಕರೋತಿ ಸ್ನಾನಮವ್ಯಗ್ರಸ್ತ್ವಾಂ ಪಶ್ಯತಿ ತತಃ ಪರಂ ॥ ೩೫ ॥
ತಸ್ಯ ಸ್ಯಾತ್ತ್ವತ್ಪ್ರಸಾದೇನ ಸಂಸಿದ್ಧಿಃ ಸಾರ್ವಕಾಮಿಕೀ ।
ಸರ್ವೋಪದ್ರವನಾಶಶ್ಚ ತೇಜೋವೃದ್ಧಿಶ್ಚ ಶಂಕರ ॥ ೩೬ ॥
ಶ್ರೀ ಭಗವಾನುವಾಚ :—
ಮಾರ್ಗಶುಕ್ಲಚತುರ್ದಶ್ಯಾಂ ತೀರ್ಥೇಸ್ನಾತ್ವಾಽತ್ರ ತಾವಕೇ ।
ವಿಲೋಕಯಿಷ್ಯತಿ ಪ್ರೀತ್ಯಾ ಮಮ ಲಿಂಗಂ ತತಃ ಪರಂ ॥ ೩೭ ॥
ಭೂತಪ್ರೇತಪಿಶಾಚಾದಿಸಂಭವಾಸ್ತಸ್ಯ ತತ್ಕ್ಷಣಾತ್ ।
ದೋಷಾ ನಾಶಂ ಪ್ರಯಾಸ್ಯಂತಿ ತಥಾ ರೋಗಾ ಜ್ವರಾದಯಃ ॥ ೩೮ ॥

---

ದೇವತೆಗಳು, ಮನುಷ್ಯರು, ಪಶುಪಕ್ಷಿಗಳು, ನಾಗಗಳು ಇವರಿಗೆ ಅವಧ್ಯ ವಾಗಲಿ.

೩೩. ಶ್ರೀ ಭಗವಂತನು ಹೇಳುತ್ತಾನೆ:—ದೈತ್ಯೇಂದ್ರ! ಭೂಮಿಯಲ್ಲಿ ಒಂದು ಪ್ರಾಣಿಯೂ ಅವಧ್ಯವಾಗದಿರುವುದರಿಂದ ಅದೊಂದನ್ನು ಬಿಟ್ಟು ಉಳಿದು ವನ್ನು ಕೇಳಿಕೊ.

೩೪. ಅನಂತರ ಅವನು ಬಹಳಹೊತ್ತು ಆಲೋಚಿಸಿ ಶಂಕರನನ್ನು ಕುರಿತು ಇಂತೆಂದನು. "ಹೆಂಗಸೊಬ್ಬಳನ್ನು ಬಿಟ್ಟು ಬೇರೆ ಯಾರಿಂದಲೂ ನನಗೆ ವಧೆ ಯಾಗದಿರಲಿ.

೩೫–೩೬. ಹಾಗೆಯೇ ನನ್ನ ತೀರ್ಥದಲ್ಲಿ ಶ್ರದ್ಧೆಯಿಂದ ಮಿಂದು ನಿನ್ನನ್ನು ದರ್ಶನಮಾಡಿದ ಮಾನವನಿಗೆ ನಿನ್ನ ಅನುಗ್ರಹದಿಂದ ಸರ್ವೇಷ್ಟಪ್ರಾಪ್ತಿಯೂ, ಸಕಲೋಪದ್ರವನಾಶವೂ, ತೇಜೋವೃದ್ಧಿಯೂ ಆಗಲಿ."

೩೭–೩೮. ಶ್ರೀ ಭಗವಂತನು ಹೇಳುತ್ತಾನೆ:— ಮಾರ್ಗಶಿರ ಶುಕ್ಲ ಚತುರ್ದಶೀ ದಿನ ಈ ನಿನ್ನ ತೀರ್ಥದಲ್ಲಿ ಮಿಂದು ನನ್ನ ಲಿಂಗವನ್ನು ಪ್ರೀತಿಯಿಂದ ದರ್ಶನ ಮಾಡಿದವನ ಭೂತ, ಪ್ರೇತ, ಪಿಶಾಚಾದಿ ಸಂಬಂಧವಾದ ದೋಷಗಳೂ, ಜ್ವರ ಮೊದಲಾದ ರೋಗಗಳೂ ನಾಶವಾಗುವುವು.

ಏವಮುಕ್ತ್ವಾಽಥ ದೇವೇಶಸ್ತತಶ್ಚಾಽದರ್ಶನಂ ಗತಃ ।
ಮಹಿಷೋಽಪಿ ನಿಜಂ ಸ್ಥಾನಂ ಪ್ರಜಗಾಮ ತತಃ ಪರಂ ॥ ೩೯ ॥
ಸ ಗತ್ವಾ ದಾನವಾನ್ ಸರ್ವಾನ್ ಸಮಾಹೂಯ ತತಃ ಪರಂ ।
ಪ್ರೋವಾಚಾಮರ್ಷ ಸಂಯುಕ್ತಃ ಸಭಾಮಧ್ಯೇ ವ್ಯವಸ್ಥಿತಃ ॥ ೪೦ ॥
ಪಿತಾ ಮಮ ಪಿತೃವ್ಯಶ್ಚ ಯೇಚಾಽನ್ಯೇ ಮಮ ಪೂರ್ವಜಾಃ ।
ದಾನವಾ ನಿಹತಾ ದೇವೈರ್ವಾಸುದೇವಪುರೋಗಮೈಃ ॥ ೪೧ ॥
ತಸ್ಮಾತ್ತಾನ್ನಾಶಯಿಷ್ಯಾಮಿ ದೇವಾನಪಿ ಮಹಾಹವೇ ।
ಅಹಂ ತ್ರೈಲೋಕ್ಯರಾಜ್ಯಂ ಹಿ ಗ್ರಹೀಷ್ಯಾಮಿ ತತಃ ಪರಂ ॥ ೪೨ ॥
ಅಥ ತೇ ದಾನವಾಃ ಪ್ರೋಚುರ್ಯುಕ್ತಮೇತದನುತ್ತಮಂ ।
ಅಸ್ಮದೀಯಮಿದಂ ರಾಜ್ಯಂ ಯಚ್ಛಕ್ರಃ ಕುರುತೇ ದಿವಿ ॥ ೪೩ ॥
ತಸ್ಮಾದದ್ಯೈವ ಗತ್ವಾಽಽಶು ಹತ್ವೇಂದ್ರಂ ರಣಮೂರ್ಧನಿ ।
ದಿವ್ಯಾನ್ ಭೋಗಾನ್ ಪ್ರಭುಂಜಾನಾಃ ಸ್ಥಾಸ್ಯಾಮಃ ಸುಖಿನೋ ಭುವಿ ॥
ಏವಂ ತೇ ದಾನವಾಃ ಸರ್ವೇ ಕೃತ್ವಾ ಮಂತ್ರವಿನಿಶ್ಚಯಂ ।
ಮೇರುಶೃಂಗಂ ತತೋ ಜಗ್ಮುಃ ಸಭೃತ್ಯಬಲವಾಹನಾಃ ॥ ೪೫ ॥

---

೩೯. ಮಹೇಶ್ವರನು ಹೀಗೆಂದು ಹೇಳಿ ಅದೃಶ್ಯನಾದನು. ಅನಂತರ ಮಹಿಷನೂ ತನ್ನ ಸ್ಥಾನಕ್ಕೆ ತೆರಳಿದನು.

೪೦. ಅಲ್ಲಿ ಆ ಮಹಿಷನು ಸಕಲ ದಾನವರನ್ನೂ ಕರೆಯಿಸಿ ಸಭೆಯ ಮಧ್ಯದಲ್ಲಿ ಕೋಪದಿಂದ ಹೀಗೆಂದನು.

೪೧. "ವಿಷ್ಣು ಮೊದಲಾದ ದೇವತೆಗಳು ನನ್ನ ತಂದೆ, ದೊಡ್ಡ ತಂದೆ ಮೊದಲಾದ ಹಿಂದಿನವರನ್ನೆಲ್ಲರನ್ನೂ ಕೊಂದಿರುವರು.

೪೨. ಆದುದರಿಂದ ನಾನು ಘೋರಯುದ್ಧದಲ್ಲಿ ದೇವತೆಗಳನ್ನು ಕೊಲ್ಲುವೆನು. ಅನಂತರ ತ್ರಿಭುವನ ರಾಜ್ಯವನ್ನು ವಶಪಡಿಸಿಕೊಳ್ಳುವೆನು."

೪೩–೪೪. ತರುವಾಯ ಆ ದಾನವರು ಹೀಗೆಂದರು. "ಇದು ಅತ್ಯಂತ ಯುಕ್ತವಾದುದು. ನಮ್ಮ ರಾಜ್ಯವನ್ನು ದೇವಲೋಕದಲ್ಲಿರುವ ಶಕ್ರನು ಆಳುತ್ತಿರುವುದರಿಂದ ಈಗಲೇ ನಾವು ಶೀಘ್ರವಾಗಿ ದೇವಲೋಕಕ್ಕೆ ಹೋಗಿ ಇಂದ್ರನನ್ನು ಯುದ್ಧದಲ್ಲಿ ಕೊಂದು ದಿವ್ಯಭೋಗಗಳನ್ನನುಭವಿಸುತ್ತ ಸುಖದಿಂದ ದೇವಲೋಕದಲ್ಲಿರೋಣ."

೪೫. ಹೀಗೆ ಆ ದಾನವರೆಲ್ಲ ನಿಶ್ಚಯಿಸಿ ಭೃತ್ಯ, ಸೈನ್ಯ, ವಾಹನಗಳೊಡನೆ ಮೇರುಶೃಂಗಕ್ಕೆ ತೆರಳಿದರು.

ಅಥ ಶಕ್ರಾದಯೋ ದೇವಾ ದೃಷ್ಟ್ವಾ ತದ್ದಾನವೋದ್ಭವಂ ।
ಅಕಸ್ಮಾದೇವ ಸಂಪ್ರಾಪ್ತಂ ಬಲಂ ಶಸ್ತ್ರಾಽಸ್ತ್ರ ಸಂಯುತಂ ।
ಯುದ್ಧಾರ್ಥಂ ಸ್ವಪುರದ್ವಾರಿ ನಿರ್ಯಯುಸ್ತದನಂತರಂ ॥ ೪೬ ॥
ಆದಿತ್ಯಾ ವಸವೋ ರುದ್ರಾ ನಾಸತ್ಯಾ ಚ ಭಿಷಗ್ವರೌ ।
ವಿಶ್ವೇದೇವಾಸ್ತಥಾ ಸಾಧ್ಯಾಃ ಸಿದ್ಧಾ ವಿದ್ಯಾಧರಾಶ್ಚಯೇ ॥ ೪೭ ॥
ತತಃ ಸಮಭವದ್ಯುದ್ಧಂ ದೇವಾನಾಂ ಸಹ ದಾನವೈಃ ।
ಮಿಥಃ ಪ್ರಭರ್ತ್ಸ್ಯಮಾನಾನಾಂ ಮೃತ್ಯುಂ ಕೃತ್ವಾ ನಿವರ್ತನಂ ॥ ೪೮ ॥
ಏವಂ ಸಮಭವದ್ಯುದ್ಧಂ ಯಾವದ್ವರ್ಷತ್ರಯಂ ದಿವಿ ।
ರಕ್ತನದ್ಯೋಽತಿವಿಪುಲಾಸ್ತತ್ರಾಽತೀವ ಪ್ರಸುಸ್ರುವುಃ ॥ ೪೯ ॥
ಅನ್ಯಸ್ಮಿನ್ದಿವಸೇ ಶಕ್ರಂ ದೃಷ್ಟ್ವೈರಾವಣಸಂಸ್ಥಿತಂ ।
ತಂ ಶುಕ್ಲೇನಾತಪತ್ರೇಣ ಧ್ರಿಯಮಾಣೇನ ಮೂರ್ಧನಿ ।
ದೇವೈಃ ಪರಿವೃತಂ ದಿವ್ಯಶಸ್ತ್ರಪಾಣಿಭಿರೇವ ಚ ॥ ೫೦ ॥
ತತಃ ಕೋಪಪರೀತಾತ್ಮಾ ಮಹಿಷೋ ದಾನವಾಧಿಪಃ ।
ಮಹಾವೇಗಂ ಸಮಾಸಾದ್ಯ ತಸ್ಯೈವಾಭಿಮುಖೋ ಯಯೌ ॥ ೫೧ ॥
ಶೃಂಗಾಭ್ಯಾಂ ಚ ಸುತೀಕ್ಷ್ಣಾಭ್ಯಾಂ ತತಶ್ಚೈರಾವಣಂ ಗಜಂ ।
ವಿವ್ಯಾಧ ಹೃದಯೇ ಸೋಽಥ ಚಕ್ರೇ ರಾವಂ ಸುದಾರುಣಂ ॥ ೫೨ ॥
ತತಃ ಪರಾಙ್ಮುಖೋ ಭೂತ್ವಾ ಪಲಾಯನಪರಾಯಣಃ ।
ಅಭಿದುದ್ರಾವ ವೇಗೇನ ಪುರೀ ಯತ್ರಾಽಮರಾವತೀ ॥ ೫೩ ॥

---

೪೬–೪೭. ಅನಂತರ ಆಕಸ್ಮಾತ್ತಾಗಿ ಯುದ್ಧಕ್ಕೆ ತಮ್ಮ ಪಟ್ಟಣದ ದ್ವಾರಕ್ಕೆ ಬಂದ ಶಸ್ತ್ರಾಸ್ತ್ರಗಳಿಂದ ಕೂಡಿದ ಆ ದಾನವ ಬಲವನ್ನು ಕಂಡು ಇಂದ್ರಾದಿ ದೇವತೆಗಳೂ, ಆದಿತ್ಯ, ವಸು, ರುದ್ರ, ನಾಸತ್ಯ, ವಿಶ್ವೇದೇವ, ಸಾಧ್ಯ, ಸಿದ್ಧ, ವಿದ್ಯಾಧರ ಮೊದಲಾದವರೂ ಯುದ್ಧಕ್ಕಾಗಿ ಹೊರಟರು.

೪೮. ಬಳಿಕ ಪರಸ್ಪರ ಕಾಳೆಗಮಾಡಿ ಪ್ರತಿಪಕ್ಷದವರನ್ನು ಕೊಂದು ಹಿಂದಿರುಗುತ್ತಿರುವ ದೇವ ದಾನವರಿಗೆ ಘೋರಯುದ್ಧವು ನಡೆಯಿತು.

೪೯. ಹೀಗೆ ಮೂರು ವರ್ಷಕಾಲ ದೇವಲೋಕದಲ್ಲಿ ಕಾಳೆಗ ನಡೆಯಿತು. ಅಲ್ಲಿ ಅತ್ಯಂತ ವಿಸ್ತಾರವಾದ ರಕ್ತ ನದಿಗಳು ಹರಿದುವು.

೫೦–೫೧. ಒಂದು ದಿನ ಶ್ವೇತಚ್ಛತ್ರವನ್ನು ಧರಿಸಿ ಶಸ್ತ್ರಧಾರಿಗಳಾದ ದೇವತೆಗಳೊಡನೆ ಐರಾವತದಲ್ಲಿ ಕುಳಿತಿರುವ ಇಂದ್ರನನ್ನು ಕಂಡು ಕುಪಿತನಾದ ಮಹಿಷನು ವೇಗದಿಂದ ಅವನೆದುರಿಗೆ ಹೋದನು.

೫೨–೫೩. ಅವನು ತನ್ನ ತೀಕ್ಷ್ಣವಾದ ಕೊಂಬುಗಳಿಂದ ಐರಾವತದ ಎದೆಗೆ ತಿವಿಯಲು ಅದು ಭಯಂಕರವಾಗಿ ಕೂಗಿತು. ಅನಂತರ ಐರಾವತವು ಯುದ್ಧದಿಂದ ಹಿಂದಿರುಗಿ ಅಮರಾವತಿಗೆ ವೇಗದಿಂದ ಓಡಿತು.

ಅಂಕುಶೋತ್ಥಪ್ರಹಾರೈಶ್ಚ ಕ್ಷತಕುಂಭೋಽಪಿ ಭೂರಿಶಃ ।
ಮಹಾಮಾತ್ರನಿರುದ್ಧೋಽಪಿ ನ ಸ ತಸ್ಥೌ ಕಥಂಚನ ॥ ೫೪ ॥
ಅಥಾಽಬ್ರವೀತ್ಸಹಸ್ರಾಕ್ಷೋ ಮಹಿಷಂ ವೀಕ್ಷ್ಯ ಗರ್ವಿತಂ ।
ಗರ್ಜಮಾನಾಂಸ್ತಥಾ ದೈತ್ಯಾನ್ ಕ್ಷ್ವೇಡನಾಸ್ಫೋಟನಾದಿಭಿಃ ॥ ೫೫ ॥
ಮಾದ್ಯೈತ್ಯ ಪ್ರವಿಜಾನೀಹಿ ಯನ್ನಷ್ಟಸ್ತ್ರಿದಶಾಧಿಪಃ ।
ಏಷ ನಾಗೋ ರಣಂ ಹಿತ್ವಾ ವಿವಶೋ ಯಾತಿ ಮೇ ಬಲಾತ್ ॥ ೫೬ ॥
ತಸ್ಮಾತ್ತಿಷ್ಠ ಮುಹೂರ್ತಂ ತ್ವಂ ಯಾವದಾಸ್ಥಾಯ ಸದ್ರಥಂ ।
ನಾಶಯಾಮಿ ಚ ತೇ ದರ್ಪಂ ನಿಹತ್ಯ ನಿಶಿತೈಃ ಶರೈಃ ॥ ೫೭ ॥
ಏತಸ್ಮಿನ್ನಂತರೇ ಪ್ರಾಪ್ತೋ ಮಾತಲಿಃ ಶಕ್ರಸಾರಥಿಃ ।
ಸಹಸ್ರೈರ್ದಶಭಿರ್ಯುಕ್ತಂ ವಾಜಿನಾಂ ವಾತರಂಹಸಾಂ ॥ ೫೮ ॥
ತೇಽಥ ಮಾತಲಿನಾ ಅಶ್ವಾಃ ಪ್ರತೋದೇನ ಸಮಾಹತಾಃ ।
ಉತ್ಪತಂತ ಇವಾಕಾಶೇ ಸತ್ವರಂ ಸಂಪ್ರದುದ್ರುವುಃ ॥ ೫೯ ॥
ಅಥ ಚಾಪಂ ಸಮಾರೋಪ್ಯ ಸತ್ವರಂ ಪಾಕಶಾಸನಃ ।
ಶರೈರಾಶೀವಿಷಾಕಾರೈಶ್ಛಾದಯಾಮಾಸ ದಾನವಂ ॥ ೬೦ ॥

---

೫೪. ಅದು ಮಾವಟಿಗನು ಅಂಕುಶದಿಂದ ತಿವಿದು ಕಷ್ಟದಿಂದ ತಡೆದರೂ ನಿಲ್ಲಲಿಲ್ಲ.

೫೫. ಬಳಿಕ ದೇವೇಂದ್ರನು ಅಹಂಕಾರಗೊಂಡ ಮಹಿಷಾಸುರನನ್ನೂ, ಸಿಂಹ ನಾದ ಮೊದಲಾದುವುಗಳಿಂದ ಗರ್ಜಿಸುತ್ತಿರುವ ದೈತ್ಯರನ್ನೂ ನೋಡಿ ಇಂತೆಂದನು.

೫೬. "ಎಲೈ ಮಹಿಷನೆ! ದೇವೇಂದ್ರನು ನಾಶವಾದನೆಂದು ನೀನು ತಿಳಿಯ ಬೇಡ. ಈ ಐರಾವತವು ಯುದ್ಧವನ್ನು ತ್ಯಜಿಸಿ ಸ್ವತಂತ್ರವಾಗಿ ಬಲದಿಂದ ಓಡಿಹೋಗುತ್ತಿದೆ.

೫೭. ಆದುದರಿಂದ ನೀನು ಒಂದು ಮುಹೂರ್ತ ನಿಲ್ಲು. ನಾನು ರಥವನ್ನೇರಿ ತೀಕ್ಷ್ಣವಾದ ಬಾಣಗಳಿಂದ ಹೊಡೆದು ನಿನ್ನ ದರ್ಪವನ್ನಡಗಿಸುವೆನು."

೫೮. ಇಷ್ಟರಲ್ಲಿ ಇಂದ್ರನ ಸಾರಥಿಯಾದ ಮಾತಲಿಯು ಗಾಳಿಯ ವೇಗವುಳ್ಳ ಹತ್ತುಸಾವಿರ ಕುದುರೆಗಳು ಕಟ್ಟಿರುವ ರಥವನ್ನು ತಂದನು.

೫೯. ಆ ಮಾತಲಿಯು ಚಾಟಿಯಿಂದ ಕುದುರೆಗಳನ್ನು ಹೊಡೆಯಲು ಅವು ಆಕಾಶದಲ್ಲಿ ಹಾರುವುವೊ ಎಂಬಂತೆ ತ್ವರೆಯಾಗಿ ಓಡಿದುವು.

೬೦. ಅನಂತರ ಇಂದ್ರನು ಶೀಘ್ರವಾಗಿ ಬಿಲ್ಲಿಗೆ ಹೆದೆಯೇರಿಸಿ ಹಾವುಗಳಂತಿರುವ ಬಾಣಗಳಿಂದ ಮಹಿಷನನ್ನು ಮುಚ್ಚಿದನು.

ತತಃ ಸ ವೇಗಮಾಸ್ಥಾಯ ಭೂಯೋಽಪಿ ಕ್ರೋಧಮೂರ್ಛಿತಃ ।
ಅಭಿದುದ್ರಾವ ವೇಗೇನ ಸ ಯತ್ರ ತ್ರಿದಶಾಧಿಪಃ ॥ ೬೧ ॥
ತತಸ್ತಾನ್ ಸುಹಯಾಂಸ್ತಸ್ಯ ಶೃಂಗಾಭ್ಯಾಂ ವೇಗಮಾಶ್ರಿತಃ ।
ದಾರಯಾಮಾಸ ಸಂಕ್ರುದ್ಧ ಆವಿಧ್ಯಾವಿಧ್ಯಚಾಽಸಕೃತ್ ॥ ೬೨ ॥
ತತಸ್ತೇ ವಾಜಿನಸ್ತ್ರಸ್ತಾಃ ಸಂಜಗ್ಮುಃ ಕ್ಷತವಕ್ಷಸಃ ।
ರಕ್ತಪ್ಲಾವಿತಸರ್ವಾಂಗಾ ಮಾರ್ಗಮೈರಾವಣಸ್ಯ ಚ ॥ ೬೩ ॥
ತತಃ ಶಕ್ರರಥಂ ದೃಷ್ಟ್ವಾ ವಿಮುಖಂ ಸುರಸತ್ತಮಾಃ ।
ಸರ್ವೇ ಪ್ರದುದ್ರುವುರ್ಭೀತಾಸ್ತಸ್ಯ ಮಾರ್ಗಮುಪಾಶ್ರಿತಾಃ ॥ ೬೪ ॥
ತತಸ್ತು ದಾನವಾಃ ಸರ್ವೇ ಭಗ್ನಾನ್ ದೃಷ್ಟ್ವಾರಣೇ ಸುರಾನ್ ।
ಶಸ್ತ್ರವೃಷ್ಟಿಂ ಪ್ರಮುಂಚಂತೋ ಗರ್ಜಮಾನಾ ಯಥಾ ಘನಾಃ ॥ ೬೫ ॥
ಏತಸ್ಮಿನ್ನಂತರೇ ಪ್ರಾಪ್ತಾ ರಜನೀ ತಮಸಾವೃತಾ ।
ನ ಕಿಂಚಿತ್ತತ್ರ ಸಂಯಾತಿ ಕಸ್ಯಚಿದ್ದೃಷ್ಟಿಗೋಚರೇ ॥ ೬೬ ॥
ತತಸ್ತು ದಾನವಾಃ ಸರ್ವೇ ಯುದ್ಧಾನ್ನಿವೃತ್ಯ ಸರ್ವತಃ ।
ಮೇರುಶೃಂಗಂ ಸಮಾಶ್ರಿತ್ಯ ರಮ್ಯಂ ವಾಸಂ ಪ್ರಚಕ್ರಮುಃ ॥ ೬೭ ॥

---

೬೧. ಆ ಮಹಿಷನು ಮರಳಿ ಕುಪಿತನಾಗಿ ವೇಗದಿಂದ ಇಂದ್ರನಿರುವ ಸ್ಥಳಕ್ಕೆ ಓಡಿದನು.

೬೨. ಇಂದ್ರನ ಆ ಕುದುರೆಗಳನ್ನು ಕೊಂಬುಗಳಿಂದ ವೇಗವಾಗಿ ಅನೇಕ ಬಾರಿ ತಿವಿದು ತಿವಿದು ಸೀಳಿದನು.

೬೩. ಬಳಿಕ ಆ ಕುದುರೆಗಳು ಭಯಗೊಂಡುವೂ, ಘಾಯಗೊಂಡ ಎದೆಗಳುಳ್ಳುವೂ, ರಕ್ತದಿಂದ ನೆನೆದ ಸಮಸ್ತಾವಯವಗಳುಳ್ಳುವೂ ಆಗಿ ಐರಾವತದ ದಾರಿಯನ್ನೇ ಹಿಡಿದುವು.

೬೪. ಬಳಿಕ ವಿಮುಖವಾದ ಇಂದ್ರನ ರಥವನ್ನು ನೋಡಿ ದೇವತೆಗಳೆಲ್ಲ ಭಯದಿಂದ ಆ ರಥದ ದಾರಿಯನ್ನೇ ಹಿಡಿದು ಓಡಿದರು.

೬೫. ದಾನವರು ಯುದ್ಧದಲ್ಲಿ ಸೋತ ದೇವತೆಗಳನ್ನು ಕಂಡು ಮೇಘದಂತೆ ಗರ್ಜಿಸುತ್ತ ಅಸ್ತ್ರದ ಮಳೆಯನ್ನು ಸುರಿಸಿದರು.

೬೬. ಇಷ್ಟರಲ್ಲಿ ರಾತ್ರಿಯಾಗಿ ಕತ್ತಲೆಯು ಆವರಿಸಿತು. ಅಲ್ಲಿ ಯಾವ ವಸ್ತುವೂ ಕಾಣಿಸಲಿಲ್ಲ.

೬೭. ಬಳಿಕ ಸಮಸ್ತ ದಾನವರೂ ಯುದ್ಧದಿಂದ ಹಿಂದಿರುಗಿ ರಮ್ಯವಾದ ಮೇರುಶಿಖರವನ್ನಾಶ್ರಯಿಸಿ ವಾಸಮಾಡಿದರು.

ವಿಜಯೇನ ಸಮಾಯುಕ್ತಾಸ್ತುಷ್ಟಿಂ ಚ ಪರಮಾಂ ಗತಾಃ ।
ಕಥಾಶ್ಚಕ್ರುಶ್ಚ ಯುದ್ಧೋತ್ಥಾ ಯುದ್ಧಂ ತಸ್ಯ ಯಥಾಭವತ್ ॥ ೧೮ ॥
ದೇವಾಶ್ಚಾಽಪಿ ಹತೋತ್ಸಾಹಾಃ ಪ್ರಹಾರೈಃ ಕ್ಷತವಿಕ್ಷತಾಃ ।
ಮಂತ್ರಂ ಚಕ್ರುರ್ವಿಗ್ರಥೋ ಭೂತ್ವಾ ಬೃಹಸ್ಪತಿಪುರಃಸರಾಃ ॥ ೧೯ ॥
ಸಾಂಪ್ರತಂ ದಾನವೈಃ ಸೈನ್ಯಮಸ್ಮಾಕಂ ವಿಮುಖಂ ಕೃತಂ ।
ವಿಧ್ವಸ್ತಂ ಸುನಿರುತ್ಸಾಹಮಕ್ಷಮಂ ಯುದ್ಧಕರ್ಮಣಿ ॥ ೨೦ ॥
ತಸ್ಮಾತ್ತ್ಯಕ್ತ್ವಾ ಪ್ರವೇಕ್ಷ್ಯಾಮಃ ಪುರೀಂಚೈವಾಽಮರಾವತೀಂ ।
ಬ್ರಹ್ಮಣಃ ಸದನಂ ಯತ್ರ ನ ಸ್ಯಾದ್ದಾನವಜಂ ಭಯಂ ॥ ೨೧ ॥
ಏವಂ ತೇ ನಿಶ್ಚಯಂ ಕೃತ್ವಾ ಬ್ರಹ್ಮಲೋಕಂ ತತೋ ಗತಾಃ ।
ಶೂನ್ಯಾಂ ಶಕ್ರಪುರೀಂ ಕೃತ್ವಾ ಸರ್ವೇ ದೇವಾಃ ಸವಾಸವಾಃ ॥ ೨೨ ॥
ತತಃ ಪ್ರಾತಃ ಸಮುತ್ಥಾಯ ದಾನವಾಸ್ತೇ ಪ್ರಹರ್ಷಿತಾಃ ।
ಶೂನ್ಯಾಂ ಶಕ್ರಪುರೀಂ ದೃಷ್ಟ್ವಾ ವಿವಿಶುಸ್ತದನಂತರಂ ॥ ೨೩ ॥
ಅಥ ಶಾಕ್ರೇಽಪದೇ ದೈತ್ಯಂ ಮಹಿಷಂ ಸಂನಿಧಾಯ ಚ ।
ಪ್ರಣೇಮುಸ್ತುಷ್ಟಿಸಂಯುಕ್ತಾಶ್ಚಕ್ರುಶ್ಚೈವ ಮಹೋತ್ಸವಂ ॥ ೨೪ ॥

---

೧೮. ಅಲ್ಲಿ ಜಯಶಾಲಿಗಳಾದ ಅವರು ಸಂತೋಷದಿಂದ ಯುದ್ಧದ ವಿಷಯ ವನ್ನು ಮಾತಾಡಿಕೊಂಡರು.

೧೯. ದೇವತೆಗಳೂ ಭಗ್ನೋತ್ಸಾಹರೂ, ಪ್ರಹಾರಗಳಿಂದ ಘಾಯ ಗೊಂಡವರೂ ಆಗಿ ಬೃಹಸ್ಪತಿಯನ್ನು ಮುಂದಿರಿಸಿಕೊಂಡು ಆಲೋಚನೆ ಮಾಡಿ ದರು.

೨೦. ಈಗ ದಾನವರು ನಮ್ಮ ಸೈನ್ಯವನ್ನು ವಿಮುಖವಾದುದನ್ನಾಗಿಯೂ, ಉತ್ಸಾಹ ರಹಿತವನ್ನಾಗಿಯೂ, ಯುದ್ಧಕಾರ್ಯದಲ್ಲಿ ಅಸಮರ್ಥವಾದುದನ್ನಾ ಗಿಯೂ ಮಾಡಿ ಹಾಳುಮಾಡಿದರು.

೨೧. ಆದುದರಿಂದ ಈ ಅಮರಾವತಿಯನ್ನು ತ್ಯಜಿಸಿ ದಾನವರ ಭಯವಿಲ್ಲದ ಸತ್ಯಲೋಕವನ್ನು ಸೇರೋಣ.

೨೨. ಇಂದ್ರಾದಿ ದೇವತೆಗಳು ಹೀಗೆ ನಿಶ್ಚಯಿಸಿ ಅಮರಾವತಿಯನ್ನು ಬರಿದು ಮಾಡಿ ಬ್ರಹ್ಮಲೋಕಕ್ಕೆ ತೆರಳಿದರು.

೨೩. ತರುವಾಯ ಆ ದಾನವರು ಬೆಳಗ್ಗೆ ಎದ್ದು ದೇವತೆಗಳಿಲ್ಲದ ಅಮರಾ ವತಿಯನ್ನು ನೋಡಿ ಹರ್ಷಗೊಂಡು ಅದನ್ನು ಹೊಕ್ಕರು.

೨೪. ಅಲ್ಲಿ ಇಂದ್ರನ ಪದವಿಗೆ ಮಹಿಷನನ್ನೇರಿಸಿ ಅವನನ್ನು ಸಂತೋಷ ದಿಂದ ವಂದಿಸಿ ಮಹೋತ್ಸವವನ್ನಾಚರಿಸಿದರು.

ಜಗೃಹುರ್ಯಜ್ಞಭಾಗಾಂಶ್ಚ ಸರ್ವೇಷಾಂ ತ್ರಿದಿವೌಕಸಾಂ ।
ದೇವಸ್ಥಾನೇಷು ಸರ್ವೇಷು ದೇವತಾಭಿಮತಾಶ್ಚಯೇ ॥ ೭೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದೇವಸೇನಾಪರಾಜಯವರ್ಣನಂ"
ನಾಮೈಕೋನವಿಂಶತ್ಯುತ್ತರಶತತಮೋಽಧ್ಯಾಯಃ

---

೭೫. ದೇವತೆಗಳ ಸ್ಥಾನವನ್ನೆಲ್ಲ ವ್ಯಾಪಿಸಿ ತಾವು ದೇವತೆಗಳೆಂದು ಭಾವಿಸಿ ಸಮಸ್ತ ದೇವತೆಗಳ ಯಜ್ಞಭಾಗಗಳನ್ನು ತೆಗೆದುಕೊಂಡರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದೇವಸೇನಾಪರಾಜಯವರ್ಣನ"ವೆಂಬ
ನೂರಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶತ್ಯುತ್ತರಶತತಮೋಽಧ್ಯಾಯಃ

### ಕಾತ್ಯಾಯನ್ಯುತ್ಪತ್ತಿವರ್ಣನಂ

ಸೂತ ಉವಾಚ :—

ಏವಂ ಶಕ್ರಾದಯೋ ದೇವಾ ಜಿತಾಸ್ತೇತು ರಣಾಜಿರೇ ।
ಮಹಿಷೇಣ ತತೋ ರಾಜ್ಯಂ ತ್ರೈಲೋಕ್ಯೇಽಪಿ ಚಕಾರ ಸಃ ॥ ೧ ॥
ಯತ್ಕಿಂಚಿತ್ರಿಷು ಲೋಕೇಷು ಸಾರಭೂತಂ ಪ್ರಪಶ್ಯತಿ ।
ಗಜವಾಜಿ ರಥಾಽಶ್ವಾದಿ ಸರ್ವಂ ಗೃಹ್ಣಾತಿ ಸೋಽಸುರಃ ॥ ೨ ॥
ಏವಂ ಪ್ರವರ್ತಮಾನಸ್ಯ ತಸ್ಯ ದೇವಾಃ ಸವಾಸವಾಃ ।
ವಧಾರ್ಥಂ ಮಿಲಿತಾಶ್ಚಕ್ರುಃ ಕಥಾ ದುಃಖಸಮನ್ವಿತಾಃ ॥ ೩ ॥
ಏತಸ್ಮಿನ್ನಂತರೇ ಪ್ರಾಪ್ತೋ ನಾರದೋ ಮುನಿಸತ್ತಮಃ ।
ದೃಷ್ಟ್ವಾ ತಂ ಮಾಹಿಷಂ ಸರ್ವಂ ವ್ಯವಹಾರಂ ಮಹೋತ್ಕಟಂ ॥ ೪ ॥
ತತಶ್ಚ ಕಥಯಾಮಾಸ ಸರ್ವಂ ತೇಷಾಂ ಸವಿಸ್ತರಂ ।
ತಸ್ಯ ಸಂಚೇಷ್ಟಿತಂ ಭೂರಿ ಲೋಕತ್ರಯ ನಿಪೀಡನಂ ॥ ೫ ॥

---

### ಕನ್ನಡದ ಅನುವಾದ

### ಕಾತ್ಯಾಯನ್ಯುತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ಹೀಗೆ ಮಹಿಷನು ಯುದ್ಧದಲ್ಲಿ ಇಂದ್ರಾದಿ ದೇವತೆಗಳನ್ನು ಜಯಿಸಿ ತ್ರೈಲೋಕ್ಯರಾಜ್ಯವನ್ನಾಳಿದನು.

೨. ಅವನು ಮೂರು ಲೋಕಗಳಲ್ಲಿ ತಾನು ನೋಡಿದ ಉತ್ತಮವಾದ ಆನೆ, ಕುದುರೆ, ರಥ ಮೊದಲಾದುವುಗಳನ್ನು ಅಪಹರಿಸಿದನು.

೩. ಅವನು ಹೀಗಿರಲು ಇಂದ್ರಾದಿ ಸುರರು ದುಃಖಗೊಂಡು ಅವನನ್ನು ವಧಿಸಲು ಒಟ್ಟಿಗೆ ಸೇರಿ ಮಾತಾಡಿಕೊಂಡರು.

೪. ಇಷ್ಟರಲ್ಲಿ ನಾರದ ಮುನಿವರ್ಯನು ಮಹಿಷನ ಸಮಸ್ತ ಉತ್ಕಟ ವ್ಯವಹಾರವನ್ನೂ ನೋಡಿ ದೇವತೆಗಳೆಡೆಗೆ ಬಂದನು.

೫. ಅವನು ದೇವತೆಗಳಿಗೆ ಮಹಿಷನ ಸಕಲ ಕಾರ್ಯಗಳನ್ನೂ, ಅವನು ಮೂರು ಲೋಕಗಳನ್ನು ಪೀಡಿಸುತ್ತಿರುವ ವಿಧಾನವನ್ನೂ ವಿಸ್ತಾರವಾಗಿ ಹೇಳಿದನು.

ಅಥ ತೇಷಾಂ ಮಹಾಕೋಪೋ ಭೂಯ ಏವಾಽಭ್ಯವರ್ಧತ ।
ನಾರದಸ್ಯ ವಚಃ ಶ್ರುತ್ವಾ ತಾದೃಗ್ಲೋಕಕಥೋದ್ಭವಂ ॥ ೬ ॥
ತೇಷಾಂ ಕೋಪೋದ್ಭವೋ ಧರ್ಮೋ ವಕ್ತ್ರದ್ವಾರೇಣ ನಿರ್ಯಯೌ ।
ಯೇನ ದಿಙ್ಮಂಡಲಂ ಸರ್ವಂ ತತ್ಕ್ಷಣಾತ್ಕಲುಷೀಕೃತಂ ॥ ೭ ॥
ಏತಸ್ಮಿನ್ನಂತರೇ ತತ್ರ ಕಾರ್ತಿಕೇಯಃ ಸಮಭ್ಯಯಾತ್ ।
ಪಪ್ರಚ್ಛ ಚ ಕಿಮೇತದ್ಧಿ ದೇವಾನಾಂ ಕೋಪಕಾರಣಂ ।
ಯೇನ ಕಾಲುಷ್ಯತಾಂ ಪ್ರಾಪ್ತಂ ದಿಕ್ಚಕ್ರಂ ಸಕಲಂ ಮುನೇ ॥ ೮ ॥

ನಾರದ ಉವಾಚ:—

ಏತೇಷಾಂ ಸಾಂಪ್ರತಂ ಸ್ಕಂದ ಮಯಾ ವಾರ್ತಾ ನಿವೇದಿತಾ ।
ತ್ರೈಲೋಕ್ಯಂ ದಾನವೈಃ ಸರ್ವೈರ್ಯಥಾ ನೀತಂ ಮದೋತ್ಕಟೈಃ ॥ ೯ ॥
ಸ್ತ್ರೀರತ್ನಮಶ್ವರತ್ನಂ ವಾ ನ ಕಿಂಚಿತ್ಕಸ್ಯಚಿದ್ಗೃಹೇ ।
ತೇ ದೃಷ್ಟ್ವಾ ಮೋಕ್ಷಯಂತಿಸ್ಮ ದುರ್ನಿವಾರ್ಯಾ ಮದೋತ್ಕಟಾಃ ॥ ೧೦ ॥
ತಚ್ಛ್ರುತ್ವಾ ಕಾರ್ತಿಕೇಯಸ್ಯ ವಿಶೇಷಾತ್ಸಂಪ್ರಜಾಯತ ।
ವಕ್ತ್ರದ್ವಾರೇಣ ದೇವಾನಾಂ ಯಥಾ ಕೋಪಃ ಸಮಾಗತಃ ॥ ೧೧ ॥
ಏತಸ್ಮಿನ್ನಂತರೇ ಜಾತಾ ತತ್ಕೋಪಾಂತೇ ಕುಮಾರಿಕಾ ।
ಸರ್ವಲಕ್ಷಣ ಸಂಪನ್ನಾ ದಿವ್ಯತೇಜೋಽನ್ವಿತಾ ಶುಭಾ ॥ ೧೨ ॥

---

೬. ಆಗ ತ್ರೈಲೋಕ್ಯದ ಸಂಬಂಧವಾದ ನಾರದನ ಮಾತನ್ನು ಕೇಳಿ ದೇವತೆಗಳ ಕೋಪವು ಮರಳಿ ಕೆರಳಿತು.

೭. ಅವರ ಕೋಪದಿಂದುಂಟಾದ ಉಷ್ಣವು ಬಾಯಿಯಿಂದ ಹೊರಟು ಕೂಡಲೆ ದಿಙ್ಮಂಡಲವನ್ನು ಕೊಳೆಗೊಳಿಸಿತು.

೮. ಈ ಸಮಯದಲ್ಲಿ ಅಲ್ಲಿರುವ ಗುಹನು ನಾರದನನ್ನು ಕುರಿತು, "ಮುನಿಯೆ! ದೇವತೆಗಳ ಈ ಕೋಪಕ್ಕೆ ಕಾರಣವೇನು? ಅದರಿಂದ ಸಕಲ ದಿಙ್ಮಂಡಲವು ಕೊಳೆಗೊಂಡಿದೆಯಷ್ಟೆ" ಎಂದು ಕೇಳಿದನು.

೯. ನಾರದನು ಹೇಳುತ್ತಾನೆ:—ಸ್ಕಂದ! ನಾನೀಗ ಈ ದೇವತೆಗಳಿಗೆ ಮತ್ತರಾದ ದಾನವರು ಮೂರು ಲೋಕಗಳಲ್ಲೆ ಸಗಿದ ಕಾರ್ಯವನ್ನು ತಿಳಿಸಿದೆನು.

೧೦. ಯಾರ ಮನೆಯಲ್ಲಿಯೂ ಈಗ ಉತ್ತಮಸ್ತ್ರೀಯಾಗಲಿ, ಕುದುರೆಯಾಗಲಿ ಇಲ್ಲ. ಮದಿಸಿದ ದಾನವರು ಅವುಗಳನ್ನು ನೋಡಿದೊಡನೆ ಅಪಹರಿಸುತ್ತಾರೆ.

೧೧. ಸ್ಕಂದನಿಗೆ ಆ ಮಾತನ್ನು ಕೇಳಿದ ಕೂಡಲೆ ದೇವತೆಗಳಂತೆಯೇ ಕೋಪವು ಉಕ್ಕಿ ಬಾಯಿಯಿಂದ ಉಷ್ಣವು ಹೊರಟಿತು.

೧೨. ಇಷ್ಟರಲ್ಲಿ ಆ ಕೋಪದ ಕೊನೆಯಲ್ಲಿಯೇ ಸಮಸ್ತ ಲಕ್ಷಣಗಳಿಂದ ಕೂಡಿದವಳೂ, ದಿವ್ಯತೇಜಸ್ಸುಳ್ಳವಳೂ, ಮಂಗಳಕರಳೂ ಆದ ಕುಮಾರಿಯೊಬ್ಬಳು ಹುಟ್ಟಿದಳು.

ಕಾರ್ತಿಕೇಯಸ್ಯ ಕೋಪೇನ ಕೋಪೇ ಮಿಶ್ರೇ ದಿವೌಕಸಾಂ ।
ಯಸ್ಮಾಜ್ಜಾತಾಽತ್ರ ಸಾ ಕನ್ಯಾ ತಸ್ಮಾತ್ಕಾತ್ಯಾಯನೀ ಸ್ಮೃತಾ ॥ ೧೩ ॥
ತತಸ್ತಸ್ಯಾ ದದೌ ವಜ್ರಮಾಯುಧಂ ತ್ರಿದಶಾಧಿಪಃ ।
ಶಕ್ತಿಂ ಸ್ಕಂದಃ ಸುತೀಕ್ಷ್ಣಾಗ್ರಾಂ ಚಾಪಂ ದೇವೋ ಜನಾರ್ದನಃ ॥ ೧೪ ॥
ತ್ರಿಶೂಲಂ ಚ ಮಹಾದೇವಃ ಪಾಶಂ ಚ ವರುಣಃ ಸ್ವಯಂ ।
ಆದಿತ್ಯಶ್ಚ ಸಿತಾನ್ ಬಾಣಾಂಶ್ಚಂದ್ರಮಾಶ್ಚರ್ಮಚೋತ್ತಮಂ ॥ ೧೫ ॥
ನಿಸ್ತ್ರಿಂಶಂ ನಿರ್ಋತಿಸ್ತುಷ್ಟ ಉಲ್ಮುಕಂ ಚ ಹುತಾಶನಃ ।
ವಾಯುಶ್ಚ ಛುರಿಕಾಂ ತೀಕ್ಷ್ಣಾಂ ಧನದಃ ಪರಿಘಂ ತಥಾ ॥ ೧೬ ॥
ದಂಡಂ ಪ್ರೇತಾಧಿಪೋ ರೌದ್ರಂ ವಧಾಯ ಸುರವಿದ್ವಿಷಾಂ ।
ದ್ವಾದಶೈವಂ ಸಮಾಲೋಕ್ಯ ಸಾಽಽಯುಧಾನಿ ದ್ವಿಜೋತ್ತಮಾಃ ॥ ೧೭ ॥
ಕಾತ್ಯಾಯನೀ ತತಶ್ಚಕ್ರೇ ಭುಜದ್ವಾದಶಕಂ ತದಾ ।
ಜಗ್ರಾಹ ಚ ದ್ರುತಂ ತಾನಿ ಸುಶಸ್ತ್ರಾಣಿ ದಿವೌಕಸಾಂ ॥ ೧೮ ॥
ತತಃ ಪ್ರೋವಾಚ ತಾನ್‌ಸರ್ವಾನ್ ಸಂಪ್ರಹೃಷ್ಟತನೂರುಹಾ ।
ಯದರ್ಥಂ ವಿಬುಧಶ್ರೇಷ್ಠಾಃ ಸೃಷ್ಟಾ ತದ್ಬ್ರೂತ ಮಾಚಿರಂ ।
ಸರ್ವಂ ಕಾರ್ಯಂ ಕರಿಷ್ಯಾಮಿ ಯುಷ್ಮಾಕಂ ನಾಽತ್ರ ಸಂಶಯಃ ॥ ೧೯ ॥
ದೇವಾ ಊಚುಃ:—
ಮಹಿಷೋ ದಾನವೋ ರೌದ್ರಃ ಸಮುತ್ಪನ್ನೋಽತ್ರ ಸಾಂಪ್ರತಂ ॥ ೨೦ ॥

---

೧೩. ದೇವತೆಗಳ ಕೋಪವು ಸ್ಕಂದನ ಕೋಪದಿಂದ ಮಿಶ್ರವಾದ ಕೂಡಲೆ ಜನಿಸಿದ ಕಾರಣ ಆ ಕನ್ಯೆಯು ಕಾತ್ಯಾಯನೀ ಎನ್ನಿಸಿಕೊಂಡಳು.

೧೪–೧೮. ಅನಂತರ ಅವಳಿಗೆ ದಾನವರ ವಧೆಗಾಗಿ ಇಂದ್ರನು ವಜ್ರವನ್ನೂ, ಸ್ಕಂದನು ಹರಿತವಾದ ಶಕ್ತ್ಯಾಯುಧವನ್ನೂ, ವಿಷ್ಣುವು ಬಿಲ್ಲನ್ನೂ, ಮಹಾದೇವನು ತ್ರಿಶೂಲವನ್ನೂ, ವರುಣನು ಪಾಶವನ್ನೂ, ಆದಿತ್ಯನು ಶ್ವೇತ ಬಾಣಗಳನ್ನೂ, ಚಂದ್ರನು ಉತ್ತಮವಾದ ಗುರಾಣಿಯನ್ನೂ, ನಿರ್ಋತಿಯು ಕತ್ತಿಯನ್ನೂ, ಅಗ್ನಿಯು ಬೆಂಕಿಕೊಳ್ಳಿಯನ್ನೂ, ವಾಯುವು ನಿಶಿತವಾದ ಚೂರಿಯನ್ನೂ, ಕುಬೇರನು ಪರಿಘಾಯುಧವನ್ನೂ, ಯಮನು ದಂಡವನ್ನೂ ಕೊಟ್ಟರು. ಅವಳು ಹೀಗೆ ಹನ್ನೆರಡು ಆಯುಧಗಳನ್ನು ನೋಡಿ ಹನ್ನೆರಡು ಕೈಗಳನ್ನು ನಿರ್ಮಿಸಿಕೊಂಡು ದೇವತೆಗಳ ಆ ಆಯುಧಗಳನ್ನು ಶೀಘ್ರವಾಗಿ ತೆಗೆದುಕೊಂಡಳು.

೧೯. ಬಳಿಕ ಅವಳು ರೋಮಾಂಚಗೊಂಡವಳಾಗಿ ಆ ಸಕಲ ಸುರರನ್ನು ಕುರಿತು, "ದೇವತೆಗಳಿರ! ನನ್ನನ್ನೇಕೆ ಸೃಷ್ಟಿಸಿದಿರಿ? ಅದನ್ನು ಶೀಘ್ರವಾಗಿಹೇಳಿರಿ. ನಿಮ್ಮ ಆ ಕಾರ್ಯವನ್ನು ನಿಶ್ಚಯವಾಗಿ ನೆರವೇರಿಸುವೆನು" ಎಂದಳು.

೨೦. ದೇವತೆಗಳು ಹೇಳುತ್ತಾರೆ:—ಈಗ ಇಲ್ಲಿ ಭಯಂಕರನಾದ ಮಹಿಷನೆಂಬ ದಾನವನು ಹುಟ್ಟಿದ್ದಾನೆ.

ಅವಧ್ಯಃ ಸರ್ವಭೂತಾನಾಂ ಮಾನುಷಾಣಾಂ ವಿಶೇಷತಃ ।
ಮುಕ್ತ್ವೈಕಾಂ ಯೋಷಿತಂ ತೇನ ತ್ವಮಸ್ಮಾಭಿರ್ವಿನಿರ್ಮಿತಾ ॥ ೨೧ ॥
ತಸ್ಮಾತ್ತ್ವಂ ಸಾಂಪ್ರತಂ ಗಚ್ಛ ವಿಂಧ್ಯಾಖ್ಯಂ ಪರ್ವತೋತ್ತಮಂ ।
ತಪಸ್ತತ್ರ ಕುರುಷ್ವೋಗ್ರಂ ತೇಜೋ ಯೇನಾಽಭಿವರ್ಧತೇ ॥ ೨೨ ॥
ತತಸ್ತು ತೇಜಃಸಂಯುಕ್ತಾಂ ತ್ವಾಂ ಜ್ಞಾತ್ವಾ ವಯಮೇವ ಹಿ ।
ಅಗ್ರೇ ಧೃತ್ವಾ ಕರಿಷ್ಯಾಮೋ ಯುದ್ಧಂ ತೇನ ದುರಾತ್ಮನಾ ॥ ೨೩ ॥
ತತಸ್ತ್ವಚ್ಛಸ್ತ್ರನಿರ್ದಗ್ಧಃ ಪಂಚತ್ವಂ ಸ ಪ್ರಯಾಸ್ಯತಿ ।
ವಯಂ ಚ ತ್ರಿದಶೈಶ್ವರ್ಯಂ ಲಭಿಷ್ಯಾಮೋ ಹತದ್ವಿಷಃ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕಾತ್ಯಾಯನ್ಯುತ್ಪತ್ತಿವರ್ಣನಂ" ನಾಮ
ವಿಂಶತ್ಯುತ್ತರಶತತಮೋಽಧ್ಯಾಯಃ

---

೨೧. ಅವನನ್ನು ಒಬ್ಬಹೆಂಗಸನ್ನು ಬಿಟ್ಟು ಇತರ ಯಾವ ಪ್ರಾಣಿಗಳೂ, ವಿಶೇಷವಾಗಿ ಮಾನವರೂ ಕೊಲ್ಲಲಾರರು. ಆದುದರಿಂದ ನಾವು ನಿನ್ನನ್ನು ಸೃಷ್ಟಿಸಿದ್ದೇವೆ.

೨೨. ಆದುದರಿಂದ ನೀನು ಈಗ ವಿಂಧ್ಯಗಿರಿಗೆ ಹೋಗು. ಅಲ್ಲಿ ಉಗ್ರ ತಪವನ್ನಾಚರಿಸು. ಅದರಿಂದ ನಿನ್ನ ತೇಜಸ್ಸು ಹೆಚ್ಚುವುದು.

೨೩. ಅನಂತರ ನಾವು ನೀನು ತೇಜಸ್ವಿನಿಯಾಗಿರುವುದನ್ನರಿತು ನಿನ್ನನ್ನು ಮುಂದಿರಿಸಿಕೊಂಡು ಆ ದುಷ್ಟನೊಡನೆ ಯುದ್ಧಮಾಡುವೆವು.

೨೪. ಆಗ ಆ ಮಹಿಷನು ನಿನ್ನ ಶಸ್ತ್ರಗಳಿಂದ ದಗ್ಧನಾಗಿ ಮಡಿಯುವನು. ಶತ್ರುಗಳಿಲ್ಲದ ನಾವು ದೇವತೆಗಳ ಐಶ್ವರ್ಯವನ್ನು ಪಡೆಯುವೆವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕಾತ್ಯಾಯನ್ಯುತ್ಪತ್ತಿವರ್ಣನ"ವೆಂಬ
ನೂರಿಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕವಿಂಶತ್ಯುತ್ತರಶತತಮೋಽಧ್ಯಾಯಃ

## ಮಹಿಷಾಸುರಪರಾಜಯ ಕಾತ್ಯಾಯನೀಮಾಹಾತ್ಮ್ಯವರ್ಣನಂ

ಸೂತ ಉವಾಚ:—

ದೇವಾನಾಂ ತದ್ವಚಃ ಶ್ರುತ್ವಾ ತತಃ ಸಾ ಪರಮೇಶ್ವರೀ ।
ಪ್ರೋವಾಚ ವಾಹನಂ ಕಿಂಚಿದ್ದೇವಾ ಯಚ್ಛಂತು ಮೇ ದ್ರುತಂ ॥ ೧ ॥
ತತಃ ಸಿಂಹಂ ದದೌ ಗೌರೀ ಯಾನಾರ್ಥಂ ವಿಕೃತಾಸನಂ ।
ತಮಾರುಹ್ಯ ಪ್ರತಸ್ಥೇ ಸಾ ತತೋ ವಿಂಧ್ಯಂ ನಗಂ ಪ್ರತಿ ॥ ೨ ॥
ತಸ್ಯೈಕಂ ಶೃಂಗಮಾಸ್ಥಾಯ ರಮ್ಯಂ ಶ್ರೇಷ್ಠದ್ರುಮಾನ್ವಿತಂ ।
ಫಲಪುಷ್ಪಸಮಾಕೀರ್ಣಂ ಲತಾಮಂಡಪಮಂಡಿತಂ ॥ ೩ ॥
ತತಸ್ತಪೋಽಕರೋತ್ಸಾಧ್ವೀ ತೀವ್ರವ್ರತಪರಾಯಣಾ ।
ಸಂನಿಯಮ್ಯೇಂದ್ರಿಯವರ್ಗಂ ಸ್ವಂ ಧ್ಯಾಯಮಾನಾ ಮಹೇಶ್ವರಂ ॥ ೪ ॥
ಯಥಾ ಯಥಾ ತಪೋವೃದ್ಧಿಸ್ತಸ್ಯಾಃ ಸಂಜಾಯತೇ ದ್ವಿಜಾಃ ।
ತಥಾ ರೂಪಂ ಚ ಕಾಂತಿಶ್ಚ ಶರೀರೇ ಪ್ರತಿವರ್ಧತೇ ॥ ೫ ॥

---

## ಕನ್ನಡದ ಅನುವಾದ

### ಮಹಿಷಾಸುರಪರಾಜಯ ಕಾತ್ಯಾಯನೀಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಬಳಿಕ ಆ ಕಾತ್ಯಾಯನಿಯು ದೇವತೆಗಳ ಆ ಮಾತನ್ನು ಕೇಳಿ ಶೀಘ್ರವಾಗಿ ನನಗೊಂದು ವಾಹನವನ್ನು ಕೊಡಿರಿ ಎಂದಳು.

೨. ಆಗ ಗೌರಿಯು ವಾಹನಕ್ಕಾಗಿ ವಿಕಾರ ಮುಖದ ಸಿಂಹವನ್ನಿತ್ತಳು. ಆ ದೇವಿಯು ಅದನ್ನೇರಿ ವಿಂಧ್ಯಾಚಲಕ್ಕೆ ಹೊರಟಳು.

೩–೪. ಅವಳು ಅಲ್ಲಿ ಆ ವಿಂಧ್ಯಗಿರಿಯ ಮನೋಹರವೂ, ಉತ್ತಮವಾದ ವೃಕ್ಷಗಳುಳ್ಳುದೂ, ಫಲಪುಷ್ಪಗಳಿಂದ ತುಂಬಿರುವುದೂ, ಲತೆಗಳ ಮಂಡಪಗಳಿಂದ ಅಲಂಕಾರಗೊಂಡುದೂ ಆದ ಒಂದು ಶಿಖರದಲ್ಲಿ ಕುಳಿತು ಕಠಿನವ್ರತನಿರತಳೂ, ತನ್ನ ಇಂದ್ರಿಯಗಳನ್ನು ಜಯಿಸಿ ಶಂಕರನನ್ನು ಧ್ಯಾನಿಸುವವಳೂ ಆಗಿ ತಪಸ್ಸನ್ನು ಮಾಡಿದಳು.

೫. ದ್ವಿಜರೆ! ಅವಳ ತಪಸ್ಸು ಹೆಚ್ಚಿದ ಹಾಗೆಲ್ಲ ದೇಹದಲ್ಲಿ ಕಾಂತಿಯೂ, ಸೌಂದರ್ಯವೂ ಹೆಚ್ಚುತ್ತಿತ್ತು.

ಏತಸ್ಮಿನ್ನಂತರೇ ಪ್ರಾಪ್ತಾಸ್ತತ್ರ ದೈತ್ಯೇಶಕಿಂಕರಾಃ ।
ತೇ ತಾಂ ದೃಷ್ಟ್ವಾ ವ್ರತೋಪೇತಾಮತ್ಯದ್ಭುತವಪುರ್ಧರಾಂ ।
ಗತ್ವಾ ಪ್ರೋಚುಃ ಸ್ವನಾಥಸ್ಯ ಮಹಿಷಸ್ಯ ದುರಾತ್ಮನಃ ॥ ೬ ॥
ಚಾರಾ ಊಚುಃ:—
ಭ್ರಮಮಾಣೈರ್ಧರಾಪೃಷ್ಠೇ ದೃಷ್ಟಾಽಪೂರ್ವಾ ಕುಮಾರಿಕಾ ।
ವಿಂಧ್ಯಾಚಲೇಽದ್ಯ ಚಾಽಸ್ಮಾಭಿರ್ಭುಜೈರ್ದ್ವಾದಶಭಿರ್ಯುತಾ ।
ನಾನಾಶಸ್ತ್ರಧರೈರ್ದೀಪ್ತೈಶ್ಚರ್ಮಾಚ್ಛಾದಿತಗಾತ್ರಕಾ ॥ ೭ ॥
ನ ದೇವೀ ನ ಚ ಗಂಧರ್ವೀ ನಾಽಽಸುರೀ ನಾಗಕನ್ಯಕಾ ।
ತಾದೃಗ್ರೂಪಾ ಪುರಾಽಸ್ಮಾಭಿಃ ಕಾಚಿದ್ದೃಷ್ಟಾ ನಿತಂಬಿನೀ ॥ ೮ ॥
ನ ವಿದ್ಮೋ ಯನ್ನಿಮಿತ್ತಂ ಸಾ ತಪಶ್ಚರ್ಯೇ ಯಶಸ್ವಿನೀ ।
ಸ್ವರ್ಗಕಾಮಾಽರ್ಥಕಾಮಾ ವಾ ಪತಿಕಾಮಾಽಥ ವಾ ವಿಭೋ ॥ ೯ ॥
ಸೂತ ಉವಾಚ:—
ತೇಷಾಂ ತದ್ವಚನಂ ಶ್ರುತ್ವಾ ಮಹಿಷೋ ದಾನವಾಧಿಪಃ ।
ಕಾಮದೇವ ವಶಂ ಪ್ರಾಪ್ತಃ ಶ್ರವಣಾದಪಿ ತತ್ಕ್ಷಣಾತ್ ॥ ೧೦ ॥

---

೬. ಇಷ್ಟರಲ್ಲಿ ಅಲ್ಲಿಗೆ ಮಹಿಷನ ಸೇವಕರು ಬಂದರು. ಅವರು ವ್ರತನಿರತಳೂ, ಆಶ್ಚರ್ಯಕರವಾದ ಶರೀರವನ್ನು ಧರಿಸಿದವಳೂ ಆದ ಆ ಕಾತ್ಯಾಯನಿಯನ್ನು ನೋಡಿ ತಮ್ಮ ಒಡೆಯನಾದ ದುಷ್ಟ ಮಹಿಷನೆಡೆಗೆ ಹೋಗಿ ಹೀಗೆಂದರು.

೭. ಚಾರರು ಹೇಳುತ್ತಾರೆ:—ಸ್ವಾಮಿ! ನಾವು ಈ ದಿನ ಭೂಮಿಯಲ್ಲಿ ಸಂಚರಿಸುತ್ತ ವಿಂಧ್ಯಾಚಲದಲ್ಲಿ ಅನೇಕ ಆಯುಧಗಳನ್ನು ಧರಿಸಿದ ಪ್ರಕಾಶಮಾನವಾದ ಹತ್ತು ತೋಳುಗಳಿಂದ ವಿರಾಜಿಸುವವಳೂ, ಚರ್ಮದಿಂದ ಮುಚ್ಚಿದ ಶರೀರವುಳ್ಳವಳೂ ಆದ ಓರ್ವ ಕುಮಾರಿಯನ್ನು ಕಂಡೆವು.

೮. ಅವಳು ದೇವತಾಸ್ತ್ರೀಯೂ, ಗಂಧರ್ವರಮಣಿಯೂ, ಅಸುರ ಕುಮಾರಿಯೂ, ನಾಗಕನ್ಯೆಯೂ ಅಲ್ಲ. ಹಿಂದೆ ನಾವು ಅಂತಹ ಒಬ್ಬಳನ್ನೂ ಕಾಣಲಿಲ್ಲ.

೯. ಕೀರ್ತಿಮತಿಯಾದ ಅವಳು ಸ್ವರ್ಗಕ್ಕಾಗಿಯೋ, ಹಣಕ್ಕಾಗಿಯೋ, ಪತಿಗಾಗಿಯೋ, ಯಾವುದಕ್ಕೋ ತಪಸ್ಸನ್ನು ಮಾಡುತ್ತಿದ್ದಾಳೆಯೋ ನಾವಂತೂ ಅರಿಯೆವು.

೧೦. ಸೂತನು ಹೇಳುತ್ತಾನೆ:—ದಾನವ ರಾಜನಾದ ಮಹಿಷನು ಅವರ ಮಾತನ್ನು ಕೇಳಿದೊಡನೆ ಮನ್ಮಥಪರವಶನಾದನು.

ತತಸ್ತಾನಗ್ರತಃ ಕೃತ್ವಾ ಸೈನ್ಯೇನ ಮಹತಾನ್ವಿತಃ ।
ಜಗಾಮ ಕೌತುಕಾವಿಷ್ಟೋ ಯತ್ರಾಸ್ತೇ ಸಾ ತು ಕನ್ಯಕಾ ॥ ೧೧ ॥
ಯಥಾ ಮೃತ್ಯುಕೃತೇ ಮಂದಃ ಶೃಗಾಲಃ ಸಿಂಹವಲ್ಲಭಾಂ ।
ವನೇ ಸುಪ್ತಾಂ ಸುವಿಶ್ವಸ್ತಾಂ ಸರ್ವಥಾಽಪ್ಯಕುತೋ ಭಯಾಂ ॥ ೧೨ ॥
ತಸ್ಯಾಃ ಸಂದರ್ಶನಾದೇವ ತತಃ ಕಾಮಶರೈರ್ಹತಃ ।
ಸ ದಾನವಪ್ರಧಾನಶ್ಚ ತತ್ಕ್ಷಣಾದೇವ ಸದ್ದ್ವಿಜಾಃ ॥ ೧೩ ॥
ಅಥ ಪ್ರಾಹ ಪ್ರಿಯಂ ವಾಕ್ಯಮೇಕಾಕೀ ತತ್ಪುರಃ ಸ್ಥಿತಃ ।
ಧೃತ್ವಾ ದೂರತರೇ ಸೈನ್ಯಂ ತಸ್ಯಾ ರೂಪೇಣ ಮೋಹಿತಃ ॥ ೧೪ ॥
ವಿರುದ್ಧಂ ಯೌವನಸ್ಯೈತದ್ವ್ರತಂ ತೇ ಚಾರುಹಾಸಿನಿ ।
ತಸ್ಮಾದೇತತ್ಪರಿತ್ಯಕ್ತ್ವಾ ತ್ರೈಲೋಕ್ಯಸ್ವಾಮಿನೀ ಭವ ॥ ೧೫ ॥
ಅಹಂ ಹಿ ಮಹಿಷೋ ನಾಮ ದಾನವೇಂದ್ರೋ ಯದಿ ಶ್ರುತಃ ।
ಮಯಾ ಯೇನ ಸಹಸ್ರಾಕ್ಷೋ ದ್ವಂದ್ವಯುದ್ಧೇ ವಿನಿರ್ಜಿತಃ ॥ ೧೬ ॥
ತ್ರೈಲೋಕ್ಯಂ ಸಕಲಂ ಮಹ್ಯಂ ಸಾಂಪ್ರತಂ ಚ ವಶೇ ಸ್ಥಿತಂ ।
ತಸ್ಮಾತ್ತ್ವಂ ಭವ ಸುಶ್ರೋಣಿ ಭಾರ್ಯಾ ಮಮ ಸುವಲ್ಲಭಾ ॥ ೧೭ ॥

---

೧೧–೧೨. ಬಳಿಕ ಅವನು ಮಹಾಸೈನ್ಯದೊಡನೆ ಆ ದೂತರನ್ನು ಮುಂದಿರಿಸಿಕೊಂಡು ಮೂಢನಾದ ನರಿಯು ಸಾಯುವುದಕ್ಕಾಗಿ ಕಾಡಿನಲ್ಲಿ ಭಯವಿಲ್ಲದೆ ನಂಬಿಕೆಯಿಂದ ಮಲಗಿರುವ ಸಿಂಹದೆಡೆಗೆ ಹೋಗುವಂತೆ ಕುತೂಹಲದಿಂದ ಆ ಕನ್ಯೆಯಿರುವ ಸ್ಥಳಕ್ಕೆ ಹೋದನು.

೧೩. ಎಲೈ ಬ್ರಾಹ್ಮಣರೆ! ಆ ದಾನವರಾಜನಾದ ಮಹಿಷನು ಆ ಕಾತ್ಯಾಯನಿಯನ್ನು ನೋಡಿದ ಕೂಡಲೆ ಮನ್ಮಥನ ಬಾಣಗಳಿಂದ ಪೀಡಿತನಾದನು.

೧೪. ಅವನು ಅವಳ ರೂಪದಿಂದ ಮೋಹಿತನಾಗಿ ಸೈನ್ಯವನ್ನು ದೂರದಲ್ಲಿ ನಿಲ್ಲಿಸಿ ಒಬ್ಬಂಟಿಗನಾಗಿ ಮುಂದೆ ನಿಂತು ಪ್ರಿಯವಾಕ್ಕುಗಳನ್ನಾಡಿದನು.

೧೫. "ಮನೋಹರವಾಗಿ ಮಂದಹಾಸವುಳ್ಳ ಕುಮಾರಿಯೆ ! ನಿನ್ನೀ ವ್ರತವು ಯೌವನಕ್ಕೆ ವಿರುದ್ಧವಾದುದು. ಆದುದರಿಂದ ಇದನ್ನು ತ್ಯಜಿಸಿ ಮೂರು ಲೋಕಗಳಿಗೆ ಸ್ವಾಮಿನಿಯಾಗು.

೧೬. ಮಹಿಷನೆಂಬ ನನ್ನನ್ನು ನೀನು ಕೇಳಿರಬಹುದು. ನಾನು ಮಲ್ಲಯುದ್ಧದಲ್ಲಿ ಇಂದ್ರನನ್ನು ಗೆದ್ದಿರುವೆನು.

೧೭. ಈಗ ಮೂರು ಲೋಕಗಳೂ ನನ್ನ ಅಧೀನದಲ್ಲಿವೆ. ಸುಂದರಿ! ಆದುದರಿಂದ ನೀನು ನನಗೆ ಪ್ರಿಯಭಾರ್ಯೆಯಾಗು.

ಸಹಸ್ರಂ ಮಮ ಭಾರ್ಯಾಣಾಮನ್ಯದಸ್ತಿ ಸುಶೋಭನಂ ।
ತತ್ಸರ್ವಂ ತೇಽದ್ಯ ಭೃತ್ಯತ್ವಂ ಸಾಂಪ್ರತಂ ಪ್ರಕರಿಷ್ಯತಿ ॥ ೧೮ ॥
ಅಹಂ ಚಾಽಪಿ ತವಾಽತ್ಯಂತಂ ದಾಸಭಾವಂ ಸಮಾಶ್ರಿತಃ ।
ವರ್ತಯಿಷ್ಯಾಮಿ ಸುಶ್ರೋಣಿ ಪ್ರದತ್ವಾಽಶೇಷಸಂಪದಃ ॥ ೧೯ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ತತಃ ಸಾ ಪರಮೇಶ್ವರೀ ।
ಪ್ರೋವಾಚ ಭರ್ತ್ಸ್ಯಮಾನಾ ತಂ ಕೋಪಸಂರಕ್ತಲೋಚನಾ ॥ ೨೦ ॥
ಧಿಗ್ಧಿಕ್ಪಾಪ ಸಮಾಚಾರ ಕುಮಾರವ್ರತಧಾರಿಣೀಂ ।
ಕಾಮೋಪಹತಚಿತ್ತಾತ್ಮಾ ಕಿಂ ಮಾಮಿತ್ಥಂ ಪ್ರಭಾಷಸೇ ॥ ೨೧ ॥
ಅಹಂ ತವ ವಧಾರ್ಥಾಯ ನಿರ್ಮಿತಾ ವಿಬುಧೋತ್ತಮೈಃ ।
ತಸ್ಮಾತ್ತ್ವಾಂ ನಾಶಯಿಷ್ಯಾಮಿ ಸ್ಮರೇಷ್ಟಂ ಯದ್ಧೃದಿ ಸ್ಥಿತಂ ॥ ೨೨ ॥

ಮಹಿಷ ಉವಾಚ :—

ಯದ್ಯೇವಂ ತದ್ವರಾರೋಹೇ ಯುಕ್ತಾಸ್ಯಾಚ್ಚ ಕುಮಾರಿಕಾ ।
ಪ್ರಾರ್ಥನೀಯಾ ಭವೇದತ್ರ ಸರ್ವೇಷಾಂ ಪ್ರಾಣಿನಾಂ ಯತಃ ॥ ೨೩ ॥
ಸ್ವರ್ಗಾರ್ಥಂ ಕ್ರಿಯತೇ ಧರ್ಮಸ್ತಪಶ್ಚ ವರವರ್ಣಿನಿ ।
ಯೇನ ಭೋಗಾಃ ಪ್ರಭುಂಜಂತಿ ಯೇ ದಿವ್ಯಾ ಯೇ ಚ ಮಾನುಷಾಃ ॥ ೨೪ ॥

---

೧೮. ನನ್ನ ಇತರ ಸಾವಿರ ಮಂದಿ ಭಾರ್ಯೆಯರು ಈಗ ನಿನ್ನ ಸೇವೆಯನ್ನು ಮಾಡುವರು.

೧೯. ನಾನೂ ನಿನಗೆ ಸಕಲ ಸಂಪತ್ತುಗಳನ್ನು ಸಮರ್ಪಿಸಿ ಅತ್ಯಂತ ವಿಧೇಯನಾದ ಸೇವಕನಂತೆ ವರ್ತಿಸುವೆನು.

೨೦. ಸೂತನು ಹೇಳುತ್ತಾನೆ:—ಬಳಿಕ ಆ ದೇವಿಯು ಅವನ ಮಾತನ್ನು ಕೇಳಿ ಸಿಟ್ಟಿನಿಂದ ಕೆಂಪೇರಿದ ಕಣ್ಣುಗಳುಳ್ಳವಳಾಗಿ ಗದರಿಸುತ್ತ ಇಂತೆಂದಳು.

೨೧. "ಛೀ! ಛೀ! ಪಾಪಿ! ನೀನು ಕಾಮಪೀಡಿತನಾಗಿ ಏತಕ್ಕೆ ಕುಮಾರಿಯಾದ ನನ್ನನ್ನು ಕುರಿತು ಹೀಗೆ ಮಾತಾಡುವೆ?

೨೨. ದೇವತೆಗಳು ನಿನ್ನನ್ನು ಕೊಲ್ಲುವುದಕ್ಕಾಗಿ ನನ್ನನ್ನು ನಿರ್ಮಿಸಿದ್ದಾರೆ. ಆದುದರಿಂದ ನಿನ್ನನ್ನೀಗ ಕೊಲ್ಲುವೆನು. ನಿನ್ನ ಮನೋಭೀಷ್ಟವನ್ನು ಸ್ಮರಿಸಿಕೊ."

೨೩. ಮಹಿಷನು ಹೇಳುತ್ತಾನೆ:—ಸುಂದರಿ! ಹೀಗಾದರೆ ಈ ಲೋಕದಲ್ಲಿ ಸಕಲ ಪ್ರಾಣಿಗಳಿಗೂ ಕುಮಾರಿಯನ್ನು ಪ್ರಾರ್ಥಿಸುವುದು ಉಚಿತವೇ?

೨೪. ಧರ್ಮ ಮತ್ತು ತಪಸ್ಸುಗಳು ಸ್ವರ್ಗಕ್ಕಾಗಿ ಮಾಡಲ್ಪಡುವುವು. ಅದರಿಂದ ಜನರು ದಿವ್ಯ ಮಾನುಷ ಭೋಗಗಳನ್ನು ಅನುಭವಿಸುವರು.

ತಸ್ಮಾದ್ದೇಹಿ ಮಮಾತ್ಮಾನಂ ಗಾಂಧರ್ವೇಣ ಸುಶೋಭನೇ ।
ವಿವಾಹೇನ ಯತೋಽನ್ಯೇಷಾಂ ಸ ಪ್ರಧಾನಃ ಪ್ರಕೀರ್ತಿತಃ ॥ ೨೫ ॥
ಏವಂ ಪ್ರವದತಸ್ತಸ್ಯ ಸಾ ದೇವೀ ಕ್ರೋಧಮೂರ್ಛಿತಾ ।
ತದ್ವಕ್ತ್ರಾಂತಂ ಸಮುದ್ದಿಶ್ಯ ಶರಂ ಚಿಕ್ಷೇಪ ಸ ಕ್ಷಣಾತ್ ॥ ೨೬ ॥
ವಿವೇಶ ವದನಂ ತಸ್ಯ ವಲ್ಮೀಕಂ ಪನ್ನಗೋ ಯಥಾ ।
ಅಥ ತೈರ್ಮಾರ್ಗಣೈರ್ವಿದ್ಧಃ ಸ ವಕ್ತ್ರಾಂತಾನ್ನದಂಸ್ತತಃ ॥ ೨೭ ॥
ಸುಸ್ರಾವ ರುಧಿರಂ ಭೂರಿ ಗೈರಿಕಂ ಪರ್ವತೋ ಯಥಾ ।
ತತಃ ಕೋಪಪರೀತಾತ್ಮಾ ನಿವೃತ್ಯಾಽಥ ಶನೈಃ ಶನೈಃ ॥ ೨೮ ॥
ಸ್ವಸೈನ್ಯಂ ತ್ವರಿತೋ ಭೇಜೇ ಕಾಮೇನ ಚ ವಶೀಕೃತಃ ।
ಪ್ರೋವಾಚ ಸೈನಿಕಾನ್ ಸರ್ವಾನ್ ದುಷ್ಟಾ ಸ್ತ್ರೀಯಂ ಪ್ರಗೃಹ್ಯತಾಂ ।
ಯಥಾ ನ ತ್ಯಜತಿ ಪ್ರಾಣಾನ್ ಪ್ರಹಾರೈರ್ಜರ್ಜರೀಕೃತಾ ॥ ೨೯ ॥
ಏಷಾ ಮಮ ನ ಸಂದೇಹಃ ಪ್ರಿಯಾ ಭಾರ್ಯಾ ಭವಿಷ್ಯತಿ ।
ಯದಿ ನೋ ಶಸ್ತ್ರಪಾತೇನ ಪಂಚತ್ವಮುಪಯಾಸ್ಯತಿ ॥ ೩೦ ॥
ಏವಮುಕ್ತಾಸ್ತದಾ ತೇನ ದಾನವಾ ಯುದ್ಧದುರ್ಮದಾಃ ।
ದುದ್ರುವುಃ ಸಮ್ಮುಖಾಸ್ತಸ್ಯಾ ಮುಂಚಂತೋ ನಿಶಿತಾಂಛರಾನ್ ॥ ೩೧ ॥

---

೨೫. ಮಂಗಳಾಂಗಿಯೆ! ಆದುದರಿಂದ ನೀನು ನನ್ನನ್ನು ಗಾಂಧರ್ವ ವಿವಾಹ ಕ್ರಮದಿಂದ ವರಿಸು. ಇತರರಿಗೆ ಆ ವಿವಾಹ ಕ್ರಮವು ಮುಖ್ಯವಾದುದಾಗಿ ಶಾಸ್ತ್ರವಿಹಿತವಾಗಿದೆ.

೨೬. ಈ ಮಾತಿನಿಂದ ಕೋಪಗೊಂಡ ಆ ದೇವಿಯು ಕೂಡಲೆ ಅವನ ಬಾಯಿಗೆ ಬಾಣವನ್ನು ಪ್ರಯೋಗಿಸಿದಳು.

೨೭-೨೯. ಅದು ಹುತ್ತವನ್ನು ಸರ್ಪದಂತೆ ಅವನ ಬಾಯಿಯನ್ನು ಹೊಕ್ಕಿತು. ಆ ಬಾಣಗಳಿಂದ ಹೊಡೆಯಲ್ಪಟ್ಟ ಆ ದಾನವನು ಅರಚುತ್ತ ಪರ್ವತವು ಗೈರಿಕಧಾತುವನ್ನು ಸುರಿಸುವಂತೆ ಬಹಳ ರಕ್ತವನ್ನು ಸುರಿಸಿದನು. ಬಳಿಕ ಅವನು ಮೆಲ್ಲನೆ ಹಿಂದಿರುಗಿ ಕಾಮಾಂಧನಾಗಿ ತನ್ನ ಸೈನ್ಯವನ್ನು ಶೀಘ್ರವಾಗಿ ಸೇರಿ ಸಕಲ ಸೈನಿಕರನ್ನು ಕುರಿತು ಇಂತೆಂದನು. "ಎಲೈ ಸೈನಿಕರೆ! ಪ್ರಹಾರಗಳಿಂದ ಶಿಥಿಲಗೊಂಡರೂ ಈ ದುಷ್ಟಕುಮಾರಿಯು ಪ್ರಾಣಗಳನ್ನು ಬಿಡದಂತೆ ಹಿಡಿಯಿರಿ.

೩೦. ಇವಳು ಆಯುಧದಿಂದ ಮೃತಳಾಗದಿದ್ದರೆ ನಿಶ್ಚಯವಾಗಿಯೂ ನನ್ನ ಪ್ರಿಯಪತ್ನಿಯಾಗುವಳು."

೩೧. ಅವನು ಹೀಗೆನ್ನಲು ಯುದ್ಧೋನ್ಮುಖರಾದ ದಾನವರು ತೀಕ್ಷ್ಣವಾದ ಶರಗಳನ್ನು ಪ್ರಯೋಗಿಸುತ್ತ ಅವಳಿಗೆ ಅಭಿಮುಖವಾಗಿ ಓಡಿದರು.

ಏತಸ್ಮಿನ್ನಂತರೇ ದೇವೀ ಸಾ ದೃಷ್ಟ್ವಾ ತಾನುಪಸ್ಥಿತಾನ್ ।
ಯುದ್ಧಾಯ ಕೃತಸಂಕಲ್ಪಾಂಸ್ತರ್ಜತಶ್ಚ ಮುಹುರ್ಮುಹುಃ ॥ ೩೨ ॥
ತತಸ್ತು ಲೀಲಯಾ ದೇವೀ ಮುಕ್ತ್ವಾ ತೀಕ್ಷ್ಣಾನ್ ಮಹಾಶರಾನ್ ।
ತಾನ್ ಸರ್ವಾಂಸ್ತಾಡಯಾಮಾಸ ಸರ್ವಮರ್ಮಸು ತತ್ಕ್ಷಣಾತ್ ॥ ೩೩ ॥
ಅಥ ತೀಕ್ಷ್ಣೈಃ ಶರೈರ್ದೈತ್ಯಾ ನಿಹತಾ ದಾನವಾಸ್ತಥಾ ।
ಏಕೇ ಪಂಚತ್ವಮಾಪನ್ನಾ ಗತಾಶ್ಚಾಽನ್ಯ ಇತಸ್ತತಃ ॥ ೩೪ ॥
ತತಃ ಸೈನ್ಯಂ ಸಮಾಲೋಕ್ಯ ತದ್ಭಗ್ನಂ ಚ ತಯಾ ರಣೇ ।
ಕೋಪಾವಿಷ್ಟಸ್ತತೋ ದೈತ್ಯಃ ಸ್ವಯಂ ತಾಂ ಸಮುಪಾದ್ರವತ್ ॥ ೩೫ ॥
ಯಚ್ಛಂಛೃಂಗಪ್ರಹಾರಾಂಶ್ಚ ತಸ್ಯಾಃ ಶತಸಹಸ್ರಶಃ ।
ಗರ್ಜಿತಂ ವಿದಧಚ್ಚೋಗ್ರಂ ಶಾರದಾಭ್ರಸಮಂ ಮುಹುಃ ॥ ೩೬ ॥
ಏತಸ್ಮಿನ್ನಂತರೇ ದೇವೀ ಸಾಟ್ಟಹಾಸಕೃತಸ್ವನಾ ।
ತ್ರೈಲೋಕ್ಯವಿವರಂ ಸರ್ವಂ ಯಚ್ಛಬ್ದೇನ ಪ್ರಪೂರಿತಂ ॥ ೩೭ ॥
ಏವಂ ತಸ್ಯಾ ಹಸಂತ್ಯಾಶ್ಚ ವಕ್ತ್ರಾಂತಾದಥ ನಿರ್ಯಯುಃ ।
ಪುಲಿಂದಾಃ ಶಬರಾ ಮ್ಲೇಚ್ಛಾಸ್ತಥಾಽನ್ಯೇಽರಣ್ಯವಾಸಿನಃ ॥ ೩೮ ॥
ಶಕಾಶ್ಚ ಯವನಾಶ್ಚೈವ ಶತಶಸ್ತು ವಪುರ್ಧರಾಃ ।
ವರ್ಮಸ್ಥಗಿತಗಾತ್ರಾಶ್ಚ ಯಮದೂತಾ ಇವಾಽಪರೇ ॥ ೩೯ ॥

---

೩೨–೩೩. ಈ ಸಮಯದಲ್ಲಿ ಆ ದೇವಿಯು ಯುದ್ಧಮಾಡಲು ಸಂಕಲ್ಪಿಸಿರುವ ಬಾರಿಬಾರಿಗೂ ಗದರಿಸುತ್ತಿರುವ ಆ ದಾನವರನ್ನು ನೋಡಿ ಅನಾಯಾಸವಾಗಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಕೂಡಲೆ ಅವರನ್ನೆಲ್ಲ ಮರ್ಮಸ್ಥಾನಗಳಲ್ಲಿ ಹಿಂಸಿಸಿದಳು.

೩೪. ಅನಂತರ ಹರಿತವಾದ ಬಾಣಗಳಿಂದ ಹೊಡೆಯಲ್ಪಟ್ಟ ದಾನವರಲ್ಲಿ ಕೆಲವರು ಮಡಿದರು. ಕೆಲವರು ಇಲ್ಲಿ ಅಲ್ಲಿ ಓಡಿದರು.

೩೫–೩೬. ಮಹಿಷನು ಆ ಕಾತ್ಯಾಯನಿಯಿಂದ ಭಂಗಗೊಂಡ ತನ್ನ ಸೈನ್ಯವನ್ನು ನೋಡಿ ಕೋಪಗೊಂಡವನಾಗಿ ತಾನೇ ಅವಳಿಗೆ ಸಾವಿರಾರು ಬಾರಿ ಕೊಂಬುಗಳಿಂದ ತಿವಿಯುತ್ತ ಶರತ್ಕಾಲದ ಮೋಡದಂತೆ ಉಗ್ರವಾಗಿ ಗರ್ಜಿಸುತ್ತ ಅಭಿಮುಖವಾಗಿ ಓಡಿದನು.

೩೭. ಇಷ್ಟರಲ್ಲಿ ದೇವಿಯು ಅಟ್ಟಹಾಸಗೈಯುತ್ತ ಮೂರು ಲೋಕಗಳ ರಂಧ್ರವನ್ನೆಲ್ಲ ಶಬ್ದದಿಂದ ತುಂಬಿದಳು.

೩೮–೩೯. ಹೀಗೆ ಅವಳು ಅಟ್ಟಹಾಸ ಮಾಡುತ್ತಿರಲು ಅವಳ ಬಾಯಿಯಿಂದ ಕವಚವನ್ನು ಧರಿಸಿ ಯಮದೂತರಂತೆ ಭಯಂಕರರಾದ ಕಿರಾತರೂ, ಶಬರರೂ, ಮ್ಲೇಚ್ಛರೂ, ಅರಣ್ಯವಾಸಿಗಳಾದ ಇತರರೂ, ಶಕರೂ, ಯವನರೂ ನೂರಾರು ಮಂದಿ ಹೊರಟರು.

ತೇ ಪ್ರೋಚುರ್ದೇವಿ ನೋ ಬ್ರೂಹಿ ಯೇನ ಸೃಷ್ಟಾ ವಯಂ ಕ್ಷಿತೌ ।
ಕಾರ್ಯೇಣ ಕ್ರಿಯತೇ ಕೃತ್ಸ್ನಂ ಯೇನ ಶೀಘ್ರಂ ವರಾನನೇ ॥ ೪೦ ॥
ದೇವ್ಯುವಾಚ:—
ಏತಾನಸ್ಯ ಸುದುಷ್ಟಸ್ಯ ಸೈನಿಕಾನ್ ಬಲಗರ್ವಿತಾನ್ ।
ಸೂದಯಧ್ವಂ ದ್ರುತಂ ವಾಕ್ಯಾದಸ್ಮದೀಯಾದ್ಯಥೇಚ್ಛಯಾ ॥ ೪೧ ॥
ಅಥ ತೇ ತದ್ವಚಃ ಶ್ರುತ್ವಾ ವಲ್ಗಂತೋಽಸಿಧನುರ್ಧರಾಃ ।
ದೈತೇಯಬಲಮುದ್ದಿಶ್ಯ ದುದ್ರುವುರ್ವೇಗಮಾಶ್ರಿತಾಃ ॥ ೪೨ ॥
ತತಸ್ತೇಷಾಂ ಮಹದ್ಯುದ್ಧಂ ಮಿಥೋ ಜಜ್ಞೇ ಸುದಾರುಣಂ ।
ನಾಽತ್ಮೀಯಂ ನ ಪರಂ ತತ್ರ ಕೇನಚಿಜ್ಜ್ಞಾಯತೇ ಕ್ವಚಿತ್ ॥ ೪೩ ॥
ಅಥ ತೇ ದಾನವಾಃ ಸರ್ವೇ ಯೋಧೈರ್ದೇವೀಸಮುದ್ಭವೈಃ ।
ಭಗ್ನಾ ವ್ಯಾಪಾದಿತಾಶ್ಚಾನ್ಯೇ ಪ್ರಹಾರೈರ್ಜರ್ಜರೀಕೃತಾಃ ॥ ೪೪ ॥
ತತೋ ಭಗ್ನಂ ಬಲಂ ದೃಷ್ಟ್ವಾ ಮಹಿಷಃ ಕ್ರೋಧಮೂರ್ಛಿತಃ ।
ತಾಮುವಾಚ ಕ್ರುಧಾ ದೇವೀಂ ವಚನೈಃ ಪರುಷಾಕ್ಷರೈಃ ॥ ೪೫ ॥
ಆಃ ಪಾಪೇ ಸ್ತ್ರೀತಿ ಮತ್ವಾಽದ್ಯ ನ ಹತಾಽಸಿ ಮಯಾ ಯುಧಿ ।
ತಸ್ಮಾತ್ಪಶ್ಯ ಪ್ರಹಾರಂ ಮೇ ತತ್ವಂ ಬುಧ್ಯಸಿ ನಾಽನ್ಯಥಾ ॥ ೪೬ ॥

---

೪೦. ಅವರು, "ದೇವಿ! ನಮ್ಮನ್ನು ಏಕೆ ಸೃಷ್ಟಿಸಿರುವೆ ಹೇಳು. ಆ ಕಾರ್ಯವನ್ನು ನಾವು ಶೀಘ್ರವಾಗಿ ನೆರವೇರಿಸುವೆವು" ಎಂದರು.

೪೧. ದೇವಿಯು ಹೇಳುತ್ತಾಳೆ:—ಅಹಂಕಾರಗೊಂಡ ಈ ಮಹಿಷ ದಾನವನ ಸೈನಿಕರನ್ನು ಬೇಗನೆ ನನ್ನ ಮಾತಿನಿಂದ ಸ್ವೇಚ್ಛೆಯಾಗಿ ಕೊಲ್ಲಿರಿ.

೪೨. ಬಳಿಕ ಕತ್ತಿ ಬಿಲ್ಲುಗಳನ್ನು ಧರಿಸಿರುವ ಅವರು ದೇವಿಯ ಮಾತನ್ನು ಕೇಳಿ ದೈತ್ಯರ ಸೈನ್ಯವನ್ನುದ್ದೇಶಿಸಿ ವೇಗವಾಗಿ ಓಡಿದರು.

೪೩. ಬಳಿಕ ಅವರೊಳಗೆ ತಮ್ಮವರು, ಪರರು ಎಂದು ತಿಳಿಯದಷ್ಟು ಭಯಂಕರ ಯುದ್ಧವು ನಡೆಯಿತು.

೪೪. ಅನಂತರ ಆ ದಾನವರಲ್ಲಿ ಕೆಲವರು ದೇವಿಯ ಭಟರಿಂದ ಹತರಾದರು. ಕೆಲವರು ಪ್ರಹಾರಗಳಿಂದ ಶಿಥಿಲರಾದರು.

೪೫. ಮಹಿಷನು ತನ್ನ ಬಲವು ಭಗ್ನವಾದುದನ್ನು ನೋಡಿ ಅತ್ಯಂತ ಕೋಪಗೊಂಡು ಆ ದೇವಿಯನ್ನು ಕುರಿತು ಕಠಿನವಾಕ್ಯಗಳಿಂದ ಇಂತೆಂದನು.

೪೬. "ಪಾಪಿಷ್ಠಳೆ! ಹೆಂಗಸೆಂದರಿತು ನಾನು ನಿನ್ನನ್ನು ಯುದ್ಧದಲ್ಲಿ ಕೊಲ್ಲಲಿಲ್ಲ. ಆದುದರಿಂದ ನನ್ನ ಪ್ರಹಾರವನ್ನು ನೋಡು. ಹಾಗಾದರೆ ನೀನು ನನ್ನ ಶಕ್ತಿಯನ್ನು ತಿಳಿಯುವೆ. ಬೇರೆ ವಿಧದಿಂದ ತಿಳಿಯುವುದಿಲ್ಲ."

ಏವಮುಕ್ತ್ವಾ ವಿಶೇಷೇಣ ಪ್ರಹಾರಾನ್ ಸ ವಿಚಿಕ್ಷಿಪೇ ।
ವಿಷಾಣಾಭ್ಯಾಂ ಮಹಾವೇಗೋ ಭರ್ತ್ಸಯಾನೋ ಮುಹುರ್ಮುಹುಃ ॥
ತತೋಽಭ್ಯಾಶಗತಂ ದೃಷ್ಟ್ವಾ ಸಾ ದೇವೀ ದಾನವಂ ಚ ತಂ ।
ಆರುರೋಹಾಽಥ ವೇಗೇನ ಪೃಷ್ಠದೇಶೇನ ಕೋಪತಃ ॥ ೪೮ ॥
ತತಶ್ಚುಕ್ರೋಶ ದೈತ್ಯೋಽಸೌ ವ್ಯೋಮಮಾರ್ಗಂ ಸಮಾಶ್ರಿತಃ ।
ಪೃಷ್ಠ್ಯಾಸ್ತಲೇನ ನಿರ್ಭಿನ್ನೋ ರುಧಿರೌಘಪರಿಪ್ಲುತಃ ॥ ೪೯ ॥
ಏತಸ್ಮಿನ್ನಂತರೇ ಸಿಂಹಃ ಸ ತಸ್ಯಾ ಜ್ಯೋತಿಸಂಭವಃ ।
ಜಗ್ರಾಹ ಪಶ್ಚಿಮೇ ಭಾಗೇ ದಂಷ್ಟ್ರಾಗ್ರೈರ್ನಿಶಿತೈಃ ಕ್ರುಧಾ ॥ ೫೦ ॥
ತತೋ ನಿಶ್ಚಲತಾಂ ಪ್ರಾಪ್ತಃ ಪಾದಾಕ್ರಾಂತಶ್ಚ ದಾನವಃ ।
ಅಕರೋದ್ಭೈರವಾನ್ನಾದಾನ್ನಶಕ್ತಶ್ಚಲಿತುಂ ಪದಂ ॥ ೫೧ ॥
ಏತಸ್ಮಿನ್ನಂತರೇ ಪ್ರಾಪ್ತಾಃ ಸರ್ವೇ ದೇವಾಃ ಸವಾಸವಾಃ ।
ವ್ಯೋಮಸ್ಥಾಸ್ತಾಂ ತದಾ ಪ್ರೋಚುರ್ದೇವೀಂ ಹರ್ಷಸಮನ್ವಿತಾಃ ॥ ೫೨ ॥
ಏತಸ್ಯ ಶಿರಸಶ್ಛೇದಂ ಶೀಘ್ರಂ ಕುರು ಸುರೇಶ್ವರಿ ।
ಖಡ್ಗೇನಾಽನೇನ ತೀಕ್ಷ್ಣೇನ ಯಾವನ್ನೋ ಯಾತಿ ಚಾಽನ್ಯತಃ ॥ ೫೩ ॥
ಸಾ ಶ್ರುತ್ವಾ ವಚನಂ ತೇಷಾಂ ದೇವೀ ಕೋಪಸಮನ್ವಿತಾ ।
ಖಡ್ಗಂ ವ್ಯಾಪಾರಯಾಮಾಸ ಕಂಠೇ ತಸ್ಯಾಽತಿಪೀವರೇ ॥ ೫೪ ॥

---

೪೭–೪೮. ಅವನು ಹೀಗೆಂದು ಗದರಿಸುತ್ತ ಕೊಂಬುಗಳಿಂದ ವೇಗವಾಗಿ ತಿವಿದನು. ಅನಂತರ ಹತ್ತಿರ ಬಂದ ಆ ದಾನವನ ಬೆನ್ನಿನಮೇಲೆ ಆ ದೇವಿಯು ಕೋಪದಿಂದ ವೇಗವಾಗಿ ಹತ್ತಿದಳು.

೪೯. ಮಹಿಷನು ಆಕಾಶಮಾರ್ಗವನ್ನಾಶ್ರಯಿಸಿ ಬೆನ್ನಿನಮೇಲೆ ದೇವಿಯು ಕೈಯಿಂದ ಹೊಡೆದುದರಿಂದ ರಕ್ತಸಿಕ್ತನಾದನು.

೫೦. ಇಷ್ಟರಲ್ಲಿ ಆ ದೇವಿಯ ತೇಜಸ್ಸಿನಿಂದುಂಟಾದ ಸಿಂಹವು ಅವನ ಹಿಂಭಾಗವನ್ನು ಹರಿತವಾದ ಹಲ್ಲುಗಳ ತುದಿಗಳಿಂದ ಕಚ್ಚಿತು.

೫೧. ಅನಂತರ ದೇವಿಯು ಮಹಿಷನನ್ನು ಕಾಲಿನಿಂದ ತುಳಿಯಲು ಅವನು ಒಂದು ಹೆಜ್ಜೆಯೂ ಚಲಿಸಲಾರದೆ ಭಯಂಕರವಾಗಿ ಗರ್ಜಿಸಿದನು.

೫೨. ಈ ಸಮಯದಲ್ಲಿ ಸಮಸ್ತ ದೇವತೆಗಳೂ ಇಂದ್ರನೊಡನೆ ಅಲ್ಲಿಗೆ ಬಂದು ಆಕಾಶದಲ್ಲಿ ನಿಂತು ಸಂತೋಷದಿಂದ ದೇವಿಯನ್ನು ಕುರಿತು ಹೀಗೆಂದರು.

೫೩. "ಸುರೇಶ್ವರಿ! ಇವನು ಬೇರೆ ಕಡೆಗೆ ಹೋಗುವುದರೊಳಗೆ ಹರಿತವಾದ ಈ ಖಡ್ಗದಿಂದ ಇವನ ತಲೆಯನ್ನು ಬೇಗನೆ ಕತ್ತರಿಸು."

೫೪. ಆ ದೇವಿಯು ದೇವತೆಗಳ ಮಾತನ್ನು ಕೇಳಿ ಕೋಪದಿಂದ ಅವನ ಪುಷ್ಟವಾದ ಕತ್ತಿನಮೇಲೆ ಕತ್ತಿಯನ್ನು ಪ್ರಯೋಗಿಸಿದಳು.

ಸ ತೇನ ಖಡ್ಗಘಾತೇನ ಕಂಠಃ ಪೀನೋಽಪಿ ನಿಷ್ಠುರಃ ।
ದ್ವಿಧಾ ಜಜ್ಞೇಽಥ ದೈತ್ಯಸ್ಯ ದಧತ್ತುಷ್ಟಿಂ ದಿವೌಕಸಾಂ ॥ ೫೫ ॥
ದ್ವಾದಶಾರ್ಕಪ್ರತೀಕಾಶೋ ವಕ್ರಾಂತಶ್ಚರ್ಮ ಖಡ್ಗಧೃಕ್ ।
ಭರ್ತ್ಸಯಂಸ್ತಾಂ ಮಹಾದೇವೀಂ ಖಡ್ಗೋದ್ಯತಕರಾಂ ತದಾ ।
ಖಡ್ಗಂ ವ್ಯಾಪಾರಯನ್ ಗಾತ್ರೇ ತಸ್ಯಾ ಬಾಲಾರ್ಕಸನ್ನಿಭಂ ॥ ೫೬ ॥
ತತಃ ಕೇಶೇಷು ಚಾಧಾಯ ಯಾವತ್ತಸ್ಯಾಽಪಿ ಚಿಕ್ಷಿಪೇ ।
ಪ್ರಹಾರಂ ಗಾತ್ರನಾಶಾಯ ತಾವದೂಚೇ ಸ ದಾನವಃ ॥ ೫೭ ॥

ದಾನವ ಉವಾಚ :-

ಜಯ ದೇವಿ ಜಯಾಽಚಿಂತ್ಯೇ ಜಯ ಸರ್ವಸುರೇಶ್ವರಿ ।
ಜಯ ಸರ್ವಗತೇ ದೇವಿ ಜಯ ಸರ್ವಜನಪ್ರಿಯೇ ॥ ೫೮ ॥
ಜಯ ಕಾಮಪ್ರದೇ ನಿತ್ಯಂ ಜಯ ತ್ರೈಲೋಕ್ಯಸುಂದರಿ ।
ಜಯ ತ್ರೈಲೋಕ್ಯರಕ್ಷಾರ್ಥಮುದ್ಯತೇ ಹ್ಯಕುತೋಭಯೇ ॥ ೫೯ ॥
ಜಯ ದೇವಿ ಕೃತಾನಂದೇ ಜಯ ದೈತ್ಯವಿನಾಶಿನಿ ।
ಜಯ ಕ್ಲೇಶಚ್ಛಿದೇ ಕಾಂತೇ ಜಯಾಭಕ್ತವಿಮೋಹದೇ ॥ ೬೦ ॥

---

೫೫. ಆ ಕತ್ತಿಯ ಏಟಿನಿಂದ ಅವನ ಕುತ್ತಿಗೆಯು ಪುಷ್ಟವಾಗಿದ್ದರೂ ಎರಡು ಭಾಗವಾಗಿ ದೇವತೆಗಳಿಗೆ ಸಂತೋಷವನ್ನುಂಟುಮಾಡಿತು.

೫೬. ಆಗ ದ್ವಾದಶಾದಿತ್ಯರಂತೆ ಪ್ರಕಾಶಗೊಂಡಿರುವ ಮುಖವುಳ್ಳವನೂ, ಗುರಾಣಿ ಕತ್ತಿಗಳನ್ನು ಧರಿಸಿದವನೂ ಆದ ಆ ಮಹಿಷನು ಖಡ್ಗದಿಂದ ವಿರಾಜಿಸುತ್ತಿರುವ ಮಹಾದೇವಿಯನ್ನು ಗದರಿಸುತ್ತ ಅವಳ ಮೇಲೆ ಬಾಲಸೂರ್ಯನಂತಿರುವ ಖಡ್ಗವನ್ನು ಪ್ರಯೋಗಿಸಿದನು.

೫೭. ತರುವಾಯ ದೇವಿಯು ಅವನ ಶರೀರವನ್ನು ಸದೆಯಲೋಸುಗ ತಲೆ ಕೂದಲುಗಳನ್ನು ಹಿಡಿದು ಆಯುಧವನ್ನು ಪ್ರಯೋಗಿಸಲು ಆ ದಾನವನು ಹೀಗೆಂದನು.

೫೮. ದಾನವನು ಹೇಳುತ್ತಾನೆ :—"ಅಚಿಂತ್ಯಳೂ, ಸಕಲ ದೇವತೆಗಳಿಗೊಡೆಯಳೂ, ಸರ್ವವ್ಯಾಪಿನಿಯೂ, ಸಕಲ ಜನರಿಗೆ ಪ್ರಿಯಳೂ ಆದ ದೇವಿಯೆ! ಜಯಿಸು.

೫೯—೬೦. ಇಷ್ಟಾರ್ಥವನ್ನೀಯುವವಳೂ, ತ್ರಿಭುವನಸುಂದರಿಯೂ, ತ್ರೈಲೋಕ್ಯ ರಕ್ಷಣೆಯಲ್ಲಿ ಉದ್ಯುಕ್ತಳೂ, ಯಾರಿಂದಲೂ ಭಯವಿಲ್ಲದವಳೂ ಆದ ದೇವಿಯೆ! ಜಯಿಸು. ಆನಂದವಿಧಾಯಕಳೂ, ದೈತ್ಯನಾಶಿನಿಯೂ, ಕ್ಲೇಶನಿವಾರಕಳೂ, ಭಕ್ತಿಯಿಲ್ಲದವರಿಗೆ ಅಜ್ಞಾನವನ್ನುಂಟುಮಾಡುವವಳೂ ಆದ ದೇವಿಯೆ! ಜಯಿಸು.

ತ್ವಂ ಸೃಷ್ಟಿಸ್ತ್ವಂ ವರಾ ದೇವಿ ತ್ವಂ ಲಕ್ಷ್ಮೀಸ್ತ್ವಂ ಸರಸ್ವತೀ ।
ತ್ವಂ ಸ್ವಾಹಾ ತ್ವಂ ಸ್ವಧಾ ತುಷ್ಟಿಃ ಪುಷ್ಟಿರ್ಮೇಧಾ ಧೃತಿಃ ಕ್ಷಮಾ ॥ ೬೧ ॥
ತಸ್ಮಾತ್ಕುರು ಪ್ರಸಾದಂ ಮೇ ಪ್ರಾಣಾನ್ರಕ್ಷ ದಯಾಂ ಕುರು ।
ಪ್ರಣತಸ್ಯ ಸುದೀನಸ್ಯ ಹೀನಸ್ಯ ಚ ವಿಶೇಷತಃ ॥ ೬೨ ॥
ಅಹಂ ದುರ್ವಾಸಸಾ ಶಪ್ತೋ ಹಿರಣ್ಯಾಕ್ಷಸುತೋಬಲೀ ।
ಮಹಿಷತ್ವಂ ಸಮಾನೀತಸ್ತ್ವಯಾ ದೇವೀ ವಿಮೋಕ್ಷಿತಃ ॥ ೬೩ ॥
ತಸ್ಮಾದ್ದರ್ಪಃ ಪ್ರಮುಕ್ತೋಽದ್ಯ ಮಯಾ ದಾನವಸಂಭವಃ ।
ಕಿಂಕರತ್ವಂ ಪ್ರಯಾಸ್ಯಾಮಿ ಸಾಂಪ್ರತಂ ತೇ ಸುರೇಶ್ವರಿ ॥ ೬೪ ॥
ಜಯ ಸರ್ವಗತೇ ದೇವಿ ಸರ್ವದುಷ್ಟವಿನಾಶಿನಿ ॥ ೬೫ ॥
ಇತಿ ತಸ್ಯ ವಚಃ ಶ್ರುತ್ವಾ ಕೃಪಣಂ ಸಾ ಸುರೇಶ್ವರೀ ।
ಕೃಪಾವಿಷ್ಟಾಽಬ್ರವೀದ್ವಾಕ್ಯಂ ತತೋ ವ್ಯೋಮಸ್ಥಿತಾನ್ ಸುರಾನ್ ॥ ೬೬ ॥
ಕಿಂ ಕರೋಮಿ ದಯಾ ಜಾತಾ ಮಮೈನಂ ಪ್ರತಿ ಹೇ ಸುರಾಃ ।
ತಸ್ಮಾನ್ನಾಽಹಂ ಹನಿಷ್ಯಾಮಿ ದಾನವಂ ದೀನಜಲ್ಪಕಂ ॥ ೬೭ ॥
ವಿಮುಖಂ ಖಡ್ಗಶಸ್ತ್ರಂ ಚ ತವಾಽಸ್ಮೀತಿ ಪ್ರವಾದಿನಂ ।
ಅಪಿ ಮೇ ಪಿತೃಹಂತಾರಂ ನ ಹನ್ಯಾಂ ರಿಪುಮಾಹವೇ ॥ ೬೮ ॥

---

೬೧–೬೨. ಸೃಷ್ಟಿಸ್ವರೂಪಿಣಿಯೂ, ಉತ್ತಮಳೂ, ಲಕ್ಷ್ಮಿಯೂ, ಸರಸ್ವತಿಯೂ, ಸ್ವಾಹಾಸ್ವಧೆಗಳೂ, ತುಷ್ಟಿಪುಷ್ಟಿಗಳೂ, ಮೇಧಾ, ಧೃತಿ, ಕ್ಷಮೆಗಳೂ ನೀನೇ ಆಗಿರುವೆ. ಆದುದರಿಂದ ನನ್ನನ್ನು ಅನುಗ್ರಹಿಸು. ಪ್ರಾಣಗಳನ್ನು ರಕ್ಷಿಸು. ನಮ್ರನೂ, ದೀನನೂ, ಹೀನನೂ ಆದ ನನ್ನಮೇಲೆ ದಯೆ ಮಾಡು.

೬೩. ದುರ್ವಾಸನ ಶಾಪದಿಂದ ಕೋಣನ ರೂಪವನ್ನು ಹೊಂದಿದವನೂ, ಬಲಿಷ್ಠನೂ, ಹಿರಣ್ಯಾಕ್ಷನ ಮಗನೂ ಆದ ನಾನು ನಿನ್ನಿಂದ ಶಾಪಮುಕ್ತನಾದೆನು.

೬೪. ಆದುದರಿಂದ ಈಗ ದಾನವನಾದ್ದರಿಂದುಂಟಾದ ನನ್ನ ಅಹಂಕಾರವು ನೀಗಿತು. ಸುರೇಶ್ವರಿ! ಈಗ ನಾನು ನಿನ್ನ ಸೇವಕನಾಗಿರುವೆನು.

೬೫. ಸರ್ವಾಂತರ್ಯಾಮಿನಿಯೂ, ಸಮಸ್ತ ದುಷ್ಟರನ್ನು ನಾಶಗೊಳಿಸುವವಳೂ ಆದ ದೇವಿಯೆ! ಜಯಿಸು."

೬೬. ಆ ದೇವಿಯು ಅವನ ಈ ರೀತಿಯಾದ ದೀನ ನುಡಿಯನ್ನು ಕೇಳಿ ದಯೆಗೊಂಡು ಆಕಾಶದಲ್ಲಿರುವ ದೇವತೆಗಳನ್ನು ಕುರಿತು ಇಂತೆಂದಳು.

೬೭. "ಎಲೈ ದೇವತೆಗಳೆ! ಈ ದಾನವನ ವಿಷಯದಲ್ಲಿ ನನಗೆ ದಯೆಯುಂಟಾಗಿದೆ. ಏನುಮಾಡಲಿ. ದೀನನಾಗಿ ಮಾತನಾಡುತ್ತಿರುವ ಇವನನ್ನು ನಾನು ಕೊಲ್ಲುವುದಿಲ್ಲ.

೬೮. ಯುದ್ಧದಲ್ಲಿ ಖಡ್ಗ ಶಸ್ತ್ರಗಳನ್ನು ಕೆಳಗಿಟ್ಟು ಮರೆಹೊಕ್ಕಿದ್ದೇನೆಂದು ಬೇಡುವ ಶತ್ರುವು ನನ್ನ ತಂದೆಯನ್ನು ಕೊಂದವನಾದರೂ ಅವನನ್ನು ಕೊಲ್ಲಲಾರೆ.

ದೇವಾ ಊಚುಃ:—

ನ ಚೇದ್ಧಂಸಿ ಚ ದೇವೇಶಿ ತ್ವಮೇನಂ ದಾನವಾಧಮಮ್ ।
ನಾಶಯಿಷ್ಯತಿ ತತ್ಕೃತ್ಸ್ನಂ ತ್ರೈಲೋಕ್ಯಂ ಸ ಚರಾಚರಮ್ ॥ ೧೯ ॥
ಏಷ ವ್ಯರ್ಥಃ ಶ್ರಮಃ ಸರ್ವಸ್ತಥಾಽಸ್ಮಾಕಂ ಭವಿಷ್ಯತಿ ।
ತವ ಸಂಭೂತಿಸಂಭೂತಸ್ತವ ಕ್ಲೇಶಸ್ತಥಾಽಖಿಲಃ ॥ ೨೦ ॥

ದೇವ್ಯುವಾಚ:—

ನಾಽಹಮೇನಂ ಹನಿಷ್ಯಾಮಿ ತ್ಯಜಿಷ್ಯಾಮಿ ತಥಾಽಸುರಾಃ ।
ಏನಂ ಕಚಗ್ರಹಂ ಕೃತ್ವಾ ಧಾರಯಿಷ್ಯಾಮಿ ಸರ್ವದಾ ॥ ೨೧ ॥

ದೇವಾ ಊಚುಃ:—

ಸಾಧು ಸಾಧು ಮಹಾಭಾಗೇ ಯುಕ್ತಮುಕ್ತಂ ತ್ವಯಾ ವಚಃ ।
ಏತದ್ಧಿ ಯುಜ್ಯತೇ ಕರ್ತುಂ ಕಾಲೇಽಸ್ಮಿಂಸ್ತ್ರಿದಶೇಶ್ವರಿ ॥ ೨೨ ॥
ಸಾಂಪ್ರತಂ ಮರ್ತ್ಯಲೋಕೇ ತ್ವಂ ರೂಪಮೇತತ್ಸಮಾಶ್ರಿತಾ ।
ಶಸ್ತ್ರೋದ್ಯತಕರಾ ರೌದ್ರಾ ಮಹಿಷೋಪರಿ ಸಂಸ್ಥಿತಾ ॥ ೨೩ ॥
ಅತ್ರಾಪ್ಸ್ಯಸಿ ಪರಾಂ ಪೂಜಾಂ ದುರ್ಲಭಾಮಮರೈರಪಿ ।
ಯಸ್ತ್ವಾಮೇತೇನ ರೂಪೇಣ ಸಂಸ್ಥಿತಾಂ ಪೂಜಯಿಷ್ಯತಿ ॥ ೨೪ ॥
ತ್ವಮಸ್ಯ ಸಂಗತೋ ಭಾವಿ ವಿಖ್ಯಾತಾ ವಿಂಧ್ಯವಾಸಿನೀ ।
ಕಿಂ ತೇ ವಾ ಬಹುನೋಕ್ತೇನ ಶೃಣು ಸಂಕ್ಷೇಪತೋ ವಚಃ ॥ ೨೫ ॥

---

೧೯. ದೇವತೆಗಳು ಹೇಳುತ್ತಾರೆ:—ದೇವೇಶಿ! ನೀನು ಈ ಅಧಮ ದಾನವನನ್ನು ಕೊಲ್ಲದಿದ್ದರೆ ಇವನು ಮೂರು ಲೋಕಗಳನ್ನೂ ನಾಶಗೊಳಿಸುವನು.

೨೦. ನಮ್ಮ ಈ ಎಲ್ಲ ಶ್ರಮವೂ, ನಿನ್ನ ಉತ್ಪತ್ತಿಯಿಂದ ನಿನಗುಂಟಾದ ಸಕಲಕ್ಲೇಶಗಳೂ ವ್ಯರ್ಥವಾಗುವುವು.

೨೧. ದೇವಿಯು ಹೇಳುತ್ತಾಳೆ:—ದೇವತೆಗಳೆ! ನಾನು ಇವನನ್ನು ಕೊಲ್ಲುವುದಿಲ್ಲ, ಇವನನ್ನು ಬಿಡುವುದೂ ಇಲ್ಲ. ಯಾವಾಗಲೂ ಇವನ ಜುಟ್ಟನ್ನು ಹಿಡಿದು ನಿಲ್ಲಿಸಿರುತ್ತೇನೆ.

೨೨. ದೇವತೆಗಳು ಹೇಳುತ್ತಾರೆ:—ಮಹಾತ್ಮಳೆ! ನೀನು ಚೆನ್ನಾಗಿ ಹೇಳಿರುವೆ. ಈ ಸಮಯದಲ್ಲಿ ಇದನ್ನು ಮಾಡಲು ಯುಕ್ತವಾದುದು.

೨೩–೨೫. ಈಗ ಭೂಲೋಕದಲ್ಲಿ ಈ ರೂಪವನ್ನು ಧರಿಸಿ ಶಸ್ತ್ರಗಳನ್ನು ಹಿಡಿದು ಮಹಿಷನ ಮೇಲೆ ಕುಳಿತಿರುವ ಭಯಂಕರಳಾದ ನಿನ್ನನ್ನು ಇಲ್ಲಿರುವ ದೇವತೆಗಳು ಪೂಜಿಸುವರು. ಈ ರೂಪದ ನಿನ್ನನ್ನು ಪೂಜಿಸಿದವನಿಗೆ ವಿಂಧ್ಯವಾಸಿನಿಯೆಂದು ವಿಖ್ಯಾತಳಾದ ನೀನು ಅನುಗ್ರಹ ಮಾಡುವವಳಾಗು. ಹೆಚ್ಚು ಮಾತಿನಿಂದೇನು? ಸಂಕ್ಷೇಪವೂ, ಸತ್ಯವೂ, ಸಮಸ್ತ ಲೋಕಗಳಿಗೆ ಹಿತವನ್ನುಂಟು

ಅಸ್ಮದೀಯಂ ಪರಂ ತಥ್ಯಂ ಸರ್ವಲೋಕಹಿತಾವಹಂ ।
ಪಾರ್ಥಿವಾನಾಂ ತ್ವದಾಯತ್ತಂ ಬಲಂ ದೇವಿ ಭವಿಷ್ಯತಿ ॥ ೭೬ ॥
ಯುದ್ಧಕಾಲೇ ಸಮುತ್ಪನ್ನೇ ಭಕ್ತಾನಾಂ ನಾಽತ್ರ ಸಂಶಯಃ ।
ಪ್ರಸ್ಥಾನಂ ವಾ ಪ್ರವೇಶಂ ಚ ಯಃ ಕರಿಷ್ಯತಿ ಮಾನವಃ ॥ ೭೭ ॥
ತ್ವಾಂ ಸ್ಮೃತ್ವಾ ಪ್ರಣಿಪತ್ಯಾಽಥ ಪೂಜಯಿತ್ವಾ ವಿಶೇಷತಃ ।
ತಸ್ಯ ಸಂಪತ್ಸ್ಯತೇ ಸಿದ್ಧಿಃ ಸರ್ವಕೃತ್ಯೇಷು ಸರ್ವದಾ ।
ಇಹ ಕಾಪುರುಷಸ್ಯಾಽಪಿ ಕಿಂ ಪುನಃ ಸುಭಟಸ್ಯ ಚ ॥ ೭೮ ॥
ಆಶ್ವಿನಸ್ಯ ಸಿತೇ ಪಕ್ಷೇ ನವಮ್ಯಾಂ ಚಾಽಷ್ಟಮೀದಿನೇ ।
ಪೂಜಯಿಷ್ಯತಿ ಯೋ ಮರ್ತ್ಯಸ್ತ್ವಾಂ ಸದ್ಭಕ್ತಿಸಮನ್ವಿತಃ ॥ ೭೯ ॥
ತಸ್ಯ ಸಂವತ್ಸರಂ ಯಾವತ್ಸಮುಗ್ರಂ ಸುರಸುಂದರಿ ।
ನ ಭವಿಷ್ಯತಿ ವೈ ರೋಗೋ ನ ಭಯಂ ನ ಪರಾಭವಃ ।
ನಾಽಪಮೃತ್ಯುರ್ನ ಚೌರಾದಿ ಸಮುದ್ಭೂತ ಉಪದ್ರವಃ ॥ ೮೦ ॥

ಸೂತ ಉವಾಚ :—

ಏವಮುಕ್ತ್ವಾಽಥ ತೇ ದೇವಾಸ್ತಾಂ ದೇವೀಂ ಹರ್ಷಸಂಯುತಾಃ ।
ಅನುಜ್ಞಾತಾಸ್ತಯಾ ಜಗ್ಮುಃ ಸ್ವಾಂ ಪುರೀಮಮರಾವತೀಂ ॥ ೮೧ ॥
ತತ್ರ ಗತ್ವಾ ಚಿರಾತ್ಪ್ರಾಪ್ಯ ಸ್ವಂ ರಾಜ್ಯಂ ಪಾಕಶಾಸನಃ ।
ಪಾಲಯಾಮಾಸ ಸಂಹೃಷ್ಟಸ್ತ್ರೈಲೋಕ್ಯಂ ಹತಕಂಟಕಂ ॥ ೮೨ ॥

---

ಮಾಡುವುದೂ ಆದ ನಮ್ಮ ಮಾತನ್ನು ಕೇಳು. ಯುದ್ಧಕಾಲವು ಒದಗಲು ನಿನ್ನ ಭಕ್ತರಾದ ರಾಜರ ಬಲವು ನಿನ್ನ ಅಧೀನವಾಗಿರುವುದು. ನಿನ್ನನ್ನು ಸ್ಮರಿಸಿ, ನಮಸ್ಕರಿಸಿ, ವಿಶೇಷವಾಗಿ ಪೂಜಿಸಿ, ಪ್ರಯಾಣ ಅಥವಾ ಗೃಹಪ್ರವೇಶ ಮೊದಲಾದುವನ್ನು ಮಾಡುವ ದುಷ್ಟ ಮಾನವನಿಗೆ ಸಕಲ ಕಾರ್ಯಗಳಲ್ಲಿಯೂ ಸಿದ್ಧಿಯುಂಟಾಗುವುದು. ಸುಭಟನ ವಿಷಯದಲ್ಲಿ ಹೇಳತಕ್ಕದ್ದೇನಿದೆ.

೭೯–೮೦. ಆಶ್ವಯುಜ ಮಾಸದ ಶುಕ್ಲ ಪಕ್ಷದ ಅಷ್ಟಮೀ ದಿನ ನಿನ್ನನ್ನು ಭಕ್ತಿಯಿಂದ ಪೂಜಿಸುವ ಮಾನವನಿಗೆ ಆ ವರ್ಷವೆಲ್ಲ ರೋಗ, ಭಯ, ಅಪಜಯ, ಅಪಮೃತ್ಯು, ಕಳ್ಳರ ಉಪದ್ರವ ಇವುಗಳು ಉಂಟಾಗುವುದಿಲ್ಲ.

೮೧. ಸೂತನು ಹೇಳುತ್ತಾನೆ:—ದೇವತೆಗಳು ಸಂತೋಷದಿಂದ ಆ ದೇವಿಯನ್ನು ಕುರಿತು ಹೀಗೆ ಹೇಳಿ ಅವಳ ಅನುಮತಿಯಿಂದ ಅಮರಾವತೀ ಪಟ್ಟಣಕ್ಕೆ ತೆರಳಿದರು.

೮೨. ಇಂದ್ರನು ಬಹುಕಾಲದ ಮೇಲೆ ತನ್ನ ಸ್ವಾರಾಜ್ಯವನ್ನು ಹೊಂದಿ ಸಂತೋಷದಿಂದ ಶತ್ರುಗಳಿಲ್ಲದ ಮೂರುಲೋಕಗಳನ್ನು ಕಾಪಾಡಿದನು.

ಲೋಕಾಶ್ಚ ಸುಖಸಂಪನ್ನಾಃ ಸರ್ವೇ ಜಾತಾಸ್ತತಃ ಪರಂ ।
ಯಜ್ಞಭಾಗಭುಜೋ ದೇವಾ ಭೂಯೋ ಜಾತಾ ಜಗತ್ತ್ರಯೇ ॥ ೮೩ ॥
ತತಃ ಪರಂ ಚ ಸಾ ದೇವೀ ತ್ರೈಲೋಕ್ಯೇ ಖ್ಯಾತಿಮಾಗತಾ ।
ಸರ್ವಕ್ಷೇತ್ರೇಷು ತೀರ್ಥೇಷು ಸ್ಥಾನೇಷು ಚ ವಿಶೇಷತಃ ॥ ೮೪ ॥
ಏತಸ್ಮಿನ್ನಂತರೇ ಜಾತಃ ಸುರಥೋ ನಾಮ ಭೂಪತಿಃ ।
ಆನರ್ತಸ್ತೇನ ಸದ್ಭಕ್ತ್ಯಾ ಕ್ಷೇತ್ರೇಽತ್ರೈವ ವಿನಿರ್ಮಿತಾ ॥ ೮೫ ॥
ಯಸ್ತಾಂ ಪಶ್ಯತಿ ಸದ್ಭಕ್ತ್ಯಾ ಚೈತ್ರಾಽಷ್ಟಮ್ಯಾಂ ಸಿತೇಽಹನಿ ।
ಸ ಪುಮಾನ್ ವತ್ಸರಂ ಯಾವತ್ಕೃತಾರ್ಥಃ ಸ್ಯಾನ್ನ ಸಂಶಯಃ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಮಹಿಷಾಸುರಪರಾಜಯ ಕಾತ್ಯಾಯನೀಮಾಹಾತ್ಮ್ಯವರ್ಣನಂ "
ನಾಮ್ನೈಕವಿಂಶತ್ಯುತ್ತರಶತತಮೋಽಧ್ಯಾಯಃ

---

೮೩. ಅನಂತರ ಲೋಕದ ಸಮಸ್ತ ಜನರೂ ಸುಖಗೊಂಡರು. ದೇವತೆಗಳು ಮರಳಿ ಯಜ್ಞಭಾಗಗಳನ್ನು ಭುಂಜಿಸುವವರಾದರು.

೮೪. ಆ ದೇವಿಯು ಮೂರುಲೋಕಗಳಲ್ಲಿರುವ ಸಮಸ್ತ ಕ್ಷೇತ್ರ, ತೀರ್ಥ, ಸ್ಥಾನಗಳಲ್ಲಿ ವಿಖ್ಯಾತಳಾದಳು.

೮೫. ಈ ಸಮಯದಲ್ಲಿ ಆನರ್ತದೇಶದ ರಾಜನಾದ ಸುರಥನೆಂಬುವವನು ಈ ಕ್ಷೇತ್ರದಲ್ಲಿ ಭಕ್ತಿಯಿಂದ ದೇವಿಯನ್ನು ಪ್ರತಿಷ್ಠೆ ಮಾಡಿದನು.

೮೬. ಚೈತ್ರ ಶುಕ್ಲ ಅಷ್ಟಮಿ ದಿನ ಆ ದೇವಿಯನ್ನು ಭಕ್ತಿಯಿಂದ ದರ್ಶನ ಮಾಡುವ ಪುರುಷನು ಒಂದು ವರ್ಷವೆಲ್ಲ ಕೃತಾರ್ಥನಾಗಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಮಹಿಷಾಸುರಪರಾಜಯ ಕಾತ್ಯಾಯನೀಮಾಹಾತ್ಮ್ಯವರ್ಣನ " ವೆಂಬ
ನೂರಿಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ

### ಕೇದಾರೋತ್ಪತ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಯಥಾ ಸ ನಿಹತೋ ದೇವ್ಯಾ ಮಹಿಷಾಖ್ಯೋ ದನೂತ್ತಮಃ ॥ ೧ ॥
ಸಾಂಪ್ರತಂ ಕೀರ್ತಯಿಷ್ಯಾಮಿ ಕಥಾಂ ಪಾತಕನಾಶಿನೀಂ ।
ಕೇದಾರಸಂಭವಾಂ ಪುಣ್ಯಾಂ ತಾಂ ಶೃಣುಧ್ವಂ ಸಮಾಹಿತಾಃ ॥ ೨ ॥

ಋಷಯ ಊಚುಃ :—

ಕೇದಾರಃ ಶ್ರೂಯತೇ ಸೂತ ಗಂಗಾದ್ವಾರೇ ಹಿಮಾಚಲೇ ।
ಸ ಕಥಂ ಚೇಹ ಸಂಪ್ರಾಪ್ತಃ ಸರ್ವಂ ವಿಸ್ತರತೋ ವದ ॥ ೩ ॥

ಸೂತ ಉವಾಚ :—

ಏತತ್ಸತ್ಯಂ ಗಿರೌ ತಸ್ಮಿನ್ ಸ್ವಯಂಭೂಃ ಸಂಸ್ಥಿತಃ ಪ್ರಭುಃ ।
ಪರಂ ತತ್ರ ವಸೇದ್ದೇವೋ ಯಾವಾನ್ಮಾಸಾಷ್ಟಕಂ ದ್ವಿಜಾಃ ॥ ೪ ॥
ಯಾವದ್ಧರ್ಮಶ್ಚ ವರ್ಷಾ ಚ ತಾವತ್ತತ್ರ ವಸೇತ್ಪ್ರಭುಃ ।
ಶೀತಕಾಲೇ ಪುನಶ್ಚಾಽತ್ರ ಕ್ಷೇತ್ರೇ ಸಂತಿಷ್ಠತೇ ಸದಾ ॥ ೫ ॥

---

## ಕನ್ನಡದ ಅನುವಾದ

### ಕೇದಾರೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ನೀವು ಕೇಳಿದಂತೆ ದೇವಿಯು ಮಹಿಷನನ್ನು ಕೊಂದ ಸಮಾಚಾರವನ್ನು ಹೇಳಿದ್ದೇನೆ.

೨. ಈಗ ಕೇದಾರದ ಸಕಲ ಪಾಪಗಳನ್ನು ನಾಶಗೊಳಿಸುವ ಪವಿತ್ರ ಕಥೆಯನ್ನು ಹೇಳುವೆನು. ಸಾವಧಾನ ಮನಸ್ಸಿನಿಂದ ಅದನ್ನು ಕೇಳಿರಿ.

೩. ಋಷಿಗಳು ಹೇಳುತ್ತಾರೆ:—ಸೂತ! ಕೇದಾರವು ಹಿಮಾಚಲದಲ್ಲಿರುವ ಗಂಗಾದ್ವಾರದಲ್ಲಿದೆಯೆಂದು ಕೇಳಿದ್ದೇವೆ. ಅದು ಈಗ ಇಲ್ಲಿಗೆ ಹೇಗೆ ಬಂದಿತು? ಎಲ್ಲವನ್ನೂ ವಿಸ್ತಾರವಾಗಿ ಹೇಳು.

೪–೫. ಸೂತನು ಹೇಳುತ್ತಾನೆ:—ಬ್ರಹ್ಮನು ಆ ಗಿರಿಯಲ್ಲಿರುವುದು ನಿಜ. ಆದರೆ ಅವನು ಬೇಸಗೆ ಮತ್ತು ಮಳೆಗಾಲದ ಎಂಟು ತಿಂಗಳು ಮಾತ್ರ ಅಲ್ಲಿ ವಾಸ ಮಾಡುವನು. ಚಳಿಗಾಲದಲ್ಲಿ ಈ ಕ್ಷೇತ್ರದಲ್ಲಿ ಇರುವನು.

ಋಷಯ ಊಚುಃ:—

ಕಿಂ ತತ್ಕಾರ್ಯಂ ವಸೇದ್ಯೇನ ಕ್ಷೇತ್ರೇ ಮಾಸ ಚತುಷ್ಟಯಂ ।
ಹಿಮಾಚಲೇ ಯಥೈವಾಷ್ಟೌ ಸೂತಪುತ್ರ ವದಸ್ವ ನಃ ॥ ೬ ॥

ಸೂತ ಉವಾಚ:—

ಪೂರ್ವಂ ಸ್ವಾಯಂಭುವಸ್ಯಾದೌ ಮನೋರ್ದೈತ್ಯೋ ಮಹಾಬಲಃ ।
ಹಿರಣ್ಯಾಕ್ಷೋ ಮಹಾತೇಜಾಸ್ತಪೋವೀರ್ಯ ಸಮನ್ವಿತಃ ॥ ೭ ॥
ತ್ರೈವಿಷ್ಟಪಂ ಜಗದೇತದ್ಧಿ ನಿರಸ್ಯ ತ್ರಿದಶಾಧಿಪಂ ।
ಯಜ್ಞಭಾಗಾಶ್ಚ ದೇವಾನಾಂ ಹೃತಾ ವೀರ್ಯಪ್ರಭಾವತಃ ॥ ೮ ॥
ಅಥ ಶಕ್ರಃ ಸುರೈಃ ಸಾರ್ಧಂ ಗಂಗಾದ್ವಾರಂ ಸಮಾಶ್ರಿತಃ ।
ತಪಸ್ತೇಪೇ ಸುದುಃಖಾರ್ತೋ ರಾಜ್ಯಶ್ರೀಪರಿವರ್ಜಿತಃ ॥ ೯ ॥
ತಸ್ಯೈವಂ ತಪ್ಯಮಾನಸ್ಯ ತಪಸ್ತೀವ್ರಂ ಮಹಾತ್ಮನಃ ।
ಮಾಹಿಷಂ ರೂಪಮಾಸ್ಥಾಯ ನಿಶ್ಚಕ್ರಾಮ ಧರಾತಲಾತ್ ॥ ೧೦ ॥
ಸ್ವಯಮೇವ ಮಹಾದೇವಸ್ತತಃ ಶಕ್ರಮುವಾಚ ಹ ।
ಕೇದಾರಯಾಮಿ ಮೇ ಶೀಘ್ರಂ ಬ್ರೂಹಿ ಸರ್ವಂ ಸುರೋತ್ತಮ ।
ದೈತ್ಯಾನಾಮಥ ಸರ್ವೇಷಾಂ ರೂಪೇಣಾನೇನ ವಾಸವ ॥ ೧೧ ॥

---

೬. ಋಷಿಗಳು ಹೇಳುತ್ತಾರೆ:—ಸೂತ! ಬ್ರಹ್ಮನು ಎಂಟು ತಿಂಗಳು ಹಿಮಾಚಲದಲ್ಲಿಯೂ, ನಾಲ್ಕು ತಿಂಗಳು ಈ ಕ್ಷೇತ್ರದಲ್ಲಿಯೂ ಏಕೆ ವಾಸ ಮಾಡುವನು?

೭. ಸೂತನು ಹೇಳುತ್ತಾನೆ:—ಹಿಂದೆ ಸ್ವಾಯಂಭುವಮನ್ವಂತರದ ಆದಿಯಲ್ಲಿ ಅತ್ಯಂತ ತೇಜಸ್ವಿಯೂ, ತಪಸ್ಸಿನ ಸಾಮರ್ಥ್ಯದಿಂದ ಕೂಡಿದವನೂ ಆದ ಹಿರಣ್ಯಾಕ್ಷನೆಂಬ ದೈತ್ಯನಿದ್ದನು.

೮. ಅವನು ಅಮರಾಧಿಪನನ್ನು ಇಂದ್ರಪೀಠದಿಂದ ಓಡಿಸಿ ತನ್ನ ಶಕ್ತಿಯಿಂದ ದೇವತೆಗಳ ಯಜ್ಞಭಾಗಗಳನ್ನು ಅಪಹರಿಸಿದನು.

೯. ಬಳಿಕ ದುಃಖಿಯೂ, ರಾಜ್ಯಭ್ರಷ್ಟನೂ ಆದ ಇಂದ್ರನು ದೇವತೆಗಳೊಡನೆ ಗಂಗಾದ್ವಾರವನ್ನು ಆಶ್ರಯಿಸಿ ತಪವನ್ನಾಚರಿಸಿದನು.

೧೦–೧೧. ಅವನು ಹೀಗೆ ಕಠಿನ ತಪಸ್ಸನ್ನು ಮಾಡುತ್ತಿರಲು ಮಹೇಶ್ವರನು ತಾನೇ ಕೋಣನ ರೂಪವನ್ನು ಹೊಂದಿ ಭೂಮಿಯಿಂದ ಹೊರಟು ಇಂದ್ರನನ್ನು ಕುರಿತು "ಇಂದ್ರ! ಈ ರೂಪದಿಂದ ಸಕಲ ದೈತ್ಯರಲ್ಲಿ ಯಾರನ್ನು ಸೀಳಲಿ. ಶೀಘ್ರವಾಗಿ ಹೇಳು" ಎಂದನು.

ಇಂದ್ರ ಉವಾಚ :—

ಹಿರಣ್ಯಾಕ್ಷೋ ಮಹಾದೈತ್ಯಃ ಸುಬಾಹುರ್ವಕ್ರಕಂಧರಃ ।
ತ್ರಿಶೃಂಗೋ ಲೋಹಿತಾಕ್ಷಶ್ಚ ಪಂಚೈತಾನ್ ಧಾರಯ ಪ್ರಭೋ ।
ಹತೈರೇತೈರ್ಹತಂ ಸರ್ವಂ ದಾನವಾನಾಮಸಂಶಯಂ ॥ ೧೨ ॥
ಕಿಮನ್ಯೈಃ ಕೃಪಣೈರ್ಧ್ವಸ್ತೈರ್ಯೈರ್ಃ ಕಿಂಚಿನ್ನಾಽತ್ರ ಸಿದ್ಧ್ಯತಿ ।
ತಸ್ಯ ತದ್ವಚನಂ ಶ್ರುತ್ವಾ ಭಗವಾಂಸ್ತೂರ್ಣಮಭ್ಯಗಾತ್ ।
ಯತ್ರ ದಾನವಮುಖ್ಯೋಽಸೌ ಹಿರಣ್ಯಾಕ್ಷೋ ಮಹಾಬಲಃ ॥ ೧೩ ॥
ಅಥ ತಂ ದೂರತೋ ದೃಷ್ಟ್ವಾ ಮಹಿಷಂ ಪರ್ವತೋಪಮಂ ।
ಆಯಾತಂ ರೌದ್ರರೂಪೇಣ ದಾನವಾಃ ಸರ್ವತಶ್ಚ ತೇ . ॥ ೧೪ ॥
ತತೋ ಜಘ್ನುಶ್ಚ ಪಾಷಾಣೈರ್ಲಗುಡೈಶ್ಚ ತಥಾ ಪರೇ ।
ಕ್ಷ್ವೇಡಿತಾ ಸ್ಫೋಟಿತಾಂಶ್ಚಕ್ರುಸ್ತಥಾಽನ್ಯೇ ಬಲಗರ್ವಿತಾಃ ॥ ೧೫ ॥
ಅಥಾಽವಮನ್ಯ ತಾನ್ ದೇವಃ ಪ್ರಹಾರಂ ಲೀಲಯಾ ದದೌ ।
ಯತ್ರಾಸ್ತೇ ದಾನವೇಂದ್ರೋಽಸೌ ಚತುರ್ಭಿಃ ಸಚಿವೈಃ ಸಹ ॥ ೧೬ ॥
ತತಃ ಶಸ್ತ್ರಂ ಸಮುದ್ಯಮ್ಯ ಯಾವದ್ಧಾವತಿ ಸಮ್ಮುಖಃ ।
ತಾವಚ್ಛೃಂಗಪ್ರಹಾರೇಣ ಸೋಽನಯದ್ಯಮಸಾದನಂ ॥ ೧೭ ॥
ಹತ್ವಾ ತಂ ಸಚಿವಾನ್ ಪಶ್ಚಾತ್ಸುಬಾಹುಪ್ರಮುಖಾಂಶ್ಚ ತಾನ್ ।
ಜಘಾನ ಹನ್ಯಮಾನೋಽಪಿ ಸಮಂತಾದ್ದಾನವೈಃ ಪರೈಃ ॥ ೧೮ ॥

---

೧೨. ಇಂದ್ರನು ಹೇಳುತ್ತಾನೆ:—ಹಿರಣ್ಯಾಕ್ಷ, ಸುಬಾಹು, ವಕ್ರಕಂಧರ, ತ್ರಿಶೃಂಗ, ಲೋಹಿತಾಕ್ಷ ಈ ಐವರನ್ನು ಸೀಳು. ಇವರನ್ನು ಕೊಂದರೆ ಉಳಿದ ದಾನವರನ್ನು ಕೊಂದಂತೆಯೇ.

೧೩. ಇತರ ದೀನ ದಾನವರನ್ನು ಕೊಂದರೆ ಯಾವುದೂ ಸಿದ್ಧಿಸುವುದಿಲ್ಲ. ಇಂದ್ರನ ಈ ಮಾತನ್ನು ಕೇಳಿ ಮಹೇಶ್ವರನು ಶೀಘ್ರವಾಗಿ ಬಲಿಷ್ಠನಾದ ಹಿರಣ್ಯಾಕ್ಷನಿದ್ದೆಡೆಗೆ ಹೋದನು.

೧೪–೧೫. ಬಳಿಕ ಆ ದಾನವರು ದೂರದಲ್ಲಿ ಪರ್ವತದಂತಿರುವ ಭಯಂಕರವಾದ ಕೋಣನು ಬರುತ್ತಿರುವುದನ್ನು ಕಂಡು ಕಲ್ಲುಗಳಿಂದ ಹೊಡೆದರು. ಕೆಲವರು ದೊಣ್ಣೆಗಳಿಂದ ಹೊಡೆದರು. ಇನ್ನು ಕೆಲವರು ಸಿಂಹ ನಾದವನ್ನು ಮಾಡುತ್ತ ಆರ್ಭಟಿಸಿದರು.

೧೬. ಮಹೇಶ್ವರನು ಅವರನ್ನು ಅವಮಾನ ಮಾಡಿ ತಿವಿದನು. ಅನಂತರ ನಾಲ್ಕು ಮಂದಿ ಮಂತ್ರಿಗಳೊಡನೆ ಇರುವ ಹಿರಣ್ಯಾಕ್ಷನೆಡೆಗೆ ಹೋದನು.

೧೭. ಆ ಹಿರಣ್ಯಾಕ್ಷನು ಆಯುಧವನ್ನು ಎತ್ತಿಕೊಂಡು ಅಭಿಮುಖವಾಗಿ ಓಡಿಬರುವಷ್ಟರಲ್ಲಿ ಅವನನ್ನು ಕೊಂಬಿನಿಂದ ತಿವಿದು ಕೊಂದನು.

೧೮–೧೯. ಅನಂತರ ಸುಬಾಹು ಮೊದಲಾದ ಮಂತ್ರಿಗಳನ್ನು ಕೊಂದನು.

ಘ ತಸ್ಯ ಲಗತೇ ಕ್ವಾಽಪಿ ಶಸ್ತ್ರಂ ಗಾತ್ರೇ ಕಥಂಚನ ।
ಯತ್ನತೋಽಪಿ ವಿಸೃಷ್ಟಂ ಚ ಲಬ್ಧಲಕ್ಷ್ಯೈಃ ಪ್ರಹಾರಿಭಿಃ ॥ ೧೯ ॥
ಏವಂ ಪಂಚ ಪ್ರಧಾನಾಂಸ್ತಾನ್ ಹತ್ವಾ ದೈತ್ಯಾನ್ ಮಹೇಶ್ವರಃ ।
ಭೂಯೋ ಜಗಾಮ ತಂ ದೇಶಂ ಯತ್ರ ಶಕ್ರೋ ವ್ಯವಸ್ಥಿತಃ ।
ಅಬ್ರವೀಚ್ಚ ಪ್ರಹೃಷ್ಟಾತ್ಮಾ ತತಃ ಶಕ್ರಂ ತಪೋನ್ವಿತಮ್ ॥ ೨೦ ॥
ಮಯಾ ತೇ ನಿಹತಾಃ ಪಂಚ ದಾನವಾ ಯೇ ತ್ವಯೇರಿತಾಃ ।
ತಸ್ಮಾತ್ತ್ರೈಲೋಕ್ಯರಾಜ್ಯಂ ಸ್ವಂ ಭೂಯ ಏವ ಸಮಾಚರ ॥ ೨೧ ॥
ಮತ್ತೋಽನ್ಯದಪಿ ದೇವೇಶ ವರಂ ಪ್ರಾರ್ಥಯ ವಾಂಛಿತಂ ।
ಕೈಲಾಸ ಶಿಖರಂ ಯೇನ ಗಚ್ಛಾಮಿ ತ್ವರಯಾಽನ್ವಿತಃ ॥ ೨೨ ॥

ಇಂದ್ರ ಉವಾಚ :—

ಅನೇನೈವ ಹಿ ರೂಪೇಣ ತಿಷ್ಠ ತ್ವಂ ಚಾಽತ್ರ ಶಂಕರ ।
ತ್ರೈಲೋಕ್ಯ ರಕ್ಷಣಾರ್ಥಾಯ ಧರ್ಮಾಯ ಚ ಶಿವಾಯ ಚ ॥ ೨೩ ॥

ಶ್ರೀ ಭಗವಾನುವಾಚ :—

ಏತದ್ರೂಪಂ ಮಯಾ ಶಕ್ರ ಕೃತಂ ತಸ್ಯ ವಧಾಯ ವೈ ।
ಅವಧ್ಯಃ ಸರ್ವಭೂತಾನಾಂ ಯತೋಽನ್ಯೇಷಾಂ ಮಯಾ ಹತಃ ॥ ೨೪ ॥

---

ಇತರ ದಾನವರು ಗುರಿಯಿಟ್ಟು ಆಯುಧಗಳನ್ನು ಪ್ರಯೋಗಿಸಿದರೂ ಆ ಮಾಹಿಷನ ಶರೀರಕ್ಕೆ ತಗಲಲಿಲ್ಲ.

೨೦. ಮಹೇಶ್ವರನು ಹೀಗೆ ಐದು ಮಂದಿ ಪ್ರಧಾನ ದೈತ್ಯರನ್ನು ಕೊಂದು ಮರಳಿ ಇಂದ್ರನಿರುವ ಸ್ಥಳಕ್ಕೆ ಹೋಗಿ ಸಂತೋಷದಿಂದ ತಪಸ್ಸನ್ನು ಮಾಡುತ್ತಿರುವ ಅವನನ್ನು ಕುರಿತು ಇಂತೆಂದನು.

೨೧. "ನೀನು ಹೇಳಿದ ಐದು ಮಂದಿ ದಾನವರನ್ನು ಕೊಂದಿರುವೆನು. ಆದುದರಿಂದ ಮರಳಿ ತ್ರೈಲೋಕ್ಯ ರಾಜ್ಯವನ್ನಾಳು.

೨೨. ದೇವೇಂದ್ರ! ಇನ್ನೂ ಇಷ್ಟವಾದ ಬೇರೆ ವರವನ್ನು ನನ್ನಿಂದ ತೆಗೆದುಕೊ. ನಾನು ಬೇಗನೆ ಕೈಲಾಸ ಶಿಖರಕ್ಕೆ ತೆರಳುವೆನು."

೨೩. ಇಂದ್ರನು ಹೇಳುತ್ತಾನೆ:—ಶಂಕರ! ನೀನು ತ್ರೈಲೋಕ್ಯ ರಕ್ಷಣೆಗಾಗಿಯೂ, ಧರ್ಮ ಮತ್ತು ಮಂಗಳಕ್ಕಾಗಿಯೂ ಈ ರೂಪದಿಂದಲೇ ಇಲ್ಲಿರು.

೨೪. ಶ್ರೀ ಭಗವಂತನು ಹೇಳುತ್ತಾನೆ:—ಇಂದ್ರ! ಆ ಹಿರಣ್ಯಾಕ್ಷನು ಸಕಲ ಪ್ರಾಣಿಗಳಿಗೆ ಅವಧ್ಯನಾದುದರಿಂದ ನಾನು ಈ ರೂಪವನ್ನು ತಾಳಿ ಅವನನ್ನು ಕೊಂದೆನು.

ತಸ್ಮಾದತ್ರೈವ ತೇ ವಾಕ್ಯಾತ್ಸ್ಥಾಸ್ಯಾಮಿ ಸುರಸತ್ತಮ ।
ಅನೇನೈವ ತು ರೂಪೇಣ ಮೋಕ್ಷದಃ ಸರ್ವ ದೇಹಿನಾಂ ॥ ೨೫ ॥
ಏವಮುಕ್ತ್ವಾ ವಿರೂಪಾಕ್ಷಶ್ಚಕ್ರೇ ಕುಂಡಂ ತತಃ ಪರಂ ।
ಶುದ್ಧಸ್ಫಟಿಕಸಂಕಾಶಂ ಸುಸ್ವಾದು ಕ್ಷೀರವತ್ಪ್ರಿಯಂ ॥ ೨೬ ॥
ತತಃ ಪ್ರೋವಾಚ ದೇವೇಂದ್ರಂ ಮೇಘಗಂಭೀರಯಾ ಗಿರಾ ।
ಶೃಣ್ವತಾಂ ಸರ್ವ ದೇವಾನಾಂ ಭಗವಾಂ ಸ್ತ್ರಿಪುರಾಂತಕಃ ॥ ೨೭ ॥
ಯೋ ಮಾಂ ದೃಷ್ಟ್ವಾ ಶುಚಿರ್ಭೂತ್ವಾ ಕುಂಡಮೇತತ್ಪ್ರಪಶ್ಯತಿ ।
ತ್ರಿಃ ಪೀತ್ವಾ ವಾಮಸವ್ಯೇನ ದ್ವಾಭ್ಯಾಂ ಚೈವ ತತೋ ಜಲಂ ॥ ೨೮ ॥
ಕರಾಭ್ಯಾಂ ಸ ಪುಮಾನ್ ನೂನಂ ತಾರಯೇಚ್ಚ ಕುಲತ್ರಯಂ ।
ಅಪಿ ಪಾಪಸಮಾಚಾರಂ ನರಕೇಽಪಿ ವ್ಯವಸ್ಥಿತಂ ॥ ೨೯ ॥
ವಾಮೇನ ಮಾತೃಕಂ ಪಕ್ಷಂ ದಕ್ಷಿಣೇನಾಥ ಪೈತೃಕಂ ।
ಉಭಾಭ್ಯಾಮಥ ಚಾತ್ಮಾನಂ ಕರಾಭ್ಯಾಂ ಮದ್ವಚೋ ಯಥಾ ॥ ೩೦ ॥

ಇಂದ್ರ ಉವಾಚ:—

ಅಹಮಾಗತ್ಯ ನಿತ್ಯಂ ತ್ವಾಂ ಸ್ವರ್ಗಾದ್ವೃಷಭವಾಹನ ।
ಅತ್ರಸ್ಥಂ ಪೂಜಯಿಷ್ಯಾಮಿ ಪಾಸ್ಯಾಮಿ ಚ ತಥೋದಕಂ ॥ ೩೧ ॥

---

೨೫. ಸುರೋತ್ತಮ! ಆದುದರಿಂದ ನಾನು ನಿನ್ನ ಮಾತಿನಂತೆ ಇಲ್ಲಿಯೇ ಸಕಲ ಪ್ರಾಣಿಗಳಿಗೆ ಮೋಕ್ಷವನ್ನೀಯುತ್ತ ಈ ರೂಪದಿಂದಲೇ ನೆಲೆಸುವೆನು.

೨೬. ಶಂಕರನು ಹೀಗೆ ಹೇಳಿ ಸ್ಫಟಿಕದಂತೆ ಬೆಳ್ಳಗಿರುವುದೂ, ರುಚಿಯುಳ್ಳ ನೀರುಳ್ಳುದೂ ಆದ ಒಂದು ಕುಂಡವನ್ನು ಅಲ್ಲಿ ನಿರ್ಮಿಸಿದನು.

೨೭. ಅನಂತರ ಆ ಶಿವನು ಸಮಸ್ತ ದೇವತೆಗಳು ಕೇಳುತ್ತಿರುವಾಗಲೇ ದೇವೇಂದ್ರನನ್ನು ಕುರಿತು ಮೇಘದಂತೆ ಗಂಭೀರವಾದ ಮಾತಿನಿಂದ ಇಂತೆಂದನು.

೨೮–೩೦. "ಇಲ್ಲಿ ನನ್ನನ್ನು ನೋಡಿ ಶುದ್ಧನಾಗಿ ಈ ಕುಂಡವನ್ನು ದರ್ಶನ ಮಾಡಿ ಎಡಗೈಯಿಂದಲೂ, ಬಲಗೈಯಿಂದಲೂ, ಅನಂತರ ಎರಡು ಹಸ್ತಗಳಿಂದಲೂ ಮೂರು ಸಾರಿ ಜಲಪಾನ ಮಾಡುವವನು ನಿಶ್ಚಯವಾಗಿಯೂ ನನ್ನ ಮಾತಿನಂತೆ ಎಡಗೈಯಿಂದ ಪಾಪಿಗಳಾಗಿ ನರಕದಲ್ಲಿರುವ ಮಾತೃ ಪಕ್ಷದವರನ್ನೂ, ಬಲಗೈಯಿಂದ ತಂದೆಯ ಪಕ್ಷದವರನ್ನೂ, ಎರಡೂ ಹಸ್ತಗಳಿಂದ ತನ್ನನ್ನೂ ಉದ್ಧರಿಸುವನು."

೩೧. ಇಂದ್ರನು ಹೇಳುತ್ತಾನೆ:—ಶಂಕರ! ನಾನು ನಿತ್ಯವೂ ಸ್ವರ್ಗದಿಂದ ಬಂದು ಇಲ್ಲಿರುವ ನಿನ್ನನ್ನು ಪೂಜಿಸುವೆನು. ಹಾಗೆಯೇ ಕುಂಡದ ಜಲವನ್ನು ಕುಡಿಯುವೆನು.

ಕೇ ದಾರಯಾಮಿ ಯತ್ಪ್ರೋಕ್ತಂ ತ್ವಯಾ ಮಹಿಷರೂಪಿಣಾ ।
ಕೇದಾರ ಇತಿ ನಾಮ್ನಾ ತ್ವಂ ತತಃ ಖ್ಯಾತೋ ಭವಿಷ್ಯಸಿ ॥ ೩೨ ॥

ಶ್ರೀ ಭಗವಾನುವಾಚ :—

ಯದ್ಯೇವಂ ಕುರುಷೇ ಶಕ್ರ ತತೋ ದೈತ್ಯಭಯಂ ನ ತೇ ।
ಭವಿಷ್ಯತಿ ಪರಂ ತೇಜೋ ಗಾತ್ರೇ ಸಂಪತ್ಸ್ಯತೇಽಖಿಲಂ ॥ ೩೩ ॥
ಏವಮುಕ್ತಃ ಸಹಸ್ರಾಕ್ಷಸ್ತತಃ ಪ್ರಾಸಾದಮುತ್ತಮಂ ।
ತದರ್ಥಂ ನಿರ್ಮಯಾಮಾಸ ಸಾರ್ಧ್ವಾಲೋಕಂ ಮನೋಹರಂ ॥ ೩೪ ॥
ತತಃ ಪ್ರಣಮ್ಯ ತಂ ದೇವಮನುಮಂತ್ರ್ಯ ತತಃ ಪರಂ ।
ಜಗಾಮ ನಿಜಮಾವಾಸಂ ಮೇರುಶೃಂಗಾಗ್ರ ಸಂಸ್ಥಿತಂ ॥ ೩೫ ॥
ತತಶ್ಚಾಽಽಗತ್ಯ ನಿತ್ಯಂ ಸ ಸ್ವರ್ಗಾದ್ದೇವಸ್ಯ ಶೂಲಿನಃ ।
ಕೇದಾರಸ್ಯ ಸುಭಕ್ತ್ಯಾಢ್ಯಾಂ ಪೂಜಾಂ ಚಕ್ರೇ ಸಮಾಹಿತಃ ॥ ೩೬ ॥
ಮಂತ್ರೋದಕಂ ಚ ತ್ರಿಃ ಪೀತ್ವಾ ಯಯೌ ಬ್ರಾಹ್ಮಣಸತ್ತಮಾಃ ।
ಕಸ್ಯ ಚಿತ್ತ್ವಥ ಕಾಲಸ್ಯ ಯಾವತ್ತತ್ರ ಸಮಾಯಯೌ ॥ ೩೭ ॥
ತಾವದ್ಧಿಮೇನ ತತ್ಸರ್ವಂ ಗಿರೇಃ ಶೃಂಗಂ ಪ್ರಪೂರಿತಂ ।
ತಚ್ಚ ಕುಂಡಂ ಸ ದೇವಶ್ಚ ಪ್ರಾಸಾದೇನ ಸಮನ್ವಿತಃ ॥ ೩೮ ॥
ತತೋ ದುಃಖಪರೀತಾತ್ಮಾ ಭಕ್ತ್ಯಾ ಪರಮಯಾ ಯುತಃ ।
ತಾಂ ದಿಶಂ ಪ್ರಣಿಪತ್ಯೋಚ್ಚೈರ್ಜಗಾಮ ನಿಜಮಂದಿರಂ ॥ ೩೯ ॥

---

೩೨. ಮಹಿಷರೂಪಿಯಾದ ನೀನು "ಕೇ ದಾರಯಾಮಿ" ಎಂದು ಹೇಳಿದ್ದರಿಂದ ಕೇದಾರನೆಂದು ಪ್ರಸಿದ್ಧನಾಗುವೆ.

೩೩–೩೪. ಶ್ರೀ ಭಗವಂತನು ಹೇಳುತ್ತಾನೆ:—ಇಂದ್ರ! ನೀನು ಹೀಗೆ ಮಾಡಿದರೆ ನಿನಗೆ ದೈತ್ಯರಿಂದ ಭಯವುಂಟಾಗುವುದಿಲ್ಲ. ನಿನ್ನ ಶರೀರದಲ್ಲಿ ತೇಜಸ್ಸು ಹೆಚ್ಚುವುದು. ಶಿವನು ಹೀಗೆನ್ನಲು ಇಂದ್ರನು ಆ ಕೇದಾರನಿಗೆ ಮನೋಹರವಾದ ದೇವಾಲಯವನ್ನು ಕಟ್ಟಿಸಿದನು.

೩೫. ಇಂದ್ರನು ಆ ಮಹೇಶ್ವರನನ್ನು ವಂದಿಸಿ ಅವನ ಅನುಮತಿಯನ್ನು ಪಡೆದು ಮೇರುಶಿಖರದಲ್ಲಿರುವ ತನ್ನ ವಾಸಸ್ಥಳಕ್ಕೆ ತೆರಳಿದನು.

೩೬–೩೮. ಅನಂತರ ಅವನು ನಿತ್ಯವೂ ಸ್ವರ್ಗದಿಂದ ಬಂದು ಕೇದಾರನಿಗೆ ಭಕ್ತಿಯಿಂದ ಪೂಜೆ ಮಾಡಿ ಮಂತ್ರೋದಕವನ್ನು ಮೂರು ಸಾರಿ ಕುಡಿದು ಹೊರಟು ಹೋಗುತ್ತಿದ್ದನು. ಒಂದಾನೊಂದು ದಿನ ಅವನು ಅಲ್ಲಿಗೆ ಬರಲು ಆ ಕುಂಡವೂ, ದೇವಾಲಯದಿಂದ ಸಹಿತನಾದ ಕೇದಾರೇಶ್ವರನೂ ಇರುವ ಆ ಪರ್ವತದ ಶಿಖರವು ಹಿಮದಿಂದ ತುಂಬಿದ್ದಿತು.

೩೯. ಅದರಿಂದ ಅವನು ದುಃಖಗೊಂಡು ಅತ್ಯಂತ ಭಕ್ತಿಯಿಂದ ಆ ದಿಕ್ಕಿಗೆ ವಂದಿಸಿ ತನ್ನ ಸ್ಥಾನಕ್ಕೆ ಹೋದನು.

ಏವಮಾಗಚ್ಛತಸ್ತಸ್ಯ ಗತಂ ಮಾಸಚತುಷ್ಟಯಂ ।
ಅಪಶ್ಯತೋ ಮಹಾದೇವಂ ದಿದೃಕ್ಷಾಗತಚೇತಸಃ ॥ ೪೦ ॥
ತತಃ ಪ್ರಾಪ್ತೇ ಪುನರ್ವಿಪ್ರಾ ಘರ್ಮಕಾಲೇ ಹಿಮಾಲಯೇ ।
ಸಂಯಾತೋ ದೃಕ್ಪಥಂ ದೇವಃ ಸ ತಥಾ ರೂಪಸಂಸ್ಥಿತಃ ॥ ೪೧ ॥
ತತಃ ಪೂಜಾಂ ವಿಧಾಯೋಚ್ಚೈಶ್ಚಾತುರ್ಮಾಸ್ಯಸಮುದ್ಭವಾಂ ।
ಗೀತವಾದ್ಯಾದಿಕಂ ಚಕ್ರೇ ತತ್ಪರಃ ಶ್ರದ್ಧಯಾನ್ವಿತಃ ॥ ೪೨ ॥
ಅಥ ದೇವಃ ಸಮಾಲೋಕ್ಯ ತಾಂ ಶ್ರದ್ಧಾಂ ತಸ್ಯ ಗೋಪತೇಃ ।
ಪ್ರೋವಾಚ ದರ್ಶನಂ ಗತ್ವಾ ಭಗವಾಂಸ್ತ್ರಿಪುರಾಂತಕಃ ॥ ೪೩ ॥
ಪರಿತುಷ್ಟೋಽಸ್ಮಿ ದೇವೇಶ ಭಕ್ತ್ಯಾ ಚಾಽನನ್ಯಯಾಽನಯಾ ।
ತಸ್ಮಾತ್ಪ್ರಾರ್ಥಯ ದಾಸ್ಯಾಮಿ ಯಂ ಕಾಮಂ ಹೃದಿ ಸಂಸ್ಥಿತಂ ॥ ೪೪ ॥

ಶಕ್ರ ಉವಾಚ :—

ತವ ಪ್ರಸಾದಾತ್ಸಂಜಾತಂ ಮಮೈಶ್ವರ್ಯಮನುತ್ತಮಂ ।
ಯತ್ಕಿಂಚಿತ್ತ್ರಿಷು ಲೋಕೇಷು ತತ್ಸರ್ವಂ ಗೃಹಸಂಸ್ಥಿತಂ ॥ ೪೫ ॥
ತಸ್ಮಾದ್ಯದಿ ಪ್ರಸಾದಂ ಮೇ ಕರೋಷಿ ವೃಷಭಧ್ವಜ ।
ವರಂ ವಾ ಯಚ್ಛಸಿ ಪ್ರೀತಸ್ತತ್ಕುರುಷ್ವ ವಚೋ ಮಮ ॥ ೪೬ ॥

---

೪೦. ಇಂದ್ರನು ಹೀಗೆ ಮಹೇಶ್ವರನನ್ನು ನೋಡಲು ಅಲ್ಲಿಗೆ ಬಂದು ಅವನನ್ನು ಕಾಣದೆ ಹಿಂದಿರುಗುತ್ತಿರಲು ನಾಲ್ಕು ತಿಂಗಳು ಕಳೆದುವು.

೪೧. ವಿಪ್ರರೆ! ಅನಂತರ ಹಿಮಾಲಯದಲ್ಲಿ ಉಷ್ಣಕಾಲವು ಬರಲು ಕೇದಾರೇಶ್ವರನು ಕಾಣಿಸಿಕೊಂಡನು.

೪೨. ಅನಂತರ ಇಂದ್ರನು ಚಾತುರ್ಮಾಸ್ಯ ಪೂಜೆಗೈದು ಅವನ ಮುಂದೆ ಶ್ರದ್ಧೆಯಿಂದ ಗೀತ ವಾದ್ಯಾದಿಗಳನ್ನು ಮಾಡಿದನು.

೪೩. ಪೂಜ್ಯನಾದ ಮಹೇಶ್ವರನು ಇಂದ್ರನ ಆ ಶ್ರದ್ಧೆಯನ್ನು ನೋಡಿ ಪ್ರತ್ಯಕ್ಷನಾಗಿ ಇಂತೆಂದನು.

೪೪. "ಇಂದ್ರ! ನಿನ್ನ ಅಸಾಧಾರಣ ಭಕ್ತಿಯಿಂದ ಸಂತುಷ್ಟನಾಗಿದ್ದೇನೆ. ಆದುದರಿಂದ ನಿನ್ನ ಮನೋಭೀಷ್ಟವನ್ನು ಕೇಳಿಕೊ. ಅದನ್ನು ಕೊಡುವೆನು."

೪೫. ಶಕ್ರನು ಹೇಳುತ್ತಾನೆ:—ಮಹೇಶ್ವರ! ನಿನ್ನ ಅನುಗ್ರಹದಿಂದ ನನಗೆ ಉತ್ಕೃಷ್ಟವಾದ ಐಶ್ವರ್ಯವುಂಟಾಯಿತು. ಮೂರು ಲೋಕಗಳಲ್ಲಿರುವುದೆಲ್ಲವೂ ನನ್ನ ಮನೆಯಲ್ಲಿರುವುವು.

೪೬. ಮಹಾದೇವ! ನೀನು ಅನುಗ್ರಹಿಸಿ ವರವನ್ನು ಕೊಡುವುದಾದರೆ ನನ್ನೀ ಮಾತನ್ನು ನಡೆಯಿಸು.

ಪರ್ವತೋಽಯಂ ಭವೇದ್ಗಮ್ಯೋ ಮಾಸಾನಷ್ಟೌ ಸುರೇಶ್ವರ ।
ಯಾವನ್ಮೀನಸ್ಥಿತೋ ಭಾನುಃ ಪ್ರಗಚ್ಛತಿ ಶ್ರುತಂ ಮಯಾ ॥ ೪೭ ॥
ತತಃ ಪರಮಗಮ್ಯಶ್ಚ ಹಿಮಪೂರೇಣ ಸಂವೃತಃ ।
ಯದಾ ಸ್ಯಾಚ್ಚತುರೋ ಮಾಸಾನ್ಯಾವತ್ಕುಂಭಗತೋ ರವಿಃ ॥ ೪೮ ॥
ಸಂಜಾಯತೇಽಪ್ಯಗಮ್ಯಶ್ಚ ಮಮಾಽಪಿ ತ್ರಿಪುರಾಂತಕ ।
ಕಿಂ ಪುನಃ ಸ್ವಲ್ಪಸತ್ವಾನಾಂ ನರಾದೀನಾಂ ಸುರೇಶ್ವರ ॥ ೪೯ ॥
ತಸ್ಮಾತ್ಸ್ವರ್ಗೇಽಥ ಪಾತಾಲೇ ಮರ್ತ್ಯೇ ವಾ ತ್ರಿದಶೇಶ್ವರ ।
ಕುರುಷ್ವಾಽನೇನ ರೂಪೇಣ ಸ್ಥಿತಿಂ ಮಾಸಚತುಷ್ಟಯಂ ।
ಯೇನ ನ ಸ್ಯಾತ್ಪ್ರತಿಜ್ಞಾಯಾ ಹಾನಿರ್ಮಮ ಸುರೇಶ್ವರ ॥ ೫೦ ॥

ಸೂತ ಉವಾಚ :—

ತತೋ ದೇವಶ್ಚಿರಂ ಧ್ಯಾತ್ವಾ ಪ್ರೋವಾಚ ಬಲಸೂದನಂ ।
ಪರಂ ಸಂತೋಷಮಾಪನ್ನೋ ಮೇಘನಿರ್ಘೋಷನಿಃಸ್ವನಂ ॥ ೫೧ ॥
ಆನರ್ತವಿಷಯೇ ಕ್ಷೇತ್ರಂ ಹಾಟಕೇಶ್ವರಸಂಜ್ಞಿತಂ ।
ಅಸ್ಮದೀಯಂ ಸಹಸ್ರಾಕ್ಷ ವಿದ್ಯತೇ ಧರಣೀತಲೇ ॥ ೫೨ ॥
ತತ್ರಾಽಹಂ ವೃಶ್ಚಿಕಸ್ಥೇಽರ್ಕೇ ಸದಾ ಸ್ಥಾಸ್ಯಾಮಿ ವಾಸವ ।
ಯಾವತ್ಕುಂಭಸ್ಯ ಪರ್ಯಂತಂ ತವ ವಾಕ್ಯಾದಸಂಶಯಂ ॥ ೫೩ ॥

---

೪೭–೪೯. ಸುರೇಶ್ವರ! ಈ ಪರ್ವತವು ಮೀನ ಮಾಸದಿಂದ ಎಂಟು ತಿಂಗಳು ಪ್ರವೇಶಿಸಲು ಶಕ್ಯವಾಗಿಯೂ, ಅನಂತರ ಕುಂಭ ಮಾಸದವರೆಗೆ ಹಿಮದಿಂದ ತುಂಬಿ ನನಗೂ ಪ್ರವೇಶಿಸಲಶಕ್ಯವಾಗಿಯೂ ಆಗುವುದೆಂದು ಕೇಳಿದ್ದೇನೆ. ಅಲ್ಪಸತ್ವರಾದ ಮನುಷ್ಯರೇ ಮೊದಲಾದವರ ವಿಷಯ ವಿನ್ನೇನು.

೫೦. ಆದುದರಿಂದ ನನ್ನ ಪ್ರತಿಜ್ಞೆಯು ಕೆಡದಂತೆ ಈ ರೂಪದಿಂದ ಸ್ವರ್ಗ, ಪಾತಾಳ ಅಥವಾ ಭೂಲೋಕದಲ್ಲಿ ನಾಲ್ಕು ತಿಂಗಳು ವಾಸಿಸು.

೫೧. ಸೂತನು ಹೇಳುತ್ತಾನೆ:—ಅನಂತರ ಮಹೇಶ್ವರನು ಬಹಳಹೊತ್ತು ಆಲೋಚಿಸಿ ಅತ್ಯಂತ ಸಂತೋಷಗೊಂಡು ಮೇಘದ ಧ್ವನಿಯಂತೆ ಗಂಭೀರವಾದ ವಾಣಿಯಿಂದ ಇಂತೆಂದನು.

೫೨. "ದೇವೇಂದ್ರ! ಭೂಮಿಯುಲ್ಲಿರುವ ಆನರ್ತದೇಶದಲ್ಲಿ ಹಾಟಕೇಶ್ವರ ವೆಂಬ ನನ್ನ ಕ್ಷೇತ್ರವಿರುವುದು.

೫೩. ಅಲ್ಲಿ ನಾನು ನಿನ್ನ ಮಾತಿನಿಂದ ವೃಶ್ಚಿಕ ಮಾಸವನ್ನಾರಂಭಿಸಿ ಕುಂಭ ಮಾಸದವರೆಗೆ ಯಾವಾಗಲೂ ನೆಲೆಸಿರುವೆನು.

ತಸ್ಮಾತ್ತತ್ರ ದ್ರುತಂ ಗತ್ವಾ ಕೃತ್ವಾ ಪ್ರಾಸಾದಮುತ್ತಮಂ ।
ಮಮ ರೂಪಂ ಪ್ರತಿಷ್ಠಾಪ್ಯ ಕುರು ಪೂಜಾಂ ಯಥೋಚಿತಾಂ ।
ಯೇನ ತತ್ರ ನಿಜಂ ತೇಜೋ ಧಾರಯಾಮಿ ತವಾರ್ಥತಃ ॥ ೫೪ ॥

ಸೂತ ಉವಾಚ :—

ಏತಚ್ಛ್ರುತ್ವಾ ಸಹಸ್ರಾಕ್ಷೋ ದೇವದೇವಸ್ಯ ಶೂಲಿನಃ ।
ಗತ್ವಾ ತತ್ರ ತತಶ್ಚಕ್ರೇ ಯದ್ದೇವೇನೇರಿತಂ ವಚಃ ॥ ೫೫ ॥
ಪ್ರಾಸಾದಂ ನಿರ್ಮಾಯಿತ್ವಾಽಥ ರೂಪಂ ಸಂಸ್ಥಾಪ್ಯ ಶೂಲಿನಃ ।
ಕುಂಡಂ ಚಕ್ರೇ ಚ ತದ್ರೂಪಂ ಸ್ವಚ್ಛೋದಕಸಮಾವೃತಂ ॥ ೫೬ ॥
ತತಶ್ಚಾರಾಧಯಾಮಾಸ ಪುಷ್ಪಧೂಪಾನುಲೇಪನೈಃ ।
ಸ್ನಾತ್ವಾ ಕುಂಡೇಽಪಿಬತ್ತೋಯಂ ತ್ರಿಃಕೃತ್ವಾ ಚ ಯಥಾ ಪುರಾ ॥ ೫೭ ॥
ಏವಂ ಸ ಭಗವಾಂಸ್ತತ್ರ ಶಕ್ರೇಣಾರಾಧಿತಃ ಪುರಾ ।
ಸಮಾಯಾತೋಽತ್ರ ವಿಪ್ರೇಂದ್ರಾಃ ಸುರಮ್ಯಾತ್ತು ಹಿಮಾಚಲಾತ್ ॥೫೮॥
ಯಸ್ತಮಾರಾಧಯೇತ್ಸಮ್ಯಕ್ಸದಾ ಮಾಸಚತುಷ್ಟಯಂ ।
ಹಿಮಪಾತೋದ್ಭವೇ ಮರ್ತ್ಯಃ ಸ ಶಿವಾಯ ಪ್ರಪದ್ಯತೇ ॥ ೫೯ ॥
ಶೇಷಕಾಲೇಽಪಿ ಯಃ ಪೂಜಾಂ ಕರೋತ್ಯೇವ ಸುಭಕ್ತಿತಃ ।
ಸ ಪಾಪಂ ಕ್ಷಾಲಯೇತ್ಪ್ರಾಜ್ಞ ಆಜನ್ಮಮರಣಾಂತಿಕಂ ॥ ೬೦ ॥

---

೫೪. ಆದುದರಿಂದ ಶೀಘ್ರವಾಗಿ ಅಲ್ಲಿಗೆ ಹೋಗಿ ಉತ್ತಮವಾದ ಪ್ರಾಸಾದವನ್ನು ನಿರ್ಮಿಸಿ ನನ್ನ ಲಿಂಗವನ್ನು ಪ್ರತಿಷ್ಠೆಮಾಡಿ ಉಚಿತರೀತಿಯಿಂದ ಪೂಜಿಸು. ನಾನು ನನ್ನ ತೇಜಸ್ಸನ್ನು ನಿನಗಾಗಿ ಅಲ್ಲಿರಿಸುವೆನು."

೫೫. ಸೂತನು ಹೇಳುತ್ತಾನೆ:—ಇಂದ್ರನು ಮಹೇಶ್ವರನ ಈ ಮಾತನ್ನು ಕೇಳಿ ಅಲ್ಲಿಗೆ ಹೋಗಿ ಅವನು ಹೇಳಿದಂತೆ ಮಾಡಿದನು.

೫೬. ಪ್ರಾಸಾದವನ್ನು ನಿರ್ಮಿಸಿ ಮಹೇಶ್ವರನ ಲಿಂಗವನ್ನು ಸ್ಥಾಪಿಸಿ ಸ್ವಚ್ಛವಾದ ನೀರಿನಿಂದ ಕೂಡಿದ ಕುಂಡವನ್ನು ಮಾಡಿಸಿದನು.

೫೭. ಕುಂಡದಲ್ಲಿ ಮಿಂದು ಲಿಂಗವನ್ನು ಪುಷ್ಪ, ಧೂಪ, ಗಂಧಗಳಿಂದ ಪೂಜಿಸಿ ಮೊದಲಿನಂತೆಯೇ ಮೂರು ಸಾರಿ ಜಲವನ್ನು ಕುಡಿದನು.

೫೮. ವಿಪ್ರವರ್ಯರೆ! ಹಿಂದೆ ಹೀಗೆ ದೇವೇಂದ್ರನು ರಮ್ಯವಾದ ಹಿಮಾಚಲದಿಂದ ಇಲ್ಲಿಗೆ ಬಂದ ಮಹೇಶ್ವರನನ್ನು ಪೂಜಿಸಿದನು.

೫೯. ಹಿಮಕಾಲದಲ್ಲಿ ನಾಲ್ಕು ತಿಂಗಳು ಯಾವಾಗಲೂ ಆ ಮಹೇಶ್ವರನನ್ನು ಪೂಜಿಸಿದ ಮಾನವನು ಮೋಕ್ಷವನ್ನು ಹೊಂದುವನು.

೬೦. ಇತರ ಕಾಲದಲ್ಲಿಯೂ ಭಕ್ತಿಯಿಂದ ಪೂಜಿಸುವ ಪ್ರಾಜ್ಞನು ಹುಟ್ಟಿ ಸಾಯುವವರೆಗಿನ ಪಾಪವನ್ನು ಪರಿಹರಿಸಿಕೊಳ್ಳುವನು.

ತತ್ರ ಗೀತಂ ಪ್ರಶಂಸಂತಿ ನೃತ್ಯಂ ಚೈವ ಪೃಥಗ್ವಿಧಂ ।
ದೇವಸ್ಯ ಪುರತಃ ಪ್ರಾಜ್ಞಾಃ ಸರ್ವಶಾಸ್ತ್ರವಿಶಾರದಾಃ ॥ ೩೧ ॥
ಅತ್ರ ಶ್ಲೋಕಃ ಪುರಾ ಗೀತೋ ನಾರದೇನ ಸುರರ್ಷಿಣಾ ।
ತದ್ವೋಽಹಂ ಕೀರ್ತಯಿಷ್ಯಾಮಿ ಶ್ರೂಯತಾಂ ಬ್ರಾಹ್ಮಣೋತ್ತಮಾಃ ॥
ಕೇದಾರೇ ಸಲಿಲಂ ಪೀತ್ವಾ ಗಯಾಪಿಂಡಂ ಪ್ರದಾಯ ಚ ।
ಬ್ರಹ್ಮಜ್ಞಾನಮಥಾಸಾದ್ಯ ಪುನರ್ಜನ್ಮ ನ ವಿದ್ಯತೇ ॥ ೩೩ ॥
ಏತದ್ವಃ ಸರ್ವಮಾಖ್ಯಾತಂ ಕೇದಾರಸ್ಯ ಚ ಸಂಭವಂ ।
ಆಖ್ಯಾನಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೩೪ ॥
ಯಶ್ಚೈತಚ್ಛೃಣುಯಾತ್ಸಮ್ಯಕ್ಪಠೇದ್ವಾ ತಸ್ಯ ಚಾಗ್ರತಃ ।
ಶ್ರಾವಯೇದ್ವಾಽಪಿ ವಾ ವಿಪ್ರಾಃ ಸರ್ವಪಾತಕನಾಶನಂ ।
ಕೇದಾರಸ್ಯ ಸ ಪಾಪೌಘೈರ್ಮುಚ್ಯತೇ ತತ್ಕ್ಷಣಾನ್ನರಃ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕೇದಾರೋತ್ಪತ್ತಿಮಾಹಾತ್ಮ್ಯವರ್ಣನಂ"
ನಾಮ ದ್ವಾವಿಂಶತ್ಯುತ್ತರಶತತಮೋಽಧ್ಯಾಯಃ

---

೩೧. ಸಕಲ ಶಾಸ್ತ್ರಪಂಡಿತರಾದವರು ಆ ಮಹೇಶ್ವರನ ಮುಂದೆ ಮಾಡಿದ ನಾನಾ ವಿಧವಾದ ಗೀತ ನೃತ್ಯಗಳನ್ನು ಹೊಗಳುತ್ತಾರೆ.

೩೨. ಬ್ರಾಹ್ಮಣವರ್ಯರೆ! ಈ ವಿಷಯದಲ್ಲಿ ನಾರದ ಮಹರ್ಷಿಯು ಹೇಳಿರುವ ಶ್ಲೋಕವನ್ನು ನಿಮಗೆ ಹೇಳುತ್ತೇನೆ. ಕೇಳಿರಿ.

೩೩. "ಕೇದಾರಕ್ಷೇತ್ರದಲ್ಲಿ ನೀರನ್ನು ಪಾನಮಾಡಿ ಗಯಾಪಿಂಡವನ್ನಿತ್ತರೆ ಬ್ರಹ್ಮಜ್ಞಾನಲಾಭದಿಂದ ಮರಳಿ ಜನ್ಮವುಂಟಾಗುವುದಿಲ್ಲ."

೩೪. ಬ್ರಾಹ್ಮಣೋತ್ತಮರೆ! ಸಕಲ ಪಾಪಗಳನ್ನೂ ನಿವಾರಿಸುವ ಈ ಕೇದಾರದ ಕಥೆಯನ್ನು ನಿಮಗೆ ಹೇಳಿರುವೆನು.

೩೫. ಈ ಕೇದಾರನ ಕಥೆಯನ್ನು ಆ ಸ್ವಾಮಿಯ ಮುಂದೆ ಕೇಳುವವರೂ, ಹೇಳುವವರೂ ಸಕಲ ಪಾಪಗಳಿಂದ ಕೂಡಲೆ ಮುಕ್ತರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕೇದಾರೋತ್ಪತ್ತಿಮಾಹಾತ್ಮ್ಯವರ್ಣನ" ವೆಂಬ
ನೂರಿಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋವಿಂಶತ್ಯುತ್ತರಶತತಮೋऽಧ್ಯಾಯಃ

## ಶುಕ್ಲತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾऽನ್ಯದಪಿ ತತ್ರಾಸ್ತಿ ಶುಕ್ಲತೀರ್ಥಮನುತ್ತಮಂ ।
ದರ್ಭೈಃ ಸಂಸೂಚಿತಂ ಶ್ವೇತೈರ್ಯದದ್ಯಾಪಿ ದ್ವಿಜೋತ್ತಮಾಃ ॥ ೧ ॥
ಚಮತ್ಕಾರಪುರೇ ಪೂರ್ವಮಾಸೀತ್ಕಶ್ಚಿತ್ಸುಶಲ್ಯವಿತ್ ।
ರಜಕಃ ಶುದ್ಧಕೋ ನಾಮ ಪುತ್ರಪೌತ್ರಸಮನ್ವಿತಃ ॥ ೨ ॥
ಸ ಸರ್ವರಜಕಾನಾಂ ಚ ಪ್ರಾಧಾನ್ಯೇನ ವ್ಯವಸ್ಥಿತಃ ।
ಪ್ರಧಾನಬ್ರಾಹ್ಮಣಾನಾಂ ಚ ಕರೋತ್ಯಂಬರಶೋಧನಂ ॥ ೩ ॥
ತಸ್ಯ ಚಿತ್ತ್ವಥ ಕಾಲಸ್ಯ ನೀಲಕುಂಡ್ಯಾಂ ಸಮಾಹಿತಃ ।
ಪ್ರಾಕ್ಷಿಪದ್ಬ್ರಾಹ್ಮಣೇಂದ್ರಾಣಾಂ ವಾಸೋ ವಿಜ್ಞಾತವಾಂಶ್ಚಿರಾತ್ ॥ ೪ ॥
ಅಥಾऽಸೌ ಮಂದಚಿತ್ತಶ್ಚ ಸ್ವಾಮಾಹೂಯ ಕುಟುಂಬಿನೀಂ ।
ಪುತ್ರಾಂಶ್ಚ ವಚನಂ ಪ್ರಾಹ ರಹಸ್ಯೇ ಭಯವಿಹ್ವಲಃ ॥ ೫ ॥
ನಿರ್ಮಾಲ್ಯಾನಿ ಸುವಸ್ತ್ರಾಣಿ ಬ್ರಾಹ್ಮಣಾನಾಂ ಮಹಾತ್ಮನಾಂ ।
ನೀಲೀಮಧ್ಯೇ ವಿಮೋಹೇನ ಪ್ರಕ್ಷಿಪ್ತಾನಿ ಬಹೂನಿ ಚ ॥ ೬ ॥

---

## ಕನ್ನಡದ ಅನುವಾದ

### ಶುಕ್ಲತೀರ್ಥಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ಈಗಲೂ ಅಲ್ಲಿ ಶ್ವೇತ ದರ್ಭೆಗಳು ಸೂಚಿಸುವ ಶುಕ್ಲತೀರ್ಥವೆಂಬ ಮತ್ತೊಂದು ತೀರ್ಥವಿದೆ.

೨. ಹಿಂದೆ ಚಮತ್ಕಾರಪುರದಲ್ಲಿ ಭಲ್ಯಗಳ ಮರ್ಮವನ್ನರಿತ ಪುತ್ರಪೌತ್ರರಿಂದ ಸಹಿತನಾದ ಶುದ್ಧಕನೆಂಬ ಅಗಸನಿದ್ದನು.

೩. ಎಲ್ಲ ಅಗಸರಿಗೂ ಮುಖ್ಯನಾದ ಅವನು ಪ್ರಧಾನರಾದ ಬ್ರಾಹ್ಮಣರ ಬಟ್ಟೆಗಳನ್ನು ಒಗೆಯುತ್ತಿದ್ದನು.

೪. ಅವನು ಒಂದಾನೊಂದು ದಿನ ಬ್ರಾಹ್ಮಣೋತ್ತಮರ ಬಟ್ಟೆಯನ್ನು ತಾನು ನೀಲಿಯ ಪಾತ್ರೆಯಲ್ಲಿ ಹಾಕಿರುವುದನ್ನರಿತನು.

೫. ಅನಂತರ ಮೂಢನಾದ ಅವನು ತನ್ನ ಪತ್ನೀಪುತ್ರರನ್ನು ಕರೆದು ಭಯಗೊಂಡವನಾಗಿ ಗುಟ್ಟಿನಲ್ಲಿ ಇಂತೆಂದನು.

೬. ನಾನು ಮಹಾತ್ಮರಾದ ಬ್ರಾಹ್ಮಣರ ಅತ್ಯಂತ ಬೆಲೆಯುಳ್ಳ ಬಹುವಸ್ತ್ರಗಳನ್ನು ಭ್ರಾಂತಿಯಿಂದ ನೀಲಿಯಲ್ಲಿ ಹಾಕಿರುವೆನು.

ವಧ ಬಂಧಾದಿಕಂ ಕರ್ಮ ತೇ ಕರಿಷ್ಯಂತ್ಯಸಂಶಯಂ ।
ತಸ್ಮಾದನ್ಯತ್ರ ಗಚ್ಛಾವೋ ಗೃಹೀತ್ವಾ ರಜನೀಮಿಮಾಂ ॥ ೭ ॥
ಏವಂ ಸ ನಿಶ್ಚಯಂ ಕೃತ್ವಾ ಸಾರಮಾದಾಯ ಮಂದಿರಾತ್ ।
ಪ್ರಸ್ಥಿತೋ ಭಾರ್ಯಯಾ ಸಾರ್ಧಂ ಕಾಂದಿಶೀಕೋ ದ್ವಿಜೋತ್ತಮಾಃ ॥ ೮ ॥
ತಾವತ್ತಸ್ಯ ಸುತಾ ಗತ್ವಾ ಸ್ವಾಂ ಸಖೀಂ ದಾಶಸಂಭವಾಂ ।
ಉವಾಚ ಕ್ಷಮ್ಯತಾಂ ಭದ್ರೇ ಯನ್ಮಯಾ ಕುಕೃತಂ ಕೃತಂ ॥ ೯ ॥
ಅಜ್ಞಾನಾಜ್ಞ್ಞಾನತೋವಾಽಪಿ ಪ್ರಕ್ರೀಡಂತ್ಯಾ ತ್ವಯಾ ಸಹ ।
ಪ್ರಣಯಾದ್ಬಾಲ್ಯಭಾವಾಚ್ಚ ಕ್ರೋಧಾದ್ವಾಽಥ ಮಹೇರ್ಷ್ಯಯಾ ॥ ೧೦ ॥
ಅಥ ಸಾ ಸಹಸಾ ಶ್ರುತ್ವಾ ಬಾಷ್ಪಪರ್ಯಾಕುಲೇಕ್ಷಣಾ ।
ಉವಾಚ ಕಿಮಿದಂ ಭದ್ರೇ ಯನ್ಮಾಮಿತ್ಥಂ ಪ್ರಭಾಷಸೇ ॥ ೧೧ ॥

ಸಖ್ಯುವಾಚ :—

ಮಮ ತಾತೇನ ನೀಲಾಯಾಂ ಪ್ರಕ್ಷಿಪ್ತಾನ್ಯಂಬರಾಣಿ ಚ ।
ಬ್ರಾಹ್ಮಣಾನಾಂ ಮಹಾರ್ಹಾಣಿ ವಿಭ್ರಮೇಣ ಸುಲೋಚನೇ ॥ ೧೨ ॥
ತತ್ಪ್ರಭಾತೇ ಪರಿಜ್ಞಾಯ ದಂಡಂ ಧಾಸ್ಯಂತಿ ದಾರುಣಂ ।
ಏವಂ ಚಿತ್ತೇ ಸಮಾಸ್ಥಾಯ ತಾತಃ ಸಂಪ್ರಸ್ಥಿತೋಽಧುನಾ ॥ ೧೩ ॥

---

೭. ಆ ಬ್ರಾಹ್ಮಣರು ನಿಶ್ಚಯವಾಗಿಯೂ ನನಗೆ ವಧೆ, ಬಂಧನ ಮೊದಲಾದುವುಗಳನ್ನು ಮಾಡುವರು. ಆದುದರಿಂದ ನಾವು ಈ ರಜನಿ (ಭಾಂಡ)ಯನ್ನು ತೆಗೆದುಕೊಂಡು ಬೇರೆ ಕಡೆಗೆ ಹೋಗೋಣ.

೮–೧೦. ಅಷ್ಟರಲ್ಲಿ ಆ ಅಗಸನ ಮಗಳು ಬೆಸ್ತನ ಮಗಳಾದ ತನ್ನ ಗೆಳತಿಯೆಡೆಗೆ ಹೋಗಿ, "ಮಂಗಳಕರಳೆ! ನಿನ್ನೊಡನೆ ಆಡುತ್ತಿರುವ ನಾನು ಸ್ನೇಹ, ಬಾಲ್ಯ, ಸಿಟ್ಟು, ಅಸೂಯೆಗಳಿಂದ ತಿಳಿದೋ, ತಿಳಿಯದೆಯೋ ಮಾಡಿರುವ ದುಷ್ಕಾರ್ಯವನ್ನು ಕ್ಷಮಿಸು" ಎಂದಳು.

೧೧. ಅವಳು ಈ ಅಗಸನ ಕನ್ಯೆಯು ಅಕಸ್ಮಾತ್ತಾಗಿ ಆಡಿದ ಮಾತನ್ನು ಕೇಳಿ ಕಣ್ಣೀರನ್ನು ಸುರಿಸುತ್ತ, "ಸಖಿ! ಇದೇನು ಹೀಗೆ ಮಾತನಾಡುತ್ತಿರುವೆ?" ಎಂದು ಕೇಳಿದಳು.

೧೨. ಸಖಿಯು ಹೇಳುತ್ತಾಳೆ:—"ಸುಂದರಿ! ನನ್ನ ತಂದೆಯು ಭ್ರಾಂತಿಯಿಂದ ಬ್ರಾಹ್ಮಣರ ಬಹಳವಾದ ಬೆಲೆಯುಳ್ಳ ಬಟ್ಟೆಗಳನ್ನು ನೀಲಿಯ ಪಾತ್ರೆಯಲ್ಲಿ ಎಸೆದನು.

೧೩. ಅವನು ಅದನ್ನು ಬೆಳಗ್ಗೆ ತಿಳಿದು ತನಗೆ ಕಠಿನ ಶಿಕ್ಷೆಯಾಗುವುದೆಂದರಿತು ಈಗ ಹೊರಟಿದ್ದಾನೆ.

ಅಹಂ ತವಾಂತಿಕಂ ಪ್ರಾಪ್ತಾ ದರ್ಶನಾರ್ಥಮನಿಂದಿತೇ ।
ಅನುಜ್ಞಾತಾ ಪ್ರಯಾಸ್ಯಾಮಿ ತ್ವಯಾ ತಸ್ಮಾತ್ಪ್ರಮುಚ್ಯತಾಂ ॥ ೧೪ ॥
ಅಥ ಸಾ ತದ್ವಚಃ ಶ್ರುತ್ವಾ ಪ್ರಸನ್ನವದನಾಽಬ್ರವೀತ್ ।
ಯದ್ಯೇವಂ ಮಾ ಸರೋಜಾಕ್ಷಿ ಕುತ್ರಚಿತ್ಸಂಪ್ರಯಾಸ್ಯಸಿ ॥ ೧೫ ॥
ನಿವಾರಯ ದ್ರುತಂ ಗತ್ವಾ ತಾತಂ ನೋ ಗಮ್ಯತಾಮಿತಿ ।
ಅಸ್ತಿ ಪೂರ್ವೋತ್ತರೇ ಭಾಗೇ ಸ್ಥಾನಾದಸ್ಮಾಜ್ಜಲಾಶಯಃ ॥ ೧೬ ॥
ತತ್ರೈಕದಾ ವಿನಿಕ್ಷಿಪ್ತಂ ಮಮ ತಾತೇನ ಜಾಲಕಂ ।
ಅತೀವ ಕೃಷ್ಣಕೇಶೋತ್ಥಂ ತಾವಚ್ಛುಕ್ಲತ್ವಮಾಗತಂ ॥ ೧೭ ॥
ತತಃ ಸ ವಿಸ್ಮಯಾವಿಷ್ಟಃ ಸ್ವಯಂ ಸಸ್ನೌ ಕುತೂಹಲಾತ್ ।
ಯಾವಚ್ಛುಕ್ಲತ್ವಮಾಪನ್ನಸ್ತಾದೃಕ್ಕೃಷ್ಣವಪುರ್ಧರಃ ॥ ೧೮ ॥
ಸುಶ್ವೇತಮೂರ್ಧಜಃ ಸದ್ಯಃ ಸ್ತ್ರೀಣಾಂ ವೈರಾಗ್ಯಕಾರಕಃ ।
ತತಃ ಪ್ರಭೃತಿ ನೋ ಜ್ಞಾತ್ವಾ ಕಶ್ಚಿತ್ತತ್ರ ಪ್ರಗಚ್ಛತಿ ॥ ೧೯ ॥
ತಸ್ಮಾತ್ತತ್ರೈವ ವಸ್ತ್ರಾಣಿ ಪ್ರಕ್ಷಾಲಯತು ಸತ್ವರಂ ।
ತಾತಃ ಸ ತವ ಯಾಸ್ಯಂತಿ ವಿಶುದ್ಧಿಂ ಪರಮಾಂ ಶುಭೇ ॥ ೨೦ ॥
ಅಥ ಸಾ ಸತ್ವರಂ ಗತ್ವಾ ನಿಜತಾತಸ್ಯ ತದ್ವಚಃ ।
ಸತ್ವರಂ ಕಥಯಾಮಾಸ ಪ್ರಹೃಷ್ಟವದನಾ ಸತೀ ॥ ೨೧ ॥

---

೧೪. ನಾನು ನಿನ್ನ ದರ್ಶನಕ್ಕಾಗಿ ಹತ್ತಿರ ಬಂದಿದ್ದೇನೆ. ನಿನ್ನ ಅನುಮತಿಯಿಂದ ಹೊರಡುವೆನು, ಬೀಳ್ಕೊಡು."

೧೫. ಅವಳು ಸಖಿಯ ಮಾತನ್ನು ಕೇಳಿ ನಗುಮುಖದಿಂದ ಇಂತೆಂದಳು. "ಸುಂದರಿ! ಹೀಗಾದರೆ ನೀನು ಎಲ್ಲಿಯೂ ಹೋಗಬೇಡ.

೧೬. ಶೀಘ್ರವಾಗಿ ಹೋಗಿ ತಂದೆಯನ್ನು ಹೋಗಬೇಡ ಎಂದು ತಡೆ. ಈ ಸ್ಥಳದ ಈಶಾನ್ಯ ದಿಕ್ಕಿನಲ್ಲಿ ಒಂದು ಕೊಳವಿದೆ.

೧೭. ಅಲ್ಲಿ ಒಂದಾನೊಂದು ವೇಳೆ ನನ್ನ ತಂದೆಯು ಅತ್ಯಂತ ಕಪ್ಪು ಬಣ್ಣದ ಕೂದಲುಗಳಿಂದಾದ ಬಲೆಯನ್ನು ಎಸೆಯಲು ಅದು ಬೆಳ್ಳಗಾಯಿತು.

೧೮. ತರುವಾಯ ಕೃಷ್ಣವರ್ಣದವನಾದ ಅವನು ಆಶ್ಚರ್ಯಗೊಂಡು ಕುತೂಹಲದಿಂದ ತಾನೇ ಮಿಂದನು. ಕೂಡಲೆ ಅವನ ಶರೀರವು ಬೆಳ್ಳಗಾಯಿತು.

೧೯. ಅವನ ಕೂದಲೂ ಬೆಳ್ಳಗಾಗಿ ಹೆಂಗಸರಿಗೆ ವೈರಾಗ್ಯವನ್ನುಂಟುಮಾಡಿತು. ಅದು ಮೊದಲ್ಗೊಂಡು ಅದನ್ನರಿತ ಜನರು ಅಲ್ಲಿಗೆ ಹೋಗುವುದಿಲ್ಲ.

೨೦. ಆದುದರಿಂದ ನಿನ್ನ ತಂದೆಯು ಶೀಘ್ರವಾಗಿ ಅಲ್ಲಿಯೇ ಬಟ್ಟೆಗಳನ್ನು ತೊಳೆಯಲಿ. ಅವು ಬಹು ಶುದ್ಧವಾಗುವುವು."

೨೧—೨೩. ಅನಂತರ ಅವಳು ಶೀಘ್ರವಾಗಿ ಹೋಗಿ ಸಂತೋಷದಿಂದ ತನ್ನ ತಂದೆಯನ್ನು ಕುರಿತು, "ಸಮೀಪದಲ್ಲಿ ಒಂದು ಕೊಳವಿದೆ. ಅದರಲ್ಲಿ ಎಸೆದ

ಮಮ ಸಖ್ಯಾ ಸಮಾದಿಷ್ಟಂ ನಾಽತಿದೂರೇ ಜಲಾಶಯಃ ।
ತತ್ರ ಶ್ವೇತತ್ವಮಾಯಾತಿ ಸರ್ವಂ ಕ್ಷಿಪ್ತಂ ಸಿತೇತರಂ ॥ ೨೨ ॥
ತಸ್ಮಾತ್ತ್ವಂ ಕ್ಷಾಲಯ ಪ್ರಾತಸ್ತತ್ರ ಗತ್ವಾ ಜಲಾಶಯೇ ।
ವಸ್ತ್ರಾಣ್ಯಮೂನಿ ಶುಕ್ಲತ್ವಂ ಸಂಪ್ರಯಾಸ್ಯಂತ್ಯಸಂಶಯಂ ॥ ೨೩ ॥

ರಜಕ ಉವಾಚ :—

ನೈತತ್ಸಂಪತ್ಸ್ಯತೇ ಪುತ್ರೀ ಯನ್ನೀಲಸ್ಯ ಪರಿಕ್ಷಯಃ ।
ವಸ್ತ್ರಲಗ್ನಸ್ಯ ಜಾಯೇತ ಯತಃ ಪ್ರೋಕ್ತಂ ಪುರಾತನೈಃ ॥ ೨೪ ॥
ವಜ್ರಲೇಪಸ್ಯ ಮೂರ್ಖಸ್ಯ ನಾರೀಣಾಂ ಕರ್ಕಟಸ್ಯ ಚ ।
ಏಕೋ ಗ್ರಹಸ್ತು ಮೀನಾನಾಂ ನೀಲೀಮದ್ಯಪಯೋಸ್ತಥಾ ॥ ೨೫ ॥

ಕನ್ಯೋವಾಚ :—

ತತ್ರ ಹ್ಯಾಗಮ್ಯತಾಂ ತಾವದ್ವಸ್ತ್ರಾಣ್ಯಾದಾಯ ಯತ್ನತಃ ।
ತೋಯಾಚ್ಛುದ್ಧಿಂ ಪ್ರಯಾಸ್ಯಂತಿ ತದಾಽಽಗಂತವ್ಯಮೇವ ಹಿ ॥ ೨೬ ॥
ಭೂಯೋಽಪಿ ಮಂದಿರೇ ವಾಽಥ ತಸ್ಮಾತ್ಸ್ಥಾನಾದ್ದಿಗಂತರಂ ।
ಗಂತವ್ಯಂ ಸಕಲೈರೇವ ಮಮೈತದ್ಧೃದಿ ಸಂಸ್ಥಿತಂ ॥ ೨೭ ॥
ತಸ್ಯಾಸ್ತದ್ವಚನಂ ಶ್ರುತ್ವಾ ಸಾಧುಸಾಧ್ವಿತಿ ತೇಽಸಕೃತ್ ।
ಪ್ರೋಚ್ಯ ಬಾಂಧವಭೃತ್ಯಾಶ್ಚ ರಾತ್ರಾವೇವ ಪ್ರಜಗ್ಮಿರೇ ॥ ೨೮ ॥
ದಾಶಕನ್ಯಾಂ ಪುರಃ ಕೃತ್ವಾ ಸಂಶಯಂ ಪರಮಂ ಗತಾಃ ।
ವಿಭವೇನ ಸಮಾಯುಕ್ತಾ ನಿಜೇನ ದ್ವಿಜಸತ್ತಮಾಃ ॥ ೨೯ ॥

---

ಸಮಸ್ತ ಕೃಷ್ಣವಸ್ತುಗಳೂ ಬೆಳ್ಳಗಾಗುವುವು ಎಂದು ನನ್ನ ಸಖಿಯು ಹೇಳಿರುವಳು. ಆದುದರಿಂದ ನೀನು ಬೆಳಗ್ಗೆ ಅಲ್ಲಿಗೆ ಹೋಗಿ ಆ ಕೊಳದಲ್ಲಿ ಈ ಬಟ್ಟೆಗಳನ್ನು ತೊಳೆ. ಕೂಡಲೆ ಬೆಳ್ಳಗಾಗುವುವು'' ಎಂದಳು.

೨೪—೨೫. ರಜಕನು ಹೇಳುತ್ತಾನೆ:—ಮಗು! ವಜ್ರಲೇಪ, ಮೂರ್ಖ, ಹೆಂಗಸು, ಕರ್ಕಟಕ, ಮೊಸಳೆ, ನೀಲಿ, ಹೆಂಡಕುಡಕ ಇವರಿಗೆ ನಿಷ್ಕೃತಿಯಿಲ್ಲವೆಂದು ಪ್ರಾಜ್ಞರು ಹೇಳಿರುವುದರಿಂದ ವಸ್ತ್ರಕ್ಕೆ ಹಿಡಿದ ನೀಲಿಯು ಹೋಗುವುದಿಲ್ಲ.

೨೬. ಕನ್ಯೆಯು ಹೇಳುತ್ತಾಳೆ:—ಅಪ್ಪ! ವಸ್ತ್ರಗಳನ್ನು ತೆಗೆದುಕೊಂಡು ಬಾ. ಅವು ನೀರಿನಿಂದ ಶುದ್ಧವಾಗುವುವು. ಆದುದರಿಂದ ಬರಲೇಬೇಕು.

೨೭. ಅನಂತರ ಮನೆಯಲ್ಲಿರುವುದೋ ಅಥವಾ ಇಲ್ಲಿಂದ ಎಲ್ಲರೂ ಬೇರೆ ದಿಕ್ಕಿಗೆ ಹೋಗುವುದೋ ಮಾಡೋಣ. ಇದು ನನ್ನ ಮನಸ್ಸಿನಲ್ಲಿರುವುದು.

೨೮—೨೯. ಅವಳ ಆ ಮಾತನ್ನು ಕೇಳಿ ಅವರು ಸರಿ, ಸರಿ ಎಂದು ಬಂಧುಭೃತ್ಯರೊಡನೆ ತಮ್ಮ ಸ್ವತ್ತನ್ನು ತೆಗೆದುಕೊಂಡು ಬೆಸ್ತರ ಹುಡುಗಿಯನ್ನು ಮುಂದಿರಿಸಿಕೊಂಡು ಸಂಶಯದಿಂದ ರಾತ್ರಿಯೇ ಅಲ್ಲಿಗೆ ಹೊರಟರು.

ತತಃ ಸಾ ದರ್ಶಯಾಮಾಸ ದಾಶಕನ್ಯಾ ಜಲಾಶಯಮ್ ।
ಬಹುವೀರುಧಸಂಛನ್ನಂ ದುಷ್ಪ್ರವೇಶಂ ಚ ದೇಹಿನಾಮ್ ॥ ೩೦ ॥
ತತಃ ಸ ರಜಕಸ್ತತ್ರ ವಸ್ತ್ರಾಣ್ಯಾದಾಯ ಸರ್ವಶಃ ।
ಪ್ರವಿಷ್ಟಃ ಸಲಿಲೇ ತಸ್ಮಿನ್ ಕ್ಷಾಲಯಾಮಾಸ ವೈ ದ್ವಿಜಾಃ ॥ ೩೧ ॥
ಅಥ ತಾನಿ ಸುವಸ್ತ್ರಾಣಿ ಮೇಚಕಾಭಾನಿ ತತ್ಕ್ಷಣಾತ್ ।
ಜಾತಾನಿ ಸ್ಫಟಿಕಾಭಾನಿ ತತ್ಕ್ಷಣಾದೇವ ಕೃತ್ಸ್ನಶಃ ॥ ೩೨ ॥
ತತಸ್ತುಷ್ಟಿಸಮಾಯುಕ್ತಃ ಸಾಧುಸಾಧ್ವಿತಿ ಚಾಽಬ್ರವೀತ್ ।
ಸಮಾಲಿಂಗ್ಯ ಸುತಾಂ ಪ್ರಾಹ ದಾಶಕನ್ಯಾಂ ಚ ಸಾದರಮ್ ॥ ೩೩ ॥
ಸುವಸ್ತ್ರಾಣಿ ದ್ವಿಜೇಂದ್ರಾಣಾಮರ್ಪಯಾಮೋ ಯಥಾ ಕ್ರಮಮ್ ॥ ೩೪ ॥
ತತಃ ಸ ಸ್ವಗೃಹಂ ಗತ್ವಾ ತಾನಿ ವಸ್ತ್ರಾಣಿ ಕೃತ್ಸ್ನಶಃ ।
ಯಥಾ ಕ್ರಮೇಣ ಸಂಹೃಷ್ಟಃ ಪ್ರದದೌ ದ್ವಿಜಸತ್ತಮಾಃ ॥ ೩೫ ॥
ಅಥ ತೇ ಬ್ರಾಹ್ಮಣಾ ದೃಷ್ಟ್ವಾ ತಾಂ ಶುದ್ಧಿಂ ವಸ್ತ್ರಸಂಭವಾಮ್ ।
ತಂ ಚ ಶ್ವೇತೀಕೃತಂ ಚೇದೃಗ್ರಜಕಂ ವಿಸ್ಮಯಾನ್ವಿತಾಃ ॥ ೩೬ ॥
ಪಪ್ರಚ್ಛುಃ ಕಿಮಿದಂ ಚಿತ್ರಂ ವಸ್ತ್ರಮೂರ್ಧಜಸಂಭವಮ್ ।
ಅನೌಪಮ್ಯಂ ಚ ಸಂಜಾತಂ ವದಸ್ವ ಯದಿ ಮನ್ಯಸೇ ॥ ೩೭ ॥

---

೩೦. ಅನಂತರ ಆ ಬೆಸ್ತರ ಹುಡುಗಿಯು ಅನೇಕ ಲತೆಗಳಿಂದ ಮುಚ್ಚಿರುವುದೂ, ಪ್ರಾಣಿಗಳಿಗೆ ಪ್ರವೇಶಿಸಲಾಗದಿರುವುದೂ ಆದ ಆ ಕೊಳವನ್ನು ತೋರಿಸಿದಳು.

೩೧. ಎಲೈ ಬ್ರಾಹ್ಮಣರೆ! ಬಳಿಕ ಆ ಅಗಸನು ಎಲ್ಲಾ ಬಟ್ಟೆಗಳನ್ನೂ ತೆಗೆದುಕೊಂಡು ಆ ನೀರಿನಲ್ಲಿ ತೊಳೆದನು.

೩೨. ಆಗ ನೀಲವರ್ಣದ ಆ ಬಟ್ಟೆಗಳೆಲ್ಲ ಕೂಡಲೆ ಸ್ಫಟಿಕಮಣಿಯಂತೆ ಬೆಳ್ಳಗಾದುವು.

೩೩–೩೪. ಅದರಿಂದ ಅಗಸನು ಸಂತೋಷಗೊಂಡು ಚೆನ್ನಾಗಿದೆ, ಚೆನ್ನಾಗಿದೆ ಎಂದು ತನ್ನ ಮಗಳನ್ನು ತಬ್ಬಿಕೊಂಡು ಬೆಸ್ತರ ಹುಡುಗಿಯನ್ನು ಕುರಿತು ಈ ಶುಭ್ರ ವಸ್ತ್ರಗಳನ್ನು ಬ್ರಾಹ್ಮಣರಿಗೆ ಕ್ರಮವಾಗಿ ಒಪ್ಪಿಸೋಣ ಎಂದನು.

೩೫. ತರುವಾಯ ಅವನು ತನ್ನ ಮನೆಗೆ ಹೋಗಿ ಸಂತೋಷದಿಂದ ಬಟ್ಟೆಗಳನ್ನು ಬ್ರಾಹ್ಮಣರಿಗಿತ್ತನು.

೩೬–೩೭. ಆ ಬ್ರಾಹ್ಮಣರಾದರೋ ವಸ್ತ್ರದ ಬಿಳುಪನ್ನೂ, ಅದನ್ನು ಬೆಳ್ಳಗೆ ಮಾಡಿದ ಅಗಸನನ್ನೂ ನೋಡಿ ಆಶ್ಚರ್ಯಗೊಂಡವರಾಗಿ ಅಗಸನನ್ನು ಕುರಿತು, "ಇದೇನು ಆಶ್ಚರ್ಯ. ಈ ಬಟ್ಟೆಗಳು ಇಷ್ಟು ಚೆನ್ನಾಗಿ ಬೆಳ್ಳಗಾಗಿವೆ. ನಿನಗೆ ತಿಳಿದಿದ್ದರೆ ಹೇಳು" ಎಂದು ಕೇಳಿದರು.

ರಜಕ ಉವಾಚ:—

ಏತಾನಿ ವಿಪ್ರಾ ವಸ್ತ್ರಾಣಿ ಮಯಾ ಕ್ಷಿಪ್ತಾನಿ ಮೋಹತಃ ।
ನೀಲೀಮಧ್ಯೇ ಸುವಸ್ತ್ರಾಣಿ ವಿನಷ್ಟಾನಿ ಚ ಕೃತ್ಸ್ನಶಃ ॥ ೩೮ ॥
ತತೋ ಭಯಂ ಮಹದ್ಭೂತಂ ಕುಟುಂಬೇನ ಸಮನ್ವಿತಃ ।
ಚಲಿತೋ ರಜನೀವಕ್ತ್ರೇ ದಿಗಂತೇ ಬ್ರಾಹ್ಮಣೋತ್ತಮಾಃ ॥ ೩೯ ॥
ಅಥೈಷಾ ತನಯಾಽಸ್ಮಾಕಂ ಗತಾ ನಿಜಸಖೀಂ ಪ್ರತಿ ।
ದಾಶಾತ್ಮಜಾಂ ಸುದುಃಖಾರ್ತಾ ಪುನರ್ದರ್ಶನಲಾಲಸಾ ॥ ೪೦ ॥
ತಯಾ ಸರ್ವಮಭಿಪ್ರಾಯಂ ಜ್ಞಾತ್ವಾ ಮೇ ದುಃಖಹೇತುಕಂ ।
ತತಃ ಸಂದರ್ಶಯಾಮಾಸ ಸ್ಥಿತಾಗ್ರೇ ಸ್ವಜಲಾಶಯಂ ॥ ೪೧ ॥
ತಸ್ಮಿನ್ ಪ್ರಕ್ಷಿಪ್ತಮಾತ್ರಾಣಿ ವಸ್ತ್ರಾಣೀಮಾನಿ ತತ್ಕ್ಷಣಾತ್ ।
ಈದೃಗ್ವರ್ಣಾನಿ ಜಾತಾನಿ ವಿಸ್ಮಯಸ್ಯ ಹಿ ಕಾರಣಂ ॥ ೪೨ ॥
ತಥಾ ಮೇ ಮೂರ್ಧಜಾಃ ಕೃಷ್ಣಾಸ್ತತ್ರ ಸ್ನಾತಸ್ಯ ತತ್ಕ್ಷಣಾತ್ ।
ಪರಂ ಶುಕ್ಲತ್ವಮಾಪನ್ನಾ ಏತತ್ಪ್ರೋಕ್ತಂ ಮಯಾ ಸ್ಫುಟಂ ॥ ೪೩ ॥
ಏವಂ ತೇ ಬ್ರಾಹ್ಮಣಾಃ ಶ್ರುತ್ವಾ ಕೌತೂಹಲಸಮನ್ವಿತಾಃ ।
ತತ್ರ ಜಗ್ಮುಃ ಪರೀಕ್ಷಾರ್ಥಂ ಪ್ರಕ್ಷಿಪ್ಯ ತದನಂತರಂ ॥ ೪೪ ॥

---

೩೮. ರಜಕನು ಹೇಳುತ್ತಾನೆ:— ಎಲೈ ಬ್ರಾಹ್ಮಣರೆ! ನಾನು ನಿಮ್ಮ ಈ ಒಳ್ಳೆಯ ಬಟ್ಟೆಗಳನ್ನು ಭ್ರಾಂತಿಯಿಂದ ನೀಲಿಯೊಳಗೆ ಹಾಕಿದೆನು. ಅದರಿಂದ ಅವುಗಳು ಹಾಳಾದುವು.

೩೯. ಆದುದರಿಂದ ನಾನು ಭಯಗೊಂಡು ಸಾಯಂಕಾಲ ಕುಟುಂಬ ದೊಡನೆ ದಿಗಂತಕ್ಕೆ ಹೊರಟೆನು.

೪೦. ಅನಂತರ ನನ್ನ ಈ ಮಗಳು ಅತ್ಯಂತ ದುಃಖಗೊಂಡವಳಾಗಿ ನೋಡಲಪೇಕ್ಷೆಯಿಂದ ತನ್ನ ಸಖಿಯಾದ ಬೆಸ್ತನ ಮಗಳ ಹತ್ತಿರಕ್ಕೆ ಹೋದಳು.

೪೧. ಅವಳು ನನ್ನ ದುಃಖದ ಕಾರಣವನ್ನರಿತು ಮುಂದೆ ನಡೆಯುತ್ತ ಒಂದು ಕೊಳವನ್ನು ತೋರಿಸಿದಳು.

೪೨. ಈ ವಸ್ತ್ರಗಳನ್ನು ನಾನು ಅದರಲ್ಲಿ ಹಾಕಲು ಅವು ಕೂಡಲೆ ಹೀಗಾದುವು. ಇದೇ ಆಶ್ಚರ್ಯಕ್ಕೆ ಕಾರಣವು.

೪೩. ಹಾಗೆಯೇ ಅಲ್ಲಿ ಮಿಂದ ನನ್ನ ಕೃಷ್ಣವರ್ಣದ ತಲೆಗೂದಲುಗಳು ಕೂಡಲೆ ಬೆಳ್ಳಗಾದುವು. ನಾನಿದನ್ನು ನಿಮಗೆ ಸ್ಪಷ್ಟವಾಗಿ ಹೇಳಿದ್ದೇನೆ.

೪೪—೪೫. ಈ ಮಾತನ್ನು ಬ್ರಾಹ್ಮಣರು ಕೇಳಿ ಕುತೂಹಲದಿಂದ ಆ ಕೊಳಕ್ಕೆ ಹೋಗಿ ಅಲ್ಲಿ ಪರೀಕ್ಷೆಗಾಗಿ ಕೂಡಲೆ ಅನೇಕ ಕೃಷ್ಣವರ್ಣದ ವಸ್ತ್ರ

ಕೃಷ್ಣದ್ರವ್ಯಾಣಿ ಭೂರೀಣಿ ಕೇಶಾದೀನಿ ಸಹಸ್ರಶಃ ।
ಸರ್ವಂ ತಚ್ಛುಕ್ಲತಾಂ ಯಾತಿ ತ್ಯಕ್ತ್ವಾ ವರ್ಣಂ ಮಲೀಮಸಂ ॥ ೪೫ ॥
ತತೋ ವೃದ್ಧತಯಾ ಯೇ ಚ ವಿಶೇಷಾಚ್ಛ್ವೇತಮೂರ್ಧಜಾಃ ।
ತೇ ಸಸ್ನುಃ ಶ್ರದ್ಧಯಾ ಯುಕ್ತಾಸ್ತರುಣಾಶ್ಚಾಽಪಿ ಧರ್ಮಿಣಃ ॥ ೪೬ ॥
ತತಃ ಶುಕ್ಲತ್ವಮಾಪನ್ನಾಸ್ತೇಜೋವೀರ್ಯಸಮನ್ವಿತಾಃ ।
ಭವಂತಿ ತತ್ರಭಾವೇನ ಪ್ರಯಾಂತಿ ಚ ಪರಾಂ ಗತಿಂ ॥ ೪೭ ॥
ಅಥ ತದ್ವಾಸಸೋ ದೃಷ್ಟ್ವಾ ಶುಕ್ಲತೀರ್ಥಂ ಪ್ರಮುಕ್ತಿದಂ ।
ಪೂರಯಾಮಾಸ ರಜಸಾ ಮಾನುಷೋತ್ಥ ಭಯೇನ ಚ ॥ ೪೮ ॥
ಅದ್ಯಾಽಪಿ ತತ್ರ ಯತ್ಕಿಂಚಿಜ್ಜಾಯತೇಽಥ ತೃಣಾದಿಕಂ ।
ತತ್ಸರ್ವಂ ಶುಕ್ಲತಾಮೇತಿ ತತ್ತೋಯಸ್ಯ ಪ್ರಭಾವತಃ ॥ ೪೯ ॥
ತತ್ರೋತ್ಥೈರ್ಯಃ ಕುಶೈಃ ಶ್ರಾದ್ಧಂ ಕುರುತೇ ಶ್ರದ್ಧಯಾನ್ವಿತಃ ।
ಶ್ವೇತೈಸ್ತೈಸ್ತಾರಯೇತ್ಸರ್ವಾನ್ ಪಿತ್ರೂನ್ನರಕಗಾನಪಿ ॥ ೫೦ ॥
ತತ್ತೀರ್ಥೋತ್ಥಾಂ ಮೃದಂ ಗಾತ್ರೇ ಯೋಜಯಿತ್ವಾ ನರೋತ್ತಮಃ ।
ಸ್ನಾನಂ ಕರೋತಿ ತೀರ್ಥಾನಾಂ ಸರ್ವೇಷಾಂ ಲಭತೇ ಫಲಂ ॥ ೫೧ ॥
ಯಸ್ತೈರ್ದರ್ಭೈರ್ನರೋ ಭಕ್ತ್ಯಾ ತಿಲೈಶ್ಚಾಽರಣ್ಯಸಂಭವೈಃ ।
ಕರೋತಿ ತರ್ಪಣಂ ವಿಪ್ರಾಃ ಸ ಪ್ರೀಣಾತಿ ಪಿತಾಮಹಾನ್ ॥ ೫೨ ॥

---

ಗಳನ್ನು ಎಸೆದರು. ಅವೆಲ್ಲವೂ ತಮ್ಮ ಮಲಿನವಾದ ಬಣ್ಣವನ್ನು ಬಿಟ್ಟು ಬೆಳ್ಳಗಾದುವು.

೪೬–೪೮. ಅನಂತರ ಮುಪ್ಪಿನಿಂದ ನೆರೆತ ಕೂದಲುಳ್ಳವರೂ, ಯುವಕರೂ, ಧಾರ್ಮಿಕರೂ ಶ್ರದ್ಧೆಯಿಂದ ಅಲ್ಲಿ ಮಿಂದು ಆ ಕೊಳದ ಮಾಹಾತ್ಮ್ಯದಿಂದ ಬೆಳ್ಳಗೂ, ತೇಜೋವೀರ್ಯಗಳಿಂದ ಕೂಡಿದವರೂ ಆಗಿ ಉತ್ತಮಗತಿಯನ್ನು ಪಡೆದರು. ತರುವಾಯ ಮುಕ್ತಿಯನ್ನೀಯುವ ಆ ಶುಕ್ಲತೀರ್ಥವನ್ನು ಇಂದ್ರನು ನೋಡಿ ಮನುಷ್ಯರ ಭಯದಿಂದ ಅದನ್ನು ಧೂಳಿನಿಂದ ತುಂಬಿದನು.

೪೯. ಈಗಲೂ ಅಲ್ಲಿ ಹುಟ್ಟಿದ ಹುಲ್ಲು ಮೊದಲಾದುವು ಅದರ ನೀರಿನ ಸಾಮರ್ಥ್ಯದಿಂದ ಬೆಳ್ಳಗಾಗುವುವು.

೫೦. ಅಲ್ಲಿ ಹುಟ್ಟಿದ ಬಿಳಿಯ ದರ್ಭೆಗಳಿಂದ ಶ್ರದ್ಧೆಯಿಂದ ಶ್ರಾದ್ಧಮಾಡುವ ಮಾನವನು ನರಕದಲ್ಲಿರುವ ಸಮಸ್ತ ಪಿತೃಗಳನ್ನುದ್ಧರಿಸುವನು.

೫೧. ಆ ತೀರ್ಥದ ಮೃತ್ತಿಕೆಯನ್ನು ಶರೀರಕ್ಕೆ ಹಚ್ಚಿಕೊಂಡು ಸ್ನಾನ ಮಾಡುವ ಮನುಷ್ಯನು ಸಮಸ್ತ ತೀರ್ಥಗಳ ಫಲವನ್ನೂ ಪಡೆಯುವನು.

೫೨. ವಿಪ್ರರೆ! ಅಲ್ಲಿಯ ದರ್ಭೆಗಳಿಂದಲೂ, ಕಾಡಿನಲ್ಲಿ ಹುಟ್ಟಿದ ಎಳ್ಳುಗಳಿಂದಲೂ ಪಿತೃಗಳಿಗೆ ತರ್ಪಣ ಮಾಡುವವನು ಪಿತಾಮಹರನ್ನು ಸಂತೋಷಗೊಳಿಸುವನು.

ಅಥಾಽಶ್ವಮೇಧಾತ್ಸಂಪ್ರಾಪ್ಯಂ ಗಯಾಶ್ರಾದ್ಧೇನ ಯತ್ಫಲಂ ।
ನೀಲಸಂಜ್ಞಗವೋತ್ಸರ್ಗೇ ತಥಾಽತ್ರಾಪಿ ದ್ವಿಜೋತ್ತಮಾಃ ॥ ೫೩ ॥

ಋಷಯ ಊಚುಃ—

ಶುಕ್ಲತೀರ್ಥಂ ಕಥಂ ಜಾತಂ ತತ್ರ ತ್ವಂ ಸೂತನಂದನ ।
ವಿಸ್ತರೇಣ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೫೪ ॥

ಸೂತ ಉವಾಚ—

ಶ್ವೇತದ್ವೀಪಃ ಸಮಾನೀತೋ ವಿಷ್ಣುನಾ ಪ್ರಭವಿಷ್ಣುನಾ ।
ತತ್ಕ್ಷೇತ್ರೇ ಕಲಿಭೀತೇನ ಯಥಾ ಶೌಕ್ಲ್ಯಂ ನ ಸಂತ್ಯಜೇತ್ ॥ ೫೫ ॥
ಕಲಿಕಾಲೇನ ಸಂಸ್ಪೃಷ್ಟಃ ಶ್ವೇತದ್ವೀಪೋಽಪಿ ಶ್ಯಾಮತಾಂ ।
ನ ಪ್ರಯಾತಿ ದ್ವಿಜಶ್ರೇಷ್ಠಾಸ್ತತಸ್ತತ್ರ ನಿವೇಶಿತಃ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶುಕ್ಲತೀರ್ಥಮಾಹಾತ್ಮ್ಯವರ್ಣನಂ"
ನಾಮ ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

---

೫೩. ಅಶ್ವಮೇಧಯಾಗ, ಗಯಾಶ್ರಾದ್ಧ ಇವುಗಳಿಂದ ಲಭಿಸುವ ಫಲವು ಇಲ್ಲಿ ನೀಲಗೋವನ್ನು ದಾನ ಮಾಡುವುದರಿಂದ ದೊರೆಯುವುದು.

೫೪. ಋಷಿಗಳು ಹೇಳುತ್ತಾರೆ:—ಸೂತ! ಅಲ್ಲಿ ಶುಕ್ಲತೀರ್ಥವು ಹೇಗೆ ಉಂಟಾಯಿತು? ಅದನ್ನು ನಮಗೆ ವಿಸ್ತಾರವಾಗಿ ಹೇಳು. ಅತ್ಯಂತ ಕುತೂಹಲ ಗೊಂಡಿದ್ದೇವೆ.

೫೫. ಸೂತನು ಹೇಳುತ್ತಾನೆ:—ಸಮರ್ಥನಾದ ನಾರಾಯಣನು ಕಲಿ ಕಾಲದ ಭಯದಿಂದ ಶ್ವೇತದ್ವೀಪವು ಕಪ್ಪಾಗಬಾರದೆಂದು ಅದನ್ನು ಆ ಕ್ಷೇತ್ರಕ್ಕೆ ತಂದಿರಿಸಿರುವನು.

೫೬. ಅಲ್ಲಿ ಸ್ಥಾಪಿಸಲ್ಪಟ್ಟ ಶ್ವೇತದ್ವೀಪವು ಕಲಿಕಾಲದ ಸ್ಪರ್ಶದಿಂದಲೂ ಕಪ್ಪಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದಲ್ಲಿ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶುಕ್ಲತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರಿಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ

### ಮುಖಾರತೀರ್ಥೋತ್ಪತ್ತಿ ವರ್ಣನಂ

ಸೂತ ಉವಾಚ:—

ಅಥಾಽನ್ಯದಪಿ ತತ್ರಾಽಸ್ತಿ ಮುಖಾರಂ ತೀರ್ಥಮುತ್ತಮಂ ।
ಯತ್ರ ತೇ ಮುನಯಃ ಶ್ರೇಷ್ಠಾ ವಿಪ್ರಾಶ್ಚೌರೇಣ ಸಂಗತಾಃ ॥ ೧ ॥
ಯತ್ರ ಸಿದ್ಧಿಂ ಸಮಾಪನ್ನಃ ಸ ಚೌರಸ್ತತ್ಪ್ರಭಾವತಃ ।
ವಾಲ್ಮೀಕಿರಿತಿ ವಿಖ್ಯಾತೋ ರಾಮಾಯಣನಿಬಂಧಕೃತ್ ॥ ೨ ॥
ಚಮತ್ಕಾರಪುರೇ ಪೂರ್ವಂ ಮಾಂಡವ್ಯಾನ್ವಯಸಂಭವಃ ।
ಲೋಹಜಂಘೋ ದ್ವಿಜೋಹ್ಯಾಸೀತ್ಪಿತೃಮಾತೃಪರಾಯಣಃ ॥ ೩ ॥
ತಸ್ಯೈಕಾ ಚಾಽಭವತ್ಪತ್ನೀ ಪ್ರಾಣೇಭ್ಯೋಽಪಿ ಗರೀಯಸೀ ।
ಪತಿವ್ರತಾ ಪತಿಪ್ರಾಣಾ ಪತಿಪ್ರಿಯ ಹಿತೇ ರತಾ ॥ ೪ ॥
ಅಥ ತಸ್ಯ ಸ್ಥಿತಸ್ಯಾಽತ್ರ ಬ್ರಹ್ಮವೃತ್ತ್ಯಾಽಭಿವರ್ತತಃ ।
ಜಗಾಮ ಸುಮಹಾನ್ ಕಾಲಃ ಪಿತೃಮಾತೃರತಸ್ಯ ಚ ॥ ೫ ॥

---

### ಕನ್ನಡದ ಅನುವಾದ

#### ಮುಖಾರತೀರ್ಥೋತ್ಪತ್ತಿ ವರ್ಣನ

೧. ಸೂತನು ಹೇಳುತ್ತಾನೆ:—ಅಲ್ಲಿ ಮುಖಾರವೆಂಬ ಮತ್ತೊಂದು ತೀರ್ಥವಿರುವುದು. ಆ ತೀರ್ಥದಲ್ಲಿ ಮುನಿವರ್ಯರಾದ ವಿಪ್ರರು ಒಬ್ಬ ಕಳ್ಳನೊಡನೆ ಸೇರಿರುವರು.

೨. ಆ ತೀರ್ಥದ ಮಾಹಾತ್ಮ್ಯದಿಂದ ಆ ಕಳ್ಳನು ಸಿದ್ಧಿಯನ್ನು ಹೊಂದಿ ರಾಮಾಯಣಕರ್ತನಾದ ವಾಲ್ಮೀಕಿಯೆಂದು ಪ್ರಸಿದ್ಧನಾದನು.

೩. ಹಿಂದೆ ಚಮತ್ಕಾರಪುರದಲ್ಲಿ ಮಾಂಡವ್ಯವಂಶದಲ್ಲಿ ಜನಿಸಿದ, ತಾಯಿ ತಂದೆಗಳಲ್ಲಿ ಭಕ್ತಿಯುಳ್ಳ ಲೋಹಜಂಘನೆಂಬ ಒಬ್ಬ ಬ್ರಾಹ್ಮಣನಿದ್ದನು.

೪. ಅವನಿಗೆ ಪ್ರಾಣಕ್ಕಿಂತಲೂ ಶ್ರೇಷ್ಠಳೂ, ಪತಿವ್ರತೆಯೂ, ಪತಿಗೆ ಹಿತವನ್ನುಂಟುಮಾಡುವುದರಲ್ಲಿ ನಿರತಳೂ ಆದ ಓರ್ವ ಮಡದಿಯಿದ್ದಳು.

೫. ಆ ಲೋಹಜಂಘನು ಬ್ರಾಹ್ಮಣಾಚಾರನಿರತನೂ, ತಾಯಿತಂದೆಗಳಲ್ಲಿ ಭಕ್ತಿಯುಳ್ಳವನೂ ಆಗಿರಲು ಬಹುಕಾಲ ಕಳೆಯಿತು.

ಏಕದಾ ಭಗವಾಂಛಕ್ರೋ ನ ವವರ್ಷ ಧರಾತಲೇ ।
ಆನರ್ತವಿಷಯೇ ಕೃತ್ಸ್ನೇ ಯಾವದ್ದ್ವಾದಶವತ್ಸರಾಃ ॥ ೬ ॥
ತತಃ ಸ ಕಷ್ಟಮಾಪನ್ನೋ ಲೋಹಜಂಘೋ ದ್ವಿಜೋತ್ತಮಾಃ ।
ನ ಪ್ರಾಪ್ನೋತಿ ಕ್ವಚಿದ್ಭಿಕ್ಷಾಂ ನ ಚ ಕಿಂಚಿತ್ಪ್ರತಿಗ್ರಹಂ ॥ ೭ ॥
ತತಸ್ತೌ ಪಿತರೌ ದೃಷ್ಟ್ವಾ ಕ್ಷುತ್ಪರಿಪೀಡಿತೌ ।
ಭಾರ್ಯಾಂ ಚ ಚಿಂತಯಾಮಾಸ ದುಃಖೇನ ಮಹತಾನ್ವಿತಃ ॥ ೮ ॥
ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಸ್ಯಾದ್ದರ್ಶನಂ ಮಮ ।
ಏತಾಭ್ಯಾಮಪಿ ವೃದ್ಧಾಭ್ಯಾಂ ಪತ್ನ್ಯಾಶ್ಚೈವ ವಿಶೇಷತಃ ॥ ೯ ॥
ತತಃ ಸ ದುಃಖಸಂಯುಕ್ತಃ ಫಲಾರ್ಥಂ ಪ್ರಯಯೌ ವನೇ ।
ನ ಚ ಕಿಂಚಿದವಾಪ್ನೋತಿ ಸರ್ವೇ ಶುಷ್ಕಾ ಮಹೀರುಹಾಃ ॥ ೧೦ ॥
ಅಥಾಪಶ್ಯತ್ಸ ವೃದ್ಧಾಂ ಸ್ತ್ರೀಂ ಸ್ತೋಕಸಸ್ಯಸಮನ್ವಿತಾಂ ।
ಗಚ್ಛಮಾನಾಂ ತಥಾ ತೇನ ಶ್ರಮೇಣ ಮಹತಾನ್ವಿತಾಂ ॥ ೧೧ ॥
ತತಸ್ತತ್ಸಸ್ಯಮಾದಾಯ ವಸ್ತ್ರಾಣಿ ಚ ಸ ನಿರ್ದಯಃ ।
ಜಗಾಮ ಸ್ವಗೃಹಂ ಹೃಷ್ಟಃ ಪಿತೃಭ್ಯಾಂ ಚ ನ್ಯವೇದಯತ್ ॥ ೧೨ ॥

---

೬. ಪೂಜ್ಯನಾದ ಇಂದ್ರನು ಆನರ್ತದೇಶದಲ್ಲಿ ಎಲ್ಲಿಯೂ ಹನ್ನೆರಡು ವರ್ಷ ಕಾಲ ಮಳೆ ಸುರಿಸಲಿಲ್ಲ.

೭. ಅದರಿಂದ ಆ ಲೋಹಜಂಘನು ಎಲ್ಲಿಯೂ ದಾನ ಭಿಕ್ಷೆಗಳನ್ನು ಪಡೆಯದೆ ಕಷ್ಟಪಟ್ಟನು.

೮. ಅವನು ಹಸಿವುಗೊಂಡ ತಂದೆತಾಯಿಗಳನ್ನೂ, ಪತ್ನಿಯನ್ನೂ ಕಂಡು ಅತಿ ದುಃಖದಿಂದ ಹೀಗೆ ಆಲೋಚಿಸಿದನು.

೯. "ಏನುಮಾಡಲಿ. ಎಲ್ಲಿಗೆ ಹೋಗಲಿ? ವೃದ್ಧರಾದ ನನ್ನ ಈ ತಂದೆ ತಾಯಿಗಳಿಗೂ, ಪತ್ನಿಗೂ ಅಶನವು ಹೇಗೆ ಲಭಿಸೀತು."

೧೦. ಎಂದು ಯೋಚಿಸಿ ಅನಂತರ ಅವನು ದುಃಖಗೊಂಡವನಾಗಿ ಫಲಕ್ಕೋಸ್ಕರ ಕಾಡಿಗೆ ಹೋದನು. ಆದರೆ ಅಲ್ಲಿ ಎಲ್ಲ ಮರಗಳೂ ಒಣಗಿರುವುದರಿಂದ ಏನನ್ನೂ ಹೊಂದಲಿಲ್ಲ.

೧೧. ಬಳಿಕ ಅವನು ಸ್ವಲ್ಪ ಸಸ್ಯಗಳನ್ನು ತೆಗೆದುಕೊಂಡು ಹೋಗುತ್ತಿರುವ ಅತ್ಯಂತ ಬಳಲಿದ ಒಬ್ಬ ಮುದುಕಿಯನ್ನು ನೋಡಿದನು.

೧೨. ಅವನು ನಿರ್ದಯನಾಗಿ ಅವಳಲ್ಲಿರುವ ಆ ಸಸ್ಯವನ್ನೂ, ವಸ್ತ್ರಗಳನ್ನೂ ಅಪಹರಿಸಿಕೊಂಡು ಮನೆಗೆ ಹೋಗಿ ಸಂತೋಷದಿಂದ ತಂದೆತಾಯಿಗಳಿಗೆ ಒಪ್ಪಿಸಿದನು.

ಸ ಏವಂ ಲಬ್ಧಲಕ್ಷ್ಮೋಽಪಿ ದಸ್ಯುಕರ್ಮಣಿ ನಿತ್ಯಶಃ ।
ಕೃತ್ವಾ ಚೌರ್ಯಂ ಪುಪೋಷಾಽಥ ನಿಜಮೇವ ಕುಟುಂಬಕಂ ॥ ೧೩ ॥
ಸುಭಿಕ್ಷೇ ಚಾಽಪಿ ಸಂಪ್ರಾಪ್ತೇ ನಾಽನ್ಯತ್ಕರ್ಮ ಕರೋತಿ ಸಃ ।
ಬ್ರಾಹ್ಮೀಂ ವೃತ್ತಿಂ ಪರಿತ್ಯಜ್ಯ ಚೌರಕರ್ಮ ಸಮಾಚರತ್ ॥ ೧೪ ॥
ಕಸ್ಯಚಿತ್ತ್ವಥ ಕಾಲಸ್ಯ ತೀರ್ಥಯಾತ್ರಾ ಪ್ರಸಂಗತಃ ।
ತತ್ರ ಸಪ್ತರ್ಷಯಃ ಪ್ರಾಪ್ತಾ ಮರೀಚಿಪ್ರಮುಖಾ ದ್ವಿಜಾಃ ॥ ೧೫ ॥
ತತಸ್ತಾನ್ ವಿಜನೇ ದೃಷ್ಟ್ವಾ ದ್ರೋಹಕೋಪಸಮನ್ವಿತಃ ।
ಯಷ್ಟಿಮುದ್ಯಮ್ಯ ವೇಗೇನ ತಿಷ್ಠಧ್ವಮಿತಿಚಾಽಬ್ರವೀತ್ ॥ ೧೬ ॥
ತ್ರಿಶಿಖಾಂ ಭ್ರುಕುಟೀಂ ಕೃತ್ವಾ ಸತ್ವರಂ ಸಮುಪಾದ್ರವತ್ ।
ಭರ್ತ್ಸ್ಯಮಾನಃ ಸ ಪರುಷೈರ್ವಾಕ್ಯೈಸ್ತಾಂಸ್ತಾಡಯನ್ನಿವ ॥ ೧೭ ॥
ತತಸ್ತೇ ಮುನಯೋ ದೃಷ್ಟ್ವಾ ಯಮದೂತೋಪಮಂ ಚ ತಂ ।
ಯಜ್ಞೋಪವೀತಸಂಯುಕ್ತಂ ಪ್ರೋಚುಸ್ತೇ ಕೃಪಯಾನ್ವಿತಾಃ ॥ ೧೮ ॥

ಋಷಯ ಊಚುಃ:—

ಅಹೋ ತ್ವಂ ಬ್ರಾಹ್ಮಣೋಽಸೀತಿ ತತ್ಕಸ್ಮಾದತಿಗರ್ಹಿತಂ ।
ಕರೋಷಿ ಕರ್ಮಚೈತದ್ಧಿ ಮ್ಲೇಚ್ಛಕೃತ್ಯಂತು ಬಾಲಿಶ ॥ ೧೯ ॥

---

೧೩. ಅವನು ಹೀಗೆ ನಿತ್ಯವೂ ಕಳ್ಳತನದಿಂದ ಅನೇಕ ದ್ರವ್ಯಗಳನ್ನು ಪಡೆಯುತ್ತ ತನ್ನ ಕುಟುಂಬವನ್ನು ಪೋಷಿಸಿದನು.

೧೪. ಸುಭಿಕ್ಷಕಾಲವು ಒದಗಿದರೂ ಅವನು ಬೇರೆ ವೃತ್ತಿಯನ್ನವಲಂಬಿಸದೆ ಬ್ರಾಹ್ಮಣ ಧರ್ಮವನ್ನು ತ್ಯಜಿಸಿ ಚೌರ್ಯವನ್ನೇ ಮಾಡುತ್ತಿದ್ದನು.

೧೫. ಒಂದಾನೊಂದು ದಿನ ತೀರ್ಥಯಾತ್ರೆಯ ನಿಮಿತ್ತದಿಂದ ಅಲ್ಲಿಗೆ ಮರೀಚಿ ಮೊದಲಾದ ಸಪ್ತರ್ಷಿಗಳು ಬಂದರು.

೧೬. ಅವನು ನಿರ್ಜನ ಪ್ರದೇಶದಲ್ಲಿ ಆ ಮುನಿಗಳನ್ನು ನೋಡಿ ದ್ರೋಹ, ಕೋಪಗಳಿಂದೊಡಗೂಡಿ ವೇಗದಿಂದ ದೊಣ್ಣೆಯನ್ನು ಎತ್ತಿ ನಿಲ್ಲಿರಿ ಎಂದನು.

೧೭. ಅವನು ಹುಬ್ಬನ್ನು ಗಂಟುಹಾಕಿ ಆ ಮುನಿಗಳನ್ನು ಕಠಿನವಾದ ಮಾತುಗಳಿಂದ ಹೆದರಿಸುತ್ತ ಹೊಡೆಯುವನೋ ಎಂಬಂತೆ ಶೀಘ್ರವಾಗಿ ಓಡಿ ಬಂದನು.

೧೮. ಅನಂತರ ಆ ಮುನಿಗಳು ಯಜ್ಞೋಪವೀತವನ್ನು ಧರಿಸಿರುವ, ಯಮದೂತನಂತಿರುವ ಅವನನ್ನು ಕುರಿತು ದಯೆಯಿಂದ ಇಂತೆಂದರು.

೧೯. ಋಷಿಗಳು ಹೇಳುತ್ತಾರೆ:—ಮೂಢ! ನೀನು ಬ್ರಾಹ್ಮಣನಾಗಿರುವೆ. ಆದರೂ ಅತಿನಿಂದ್ಯವಾದ ಈ ಮ್ಲೇಚ್ಛರ ಕೆಲಸವನ್ನೇಕೆ ಮಾಡುವೆ.

ವಯಂ ಚ ಮುನಯಃ ಶಾಂತಾಸ್ತ್ಯಕ್ತಾಽಶೇಷಪರಿಗ್ರಹಾಃ ।
ನಾಽಸ್ಮಾಕಮಪಿ ಪಾರ್ಶ್ವಸ್ಥಂ ಕಿಂಚಿದ್ಗೃಹ್ಣಾತಿ ಯದ್ಭವಾನ್ ॥ ೨೦ ॥

ಲೋಹಜಂಘ ಉವಾಚ:—

ಏತಾನಿ ಶುಭ್ರಚೀರಾಣಿ ವಲ್ಕಲಾನ್ಯಜಿನಾನಿ ಚ ।
ಉಪಾನಹಸಮೇತಾನಿ ಶೀಘ್ರಂ ಯಚ್ಛಂತು ಮೇ ದ್ವಿಜಾಃ ॥ ೨೧ ॥
ನೋ ಚೇದ್ಧತ್ವಾ ಪ್ರಹಾರೇಣ ಯಷ್ಟ್ಯಾ ವಜ್ರೋಪಮೇನ ಚ ।
ಪ್ರಾಪಯಿಷ್ಯಾಮ್ಯಸಂದಿಗ್ಧಂ ಧರ್ಮರಾಜನಿವೇಶನಂ ॥ ೨೨ ॥

ಋಷಯ ಊಚುಃ:—

ಸರ್ವಂ ದಾಸ್ಯಾಮಹೇ ತುಭ್ಯಂ ವಯಂ ತಾವನ್ಮಲಿಮ್ಲುಚ ।
ಕಿಂ ವದಂತೀಂ ವದಾಸ್ಮಾಕಂ ಯಾಂ ಪೃಚ್ಛಾಮಃ ಕುತೂಹಲಾತ್ ॥೨೩॥
ಕಿಮರ್ಥಂ ಕುರುಷೇ ಚೌರ್ಯಂ ತ್ವಂ ವಿಪ್ರೋಽಸಿ ಸುನಿರ್ಘೃಣಃ ।
ಕಿಂ ಜಿತೋ ವ್ಯಸನೈ ರೌದ್ರೈಃ,ಕಿಂ ವಾ ವ್ಯಾಧ ದ್ವಿಜೋಭವಾನ್ ॥ ೨೪ ॥

ಲೋಹಜಂಘ ಉವಾಚ:—

ವ್ಯಸನಾರ್ಥಂ ನ ಮೇ ಕೃತ್ಯಮೇತಚ್ಚೌರ್ಯಸಮುದ್ಭವಂ ।
ಕುಟುಂಬಾರ್ಥಂ ವಿಜಾನೀಥ ಧರ್ಮಮೇತನ್ನ ಸಂಶಯಃ ॥ ೨೫ ॥

---

೨೦. ನಾವು ಸಮಸ್ತವನ್ನು ತ್ಯಜಿಸಿದ ಶಾಂತರಾದ ಮುನಿಗಳು. ನೀನು ಕಸಿದುಕೊಳ್ಳಲು ನಮ್ಮ ಹತ್ತಿರ ಏನೂ ಇಲ್ಲ.

೨೧. ಲೋಹಜಂಘನು ಹೇಳುತ್ತಾನೆ:—ದ್ವಿಜರೆ! ನೀವು ಈ ಬೆಳ್ಳಗಿರುವ ಹರಕು ಬಟ್ಟೆಗಳನ್ನೂ, ಕೃಷ್ಣಾಜಿನಗಳನ್ನೂ, ನಾರು ಬಟ್ಟೆಗಳನ್ನೂ, ಹಾವುಗೆಗಳನ್ನೂ ಶೀಘ್ರವಾಗಿ ನನಗೆ ಕೊಡಿರಿ.

೨೨. ಹಾಗೆ ಕೊಡದಿದ್ದರೆ ವಜ್ರದಂತಿರುವ ಈ ದೊಣ್ಣೆಯಿಂದ ಹೊಡೆದು ನಿಮ್ಮನ್ನು ನಿಶ್ಚಯವಾಗಿಯೂ ಯಮಪುರಿಗೆ ಕಳುಹಿಸುವೆನು.

೨೩. ಋಷಿಗಳು ಹೇಳುತ್ತಾರೆ:—ಎಲಾ ಚೋರನೆ! ನಿನಗೆ ಎಲ್ಲವನ್ನೂ ಕೊಡುವೆವು. ನಾವು ಕುತೂಹಲದಿಂದ ಕೇಳಿದ ಸಮಾಚಾರವನ್ನು ನಮಗೆ ಹೇಳು.

೨೪. ನೀನು ಏತಕ್ಕೆ ಕಳ್ಳತನವನ್ನು ಮಾಡುತ್ತಿರುವೆ. ದಯೆಯಿಲ್ಲದ ಬ್ರಾಹ್ಮಣನಾಗಿದ್ದೀಯೆ. ಭಯಂಕರವಾದ ಜೂಜೇ ಮೊದಲಾದ ವ್ಯಸನಗಳಿಗೆ ವಶನಾಗಿರುವೆಯೊ? ಅಥವಾ ವ್ಯಾಧಬ್ರಾಹ್ಮಣನೊ?

೨೫. ಲೋಹಜಂಘನು ಹೇಳುತ್ತಾನೆ:—ನನ್ನೀ ಕಾರ್ಯವು ವ್ಯಸನದಿಂದಾದುದಲ್ಲ. ಕುಟುಂಬ ಪೋಷಣೆಗಾಗಿಯೆಂದು ತಿಳಿಯಿರಿ. ಇದು ನಿಶ್ಚಯವಾಗಿಯೂ ಧರ್ಮಕಾರ್ಯವೇ.

ಪಿತರೌ ಮಮ ವಾರ್ಧಕ್ಯೇ ವರ್ತಮಾನೌ ವ್ಯವಸ್ಥಿತೌ ।
ತಥಾ ಪತಿವ್ರತಾ ಪತ್ನೀ ಗೃಹಧರ್ಮವಿಚಕ್ಷಣಾ ॥ ೨೬ ॥
ಉಪಾರ್ಜಯಾಮಿ ಯತ್ಕಿಂಚಿದಹಮೇತೇನ ಕರ್ಮಣಾ ।
ತತ್ಸರ್ವಂ ತತ್ಕೃತೇ ನೂನಂ ಸತ್ಯೇನಾತ್ಮಾನಮಾಲಭೇ ॥ ೨೭ ॥
ತಸ್ಮಾನ್ಮುಂಚಥ ಪ್ರಾಕ್ಸರ್ವಂ ವಿಭವಂ ಕಿಂ ವೃಥೋಕ್ತಿಭಿಃ ।
ಕೃತಾಭಿಃ ಸ್ಫುರತೇ ಹಸ್ತೋ ಮಮಾಽಯಂ ಹಂತುಮೇವ ಹಿ ॥ ೨೮ ॥

ಋಷಯ ಊಚುಃ:—

ಯದ್ಯೇವಂ ಚೌರ ತದ್ಗತ್ವಾ ತ್ವಂ ಪೃಚ್ಛಸ್ವ ಕುಟುಂಬಕಂ ।
ಮಮ ಪಾಪಾಂಶಭಾಗೀ ತ್ವಂ ಕಿಂ ಭವಿಷ್ಯಸಿ ಕಿಂ ನ ವಾ ॥ ೨೯ ॥
ಯದಿ ತೇ ಸಂವಿಭಾಗೇನ ಪಾಪಸ್ಯಾಂಶೋಽಪಿ ಗಚ್ಛತಿ ।
ತತ್ಕುರುಷ್ವಾಽಥ ವಾ ಪಾಪಂ ದುರ್ವಹಂ ತೇ ಭವಿಷ್ಯತಿ ॥ ೩೦ ॥
ಸಕಲಂ ರೌರವೇ ರೌದ್ರೇ ಪತಿತಸ್ಯ ಸುದುರ್ಮತೇ ।
ವಯಂ ತ್ವಾಂ ಬ್ರಾಹ್ಮಣಂ ಮತ್ವಾ ಬ್ರೂಮ ಏತದಸಂಶಯಂ ॥ ೩೧ ॥
ಕೃಪಾವಿಷ್ಟಾಃ ಸಹಾಽಸ್ಮಾಭಿಃ ಸಂಜಾತೇಽಪಿ ಸುದರ್ಶನೇ ।
ಮುನಿನಾಂ ಯತಚಿತ್ತಾನಾಂ ದರ್ಶನಾದ್ಧಿ ಶುಭಂ ಭವೇತ್ ॥ ೩೨ ॥

---

೨೬. ನನಗೆ ಮುದುಕರಾದ ತಂದೆ ತಾಯಿಗಳೂ, ಮನೆಯ ಕಾರ್ಯಗಳಲ್ಲಿ ಕುಶಲಳೂ ಪತಿವ್ರತೆಯೂ ಆದ ಪತ್ನಿಯೂ ಇರುವರು.

೨೭. ನಾನು ಈ ಚೌರ್ಯದಿಂದ ಸಂಪಾದಿಸುವುದೆಲ್ಲ ಅವರಿಗಾಗಿಯೇ, ನನ್ನಾಣೆ ಇದು ನಿಜ.

೨೮. ಆದುದರಿಂದ ಮೊದಲು ನಿಮ್ಮಲ್ಲಿರುವ ವಸ್ತುಗಳನ್ನೆಲ್ಲ ಕೊಡಿರಿ. ಸುಮ್ಮನೆ ನಿಷ್ಫಲವಾದ ಮಾತುಗಳಿಂದೇನು ಪ್ರಯೋಜನ? ನನ್ನೀ ಕೈಯಬು ಕೊಲ್ಲಲು ಅದರುತ್ತಿದೆ.

೨೯. ಋಷಿಗಳು ಹೇಳುತ್ತಾರೆ:—ಚೋರ! ನೀನು ಮನೆಗೆ ಹೋಗಿ ಕುಟುಂಬದವರನ್ನು ಕುರಿತು ನೀವು ನನ್ನ ಪಾಪದ ಭಾಗವನ್ನು ಸ್ವೀಕರಿಸುವಿರೋ ಇಲ್ಲವೋ ಎಂದು ಕೇಳು.

೩೦–೩೨. ಅವರಿಗೆ ನಿನ್ನ ಪಾಪದ ಭಾಗವು ಸಲ್ಲುವುದಾದರೆ ಈ ಕೆಲಸ ವನ್ನು ಮಾಡು. ಹಾಗಿಲ್ಲದಿದ್ದರೆ ಭಯಂಕರ ರೌರವ ನರಕದಲ್ಲಿ ಬೀಳುವ ನಿನಗೆ ಈ ಪಾಪವು ಹೊರಲಸಾಧ್ಯವಾಗುವುದು. ನಿನ್ನನ್ನು ನೋಡಿ ದಯೆಗೊಂಡ ನಾವು ನೀನು ಬ್ರಾಹ್ಮಣನೆಂದರಿತು ಇದನ್ನು ಹೇಳುತ್ತಿದ್ದೇವೆ. ಜಿತೇಂದ್ರಿಯರಾದ ಮುನಿಗಳ ದರ್ಶನದಿಂದ ಮಂಗಳವಾಗುವುದು.

ಏಕಃ ಪಾಪಾನಿ ಕುರುತೇ ಫಲಂ ಭುಂಕ್ತೇ ಮಹಾಜನಃ ।
ಭೋಕ್ತಾರೋ ವಿಪ್ರಮುಚ್ಯಂತೇ ಕರ್ತಾ ದೋಷೇಣ ಲಿಪ್ಯತೇ ॥ ೩೩ ॥
ಸೂತ ಉವಾಚ:—
ಸ ತೇಷಾಂ ತದ್ವಚಃ ಶ್ರುತ್ವಾ ಚೌರಃ ಕಿಂಚಿದ್ಭಯಾನ್ವಿತಃ ।
ಸತ್ಯಮೇತನ್ನ ಸಂದೇಹೋ ಯದೇತೈರ್ವ್ಯಾಹೃತಂ ವಚಃ ॥ ೩೪ ॥
ತಸ್ಮಾತ್ಪೃಚ್ಛಾಮಿ ತದ್ಗತ್ವಾ ನಿಜಮೇವ ಕುಟುಂಬಕಂ ।
ಯದಿ ಸ್ಯಾತ್ಸಂವಿಭಾಗೋ ಮೇ ಪಾಪಾಂಶಸ್ಯ ಕರೋಮಿ ವೈ ॥ ೩೫ ॥
ಏತತ್ಕರ್ಮ ನ ಗೃಹ್ಣಂತಿ ಯದಿ ವಾ ಸಂತ್ಯಜಾಮ್ಯಹಂ ।
ಮಹದ್ಭಯಂ ಸಮುತ್ಪನ್ನಂ ಮಮ ಚೇತಸಿ ಸಾಂಪ್ರತಂ ॥ ೩೬ ॥
ಯದಿ ಯೂಯಂ ಸಚಾಽನ್ಯತ್ರ ಪ್ರಯಾಸ್ಯಥ ಮುನೀಶ್ವರಾಃ ।
ಪಲಾಯನಪರಾ ಭೂತ್ವಾ ತದ್ಗತ್ವಾ ನಿಜಮಂದಿರಂ ॥ ೩೭ ॥
ಪೃಚ್ಛಾಮಿ ಪೋಷ್ಯವರ್ಗಂ ಚ ಯುಷ್ಮದ್ವಾಕ್ಯಂ ವಿಶೇಷತಃ ।
ಯದಿ ತತ್ಪಾಪಕಾಂಶಂ ಮೇ ಗ್ರಹೀಷ್ಯತಿ ಕುಟುಂಬಕಂ ।
ತದ್ಯುಷ್ಮಾಕಂ ಗ್ರಹೀಷ್ಯಾಮಿ ಯತ್ಕಿಂಚಿತ್ಪಾರ್ಶ್ವಸಂಸ್ಥಿತಂ ॥ ೩೮ ॥
ಅಥವಾ ಪ್ರತಿಷೇಧಂ ಮೇ ಪಾಪಸ್ಯಾಽಸ್ಯ ಕರಿಷ್ಯತಿ ।
ತತ್ತ್ಯಜಿಷ್ಯಾಮ್ಯಸಂದಿಗ್ಧಂ ಸರ್ವಾನ್ ವಃ ಸಪರಿಚ್ಛದಾನ್ ॥ ೩೯ ॥

---

೩೩. ಒಬ್ಬನು ಪಾಪವನ್ನು ಮಾಡುವನು. ಅದರ ಫಲವನ್ನು ಅನೇಕ ಮಂದಿ ಅನುಭವಿಸುವರು. ಅನುಭವಿಸುವವರು ಪಾಪದಿಂದ ಲಿಪ್ತವಾಗುವುದಿಲ್ಲ. ಪಾಪಕಾರ್ಯವನ್ನೆಸಗುವವನು ಅದರಿಂದ ಲಿಪ್ತನಾಗುತ್ತಾನೆ.

೩೪. ಸೂತನು ಹೇಳುತ್ತಾನೆ:—ಅವನು ಅವರ ಆ ಮಾತನ್ನು ಕೇಳಿ ಸ್ವಲ್ಪ ಭಯಗೊಂಡು ಇವರು ಹೇಳಿದ ಮಾತು ನಿಜ. ಸಂದೇಹವಿಲ್ಲ.

೩೫. ಆದುದರಿಂದ ಕುಟುಂಬದವರ ಹತ್ತಿರ ಹೋಗಿ ನಾನು ಮಾಡಿದ ಪಾಪದ ಭಾಗವನ್ನು ತೆಗೆದುಕೊಳ್ಳುವಿರಾ? ಎಂದು ಕೇಳುತ್ತೇನೆ.

೩೬. ಅವರು ಈ ಪಾಪವನ್ನು ಸ್ವೀಕರಿಸದಿದ್ದರೆ ನಾನು ಈ ದುಷ್ಕಾರ್ಯವನ್ನು ತ್ಯಜಿಸುವೆನು. ಈಗ ನನ್ನ ಮನಸ್ಸಿಗೆ ಬಹಳ ಭಯವುಂಟಾಗಿದೆ.

೩೭–೩೮. ಮುನಿವರ್ಯರೆ! ನೀವು ಇಲ್ಲಿಂದ ನಿಮ್ಮ ಮನೆಗಳಿಗೆ ಓಡಿ ಹೋಗದಿದ್ದರೆ ನೀವು ಹೇಳಿದ ಈ ಮಾತನ್ನು ಕುಟುಂಬದವರನ್ನು ಕುರಿತು ಕೇಳುತ್ತೇನೆ. ಅವರು ಪಾಪದ ಭಾಗವನ್ನು ಸ್ವೀಕರಿಸುವುದಾದರೆ ನಾನು ನಿಮ್ಮ ಹತ್ತಿರ ವಿರುವುದನ್ನೆಲ್ಲ ತೆಗೆದುಕೊಳ್ಳುವೆನು.

೩೯. ಅವರು ನನ್ನ ಪಾಪದ ಭಾಗವನ್ನು ಪ್ರತಿಷೇಧಿಸುವುದಾದರೆ ಆಗ ನಿಮ್ಮನ್ನೆಲ್ಲ ಸಾಮಗ್ರಿಗಳೊಡನೆ ಬಿಟ್ಟುಬಿಡುವೆನು.

ತತಸ್ತೇ ಶಪಥಾನ್ ಕೃತ್ವಾ ತಸ್ಯ ಪ್ರತ್ಯಯ ಕಾರಣಾತ್ ।
ತಸ್ಯೋಪರಿ ದಯಾಂ ಕೃತ್ವಾ ಮುಮುಚುಸ್ತಂ ಗೃಹಂ ಪ್ರತಿ ॥ ೪೦ ॥
ಸೋಽಪಿ ಗತ್ವಾಽಥ ಪಪ್ರಚ್ಛ ಪ್ರಗಮ್ಯ ಪಿತರಂ ನಿಜಂ ।
ಶೃಣು ತಾತ ವಚೋಽಸ್ಮಾಕಂ ತತಃ ಪ್ರತ್ಯುತ್ತರಂ ಕುರು ॥ ೪೧ ॥
ಯತ್ಕೃತ್ವಾಽಹಮಕೃತ್ಯಾನಿ ಚೌರ್ಯಾದೀನಿ ಸಹಸ್ರಶಃ ।
ಪುಷ್ಟಿಂ ಕರೋಮಿ ತೇ ನಿತ್ಯಂ ತದ್ಭಾಗಸ್ತೇಽಸ್ತಿವಾ ನ ವಾ ॥ ೪೨ ॥
ಪಾಪಸ್ಯ ಮಮ ಪ್ರಬ್ರೂಹಿ ಪೃಚ್ಛತೋಽತ್ರ ಯಥಾ ತಥಂ ।
ಅತ್ರ ಮೇ ಸಂಶಯೋ ಜಾತಸ್ತಸ್ಮಾಚ್ಛೀಘ್ರಂ ಪ್ರಕೀರ್ತಯ ॥ ೪೩ ॥

ಪಿತೋವಾಚ :—

ಬಾಲ್ಯೇ ಪುತ್ರ ಮಯಾ ನೀತಸ್ತ್ವಂ ಪುಷ್ಟಿಂ ವ್ಯಾಕುಲಾತ್ಮನಾ ।
ಶುಭಾಽಶುಭಾನಿ ಕೃತ್ಯಾನಿ ಕೃತ್ವಾ ಸ್ನಿಗ್ಧೇನ ಚೇತಸಾ ॥ ೪೪ ॥
ಏತದರ್ಥಂ ಪುನರ್ಯೇನ ವಾರ್ಧಕ್ಯೇ ಸಮುಪಸ್ಥಿತೇ ।
ಮಾಂ ಪಾಲಯಸಿ ಭೂಯೋಽಪಿ ಕೃತ್ವಾ ಕರ್ಮ ಶುಭಾಽಶುಭಂ ॥ ೪೫ ॥
ನ ತಸ್ಯ ವಿದ್ಯತೇ ಭಾಗಸ್ತವ ಸ್ವಲ್ಪೋಽಪಿ ಪುತ್ರಕ ।
ಶುಭಸ್ಯ ವಾಽಥ ಪಾಪಸ್ಯ ಸಾಂಪ್ರತಂ ಚ ತಥಾ ಮಮ ॥ ೪೬ ॥

---

೪೦. ಅನಂತರ ಆ ಮುನಿಗಳು ಅವನ ಮೇಲಿನ ದಯೆಯಿಂದ ನಂಬಿಕೆಗಾಗಿ ಆಣೆಯಿಟ್ಟು ಅವನನ್ನು ಮನೆಗೆ ಕಳುಹಿಸಿದರು.

೪೧. ಅವನು ಮನೆಗೆ ಹೋಗಿ ತನ್ನ ತಂದೆಯನ್ನು ಕುರಿತು, "ಅಪ್ಪ! ನೀನು ನನ್ನ ಮಾತನ್ನು ಕೇಳು, ಅನಂತರ ಪ್ರತ್ಯುತ್ತರವನ್ನು ಕೊಡು.

೪೨-೪೩. ನಾನು ಕಳ್ಳತನ ಮೊದಲಾದ ಸಾವಿರಾರು ಅಕೃತ್ಯಗಳನ್ನು ಮಾಡಿ ನಿತ್ಯವೂ ನಿನ್ನನ್ನು ಪೋಷಿಸುತ್ತಿದ್ದೇನೆ. ಈ ಪಾಪದ ಭಾಗವು ನಿನಗೆ ಸಲ್ಲುವುದೊ, ಇಲ್ಲವೊ? ನಿಜವಾಗಿ ಹೇಳು, ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ, ಆದುದರಿಂದ ಶೀಘ್ರವಾಗಿ ತಿಳಿಸು" ಎಂದು ಕೇಳಿದನು.

೪೪. ತಂದೆಯು ಹೇಳುತ್ತಾನೆ:—ಮಗು! ನೀನು ಬಾಲಕನಾಗಿರುವಾಗ ನಾನು ಅತಿ ಪ್ರೀತಿಯಿಂದ ಶುಭಾಶುಭ ಕಾರ್ಯಗಳನ್ನು ಮಾಡಿ ನಿನ್ನನ್ನು ಪೋಷಿಸಿದ್ದೇನೆ.

೪೫. ಇದಕ್ಕಾಗಿಯೇ ನೀನು ನಾನು ಮುದುಕನಾಗಿರುವಾಗ ನನ್ನನ್ನು ಶುಭಾಶುಭ ಕಾರ್ಯಗಳನ್ನು ಮಾಡಿ ಕಾಪಾಡುತ್ತಿದ್ದೀಯೆ.

೪೬. ಬಾಲ್ಯದಲ್ಲಿ ನನ್ನ ಪಾಪಪುಣ್ಯಗಳ ಭಾಗವು ಹೇಗೆ ನಿನಗಿರುವುದಿಲ್ಲವೋ ಹಾಗೆಯೇ ಮುಪ್ಪಿನಲ್ಲಿ ನಿನ್ನ ಪಾಪಪುಣ್ಯಗಳೂ ನನಗಿರುವುದಿಲ್ಲ.

ಆತ್ಮನೈವ ಕೃತಂ ಕರ್ಮ ಸ್ವಯಮೇವೋಪಭುಜ್ಯತೇ ।
ಶುಭಂ ವಾ ಯದಿ ವಾ ಪಾಪಂ ಭೋಕ್ತಾರೋಽನ್ಯಜತಾಃ ಸ್ಮೃತಾಃ ॥ ೪೭ ॥
ಸಾಧುತ್ವೇನಾಽಥ ಚೌರ್ಯೇಣ ಕೃಷ್ಯಾ ವಾ ವಾಣಿಜೇನ ವಾ ।
ತ್ವಮುಪಾನಯಸೇ ಭೋಜ್ಯಂ ನ ಮೇ ಚಿಂತಾ ಪ್ರಜಾಯತೇ ॥ ೪೮ ॥
ತಸ್ಮಾನ್ನೈತದ್ಧೃದಿ ಸ್ಥಾಪ್ಯಂ ಕರ್ಮ ನಿಂದ್ಯಂ ಕರಿಷ್ಯಸಿ ।
ಯತ್ತಸ್ಯಾಂಶಂ ಪ್ರಭೋಕ್ತಾ ತ್ವಂ ವಯಂ ಸರ್ವೇ ಪ್ರಭುಂಜಕಾಃ ॥ ೪೯ ॥

ಸೂತ ಉವಾಚಃ—

ಸ ಏತದ್ವಚನಂ ಶ್ರುತ್ವಾ ವ್ಯಾಕುಲೇನಾಂತರಾತ್ಮನಾ ।
ಪಪ್ರಚ್ಛ ಮಾತರಂ ಗತ್ವಾ ತಮೇವಾರ್ಥಂ ಪ್ರಯತ್ನತಃ ॥ ೫೦ ॥
ತತಸ್ತಯಾಽಪಿ ತಚ್ಚೋಕ್ತಂ ಯತ್ಪಿತ್ರಾ ತಸ್ಯ ಜಲ್ಪಿತಂ ।
ಅಸಾಮಾನ್ಯಂ ಶುಭೇ ಪಾಪೇ ಕೃತ್ಯೇ ತಸ್ಯ ದ್ವಿಜೋತ್ತಮಾಃ ॥ ೫೧ ॥
ತತಃ ಪಪ್ರಚ್ಛ ತಾಂ ಭಾರ್ಯಾಂ ಗತ್ವಾ ದುಃಖಸಮನ್ವಿತಃ ।
ಸಾಽಪ್ಯುವಾಚ ತತಸ್ತಾದೃಕ್ಪಾಪಂ ಗುರುಜನೋದ್ಭವಂ ॥ ೫೨ ॥
ತತಃ ಸ ಶೋಕಸಂತಪ್ತಃ ಪಶ್ಚಾತ್ತಾಪೇನ ಸಂಯುತಃ ।
ಗರ್ಹಯನ್ನೇವ ಚಾಽತ್ಮಾನಂ ಯಯೌ ತೇ ಯತ್ರ ತಾಪಸಾಃ ॥ ೫೩ ॥

---

೪೭. ಮನುಷ್ಯನು ತಾನು ಮಾಡಿದ ಪಾಪಪುಣ್ಯಗಳನ್ನು ತಾನೇ ಅನುಭವಿಸುವನು. ಇತರರು ಪ್ರಯೋಜನವನ್ನು ಪಡೆಯುವರು.

೪೮. ನೀನು ಒಳ್ಳೆಯತನದಿಂದಾಗಲಿ, ಕಳ್ಳತನದಿಂದಾಗಲಿ, ಕೃಷಿಯಿಂದಾಗಲಿ, ವ್ಯಾಪಾರದಿಂದಾಗಲಿ ಆಹಾರವನ್ನು ಸಂಪಾದಿಸಿ ತರುತ್ತೀಯೆ. ಅದರಿಂದ ನನಗೆ ಚಿಂತೆಯಿಲ್ಲ.

೪೯. ಆದುದರಿಂದ ನೀನು ಇದನ್ನು ಆಲೋಚಿಸಬೇಡ. ನೀನು ಮಾಡುವ ನಿಂದ್ಯಕರ್ಮದ ಅಂಶವು ನಿನಗೆ ಸಲ್ಲುವುದು. ನಾವು ಕೇವಲ ನೀನು ತಂದುದನ್ನು ಭೋಜನ ಮಾಡುವವರು.

೫೦. ಸೂತನು ಹೇಳುತ್ತಾನೆ:—ಅವನು ತಂದೆಯ ಈ ಮಾತನ್ನು ಕೇಳಿ ವ್ಯಾಕುಲಗೊಂಡು ತಾಯಿಯ ಹತ್ತಿರ ಹೋಗಿ ಅದೇ ವಿಷಯವನ್ನು ಕೇಳಿದನು.

೫೧. ದ್ವಿಜವರ್ಯರೆ! ತಾಯಿಯೂ ಶುಭಾಶುಭ ಕಾರ್ಯ ವಿಷಯದಲ್ಲಿ ತಂದೆಯು ಹೇಳಿದಂತೆಯೇ ಅವನಿಗೆ ಹೇಳಿದಳು.

೫೨. ಅನಂತರ ಲೋಹಜಂಘನು ದುಃಖದಿಂದ ಪತ್ನಿಯನ್ನು ಕೇಳಲು ಅವಳೂ ಪಾಪದ ವಿಷಯದಲ್ಲಿ ಹಿರಿಯರು ಹೇಳಿದಂತೆಯೇ ಹೇಳಿದಳು.

೫೩. ಆದರಿಂದ ಅವನು ಶೋಕಗೊಂಡು ಪಶ್ಚಾತ್ತಾಪದಿಂದ ತನ್ನನ್ನು ನಿಂದಿಸುತ್ತ ಮುನಿಗಳಿರುವ ಸ್ಥಳಕ್ಕೆ ಹೋದನು.

ತತಃ ಪ್ರಣಮ್ಯ ತಾನ್ ಸರ್ವಾನ್ ಕೃತಾಂಜಲಿಪುಟಃ ಸ್ಥಿತಃ ।
ಗಮ್ಯತಾಂ ಗಮ್ಯತಾಂ ವಿಪ್ರಾಃ ಕ್ಷಮ್ಯತಾಂ ಕ್ಷಮ್ಯತಾಂ ಮಮ ॥ ೫೪ ॥
ಯನ್ಮಯಾ ಮೌರ್ಖ್ಯಮಾಸ್ಥಾಯ ಯುಷ್ಮನ್ನಿರ್ಭರ್ತ್ಸನಾ ಕೃತಾ ।
ಸುಪಾಪ್ಮನಾ ವಿಮೂಢೇನ ತಸ್ಮಾತ್ಕಾರ್ಯಾ ಕ್ಷಮಾಽದ್ಯ ಮೇ ॥ ೫೫ ॥
ಯುಷ್ಮದೀಯಂ ವಚಃ ಕೃತ್ಸ್ನಂ ಮದ್ಗುರುಭ್ಯಾಂ ಪ್ರಜಲ್ಪಿತಂ ।
ಭಾರ್ಯಯಾ ಚ ದ್ವಿಜಶ್ರೇಷ್ಠಾಸ್ತೇನ ಮೇ ದುಃಖಮಾಗತಂ ॥ ೫೬ ॥
ತಸ್ಮಾತ್ಕುರ್ವಂತು ಮೇ ಸರ್ವೇ ಪ್ರಸಾದಂ ಮುನಿಸತ್ತಮಾಃ ।
ಉಪದೇಶಪ್ರದಾನೇನ ಯೇನ ಪಾಪಂ ಕ್ಷಪಾಮ್ಯಹಂ ॥ ೫೭ ॥
ಮಯಾ ಕರ್ಮ ಕೃತಂ ನಿಂದ್ಯಂ ಸದೈವ ದ್ವಿಜಸತ್ತಮಾಃ ।
ಸ್ತ್ರಿಯೋಽಪಿ ಚ ದ್ವಿಜೇಂದ್ರಾಶ್ಚ ತಾಪಸಾಶ್ಚ ವಿಶೇಷತಃ ॥ ೫೮ ॥
ಯೇ ಯೇ ದೀನತರಾ ಲೋಕಾ ನ ಸಮರ್ಥಾಃ ಪ್ರಯೋಧಿತುಂ ।
ತೇ ಮಯಾ ಮುಷಿತಾಃ ಸರ್ವೇ ನ ಸಮರ್ಥಾಃ ಕದಾಚನ ॥ ೫೯ ॥
ಕುಟುಂಬಾರ್ಥಂ ವಿಮೂಢೇನ ಸಾಧುಸಂಗವಿವರ್ಜಿನಾ ।
ಯಥೈವ ಪಠತಾ ಶಾಸ್ತ್ರಂ ತನ್ಮೇಽದ್ಯ ಪತಿತಂ ಹೃದಿ ॥ ೬೦ ॥
ಯದಿ ನ ಸ್ಯಾದ್ಭವದ್ಭಿರ್ಮೇ ದರ್ಶನಂ ಚಾಽದ್ಯ ಸತ್ತಮಾಃ ।
ತದನ್ಯಾನ್ಯಪಿ ಪಾಪಾನಿ ಕರ್ತಾಽಹಂ ಸ್ಯಾನ್ನಸಂಶಯಃ ॥ ೬೧ ॥

---

೫೪–೫೬. ಅಲ್ಲಿ ಅವನು ಆ ಮುನಿಗಳಿಗೆರಗಿ ಕೈಮುಗಿದುಕೊಂಡು, "ವಿಪ್ರರೆ! ಹೊರಡಿರಿ, ಹೊರಡಿರಿ, ನನ್ನನ್ನು ಕ್ಷಮಿಸಿರಿ, ಪಾಪಿಯಾದ ನಾನು ಮೂಢನಾಗಿ ನಿಮ್ಮನ್ನು ಗದರಿಸಿದೆನು. ಆದುದರಿಂದ ಕ್ಷಮಿಸಿರಿ. ನಾನು ನೀವು ಹೇಳಿದ ಮಾತನ್ನೆಲ್ಲ ತಂದೆತಾಯಿಗಳಿಗೂ, ಪತ್ನಿಗೂ ತಿಳಿಸಿದೆನು. ಅವರ ಮಾತಿನಿಂದ ನನಗೆ ದುಃಖವುಂಟಾಗಿದೆ.

೫೭. ಮುನಿವರ್ಯರೆ! ಆದುದರಿಂದ ನೀವು ನನಗೆ ಉಪದೇಶಮಾಡಿ ಅನುಗ್ರಹಿಸಿರಿ. ಅದರಿಂದ ನಾನು ಈ ಪಾಪವನ್ನು ನೀಗುವೆನು.

೫೮–೬೦. ಮೂಢನೂ, ಸಜ್ಜನರ ಸಹವಾಸವಿಲ್ಲದವನೂ ಆದ ನಾನು ಕುಟುಂಬ ರಕ್ಷಣೆಗಾಗಿ ನಿಂದ್ಯವಾದ ಕಾರ್ಯವನ್ನು ಮಾಡಿದೆನು. ಹೆಂಗಸರು, ಬ್ರಾಹ್ಮಣೋತ್ತಮರು, ಮುನಿಗಳು, ಜಗಳವಾಡಲಸಮರ್ಥರಾದ ದೀನರು ಇವರನ್ನು ಸುಲಿಗೆಮಾಡಿದೆನು. ಅದು ಈಗ ನನ್ನ ಮನಸ್ಸಿನಲ್ಲಿ ಶಾಸ್ತ್ರವನ್ನು ಓದಿದರೆ ತಿಳಿಯುವಂತೆ ತಿಳಿಯುತ್ತಿದೆ.

೬೧. ಸಾಧುವರ್ಯರೆ! ಈಗ ನಿಮ್ಮ ದರ್ಶನವು ನನಗಾಗದೆ ಇದ್ದಿದ್ದರೆ ನಿಶ್ಚಯವಾಗಿಯೂ ನಾನು ಇನ್ನೂ ಇತರ ಪಾಪಕಾರ್ಯಗಳನ್ನು ಮಾಡುತ್ತಿದೆನು" ಎಂದನು.

ತೇಷಾಂ ಮಧ್ಯಗತಶ್ಚಾಽಸೀತ್ಪುಲಹೋ ನಾಮ ಸನ್ಮುನಿಃ ।
ಹಾಸ್ಯಶೀಲಃ ಸ ತಂ ಪ್ರಾಹ ವಿಪ್ಲವಾರ್ಥಂ ದ್ವಿಜೋತ್ತಮಂ ॥ ೬೨ ॥
ಅಹಂ ತೇ ಕೀರ್ತಯಿಷ್ಯಾಮಿ ಮಂತ್ರಮೇಕಂ ಸುಶೋಭನಂ ।
ಯಂ ಧ್ಯಾಯಂ ಜಯಮಾನಸ್ತ್ವಂ ಸಿದ್ಧಿಂ ಯಾಸ್ಯಸಿ ಶಾಶ್ವತೀಂ ॥ ೬೩ ॥
ಜಾಟಘೋಟೇತಿ ಮಂತ್ರೋಽಯಂ ಸರ್ವಸಿದ್ಧಿಪ್ರದಾಯಕಃ ।
ತಮೇನಂ ಜಪ ವಿಪ್ರ ತ್ವಂ ದಿವಾರಾತ್ರಮತಂದ್ರಿತಃ ॥ ೬೪ ॥
ತತೋ ಯಾಸ್ಯಸಿ ಸಂಸಿದ್ಧಿಂ ದುರ್ಲಭಾಂ ತ್ರಿದಶೈರಪಿ ॥ ೬೫ ॥
ಏವಮುಕ್ತ್ವಾಽಥ ತೇ ವಿಪ್ರಾಸ್ತೀರ್ಥಯಾತ್ರಾಂ ತತೋ ಯಯುಃ ।
ಸೋಽಪಿ ತತ್ರೈವ ಚೌರಸ್ತು ಸ್ಥಿತೋ ಜಪ ಪರಾಯಣಃ ॥ ೬೬ ॥
ಅನನ್ಯ ಮನಸಾ ತೇನ ಪ್ರಾರಬ್ಧಃ ಸ ತದಾ ಜಪಃ ।
ಯಥಾಽಭವತ್ಸಮಾಧಿಸ್ಥೋ ಯೇನಾಽವಸ್ಥಾಂ ಪರಾಂ ಗತಃ ॥ ೬೭ ॥
ತಸ್ಯೈವಂ ಸ್ಮರಮಾಣಸ್ಯ ತಂ ಮಂತ್ರಂ ಬ್ರಾಹ್ಮಣಸ್ಯ ಚ ।
ನಿಶ್ಚಲತ್ವಂ ಗತಃ ಕಾಯಃ ಕಾರ್ಯೇ ಚ ನಿಶ್ಚಲಃ ಸ್ಥಿತಃ ॥ ೬೮ ॥
ತತಃ ಕಾಲೇನ ಮಹತಾ ವಲ್ಮೀಕೇನ ಸಮಾವೃತಃ ।
ಸಮಂತಾದ್ಬ್ರಾಹ್ಮಣಶ್ರೇಷ್ಠಾ ಧ್ಯಾನಸ್ಥಸ್ಯ ಮಹಾತ್ಮನಃ ॥ ೬೯ ॥

---

೬೨. ಅವರ ಮಧ್ಯದಲ್ಲಿ ಹಾಸ್ಯಮಾಡುವ ಸ್ವಭಾವವುಳ್ಳ ಪುಲಹನೆಂಬ ಓರ್ವ ಮುನಿಯು ತೊಂದರೆಗೊಳಿಸುವುದಕ್ಕಾಗಿ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು.

೬೩. "ನಾನು ನಿನಗೆ ಒಂದು ಮಂಗಳಕರವಾದ ಮಂತ್ರವನ್ನು ಹೇಳುವೆನು. ನೀನು ಅದನ್ನು ಜಪಿಸುತ್ತ ಶಾಶ್ವತವಾದ ಸಿದ್ಧಿಯನ್ನು ಪಡೆಯುವೆ.

೬೪. ಬ್ರಾಹ್ಮಣ! ನೀನು ಜಾಟಘೋಟವೆಂಬ ಸಮಸ್ತ ಸಿದ್ಧಿಯನ್ನೀಯುವ ಈ ಮಂತ್ರವನ್ನು ಹಗಲು ರಾತ್ರಿ ಜಪಿಸು.

೬೫. ಅದರಿಂದ ನೀನು ದೇವತೆಗಳಿಗೂ ಹೊಂದಲಾಗದ ಶಾಶ್ವತ ಸಿದ್ಧಿಯನ್ನು ಹೊಂದುವೆ."

೬೬. ಆ ಬ್ರಾಹ್ಮಣರು ಹೀಗೆಂದು ಹೇಳಿ ತೀರ್ಥಯಾತ್ರೆಗೆ ತೆರಳಿದರು. ಆ ಕಳ್ಳನೂ ಅಲ್ಲಿಯೇ ಆ ಮಂತ್ರವನ್ನು ಜಪಿಸುತ್ತ ಕುಳಿತನು.

೬೭. ಅವನು ಸಮಾಧ್ಯವಸ್ಥೆಯನ್ನು ಹೊಂದುವಷ್ಟು ಅನನ್ಯಮಾನಸನಾಗಿ ಜಪಿಸಲಾರಂಭಿಸಿದನು.

೬೮. ಅವನು ಹೀಗೆ ಆ ಮಂತ್ರವನ್ನು ಜಪಿಸುತ್ತಿರಲು ಜಪಕಾರ್ಯದಲ್ಲಿಯೂ ಶರೀರದಲ್ಲಿಯೂ ನಿಶ್ಚಲನಾದನು.

೬೯. ಬ್ರಾಹ್ಮಣವರ್ಯರೆ! ಬಹಳ ಕಾಲದ ಮೇಲೆ ಧ್ಯಾನಮಗ್ನನಾದ ಅವನ ಸುತ್ತಲೂ ಹುತ್ತವು ಬೆಳೆಯಿತು.

ತೌ ಮಾತಾಪಿತರೌ ತಸ್ಯ ಸಾ ಚ ಭಾರ್ಯಾ ಮನಸ್ವಿನೀ ।
ಯಾತಾ ಮೃತ್ಯುವಶಂ ಸರ್ವೇ ತಮನ್ವೇಷ್ಯ ಪ್ರಯತ್ನತಃ ॥ ೨೦ ॥
ನ ವಿಜ್ಞಾತಶ್ಚ ತತ್ರಸ್ಥಃ ಸನ್ಯಸ್ತಃ ಸ ಮಹಾವ್ರತಃ ।
ಸಂಸಾರಭಾವನಿರ್ಮುಕ್ತಸ್ತಸ್ಮಾನ್ಮುನಿಸಮಾಗಮಾತ್ ॥ ೨೧ ॥
ಕಸ್ಯಚಿತ್ತ್ವಥ ಕಾಲಸ್ಯ ತೇನ ಮಾರ್ಗೇಣ ತೇ ಪುನಃ ।
ತೀರ್ಥಯಾತ್ರಾ ಪ್ರಸಂಗೇನ ಮುನಯಃ ಸಮುಪಸ್ಥಿತಾಃ ॥ ೨೨ ॥
ಪ್ರೋಚುಶ್ಚೈತದ್ದ್ವಿಜಾಃ ಸ್ಥಾನಂ ಯತ್ರ ಚೌರೇಣ ಸಂಗಮಃ ।
ಆಸೀದ್ವಸ್ತೇನ ರೌದ್ರೇಣ ಬ್ರಾಹ್ಮಣಚ್ಛದ್ಮಧಾರಿಣಾ ॥ ೨೩ ॥
ತತೋ ವಲ್ಮೀಕಮಧ್ಯಸ್ಥಂ ಶುಶ್ರುವುರ್ನಿಸ್ವನಂ ಚ ತೇ ।
ಜಾಟಘೋಟೇತಿ ಮಂತ್ರಸ್ಯ ತಸ್ಯೈವ ಚ ಮಹಾತ್ಮನಃ ॥ ೨೪ ॥
ಅಥ ಭೂಮ್ಯಾಂ ಪ್ರಹಾರಾಸ್ತೇ ಸಸ್ವನುಃ ಸರ್ವತೋ ದಿಶಂ ।
ತೇ ವಲ್ಮೀಕಂ ತತೋ ದೃಷ್ಟ್ವಾ ತಂ ಚೌರಂ ತಸ್ಯ ಮಧ್ಯಗಂ ॥ ೨೫ ॥
ಜಪಮಾನಂ ತು ತಂ ಮಂತ್ರಂ ಪುಲಹೇನ ನಿವೇದಿತಃ ।
ಹಾಸ್ಯರೂಪೇಣ ಯಸ್ತಸ್ಯ ಸಿದ್ಧಿಂ ಚ ದ್ವಿಜಸತ್ತಮಾಃ ॥ ೨೬ ॥

---

೨೦. ಅವನ ತಾಯಿತಂದೆಗಳೂ, ಹೆಂಡತಿಯೂ ಅವನನ್ನು ಹುಡುಕಿ ಹುಡುಕಿ ಬೇಸತ್ತು ಮೃತರಾದರು.

೨೧. ಮುನಿಗಳ ಸಂಬಂಧದಿಂದ ಸನ್ಯಾಸಿಯೂ, ವ್ರತಿಯೂ, ಸಂಸಾರ ಮುಕ್ತನೂ ಆಗಿ ಅಲ್ಲಿ ಕುಳಿತಿರುವ ಅವನನ್ನು ಯಾರೂ ತಿಳಿಯಲಿಲ್ಲ.

೨೨. ಕೆಲವು ಕಾಲದಮೇಲೆ ಆ ಮುನಿಗಳು ತೀರ್ಥಯಾತ್ರೆಯ ನಿಮಿತ್ತ ದಿಂದ ಆ ಮಾರ್ಗವಾಗಿ ಬಂದರು.

೨೩. ದ್ವಿಜರೆ! ಅವರು "ಆ ಕಪಟ ಬ್ರಾಹ್ಮಣರೂಪವನ್ನು ಧರಿಸಿದ ಭಯಂಕರ ಕಳ್ಳನಿಂದ ನಮಗೆ ಸಮಾಗಮವಾದ ಸ್ಥಳವಿದೇ" ಎಂದು ಕೊಂಡರು.

೨೪. ಅನಂತರ ಆ ಮುನಿಗಳು ಹುತ್ತದ ನಡುವೆ ಆ ಲೋಹಜಂಘನು ಜಪಿಸುತ್ತಿರುವ ಜಾಟಘೋಟ ಮಂತ್ರದ ಶಬ್ದವನ್ನು ಕೇಳಿದರು.

೨೫–೨೬. ಆ ಮಂತ್ರದ ಧ್ವನಿಯು ಭೂಮಿಯಲ್ಲಿ ಎಲ್ಲೆಡೆಯಲ್ಲಿಯೂ ಮೊಳಗಿತು. ಮುನಿಗಳು ಹುತ್ತದ ನಡುವೆ ಪುಲಹನು ಹಾಸ್ಯಾರ್ಥವಾಗಿ ತಿಳಿಸಿದ ಮಂತ್ರವನ್ನು ಜಪಿಸುತ್ತ ಸಿದ್ಧಿಯನ್ನು ಪಡೆದಿರುವ ಆ ಕಳ್ಳನನ್ನು ನೋಡಿ ಹೀಗೆ ಮಾತಾಡಿಕೊಂಡರು.

ಯದ್ವಾ ಸತ್ಯಮಿದಂ ಪ್ರೋಕ್ತಮಾಚಾರ್ಯೈಃ ಶಾಸ್ತ್ರದೃಷ್ಟಿಭಿಃ ।
ಸ್ತೋಕಂ ಸಿದ್ಧಿಕೃತೇ ತಸ್ಯ ಯಸ್ಮಾತ್ಸಿದ್ಧಿರುಪಸ್ಥಿತಾ ॥ ೭೭ ॥
ಮಂತ್ರೇ ತೀರ್ಥೇ ದ್ವಿಜೇ ದೇವೇ ದೈವಜ್ಞೇ ಭೇಷಜೇ ಗುರೌ ।
ಯಾದೃಶೀ ಭಾವನಾ ಯಸ್ಯ ಸಿದ್ಧಿರ್ಭವತಿ ತಾದೃಶೀ ॥ ೭೮ ॥
ಅಥ ತಂ ವೀಕ್ಷ್ಯ ಸಂಸಿದ್ಧಂ ಕುಮಂತ್ರೇಣಾಽಪಿ ತಸ್ಕರಂ ।
ತೇ ವಿಪ್ರಾ ವಿಸ್ಮಯಾವಿಷ್ಟಾಃ ಕೃಪಾವಿಷ್ಟಾ ವಿಶೇಷತಃ ॥ ೭೯ ॥
ಸಮಾಧ್ಯರ್ಹೈಸ್ತತೋ ದ್ರವ್ಯೈಸ್ತೈಲೈಸ್ತದ್ಭೇಷಜೈರಪಿ ॥ ೮೦ ॥
ಮಮರ್ದುಸ್ತಸ್ಯ ತದ್ಗಾತ್ರಂ ಸಮಾಧಿಸ್ಥಂ ಚಿರಂ ದ್ವಿಜಾಃ ।
ತತಃ ಸ ಚೇತನಾಂ ಲಬ್ಧ್ವಾ ಆಲೋಕ್ಯ ಚ ಮುಹುರ್ಮುಹುಃ ।
ಪ್ರೋವಾಚ ವಿಸ್ಮಯಾವಿಷ್ಟಸ್ತಾನ್ಮುನೀನ್ಪ್ರಕೃತಾನಿತಿ ॥ ೮೧ ॥

ಲೋಹಜಂಘ ಉವಾಚ :—

ಕಿಮರ್ಥಂ ನ ಗತಾ ಯೂಯಂ ಮಯಾ ಮುಕ್ತಾ ದ್ವಿಜೋತ್ತಮಾಃ ।
ನಾಽಹಂ ಕಿಂಚಿದ್ಗ್ರಹೀಷ್ಯಾಮಿ ಯುಷ್ಮದೀಯಂ ಕಥಂಚನ ।
ಕುಟುಂಬಾರ್ಥಂ ಯತಸ್ತಸ್ಮಾದ್ವ್ರಜಧ್ವಂ ಸ್ವೇಚ್ಛಯಾಽಧುನಾ ॥ ೮೨ ॥

---

೭೭. ಇವನು ಸಿದ್ಧಿಯನ್ನು ಹೊಂದಿರುವುದರಿಂದ ಅಲ್ಪವಾದ ಮಂತ್ರವೂ ಸಿದ್ಧಿಯನ್ನುಂಟುಮಾಡುವುದೆಂದು ಶಾಸ್ತ್ರಜ್ಞರಾದ ಆಚಾರ್ಯರು ನುಡಿದಿರುವುದು ನಿಜ.

೭೮. ಮಂತ್ರ, ತೀರ್ಥ, ಬ್ರಾಹ್ಮಣ, ದೇವತೆ, ಜೋಯಿಸ, ಔಷಧ, ಗುರು ಇವರಲ್ಲಿ ಯಾವನಿಗೆ ಎಂತಹ ಭಾವನೆಯು ಇರುವುದೊ, ಅವನಿಗೆ ಸಿದ್ಧಿಯೂ ಅಂತಹುದೇ ದೊರಕುವುದು.

೭೯–೮೧. ಬಳಿಕ ಆ ಮುನಿಗಳು ಕುಮಂತ್ರದಿಂದಲೂ ಸಿದ್ಧನಾದ ಅವನನ್ನು ನೋಡಿ ಆಶ್ಚರ್ಯಗೊಂಡು ವಿಶೇಷವಾಗಿ ದಯೆಯುಳ್ಳವರಾಗಿ ಅವನ ಶರೀರವನ್ನು ಸಮಾಧಿಗೆ ಉಚಿತವಾದ ದ್ರವ್ಯ, ಎಣ್ಣೆ, ಔಷಧ ಇವುಗಳಿಂದ ಬಹಳಹೊತ್ತು ಉಜ್ಜಿದರು. ಅನಂತರ ಆ ಲೋಹಜಂಘನು ಜ್ಞಾನವನ್ನು ಹೊಂದಿ ಹಿಂದೆ ಬಂದ ಮುನಿಗಳು ಹಾಗೆಯೇ ನಿಂತಿದ್ದಾರೆಂದು ಆಶ್ಚರ್ಯಗೊಂಡವನಾಗಿ ಅವರನ್ನು ಕುರಿತು ಇಂತೆಂದನು.

೮೨. ಲೋಹಜಂಘನು ಹೇಳುತ್ತಾನೆ:— ದ್ವಿಜವರ್ಯರೆ! ನಾನು ಬಿಟ್ಟರೂ ನೀವು ಏತಕ್ಕೆ ಹೋಗಲಿಲ್ಲ? ನಾನು ನಿಮ್ಮ ಯಾವ ವಸ್ತುವನ್ನೂ ನನ್ನ ಕುಟುಂಬಕ್ಕಾಗಿ ತೆಗೆದುಕೊಳ್ಳುವುದಿಲ್ಲ. ಈಗ ನಿಮ್ಮಿಚ್ಛೆಯಂತೆ ಹೊರಡಿರಿ.

ಮುನಯ ಊಚುಃ:—

ಚಿರಕಾಲಾದ್ವಯಂ ಪ್ರಾಪ್ತಾಃ ಪುನರ್ಭ್ರಾಂತ್ವಾಽತ್ರಕಾನನೇ ।
ಸಮಾಧಿಸ್ಥೇನ ನ ಜ್ಞಾತಃ ಕಾಲೋಽತೀತಸ್ತ್ವಯಾಬಹು ॥ ೮೩ ॥
ತೌ ಮಾತಾಪಿತರೌ ವೃದ್ಧೌ ತ್ವಯಾ ಮುಕ್ತೌ ಕ್ಷಯಂ ಗತೌ ।
ತ್ವಂ ಚ ಸಂಸಿದ್ಧಿಮಾಪನ್ನಃ ಪರಾಮಸ್ಮತ್ಪ್ರಸಾದತಃ ॥ ೮೪ ॥
ವಲ್ಮೀಕಾಂತಃಸ್ಥಿತೋ ಯಸ್ಮಾತ್ತ್ವಂಸಿದ್ಧಿಂ ಪರಮಾಂ ಗತಃ ।
ವಾಲ್ಮೀಕಿರ್ನಾಮ ವಿಖ್ಯಾತಸ್ತಸ್ಮಾಲ್ಲೋಕೇ ಭವಿಷ್ಯಸಿ ॥ ೮೫ ॥
ಅತ್ರಸ್ಥೇನ ಯತೋ ಮುಷ್ಟಾಸ್ತ್ವಯಾ ಲೋಕಾಃ ಪುರಾ ದ್ವಿಜ ।
ಮುಖಾರಾಖ್ಯಂ ತತಸ್ತೀರ್ಥಮೇತತ್ ಖ್ಯಾತಿಂ ಗಮಿಷ್ಯತಿ ॥ ೮೬ ॥
ಯೇಽತ್ರ ಸ್ನಾನಂ ಕರಿಷ್ಯಂತಿ ಶ್ರಾವಣ್ಯಾಂ ಶ್ರದ್ಧಯಾ ದ್ವಿಜಾಃ ।
ಕ್ಷಾಲಯಿಷ್ಯಂತಿ ತೇ ಪಾಪಂ ಚೌರ್ಯಕರ್ಮ ಸಮುದ್ಭವಂ ॥ ೮೭ ॥

ಸೂತ ಉವಾಚ :—

ಏವಮುಕ್ತ್ವಾಽಥ ತೇ ವಿಪ್ರಾಸ್ತಮಾಮಂತ್ರ್ಯಮುನಿಂ ತತಃ ।
ಪ್ರಣತಾಸ್ತೇನ ಸಂಜಗ್ಮುರ್ವಾಂಛಿತಾಶಾಂ ತತಃ ಪರಂ ॥ ೮೮ ॥
ತಪಃಸ್ಥಃ ಸೋಽಪಿ ತತ್ರೈವ ವಾಲ್ಮೀಕಿರಿತಿ ಯಃ ಸ್ಮೃತಃ ॥ ೮೯ ॥
ಮುನೀನಾಂ ಪ್ರವರಃ ಶ್ರೇಷ್ಠಃ ಸಂಜಾತಶ್ಚ ತತಃ ಪರಂ ।
ಅದ್ಯಾಽಪಿ ತಿಷ್ಠತೇ ಮೂರ್ತಃ ಸ ತತ್ರಸ್ಥೋ ಮುನೀಶ್ವರಃ ॥ ೯೦ ॥

---

೮೩. ಮುನಿಗಳು ಹೇಳುತ್ತಾರೆ:—ನಾವು ಬಹುಕಾಲದ ಮೇಲೆ ಸಂಚರಿಸುತ್ತ ಈ ಕಾಡಿಗೆ ಬಂದಿದ್ದೇವೆ. ಸಮಾಧಿನಿರತನಾದ ನೀನು ಕಳೆದ ಕಾಲವನ್ನರಿಯಲಿಲ್ಲ.

೮೪. ನೀನು ತ್ಯಜಿಸಿದ ಮುದುಕರಾದ ತಂದೆತಾಯಿಗಳು ಮೃತರಾದರು. ನೀನು ನಮ್ಮ ಅನುಗ್ರಹದಿಂದ ಉತ್ತಮ ಸಿದ್ಧಿಯನ್ನು ಪಡೆದಿರುವೆ.

೮೫. ನೀನು ಹುತ್ತದ ಮಧ್ಯದಲ್ಲಿ ಸಿದ್ಧಿಯನ್ನು ಹೊಂದಿರುವುದರಿಂದ ಪ್ರಪಂಚದಲ್ಲಿ ವಾಲ್ಮೀಕಿಯೆಂದು ವಿಖ್ಯಾತನಾಗುವೆ.

೮೬. ನೀನು ಇಲ್ಲಿ ಜನರ ವಸ್ತುಗಳನ್ನು ಕಸಿದುಕೊಂಡದ್ದರಿಂದ ಈ ಸ್ಥಳವು ಮುಖಾರವೆಂದು ಪ್ರಸಿದ್ಧವಾಗುವುದು.

೮೭. ಶ್ರಾವಣ ಮಾಸದ ಹುಣ್ಣಿಮೆಯ ದಿನ ಇಲ್ಲಿ ಶ್ರದ್ಧೆಯಿಂದ ಮಿಂದ ಮಾನವರು ಕಳ್ಳತನದಿಂದುಂಟಾದ ಪಾಪದಿಂದ ಮುಕ್ತರಾಗುವರು.

೮೮. ಸೂತನು ಹೇಳುತ್ತಾನೆ:—ಆ ಮುನಿಗಳು ಹೀಗೆ ಹೇಳಿ ವಾಲ್ಮೀಕಿಯನ್ನು ಕೇಳಿಕೊಂಡು ಅವನಿಂದ ವಂದಿತರಾಗಿ ಸ್ವೇಚ್ಛೆಯಾಗಿ ಹೊರಟರು.

೮೯–೯೦. ತಪಸ್ಸನ್ನು ಮಾಡುತ್ತಿರುವ ಆ ವಾಲ್ಮೀಕಿ ಮುನಿಯು ಮುನಿಗಳಲ್ಲಿ ಉತ್ತಮನಾಗಿ ಈಗಲೂ ಅಲ್ಲಿ ಮೂರ್ತಿರೂಪದಿಂದಿರುವನು.

ಯಸ್ತಂ ಪ್ರಪೂಜಯೇದ್ಭಕ್ತ್ಯಾ ಸ ಕವಿರ್ಜಾಯತೇ ಧ್ರುವಂ ।
ಅಷ್ಟಮ್ಯಾಂ ಚ ವಿಶೇಷೇಣ ಸಮ್ಯಕ್ಛ್ರದ್ಧಾಸಮನ್ವಿತಃ ॥ ೯೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮುಖಾರತೀರ್ಥೋತ್ಪತ್ತಿವರ್ಣನಂ"
ನಾಮ ಚತುರ್ವಿಂಶತ್ಯುತ್ತರಶತತಮೋಽಧ್ಯಾಯಃ

---

೯೧. ಅವನನ್ನು ಅಷ್ಟಮಿಾ ದಿನ ವಿಶೇಷವಾಗಿ ಶ್ರದ್ಧೆಯಿಂದ ಪೂಜಿಸಿದ ಮನುಷ್ಯನು ನಿಶ್ಚಯವಾಗಿಯೂ ಕವಿಯಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮುಖಾರತೀರ್ಥೋತ್ಪತ್ತಿವರ್ಣನ" ವೆಂಬ
ನೂರಿಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶತ್ಯಧಿಕಶತತಮೋಽಧ್ಯಾಯಃ

### ಸತ್ಯಸಂಧನೃಪತಿವೃತ್ತಾಂತವರ್ಣನಂ

ಸೂತ ಉವಾಚ :—

ತತಃ ಕರ್ಣೋತ್ಪಲಾತೀರ್ಥಂ ವಿಖ್ಯಾತಂ ಚಾಽಸ್ತಿ ಶೋಭನಂ ।
ಯತ್ರ ಸ್ನಾತೋ ನರಃ ಸಮ್ಯಙ್ನ ವಿಯೋಗಮವಾಪ್ನುಯಾತ್ ॥ ೧ ॥
ಕಥಂಚಿದಪಿ ಚೇಷ್ಟೇನ ಧನೇನಾಲಿಜನೇನ ಚ ।
ಪರಾಕ್ರಮೇಣ ಧರ್ಮೇಣ ಕಲತ್ರೇಣ ವಿಶೇಷತಃ ॥ ೨ ॥
ಸತ್ಯಸಂಧ ಇತಿ ಖ್ಯಾತಃ ಪುರಾಽಽಸೀತ್ಪೃಥಿವೀಪತಿಃ ।
ಇಕ್ಷ್ವಾಕುಕುಲಸಂಭೂತಃ ಸರ್ವರೂಪಗುಣೈರ್ಯುತಃ ॥ ೩ ॥
ತಸ್ಯ ಕರ್ಣೋತ್ಪಲಾ ನಾಮ ಜಾತಾ ಕನ್ಯಾ ಸುಶೋಭನಾ ।
ಬಹುಪುತ್ರಸ್ಯ ಚೈಕಾ ಸಾ ಸರ್ವಲಕ್ಷಣಲಕ್ಷಿತಾ ॥ ೪ ॥
ಅಥ ತಸ್ಯಾಃ ಪಿತಾ ನಾಮ ಚಕ್ರೇ ದ್ವಾದಶಮೇ ದಿನೇ ।
ಸಂಮಂತ್ರ್ಯ ಬ್ರಾಹ್ಮಣೈಃ ಸಾರ್ಧಂ ಭೃತ್ಯಾಽಮಾತ್ಯೈರ್ಮುಹುರ್ಮುಹುಃ ॥ ೫ ॥
ಯಸ್ಮಾತ್ಕರ್ಣೋತ್ಪಲಾ ಚೇಯಂ ಜಾತಾ ಮಮ ಕುಮಾರಿಕಾ ।
ತಸ್ಮಾತ್ಕರ್ಣೋತ್ಪಲಾ ನಾಮ ಜಾತಾ ಕನ್ಯಾ ಸುಶೋಭನಾ ॥ ೬ ॥

---

### ಕನ್ನಡದ ಅನುವಾದ

#### ಸತ್ಯಸಂಧನೃಪತಿವೃತ್ತಾಂತವರ್ಣನ

೧–೨. ಸೂತನು ಹೇಳುತ್ತಾನೆ :—ತರುವಾಯ ಅಲ್ಲಿ ಕರ್ಣೋತ್ಪಲವೆಂದು ಪ್ರಸಿದ್ಧವಾದ ಮಂಗಳಕರವಾದ ತೀರ್ಥವಿರುವುದು. ಅಲ್ಲಿ ಮಿಂದ ನರನು ಇಷ್ಟ ಜನರಿಂದಲೂ, ದ್ರವ್ಯಗಳಿಂದಲೂ, ಮಿತ್ರರಿಂದಲೂ, ಪರಾಕ್ರಮದಿಂದಲೂ, ಧರ್ಮದಿಂದಲೂ, ಪತ್ನಿಯಿಂದಲೂ ಅಗಲುವುದಿಲ್ಲ.

೩. ಹಿಂದೆ ಸಕಲ ಸೌಂದರ್ಯ ಗುಣಗಳಿಂದ ಸಹಿತನಾದ ಸತ್ಯಸಂಧನೆಂಬ ಇಕ್ಷ್ವಾಕುವಂಶದ ದೊರೆಯಿದ್ದನು.

೪. ಅನೇಕ ಮಂದಿ ಪುತ್ರರಿರುವ ಅವನಿಗೆ ಸಕಲ ಲಕ್ಷಣಗಳಿಂದ ಕೂಡಿದ ಸುಂದರಿಯಾದ ಕರ್ಣೋತ್ಪಲೆಯೆಂಬ ಓರ್ವಕನ್ಯೆಯು ಹುಟ್ಟಿದಳು.

೫–೬. ತಂದೆಯು ಹನ್ನೆರಡನೆಯ ದಿನ ಬ್ರಾಹ್ಮಣರು, ಮಂತ್ರಿಗಳು, ಸೇವಕರು ಇವರೊಡನೆ ಆಲೋಚಿಸಿ ಅನೇಕ ಮಂದಿ ಸುತರಿರುವ ನನಗೆ ಇವಳು

ಬಹುಪುತ್ರಸ್ಯ ಚೈಕಾ ಸಾ ಸರ್ವಲಕ್ಷಣಲಕ್ಷಿತಾ ।
ತಸ್ಮಾತ್ಕರ್ಣೋತ್ಪಲಾ ನಾಮ ಜಾಯತಾಂ ದ್ವಿಜಸತ್ತಮಾಃ ॥ ೭ ॥
ಕೃತನಾಮಾಥ ಸಾ ಬಾಲಾ ವೃದ್ಧಿಂ ಯಾತಿ ದಿನೇ ದಿನೇ ।
ಆಹ್ಲಾದಕಾರಿಣೀ ನಿತ್ಯಂ ಕಲಾ ಚಾಂದ್ರಮಸೀ ಯಥಾ ॥ ೮ ॥
ಅಥ ಸಾ ಕ್ರಮಶಃ ಪ್ರಾಪ್ತಾ ಯೌವನಂ ಬಂಧುಲಾಲಿತಾ ।
ಹಸ್ತಾದ್ಧಸ್ತಂ ಪ್ರಗಚ್ಛಂತೀ ಸರ್ವೇಷಾಂ ದ್ವಿಜಸತ್ತಮಾಃ ॥ ೯ ॥
ಅಥ ತಾಂ ಯೌವನೋಪೇತಾಂ ದೃಷ್ಟ್ವಾ ಸ ಪೃಥಿವೀಪತಿಃ ।
ಚಿಂತಯಾಮಾಸ ಚಿತ್ತೇನ ಕಸ್ಯೈ ಮಾಂ ಪ್ರದದಾಮ್ಯಹಂ ॥ ೧೦ ॥
ನ ತಸ್ಯಾಃ ಸದೃಶಃ ಕಶ್ಚಿದ್ವರೋಽತ್ರ ಧರಣೀತಲೇ ।
ನ ಸ್ವರ್ಗೇ ನ ಚ ಪಾತಾಲೇ ಕಿಂ ಕೃತ್ಯಂ ಮೇಽಧುನಾ ಭವೇತ್ ॥ ೧೧ ॥
ಸ ಏವಂ ಬಹುಧಾ ಧ್ಯಾತ್ವಾ ತದರ್ಥಂ ಪೃಥಿವೀಪತಿಃ ।
ನಿಶ್ಚಯಂ ಪ್ರಾಕರೋಚ್ಚಿತ್ತೇ ಪ್ರಷ್ಟವ್ಯೋಽತ್ರ ಪಿತಾಮಹಃ ॥ ೧೨ ॥
ಮಯಾಽದ್ಯ ವಿಷಯೇ ಚಾಽಸ್ಮಿನ್ ಸ ದೇವಃ ಪ್ರೇರಯಿಷ್ಯತಿ ।
ತಸ್ಮೈ ಪುತ್ರೀಂ ಪ್ರದಾಸ್ಯಾಮಿ ನಾಽನ್ಯಸ್ಮೈ ವೈ ಕಥಂಚನ ॥ ೧೩ ॥
ಸ ಏವಂ ನಿಶ್ಚಯಂ ಕೃತ್ವಾ ತಾಮಾದಾಯ ತತಃ ಪರಂ ।
ಬ್ರಹ್ಮಲೋಕಂ ಜಗಾಮಾಽಥ ಪ್ರಷ್ಟುಂ ತಸ್ಯಾಃ ಕೃತೇ ವರಂ ॥ ೧೪ ॥

---

ಕಿವಿಯ ಅಲಂಕಾರವಾದ ಕನ್ನೈದಿಲೆ ಹೂವಿನಂತಿರುವುದರಿಂದ ಕರ್ಣೋತ್ಪಲೆ ಯೆಂದು ಹೆಸರನ್ನು ಪಡೆಯಲಿ ಎಂದನು.

೮. ಹೀಗೆ ಹೆಸರನ್ನು ಪಡೆದ ಅವಳು ಪ್ರತಿದಿನವೂ ಚಂದ್ರಕಳೆಯಂತೆ ಆನಂದವನ್ನುಂಟುಮಾಡುತ್ತ ಬೆಳೆದಳು.

೯. ದ್ವಿಜವರ್ಯರೆ! ಅನಂತರ ಅವಳು ಸಮಸ್ತ ಬಂಧುಗಳ ಕೈಯಿಂದ ಕೈಗೆ ಹೋಗುತ್ತ ಅವರ ಲಾಲನೆಯಿಂದ ಯೌವನವನ್ನು ಪಡೆದಳು.

೧೦. ಅನಂತರ ಆ ದೊರೆಯು ಯುವತಿಯಾದ ಅವಳನ್ನು ನೋಡಿ ಯಾರಿಗೆ ಇವಳನ್ನು ದಾನ ಮಾಡಲಿ ಎಂದು ಮನಸ್ಸಿನಲ್ಲಿ ಚಿಂತಿಸಿದನು.

೧೧. ಇವಳಿಗೆ ಸರಿಯಾದ ವರನು ಭೂಮಿ, ಸ್ವರ್ಗ, ಪಾತಾಳಗಳಲ್ಲಿ ಇರುವುದಿಲ್ಲ. ಈಗ ನಾನೇನು ಮಾಡಲಿ.

೧೨–೧೩. ಆ ದೊರೆಯು ಹೀಗೆ ಮಗಳಿಗಾಗಿ ಚಿಂತಿಸಿ ಈ ವಿಷಯದಲ್ಲಿ ಬ್ರಹ್ಮನನ್ನೇ ಕೇಳಬೇಕು. ಅವನು ಈ ವಿಷಯದಲ್ಲಿ ದಾರಿ ತೋರಿಸುವನು. ಅವನಿಗೆ ನನ್ನ ಪುತ್ರಿಯನ್ನು ಕೊಡುವೆನು. ಇತರರಿಗೆ ಕೊಡುವುದಿಲ್ಲ.

೧೪. ಅವನು ಹೀಗೆ ನಿಶ್ಚಯಿಸಿ ಅವಳನ್ನು ಕರೆದುಕೊಂಡು ವರನನ್ನು ಕೇಳುವುದಕ್ಕಾಗಿ ಬ್ರಹ್ಮಲೋಕಕ್ಕೆ ಹೋದನು.

ಅಥ ಯಾವತ್ಸ ಸಂಪ್ರಾಪ್ತೋ ಬ್ರಹ್ಮಲೋಕಂ ನರೇಶ್ವರಃ ।
ತಾವತ್ಸಂಧ್ಯಾ ಸಮುತ್ಪನ್ನಾ ಬ್ರಾಹ್ಮೀ ಬ್ರಾಹ್ಮಣಸತ್ತಮಾಃ ॥ ೧೫ ॥
ಏತಸ್ಮಿನ್ನಂತರೇ ಬ್ರಹ್ಮಾ ಸಾಯಂತನಕ್ರಿಯೋತ್ಸುಕಃ ।
ಉಪವಿಷ್ಟಃ ಸಮಾಧಿಸ್ಥಸ್ತತ್ಕಾಲಂ ಸಮುಪದ್ಯತ ॥ ೧೬ ॥
ಸತ್ಯಸ್ಸಂಧೋಽಪಿ ತಂ ದೃಷ್ಟ್ವಾ ಸಮಾಧಿಸ್ಥಂ ಪಿತಾಮಹಂ ।
ಸಮಾಧ್ಯಂತಂ ಪ್ರತೀಕ್ಷನ್ ಸ ಉಪವಿಷ್ಟಃ ಸಮೀಪತಃ ॥ ೧೭ ॥
ತತೋ ವಿಲೋಕ್ಯಚಾಽತ್ಮಾನಮಾತ್ಮನಿ ಪ್ರಪಿತಾಮಹಃ ।
ಪದ್ಮೇ ಪ್ರವರ್ತಿತೇ ಸಮ್ಯಗಷ್ಟಪತ್ರೇ ಹೃದಿ ಸ್ಥಿತೇ ॥ ೧೮ ॥
ಕರ್ಣಿಕಾಮಧ್ಯಗಂ ದೀಪ್ತಂ ಬಹುವರ್ಣಮತಿಸ್ಥಿರಂ ।
ಆನಂದಾಶ್ರುಪರಿಕ್ಲಿನ್ನವದನಃ ಪುಲಕಾಂಕಿತಃ ॥ ೧೯ ॥
ತತಃ ಆಚಮ್ಯ ಪ್ರಕ್ಷಾಲ್ಯ ಚರಣೌ ಸರ್ವತೋ ದಿಶಂ ।
ಅಪಶ್ಯತ್ಪ್ರಣತಃ ಸರ್ವೈರ್ಬ್ರಹ್ಮಲೋಕನಿವಾಸಿಭಿಃ ॥ ೨೦ ॥
ಏತಸ್ಮಿನ್ನಂತರೇ ರಾಜಾ ತಾಮಾದಾಯ ಶುಭಾನನಾಂ ।
ನಮಸ್ಕೃತ್ಯ ತಯಾ ಸಾರ್ಧಂ ತತಃ ಪ್ರೋವಾಚ ಸಾದರಂ ॥ ೨೧ ॥
ಅಹಂ ದೇವ ಸಮಾಯಾತೋ ಮರ್ತ್ಯಲೋಕಾತ್ತವಾಂತಿಕಂ ।
ಸತ್ಯಸಂಧೋ ಮಹೀಪಾಲ ಆನರ್ತಭುವಿ ವಿಶ್ರುತಃ ॥ ೨೨ ॥

---

೧೫. ಅನಂತರ ಆ ದೊರೆಯು ಬ್ರಹ್ಮಲೋಕಕ್ಕೆ ಹೋಗುವಷ್ಟರಲ್ಲಿ ಬ್ರಹ್ಮನ ಸಂಧ್ಯಾಕಾಲವು ಪ್ರಾಪ್ತವಾಯಿತು.

೧೬. ಇಷ್ಟರಲ್ಲಿ ಬ್ರಹ್ಮನು ಸಾಯಂಕಾಲದ ಅನುಷ್ಠಾನದಲ್ಲಿ ಉತ್ಸುಕನಾಗಿ ಸಮಾಧಿನಿರತನಾದನು.

೧೭. ಸತ್ಯಸಂಧನು ಸಮಾಧಿನಿರತನಾದ ಬ್ರಹ್ಮನನ್ನು ಕಂಡು ಸಮಾಧಿಯ ಕೊನೆಯನ್ನು ನಿರೀಕ್ಷಿಸುತ್ತ ಸಮೀಪದಲ್ಲಿ ಕುಳಿತನು.

೧೮–೧೯. ಅನಂತರ ಬ್ರಹ್ಮನು ತನ್ನ ಹೃದಯದಲ್ಲಿ ಅಷ್ಟದಳ ಪದ್ಮದಲ್ಲಿ ಅನೇಕ ಬಣ್ಣವುಳ್ಳನನೂ, ಅತಿ ಸ್ಥಿರನೂ ಆದ ಆತ್ಮನನ್ನು ಕಂಡು ಆನಂದ ಬಾಷ್ಪವನ್ನು ಸುರಿಸುತ್ತ ರೋಮಾಂಚಗೊಂಡನು.

೨೦. ತರುವಾಯ ಬ್ರಹ್ಮನು ಕಾಲುಗಳನ್ನು ತೊಳೆದುಕೊಂಡು ಬ್ರಹ್ಮ ಲೋಕದ ಸಮಸ್ತ ಜನರಿಂದ ನಮಸ್ಕೃತನಾಗಿ ಸಕಲ ದಿಕ್ಕುಗಳನ್ನೂ ನೋಡಿದನು.

೨೧. ಈ ಸಮಯದಲ್ಲಿ ಆ ದೊರೆಯು ಆ ಕನ್ಯೆಯನ್ನು ಕರೆದುಕೊಂಡು ಅವಳೊಡನೆ ಬ್ರಹ್ಮನಿಗೆ ವಂದಿಸಿ ಪ್ರೀತಿಯಿಂದ ಹೀಗೆಂದನು.

೨೨. "ಸ್ವಾಮಿ! ಆನರ್ತದೇಶದ ದೊರೆಯಾದ ಸತ್ಯಸಂಧನೆಂಬ ನಾನು ಭೂಲೋಕದಿಂದ ನಿನ್ನ ಸನ್ನಿಧಿಗೆ ಬಂದಿದ್ದೇನೆ.

ಇಯಂ ಕರ್ಣೋತ್ಪಲಾ ನಾಮ ಮಮ ಕನ್ಯಾ ಸುಶೋಭನಾ ।
ಅಸ್ಯಾ ಭುವಿ ಮಯಾ ಲಬ್ಧೋ ನ ಸಮೋಽತ್ರ ಪತಿಃ ಕ್ವಚಿತ್ ॥ ೨೩ ॥
ಸದೃಶಸ್ತೇನ ಚಾಯಾತಸ್ತವ ಪಾರ್ಶ್ವೇ ಸುರೋತ್ತಮ ।
ತಸ್ಮಾನ್ಮೇ ಬ್ರೂಹಿ ಭರ್ತಾರಮಸ್ಯಾ ಯೇನ ದದಾಮ್ಯಹಂ ॥ ೨೪ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ತತಃ ಪ್ರೋವಾಚ ಪದ್ಮಜಃ ।
ವಿಹಸ್ಯ ಸರ್ವದೇವಾನಾಂ ಸಮಾಜೇ ದ್ವಿಜಸತ್ತಮಾಃ ॥ ೨೫ ॥
ಯದಿ ಪೃಚ್ಛಸಿ ಮೇ ಭೂಪ ಕನ್ಯಾಧರ್ಮಪತಿಂ ಪ್ರತಿ ।
ತನ್ನೈಷಾ ಕಸ್ಯಚಿದ್ದೇಯಾ ಸಾಂಪ್ರತಂ ಶೃಣು ಕಾರಣಂ ॥ ೨೬ ॥
ಆತ್ಮಶ್ರೇಣಿಪ್ರಸೂತಾಯ ವಯೋಜ್ಯೇಷ್ಠಾಯ ಭೂಪತೇ ।
ಕನ್ಯಾ ದೇಯಾ ಚ ಧರ್ಮಾಯ ಯಶಸೇ ಕುಲವೃದ್ಧಯೇ ॥ ೨೭ ॥
ಸೇಯಂ ತವ ಸುತಾ ಮರ್ತ್ಯೇ ಜ್ಯೇಷ್ಠಭಾವಂ ಸಮಾಶ್ರಿತಾ ।
ಸರ್ವೇಷಾಂ ಭೂಮಿಪಾಲಾನಾಂ ಯತ್ತತ್ತ್ವಂ ಕಾರಣಂ ಶೃಣು ॥ ೨೮ ॥
ಮಮಾಂತಿಕಂ ಪ್ರಪನ್ನಸ್ಯ ತವ ಜಾತಂ ಯುಗತ್ರಯಂ ।
ಅತೀತಾ ಭೂತಲೇ ಮರ್ತ್ಯಾ ಯೇ ದೃಷ್ಟಾಃ ಪ್ರಾಕ್ತ್ವಯಾ ನೃಪ ॥ ೨೯ ॥

---

೨೩–೨೪. ಸುಂದರಿಯಾದ ಇವಳು ಕರ್ಣೋತ್ಪಲೆಯೆಂಬ ನನ್ನ ಮಗಳು. ಇವಳಿಗೆ ಭೂಲೋಕದಲ್ಲಿ ಎಲ್ಲಿಯೂ ಸರಿಯಾದ ವರನು ಸಿಕ್ಕಲಿಲ್ಲ. ಆದುದರಿಂದ ನಿನ್ನ ಬಳಿಗೆ ಬಂದಿದ್ದೇನೆ. ಇವಳ ವರನಾರೆಂಬುದನ್ನು ಹೇಳು. ಅವರಂತೆ ನಾನು ಇವಳನ್ನು ಅವನಿಗೆ ಕೊಡುತ್ತೇನೆ.''

೨೫. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಬ್ರಹ್ಮನು ಅವನ ಆ ಮಾತನ್ನು ಕೇಳಿ ನಕ್ಕು ಸಕಲ ದೇವತೆಗಳ ಸಭೆಯಲ್ಲಿ ಹೀಗೆಂದನು.

೨೬. "ದೊರೆಯೆ! ನಿನ್ನ ಕನ್ಯೆಯ ಧರ್ಮಪತಿಯು ಯಾರೆಂಬುದನ್ನು ನನ್ನನ್ನು ಕೇಳಿದರೆ ಇವಳನ್ನು ಯಾರಿಗೂ ಕೊಡಕೂಡದೆಂದೇ ನಾನು ಹೇಳುತ್ತೇನೆ. ಇದಕ್ಕೆ ಕಾರಣವನ್ನು ಕೇಳು.

೨೭. ದೊರೆಯೆ! ಕನ್ಯೆಯನ್ನು ತನ್ನ ಜಾತಿಯಲ್ಲಿ ಹುಟ್ಟಿದ ವಯೋಜ್ಯೇಷ್ಠನಾದ ವರನಿಗೆ ಧರ್ಮ, ಯಶಸ್ಸು, ಕುಲವೃದ್ಧಿಗಳಿಗಾಗಿ ದಾನ ಮಾಡಬೇಕು.

೨೮. ನಿನ್ನೀ ಮಗಳು ಭೂಲೋಕದಲ್ಲಿ ಸಮಸ್ತ ರಾಜರಲ್ಲಿ ಜ್ಯೇಷ್ಠಳಾಗಿದ್ದಾಳೆ. ಇದಕ್ಕೆ ಕಾರಣವನ್ನು ಕೇಳು.

೨೯. ನೀನು ನನ್ನ ಬಳಿಗೆ ಬಂದು ಮೂರು ಯುಗಗಳಾದುವು: ನೀನು ಭೂಮಿಯಲ್ಲಿ ನೋಡಿದ ಮನುಷ್ಯರು ಅಳಿದುಹೋಗಿದ್ದಾರೆ.

ಅನ್ಯಾ ಸೃಷ್ಟಿಃ ಸಮುತ್ಪನ್ನಾ ಸಾಂಪ್ರತಂ ಧರಣೀತಲೇ ।
ನ ತ್ವಂ ಜಾನಾಸಿ ಮಾಹಾತ್ಮ್ಯಾನ್ಮಮ ಲೋಕಸಮುದ್ಭವಾತ್ ॥ ೩೦ ॥
ನ ದೇವಾ ಮಾನುಷೀಂ ಭಾರ್ಯಾಂ ಕುರ್ವಂತಿ ಚ ಕಥಂಚನ ।
ಶ್ಲೇಷ್ಮಮೂತ್ರಪುರೀಷಾಣಾಂ ಸಂಸ್ಥಾನಂ ಯಾ ವಿಗರ್ಹಿತಾ ॥ ೩೧ ॥
ತಸ್ಮಾದತ್ರೈವ ತಿಷ್ಠ ತ್ವಂ ಸುತಯಾ ಸಹಿತೋ ನೃಪ ।
ಹಸ್ತ್ಯಶ್ವಾದಿ ಚ ಯತ್ಕಿಂಚಿತ್ತತ್ಸರ್ವಂ ತೇ ಕ್ಷಯಂ ಗತಂ ॥ ೩೨ ॥
ಪುತ್ರಾ ಪೌತ್ರಾಸ್ತಥಾ ಭೃತ್ಯಾ ಯೇ ಚಾಽನ್ಯೇ ಬಾಂಧವಾಸ್ತವ ।
ತೇ ಸರ್ವೇ ನಿಧನಂ ಪ್ರಾಪ್ತಾ ಯೇಽಚಾಽನ್ಯೇ ಭವತೇಕ್ಷಿತಾಃ ॥ ೩೩ ॥
ಸ ತಥೇತಿ ಪ್ರತಿಜ್ಞಾಯ ಸ್ಥಿತಃ ಪಾರ್ಥಿವಸತ್ತಮಃ ।
ಯಾವತ್ತಾವತ್ಸುದುಃಖಾರ್ತಾ ರುದತೀ ಸಾಽಬ್ರವೀತ್ಸುತಾ ॥ ೩೪ ॥
ನಾಽಹಂ ತಾತ ವಸಿಷ್ಯಾಮಿ ಸ್ಥಾನೇಽಸ್ಮಿನ್ ಬ್ರಹ್ಮಸಂಭವೇ ।
ಸಖೀಜನಪರಿತ್ಯಕ್ತಾ ಬಂಧುವರ್ಗವಿನಾಕೃತಾ ॥ ೩೫ ॥
ತಸ್ಮಾದ್ಯಾಸ್ಯಾಮಿ ತತ್ರೈವ ಯತ್ರ ಸಾ ಜನನೀ ಮಮ ।
ತಾಶ್ಚ ಸಖ್ಯಃ ಕೃತಾನಂದಾ ಯಾಭಿಃ ಸಂಕ್ರೀಡಿತಂ ಮಯಾ ॥ ೩೬ ॥
ಭರ್ತ್ರಾ ವಿನಾಕೃತಾ ನಾಽಹಂ ನಯಿಷ್ಯೇ ಕಾಲಸಂಸ್ಥಿತಿಂ ।
ತಸ್ಮಾತ್ತತ್ರ ದ್ರುತಂ ಗಚ್ಛ ಯತ್ರ ಮೇ ಜನನೀ ಸ್ಥಿತಾ ॥ ೩೭ ॥

---

೩೦. ಈಗ ಭೂಮಿಯಲ್ಲಿ ಬೇರೆ ಸೃಷ್ಟಿಯುಂಟಾಗಿದೆ. ನನ್ನ ಲೋಕದ ಮಾಹಾತ್ಮ್ಯದಿಂದ ನೀನು ಅದನ್ನು ತಿಳಿಯುವುದಿಲ್ಲ.

೩೧. ದೇವತೆಗಳು ಕಫ, ಮೂತ್ರ, ಮಲಗಳಿಗೆ ಆಶ್ರಯಳಾಗಿ ನಿಂದ್ಯಳಾದ ಮನುಷ್ಯ ಸ್ತ್ರೀಯನ್ನು ಪತ್ನಿಯನ್ನಾಗಿ ವರಿಸುವುದಿಲ್ಲ.

೩೨. ಅರಸ! ಆದುದರಿಂದ ನೀನು ಮಗಳೊಡನೆ ಇಲ್ಲಿಯೇ ಇರು. ನಿನ್ನ ಆನೆ, ಕುದುರೆ ಮೊದಲಾದುವುಗಳೆಲ್ಲ ನಾಶವಾಗಿವೆ.

೩೩. ಹಾಗೆಯೇ ಮಕ್ಕಳು, ಮೊಮ್ಮಕ್ಕಳು, ಭೃತ್ಯರು ಬಾಂಧವರು, ನೀನು ನೋಡಿದ ಇನ್ನೂ ಇತರರು ಇವರೆಲ್ಲ ಮೃತರಾಗಿದ್ದಾರೆ."

೩೪. ದೊರೆಯು ಹಾಗೆಯೇ ಆಗಲೆಂದು ಒಪ್ಪಿ ಅಲ್ಲಿರಲು ಅತ್ಯಂತ ದುಃಖಗೊಂಡ ಅವನ ಮಗಳು ಅಳುತ್ತ ಇಂತೆಂದಳು.

೩೫. "ಅಪ್ಪ! ನಾನು ಸಖಿಯರನ್ನೂ, ಬಂಧುಬಳಗದವರನ್ನೂ ಅಗಲಿ ಈ ಬ್ರಹ್ಮಲೋಕದಲ್ಲಿ ವಾಸಮಾಡಲಾರೆನು.

೩೬. ಆದುದರಿಂದ ನನ್ನ ತಾಯಿಯೂ, ನನ್ನೊಡನೆ ಆನಂದದಿಂದ ಆಡುತ್ತಿದ್ದ ಸಖಿಯರೂ ಇರುವ ಭೂಲೋಕಕ್ಕೆ ಹೋಗುವೆನು.

೩೭. ಪತಿಯಿಲ್ಲದೆ ನಾನು ಕಾಲವನ್ನು ಕಳೆಯಲಾರೆನು. ಆದುದರಿಂದ ನನ್ನ ತಾಯಿಯಿರುವ ಭೂಲೋಕಕ್ಕೆ ತ್ವರೆಯಾಗಿ ಹೊರಡು."

ತಸ್ಯಾಸ್ತದ್ವಚನಂ ಶ್ರುತ್ವಾ ಸ್ನೇಹಾರ್ದ್ರೇಣ ಸ ಚೇತಸಾ ।
ತಾಮಾದಾಯ ತತಃ ಪ್ರಾಪ್ತಃ ಸ್ವಂ ದೇಶಂ ಪಾರ್ಥಿವೋತ್ತಮಃ ॥ ೩೮ ॥
ಯಾವತ್ಪಶ್ಯತಿ ತಾವತ್ಸ ಸ್ಥಲಸ್ಥಾನೇ ಜಲಾಶಯಾನ್ ।
ಜಲಸ್ಥಾನೇಷು ಸಂಜಾತಾಃ ಸ್ಥಲಸಂಘಾಃ ಸುದುರ್ಗಮಾಃ ॥ ೩೯ ॥
ಅನ್ಯೇ ಲೋಕಾಸ್ತಥಾ ಧರ್ಮಾಸ್ತೇಷಾಂ ಮಧ್ಯೇ ವ್ಯವಸ್ಥಿತಾಃ ।
ಪೃಚ್ಛನ್ನಪಿ ನ ಜಾನಾತಿ ಸಂಬಂಧಂ ಕೇನಚಿತ್ಸ ಹ ॥ ೪೦ ॥
ತಥಾ ಮರ್ತ್ಯಾಽನಿಲಸ್ಪೃಷ್ಟಸ್ತತ್ಕ್ಷಣಾತ್ಸ ಮಹೀಪತಿಃ ।
ಸ ಚ ಕನ್ಯಾ ಜರಾಗ್ರಸ್ತಾ ಸಂಜಾತಾ ಶ್ವೇತಮೂರ್ಧಜಾ ॥ ೪೧ ॥
ವಲಿಭಿಃ ಪೂರ್ಣಿತಾಂಗೀ ಚ ಶೀರ್ಣದಂತಾ ಕುಚಚ್ಯುತಾ ।
ಅಮನೋಜ್ಞಾ ವಿರೂಪಾಂಗೀ ಚಿಪಿಟಾಕ್ಷೀ ದ್ವಿಜೋತ್ತಮಾಃ ॥ ೪೨ ॥
ಸೋಽಪಿ ರಾಜಾ ತಥಾ ಭೂತೋ ವೇಪಮಾನಃ ಪದೇ ಪದೇ ।
ಪಪ್ರಚ್ಛ ಭೂಪತಿಃ ಕೋಽತ್ರ ದೇಶಃ ಕೋಽಯಂ ಪುರಂ ಚ ಕಿಂ ॥ ೪೩ ॥
ಅಥ ಪ್ರೋಚುರ್ಜನಾಸ್ತಸ್ಯ ದೇಶ ಆನರ್ತ ಇತ್ಯಯಂ ।
ಅಯಂ ಭೂಪೋಽತ್ರ ವಿಖ್ಯಾತಃ ಸುಧರ್ಮಜ್ಞೋ ಬೃಹದ್ಬಲಃ ॥ ೪೪ ॥
ಏತತ್ಪ್ರಾಪ್ತಿಪುರಂ ನಾಮ ಏಷಾ ಸಾಭ್ರಮತೀ ನದೀ ।
ಗರ್ತಾತೀರ್ಥಮಿದಂ ಪುಣ್ಯಮೇತಸ್ಯಾಃ ಪರಿಕೀರ್ತಿತಂ ॥ ೪೫ ॥

---

೩೮. ಅರಸನು ಸುತೆಯ ಆ ಮಾತನ್ನು ಕೇಳಿ ದಯಾಪೂರ್ಣವಾದ ಮನಸ್ಸಿನಿಂದ ಅವಳನ್ನು ಕರೆದುಕೊಂಡು ತನ್ನ ದೇಶಕ್ಕೆ ಮರಳಿದನು.

೩೯. ಅವನು ಅಲ್ಲಿ ಆಗ ನೆಲವಿದ್ದ ಸ್ಥಳದಲ್ಲಿ ಕೊಳಗಳೂ, ಕೊಳಗಳಿದ್ದ ಸ್ಥಳದಲ್ಲಿ ದುರ್ಗಮವಾದ ನೆಲವೂ ಇರುವುದನ್ನು ಕಂಡನು.

೪೦. ಹಾಗೆಯೇ ಆ ಸ್ಥಳದಲ್ಲಿ ಬೇರೆ ಜನರೂ, ಧರ್ಮಗಳೂ ನೆಲೆಗೊಂಡಿದ್ದುವು. ಕೇಳಿದರೂ ಯಾರೊಡನೆಯೂ ತನಗೆ ಸಂಬಂಧವಿರುವುದನ್ನರಿಯಲಿಲ್ಲ.

೪೧–೪೨. ಅವನು ಕೂಡಲೆ ಭೂಲೋಕದ ಗಾಳಿಯ ಸ್ಪರ್ಶವನ್ನು ಹೊಂದಿದನು. ಆ ಕನ್ಯೆಯೂ ಮುದಿಯಾಗಿ ನರೆತ ಕೂದಲುಳ್ಳವಳೂ, ಸುಕ್ಕುಗಳುಳ್ಳವಳೂ, ಉದುರಿದ ಹಲ್ಲುಗಳುಳ್ಳವಳೂ ಜೋತುಬಿದ್ದ ಕುಚಗಳುಳ್ಳವಳೂ, ಚಪ್ಪಟೆ ಕಣ್ಣುಗಳುಳ್ಳವಳೂ, ಕುರೂಪಿಯೂ ಆದಳು.

೪೩. ಆ ರಾಜನೂ ಪ್ರತಿಹೆಜ್ಜೆಯಲ್ಲಿಯೂ ನಡುಗುತ್ತ, "ಇಲ್ಲಿ ದೊರೆ ಯಾರು ? ಈ ದೇಶ, ಈ ಪಟ್ಟಣಗಳು ಯಾವುವು ?" ಎಂದು ಕೇಳಿದನು.

೪೪. ಅಲ್ಲಿಯ ಜನರು ಹೀಗೆಂದರು. "ಇದು ಆನರ್ತವೆಂಬ ದೇಶವು. ಇವನು ಧರ್ಮವನ್ನರಿತ ಬೃಹದ್ಬಲ ರಾಜನು.

೪೫. ಇದು ಪ್ರಾಪ್ತಿಯೆಂಬ ಪಟ್ಟಣವು, ಇದು ಸಾಭ್ರಮತೀ ನದಿಯು, ಇದು ಪವಿತ್ರವಾದ ಗರ್ತಾತೀರ್ಥವು.

ಯುತ್ರೈತೇ ಮುನಯಃ ಶಾಂತಾ ದಾಂತಾಶ್ಚಾಷ್ಟಗುಣೇ ರತಾಃ ।
ತಪೋರತಾ ಮಹಾಭಾಗಾಃ ಸ್ನಾನ ಜಪ್ಯಪರಾಯಣಾಃ ॥ ೪೬ ॥
ತತಃ ಸ ತು ಸಮಾಕರ್ಣ್ಯ ರುರೋಧ ಕೃತನಿಃಸ್ವನಃ ।
ಸ್ವಸುತಾಂ ತಾಂ ಸಮಾಲಿಂಗ್ಯ ದುಃಖಶೋಕಸಮನ್ವಿತಃ ॥ ೪೭ ॥
ತೌ ಚ ವೃದ್ಧತಮೌ ದೃಷ್ಟ್ವಾ ರುದಂತೌ ಕೃಪಯಾನ್ವಿತಾಃ ।
ಸರ್ವೇ ಲೋಕಾಃ ಸಮಾಜಗ್ಮುಃ ಪಪ್ರಚ್ಛುಶ್ಚ ಸುದುಃಖಿತಾಃ ॥ ೪೮ ॥
ಕಿಂ ತ್ವಂ ವೃದ್ಧ ಸುದುಃಖಾರ್ತಃ ಪ್ರರೋದಿಷಿ ನಿರರ್ಗಲಂ ।
ಅನಯಾ ವೃದ್ಧಯಾ ಸಾರ್ಧಂ ತಸ್ಮಾನ್ನಃ ಕಾರಣಂ ವದ ॥ ೪೯ ॥
ಕಿಂ ತೇ ನಷ್ಟಃ ಪ್ರಿಯಃ ಕಶ್ಚಿತ್ಕಿಂ ವಾ ಜಾತೋ ಧನಕ್ಷಯಃ ।
ಪರಾಭೂತೋಽಸಿ ವಾ ಕಿಂ ತ್ವಂ ಕೇನಾಽಪಿ ವದ ಮಾ ಚಿರಂ ॥ ೫೦ ॥
ಧರ್ಮಜ್ಞೋ ದುಷ್ಟಹಂತಾ ಚ ಸಾಧೂನಾಂ ಪಾಲನೇ ರತಃ ।
ರಾಜಾ ಬೃಹದ್ಬಲೋಽಸ್ಮಾಕಂ ಯೇನ ತೇ ಕುರುತೇ ಸುಖಂ ॥ ೫೧ ॥

ಸತ್ಯಸಂಧ ಉವಾಚ :—

ಆನರ್ತಾಽಧಿಪತಿಶ್ಚಾಽಹಂ ಸತ್ಯಸಂಧ ಇತಿ ಸ್ಮೃತಃ ।
ಮಮ ಕರ್ಣೋತ್ಪಲಾ ನಾಮ ಸುತೇಯಂ ದಯಿತಾ ಸದಾ ॥ ೫೨ ॥

---

೪೬. ಇಲ್ಲಿರುವ ಈ ಮುನಿಗಳು ಶಾಂತರೂ, ಜಿತೇಂದ್ರಿಯರೂ, ಅಷ್ಟಗುಣ ಭರಿತರೂ, ತಪಸ್ವಿಗಳೂ, ಪುಣ್ಯವಂತರೂ, ಸ್ನಾನ ಜಪನಿರತರೂ ಆಗಿರುವರು."

೪೭. ಅನಂತರ ಅವನು ಈ ಮಾತನ್ನು ಕೇಳಿ ತನ್ನ ಆ ಮಗಳನ್ನು ತಬ್ಬಿ ಕೊಂಡು ದುಃಖದಿಂದ ಗಟ್ಟಿಯಾಗಿ ಅತ್ತನು.

೪೮. ಹೀಗೆ ಅಳುತ್ತಿರುವ ಆ ಮುದುಕನನ್ನು ಕಂಡು ಸಮಸ್ತ ಜನರೂ ಅಲ್ಲಿಗೆ ಬಂಧು ದುಃಖದಿಂದ ಅವನನ್ನು ಕುರಿತು ಹೀಗೆ ಪ್ರಶ್ನಿಸಿದರು.

೪೯. "ಮುದುಕ! ನೀನು ಈ ಮುದುಕಿಯೊಡನೆ ಏತಕ್ಕೆ ಹೀಗೆ ಗೋಳಾಡು ತ್ತಿರುವೆ. ಇದಕ್ಕೆ ಕಾರಣವನ್ನು ಹೇಳು.

೫೦. ನಿನಗೆ ಪ್ರಿಯನಾದ ಯಾವನಾದರೂ ಮೃತನಾದನೆ? ನಿನ್ನ ಹಣಗಳು ನಷ್ಟವಾದುವೆ? ಯಾರಾದರೂ ನಿನ್ನನ್ನು ತಿರಸ್ಕರಿಸಿದರೆ? ಶೀಘ್ರವಾಗಿ ಹೇಳು.

೫೧. ಹಾಗೆ ತಿಳಿಸಿದರೆ ಧರ್ಮಜ್ಞನೂ, ದುಷ್ಟನಾಶಕನೂ, ಸಜ್ಜನ ಪಾಲಕನೂ ಆದ ಬೃಹದ್ಬಲನು ನಿನಗೆ ಸೌಖ್ಯವನ್ನುಂಟುಮಾಡುವನು."

೫೨. ಸತ್ಯಸಂಧನು ಹೇಳುತ್ತಾನೆ:—ಜನರೆ! ನಾನು ಆನರ್ತದೇಶದ ಒಡೆಯನಾದ ಸತ್ಯಸಂಧನು, ಇವಳು ಕರ್ಣೋತ್ಪಲೆಯೆಂಬ ನನ್ನ ಪ್ರಿಯ ಸುತೆಯು.

ಸೋಽಹಮಸ್ಯಾಃ ಪ್ರದಾನಾರ್ಥಂ ಬ್ರಹ್ಮಲೋಕಮಿತೋ ಗತಃ ।
ಪ್ರಷ್ಟುಂ ಪಿತಾಮಹಂ ದೇವಂ ಸ್ಥಿತಸ್ತತ್ರ ಮುಹೂರ್ತವತ್ ॥ ೫೩ ॥
ತತೋ ಭೂಯಃ ಸಮಾಯಾತೋ ಯಾವತ್ಪಶ್ಯಾಮಿ ಭೂತಲಂ ।
ತಾವದ್ವಿಲೋಮತಾಂ ಪ್ರಾಪ್ತಂ ಸರ್ವಂ ನೋ ವೇದ್ಮಿ ಕಿಂಚನ ॥ ೫೪ ॥
ತಚ್ಛ್ರುತ್ವಾ ತೇ ಜನಾ ಗತ್ವಾ ವಿಸ್ಮಯೋತ್ಫುಲ್ಲಲೋಚನಾಃ ।
ಬೃಹದ್ಬಲಾಯ ತತ್ಸರ್ವಮಾಚಖ್ಯುಸ್ತುಷ್ಟಿಸಂಯುತಾಃ ॥ ೫೫ ॥
ಸೋಽಪಿ ತತ್ಸರ್ವಮಾಕರ್ಣ್ಯ ತತಃ ಶೀಘ್ರತರಂ ಗತಃ ।
ಪದ್ಭ್ಯಾಮೇವ ಸ್ಥಿತೋ ಯತ್ರ ಸತ್ಯಸಂಧೋ ಮಹೀಪತಿಃ ॥ ೫೬ ॥
ತತಸ್ತಂ ಪ್ರಣಿಪತ್ಯೋಚ್ಚೈಃ ಕೃತಾಂಜಲಿಪುಟಃ ಸ್ಥಿತಃ ।
ಸ್ವಾಗತಂ ತೇ ಮಹೀಪಾಲ ಭೂಯಃ ಸುಸ್ವಾಗತಂ ಚ ತೇ ॥ ೫೭ ॥
ಇದಂ ರಾಜ್ಯಂ ನಿಜಂ ಭೂಯೋ ಮಯಾಭೃತ್ಯೇನ ಸಾದರಂ ।
ಕುರುಷ್ವ ಸ್ವೇಚ್ಛಯಾ ದೇಹಿ ದಾನಾನಿ ವಿವಿಧಾನಿ ಚ ॥ ೫೮ ॥
ತತಸ್ತಂ ಚ ಸಮಾಲಿಂಗ್ಯ ಶಿರಸ್ಯಾಘ್ರಾಯ ಚಾಽಸಕೃತ್ ।
ಉವಾಚಾಽಶ್ರುಪರಿಕ್ಲಿನ್ನವದನೋ ಗದ್ಗದಾಕ್ಷರಂ ॥ ೫೯ ॥

---

೫೩. ಆ ನಾನು ಇವಳಿಗೆ ಮದುವೆಮಾಡುವುದಕ್ಕಾಗಿ ವರನನ್ನು ತೋರಿಸೆಂದು ಬ್ರಹ್ಮನನ್ನು ಕೇಳುವುದಕ್ಕೋಸ್ಕರ ಇಲ್ಲಿಂದ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಮುಹೂರ್ತಕಾಲ ಇದ್ದೆನು.

೫೪. ತರುವಾಯ ಭೂಮಿಗೆ ಬಂದು ನೋಡುವಷ್ಟರಲ್ಲಿ ಎಲ್ಲವೂ ವ್ಯತ್ಯಾಸಗೊಂಡುದುದರಿಂದ ಯಾವುದನ್ನೂ ಈಗ ತಿಳಿಯುವುದಿಲ್ಲ.

೫೫. ಆ ಜನರು ಅದನ್ನು ಕೇಳಿ ಆಶ್ಚರ್ಯಗೊಂಡು ಬೃಹದ್ಬಲನಿಗೆ ಅದನ್ನೆಲ್ಲ ಸಂತೋಷದಿಂದ ಹೇಳಿದರು.

೫೬. ಆ ಬೃಹದ್ಬಲನು ಆ ಸಮಾಚಾರವನ್ನೆಲ್ಲ ಕೇಳಿ ಸತ್ಯಸಂಧ ರಾಜನ ಹತ್ತಿರಕ್ಕೆ ಪಾದಚಾರಿಯಾಗಿ ಶೀಘ್ರವಾಗಿ ಹೋದನು.

೫೭. ಅವನಿಗೆ ನಮಸ್ಕರಿಸಿ ಕೈಮುಗಿದುಕೊಂಡು, "ದೊರೆಯೆ! ನಿನಗೆ ಸ್ವಾಗತ. ಸುಸ್ವಾಗತ.

೫೮. ನೀನು ನಿನ್ನೀ ರಾಜ್ಯವನ್ನು ಸೇವಕನಾದ ನನ್ನೊಡನೆ ಮರಳಿ ಆಳು. ಇಷ್ಟಬಂದಂತೆ ನಾನಾ ದಾನಗಳನ್ನು ಕೊಡು" ಎಂದನು.

೫೯. ಬಳಿಕ ಆ ಸತ್ಯಸಂಧನು ಬೃಹದ್ಬಲನನ್ನು ಆಲಿಂಗಿಸಿ ಅನೇಕಾವೃತ್ತಿ ತಲೆಯನ್ನು ಆಘ್ರಾಣಿಸಿ ಕಣ್ಣೀರನ್ನು ಸುರಿಸುತ್ತ ಗದ್ಗದ ಧ್ವನಿಯಿಂದ ಇಂತೆಂದನು.

ವತ್ಸ ಚೀರ್ಣಂ ಮಯಾ ರಾಜ್ಯಂ ದಾನಂ ದತ್ತಂ ಪೃಥಗ್ವಿಧಂ ।
ವಾಜಿಮೇಧಮುಖ್ಯೈರ್ಯಜ್ಞೈರಿಷ್ಟಂ ಸಂಪೂರ್ಣದಕ್ಷಿಣೈಃ ॥ ೬೦ ॥
ತಸ್ಮಾತ್ತಪಶ್ಚರಿಷ್ಯಾಮಿ ಸುತಯಾ ಚಾಽನಯಾ ಸಹ ।
ಯಥೈಷಾ ಲಭತೇ ಭೂಯಸ್ತಾರುಣ್ಯಂ ಪ್ರಾಕ್ತನಂ ಶುಭಂ ॥ ೬೧ ॥

ಬೃಹದ್ಬಲ ಉವಾಚ :—

ಪಾರಂಪರ್ಯೇಣ ರಾಜೇಂದ್ರ ಮಯೈತತ್ಸಕಲಂ ಶ್ರುತಂ ।
ಸತ್ಯಸಂಧೋ ಮಹೀಪಾಲಃ ಕನ್ಯಾಮಾದಾಯ ನಿರ್ಗತಃ ॥ ೬೨ ॥
ಪುತ್ರಚಿನ್ನ ಸಮಾಯಾತಃ ಸ ಭೂಯೋಽಪಿ ಪುರೋತ್ತಮೇ ।
ತತಸ್ತತ್ಸಚಿವೈ ರಾಜ್ಯಂ ಪ್ರತಿಪಾಲ್ಯ ಚಿರಂ ನೃಪ ।
ಅಭಿಷಿಕ್ತಸ್ತತಃ ಪುತ್ರಃ ಸುಹಯೋ ನಾಮ ವಿಶ್ರುತಃ ॥ ೬೩ ॥
ತಸ್ಯಾಽಹಂ ಕ್ರಮಶೋ ಜಾತಃ ಸಪ್ತಸಪ್ತತಿಮೋ ವಿಭೋ ।
ಪುರುಷಸ್ತವ ವಂಶಸ್ಯ ಸಮುದ್ಭೂತೋ ಮಹೀಪತಿಃ ॥ ೬೪ ॥
ತಸ್ಮಾದತ್ರೈವ ಕಲ್ಯಾಣೇ ಸ್ಥಾನೇಽಸ್ಮಿನ್ ಮೇಧ್ಯತಾಂ ಗತೇ ।
ಗರ್ತಾತೀರ್ಥೇ ಕುರು ವಿಭೋ ತಪಸ್ತ್ವಮನಯಾ ಸಹ ॥ ೬೫ ॥
ಯೇನ ತೇ ಚರಣೌ ನಿತ್ಯಂ ಪ್ರಣಿಪತ್ಯ ತ್ರಿಸಂಧಿಜಂ ।
ಶ್ರೇಯಃ ಪ್ರಾಪ್ನೋಮ್ಯಸಂದಿಗ್ಧಂ ಪ್ರಸಾದಃ ಕ್ರಿಯತಾಮಿತಿ ॥ ೬೬ ॥

---

೬೦. "ಮಗು! ನಾನು ರಾಜ್ಯವನ್ನು ಸಂಪಾದಿಸಿ ನಾನಾ ವಿಧವಾದ ದಾನಗಳನ್ನು ಕೊಟ್ಟಿದ್ದೇನೆ. ಅಶ್ವಮೇಧ ಮೊದಲಾದ ಯಾಗಗಳನ್ನು ಮಾಡಿ ಸಂಪೂರ್ಣವಾಗಿ ದಕ್ಷಿಣೆಯನ್ನು ಕೊಟ್ಟಿದ್ದೇನೆ.

೬೧. ಈ ನನ್ನ ಮಗಳು ಮೊದಲಿನಂತೆ ಈಗ ತಾರುಣ್ಯವನ್ನು ಹೊಂದುವುದಕ್ಕಾಗಿ ಇವಳೊಡನೆ ತಪವನ್ನಾಚರಿಸುತ್ತೇನೆ."

೬೨–೬೩. ಬೃಹದ್ಬಲನು ಹೇಳುತ್ತಾನೆ:—ರಾಜೇಂದ್ರ! ನಾನು ಪಾರಂಪರ್ಯದಿಂದ ಸತ್ಯಸಂಧನೆಂಬ ರಾಜನು ಕನ್ಯೆಯನ್ನು ಕರೆದುಕೊಂಡು ಎಲ್ಲಿಗೋ ಹೋದವನು ಮರಳಿ ಪಟ್ಟಣಕ್ಕೆ ಬರಲಿಲ್ಲ. ಅದರಿಂದ ಅವನ ಮಂತ್ರಿಗಳು ಬಹಳಕಾಲ ನಿರೀಕ್ಷಿಸಿ ಅವನ ಮಗನಾದ ಸುಹಯನನ್ನು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು ಎಂದು ಕೇಳಿದ್ದೇನೆ.

೬೪–೬೫. ನಾನು ಆ ಸುಹಯನ ವಂಶದಲ್ಲಿ ಕ್ರಮವಾಗಿ ಬಂದ ದೊರೆಗಳಲ್ಲಿ ಎಪ್ಪತ್ತೇಳನೆಯವನಾಗಿದ್ದೇನೆ. ಆದುದರಿಂದ ನೀನು ಪವಿತ್ರವಾದ ಈ ಶುಭ ಗರ್ತಾತೀರ್ಥದಲ್ಲಿ ಇವಳೊಡನೆ ತಪಸ್ಸನ್ನು ಮಾಡು.

೬೬. ಹಾಗೆ ಮಾಡಿದರೆ ನಾನು ತ್ರಿಸಂಧ್ಯೆಗಳಲ್ಲಿ ನಿತ್ಯವೂ ನಿನ್ನ ಪಾದಗಳಿಗೆರಗುತ್ತ ಶ್ರೇಯಸ್ಸನ್ನು ಪಡೆಯುವೆನು. ನಿಶ್ಚಯವಾಗಿಯೂ ಅನುಗ್ರಹ ಮಾಡು.

ಸತ್ಯಸಂಧ ಉವಾಚ:—

ಹಾಟಕೇಶ್ವರಜೇ ಕ್ಷೇತ್ರೇ ಮಯಾಽಽಸೀತ್ಸ್ಥಾಪಿತಂ ಪುರಾ ।
ಲಿಂಗಂ ವೃಷಭನಾಥಸ್ಯ ತಾವದಸ್ತಿ ಸುಪುತ್ರಕ ॥ ೩೭ ॥
ತತ್ತಸ್ಯಾರಾಧನಂ ನಿತ್ಯಂ ಕರಿಷ್ಯಾಮಿ ದಿವಾನಿಶಂ ।
ತಸ್ಮಾತ್ಪ್ರಾಪಯ ಮಾಂ ತತ್ರ ಅನಯಾ ಸುತಯಾ ಸಹ ॥ ೩೮ ॥
ಏವಂ ತಯೋಃ ಪ್ರವದತೋರನ್ಯೋನ್ಯಂ ಭೂಮಿಪಾಲಯೋಃ ।
ಗರ್ತಾತೀರ್ಥಾತ್ಸಮಾಯಾತಾ ಬ್ರಾಹ್ಮಣಾಃ ಕೌತುಕಾನ್ವಿತಾಃ ।
ಶ್ರುತ್ವಾ ಭೂಮಿಪತಿಂ ಪ್ರಾಪ್ತಂ ಚಿರಂತನ ಗುರುಂ ಶುಭಂ ॥ ೩೯ ॥
ತತಃ ಸ ಪಾರ್ಥಿವಸ್ತೇಷಾಂ ದತ್ವಾರ್ಘ್ಯಂ ಪ್ರಾಂಜಲಿಃ ಸ್ಥಿತಃ ।
ಪ್ರೋವಾಚ ಸ್ವರ್ಗವೃತ್ತಾಂತಮಾಸ್ಯತಾಮಿತಿ ಸಾದರಂ ॥ ೨೦ ॥
ಅಥ ತೇ ಬ್ರಾಹ್ಮಣಾಃ ಸರ್ವೇ ಯಥಾ ಜ್ಯೇಷ್ಠಂ ಯಥಾ ಸುಖಂ ।
ಉಪವಿಷ್ಟಾ ನರೇಂದ್ರಸ್ಯ ಚತುರ್ದಿಕ್ಷು ಸುವಿಸ್ಮಿತಾಃ ।
ಪಪ್ರಚ್ಛುಸ್ತಂ ಚ ಭೂಪಾಲಂ ವಾರ್ತಾಂ ಬ್ರಹ್ಮಗೃಹೋದ್ಭವಾಂ ॥ ೨೧ ॥
ಯಥಾ ಸ ತತ್ರ ನಿರ್ಯಾತ ಆಗತಶ್ಚ ಯಥಾ ಪುರಾ ।
ಆಲಾಪಾಃ ಪದ್ಮಯೋನೇಶ್ಚ ಯಥಾ ಜಾತಾಸ್ತ್ವನೇಕಶಃ ॥ ೨೨ ॥

---

೩೭. ಸತ್ಯಸಂಧನು ಹೇಳುತ್ತಾನೆ:—ಮಗು ! ನಾನು ಹಿಂದೆ ಹಾಟಕೇಶ್ವರ ಕ್ಷೇತ್ರದಲ್ಲಿ ಮಹೇಶ್ವರನ ಲಿಂಗವನ್ನು ಪ್ರತಿಷ್ಠೆಮಾಡಿರುತ್ತೇನೆ.

೩೮. ಆದುದರಿಂದ ನಿತ್ಯವೂ ಹಗಲು ರಾತ್ರಿ ನಾನು ಅವನನ್ನು ಪೂಜಿಸುತ್ತೇನೆ. ನನ್ನನ್ನು ಇವಳೊಡನೆ ಅಲ್ಲಿಗೆ ಕಳುಹಿಸು.

೩೯. ಹೀಗೆ ಆ ಇಬ್ಬರು ದೊರೆಗಳು ಪರಸ್ಪರ ಮಾತಾಡುತ್ತಿರಲು ಗರ್ತಾತೀರ್ಥದ ಬ್ರಾಹ್ಮಣರು ಬಹುಕಾಲದ ಹಿಂದಿನ ರಾಜನು ಮರಳಿ ಬಂದುದನ್ನು ಕೇಳಿ ಕುತೂಹಲದಿಂದ ಅಲ್ಲಿಗೆ ಬಂದರು.

೨೦. ಅನಂತರ ಆ ರಾಜನು ಅವರಿಗೆ ಅರ್ಘ್ಯವನ್ನಿತ್ತು ಕೈಮುಗಿದು ಕೊಂಡು ಕುಳಿತುಕೊಳ್ಳಿರಿ ಎಂದು ಸ್ವರ್ಗವೃತ್ತಾಂತವನ್ನು ಅವರಿಗೆ ಹೇಳಿದನು.

೨೧. ಆ ಬ್ರಾಹ್ಮಣರೆಲ್ಲ ಜ್ಯೇಷ್ಠಕ್ರಮದಿಂದ ಸುಖವಾಗಿ ಆಶ್ಚರ್ಯದಿಂದ ದೊರೆಯ ನಾಲ್ಕುಕಡೆಯೂ ಕುಳಿತು ಅವನನ್ನು ಕುರಿತು ಬ್ರಹ್ಮಲೋಕದ ಸಮಾಚಾರವನ್ನು ಪ್ರಶ್ನಿಸಿದರು.

೨೨—೨೩. ಆ ಸತ್ಯಸಂಧನು ತಾನು ಬ್ರಹ್ಮಲೋಕಕ್ಕೆ ಹೋದುದು, ಅಲ್ಲಿಂದ ಹಿಂತಿರುಗಿ ಬಂದುದು, ಬ್ರಹ್ಮನೊಡನೆ ಅನೇಕಬಾರಿ ಮಾಡಿದ ಸಂಭಾಷಣೆಗಳು

ತತಃ ಕಥಾಂತಮಾಸಾದ್ಯ ಸತ್ಯಸಂಧೋ ಮಹೀಪತಿಃ ।
ಕಿಂಚಿದಾಸಾದ್ಯ ತಂ ಪ್ರಾಹ ಸಮೀಪಸ್ಥಂ ಬೃಹದ್ಬಲಂ ॥ ೨೩ ॥
ಮಯಾ ಇಷ್ಟಂ ಮಖೈಶ್ಚಿತ್ರೈರನೇಕೈರ್ಭೂರಿದಕ್ಷಿಣೈಃ ।
ದಾನಾನಿ ಚ ವಿಚಿತ್ರಾಣಿ ಯೇಷಾಂ ಸಂಖ್ಯಾ ನ ವಿದ್ಯತೇ ॥ ೨೪ ॥
ಏಕದಾಽಹಂ ಗತಃ ಪುತ್ರ ಚಮತ್ಕಾರಪುರೋತ್ತಮೇ ।
ದೃಷ್ಟಂ ಮಯಾ ಪುರಂ ತಚ್ಚ ಸಮಂತಾದ್ಬ್ರಾಹ್ಮಣೈರ್ವೃತಂ ॥ ೨೫ ॥
ಜಪಸ್ವಾಧ್ಯಾಯಸಂಪನ್ನೈರಗ್ನಿಹೋತ್ರಪರಾಯಣೈಃ ।
ಗೃಹಸ್ಥಧರ್ಮಸಂಪನ್ನೈರ್ಲೋಕದ್ವಯ ಸಮನ್ವಿತೈಃ ॥ ೨೬ ॥
ತತಶ್ಚ ಚಿಂತಿತಂ ಚಿತ್ತೇ ಸ ಧನ್ಯೋ ಮಮ ಪೂರ್ವಜಃ ।
ಯೈರ್ನೈಷೋಪಾರ್ಜಿತಾ ಕೀರ್ತಿಃ ಶಾಶ್ವತೀ ಕ್ಷಯವರ್ಜಿತಾ ॥ ೨೭ ॥
ತಸ್ಮಾದಹಮಪಿ ಸ್ಥಾಪ್ಯ ಪುರಮೀದೃಕ್ ಸಮುಚ್ಛ್ರಿತಂ ।
ಬ್ರಾಹ್ಮಣೇಭ್ಯಃ ಪ್ರದಾಸ್ಯಾಮಿ ತತ್ಕೀರ್ತಿಪರಿವೃದ್ಧಯೇ ॥ ೨೮ ॥
ಏವಂ ಚಿಂತಯಮಾನಸ್ಯ ಮಮ ನಿತ್ಯಂ ಮಹೀಪತೇ ।
ಅನಾಂತರೇಣ ಸಂಜಾತಂ ಬ್ರಹ್ಮಲೋಕಪ್ರಯಾಣಕಂ ॥ ೨೯ ॥
ಏತದೇಕಂ ಹಿ ಮೇ ಚಿತ್ತೇ ಪಶ್ಚಾತ್ತಾಪಕರಂ ಸ್ಥಿತಂ ।
ನಾಽನ್ಯತ್ಕಿಂಚಿನ್ಮಹೀಪಾಲ ಕೃತಕೃತ್ಯಸ್ಯ ಸರ್ವತಃ ॥ ೩೦ ॥

---

ಮೊದಲಾದ ಸಮಸ್ತ ವೃತ್ತಾಂತವನ್ನು ಹೇಳಿ ಮುಗಿಸಿ ಬೃಹದ್ಬಲನ ಹತ್ತಿರಕ್ಕೆ ಹೋಗಿ ಇಂತೆಂದನು.

೨೪. "ನಾನು ಬಹಳ ದಕ್ಷಿಣೆಗಳುಳ್ಳ ಅನೇಕ ಯಾಗಗಳನ್ನು ಮಾಡಿರುವೆನು. ಬಹಳ ದಾನಗಳನ್ನು ಕೊಟ್ಟಿದ್ದೇನೆ. ಅವುಗಳ ಸಂಖ್ಯೆಗಳನ್ನು ಹೇಳಲು ಸಾಧ್ಯವಿಲ್ಲ.

೨೫–೨೬. ಒಂದಾನೊಂದು ದಿನ ನಾನು ಚಮತ್ಕಾರಪುರಕ್ಕೆ ಹೋಗಿ ಜಪ, ವೇದಾಧ್ಯಯನ, ಅಗ್ನಿಹೋತ್ರ, ಗೃಹಸ್ಥಧರ್ಮ, ಐಹಿಕಾಮುಷ್ಮಿಕ ಫಲ ಇವುಗಳಿಂದ ಸಂಪನ್ನರಾದ ಬ್ರಾಹ್ಮಣರು ತುಂಬಿರುವ ಆ ಪಟ್ಟಣವನ್ನು ಕಂಡೆನು.

೨೭. ಅನಂತರ ನಾನು ಮನಸ್ಸಿನಲ್ಲಿ ಈ ಶಾಶ್ವತ ಕೀರ್ತಿಯನ್ನು ಗಳಿಸಿದ ನನ್ನ ಹಿಂದಿನವನು ಧನ್ಯನು ಎಂದಾಲೋಚಿಸಿದೆನು.

೨೮. ಆದುದರಿಂದ ನಾನೂ ಇಂತಹ ಉತ್ತಮ ಪಟ್ಟಣವನ್ನು ನಿರ್ಮಿಸಿ ಆ ಕೀರ್ತಿಯ ವೃದ್ಧಿಗಾಗಿ ಬ್ರಾಹ್ಮಣರಿಗೆ ದಾನ ಮಾಡುವೆನು.

೨೯. ಅರಸ! ನಾನು ಹೀಗೆ ನಿತ್ಯವೂ ಚಿಂತಿಸುತ್ತಿರಲು ಆಕಸ್ಮಿಕವಾಗಿ ಬ್ರಹ್ಮಲೋಕಕ್ಕೆ ಪ್ರಯಾಣಮಾಡಬೇಕಾಯಿತು.

೩೦. ಇದೊಂದು ಮಾತ್ರ ನನ್ನ ಮನಸ್ಸಿಗೆ ಪಶ್ಚಾತ್ತಾಪವನ್ನುಂಟುಮಾಡುತ್ತಿದೆ. ಧನ್ಯನಾದ ನನಗೆ ಬೇರೇನೂ ಇಲ್ಲ.

ತಸ್ಮಾತ್ಪ್ರಾರ್ಥಯ ವಿಪ್ರೇಂದ್ರಾನ್ ಕಾಂಶ್ಚಿದೇಷಾಂ ಮಹಾತ್ಮನಾಂ ।
ಯೇನ ಯಚ್ಛಾಮಿ ಸುಸ್ಥಾನಂ ಕೃತ್ವಾ ತೇಭ್ಯಸ್ತವಾಜ್ಞಯಾ ॥ ೮೧ ॥
ತತಃ ಸ ಪ್ರಾರ್ಥಯಾಮಾಸ ತದರ್ಥಂ ಬ್ರಾಹ್ಮಣೋತ್ತಮಾನ್ ।
ಮಮೋಪರಿ ದಯಾಂ ಕೃತ್ವಾ ಕ್ರಿಯತಾಂ ಭೋ ಪರಿಗ್ರಹಃ ॥ ೮೨ ॥
ಅಸ್ಯ ಭೂಪಸ್ಯ ಸದ್ಭಕ್ತ್ಯಾ ಯಚ್ಛತಃ ಪುರಮುತ್ತಮಂ ।
ಅಹಂ ವಃ ಪಾಲಯಿಷ್ಯಾಮಿ ಸರ್ವೇ ಮದ್ವಂಶಜಾಶ್ಚ ತೇ ॥ ೮೩ ॥
ತತಃ ಕಾಂಶ್ಚಿತ್ಸುಕೃಚ್ಛ್ರೇಣ ಸಮಾನೀಯ ಬೃಹದ್ಬಲಃ ।
ರಾಜ್ಞೇ ನಿವೇದಯಾಮಾಸ ಏತೇಭ್ಯೋ ದೀಯತಾಮಿತಿ ॥ ೮೪ ॥
ತತಃ ಪ್ರಕ್ಷಾಲ್ಯ ಸರ್ವೇಷಾಂ ಪಾದಾನ್ ಸ ಪೃಥಿವೀಪತಿಃ ।
ಸತ್ಯಸಂಧೋ ದದೌ ತೇಭ್ಯಃ ಪುರಾರ್ಥಂ ಭೂಮಿಮುತ್ತಮಾಂ ॥ ೮೫ ॥
ಬೃಹದ್ಬಲಸ್ಯ ಚಾದೇಶಂ ದದೌ ಸಂಪ್ರಸ್ಥಿತಃ ಸ್ವಯಂ ।
ತ್ವಯೈತದ್ಯೋಗ್ಯತಾಂ ನೇಯಂ ಪುರಂ ಪರಪುರಂಜಯ ॥ ೮೬ ॥
ಗತ್ವಾ ಚ ಸ ತಯಾ ಸಾರ್ಧಂ ತತ್ಕ್ಷೇತ್ರಂ ಹಾಟಕೇಶ್ವರಂ ।
ತಲ್ಲಿಂಗಂ ಪ್ರಾಪ್ಯ ಸಂಹೃಷ್ಟಶ್ಚಿರಂ ತೇಪೇ ತಪಸ್ತತಃ ॥ ೮೭ ॥
ಸಾಽಪಿ ಕರ್ಣೋತ್ಪಲಾ ಪ್ರಾಪ್ಯ ಕಿಂಚಿತ್ಪುಣ್ಯಂ ಜಲಾಶಯಂ ।
ತಪಸ್ತೇಪೇ ಪ್ರತಿಷ್ಠಾಪ್ಯ ಗೌರೀಂ ಶ್ರದ್ಧಾಸಮನ್ವಿತಾ ॥ ೮೮ ॥

---

೮೧. ಆದುದರಿಂದ ಮಹಾತ್ಮರಾದ ಈ ಬ್ರಾಹ್ಮಣರಲ್ಲಿ ಕೆಲವರನ್ನು ಬೇಡಿಕೊ. ಅದರಿಂದ ನಾನು ನಿನ್ನ ಅಪ್ಪಣೆಯಂತೆ ಇವರಿಗೆ ಒಳ್ಳೆಯ ಪಟ್ಟಣವನ್ನು ದಾನ ಮಾಡುವೆನು."

೮೨–೮೩. ಅನಂತರ ಬೃಹದ್ಬಲನು ಅವನಿಗಾಗಿ ಬ್ರಾಹ್ಮಣೋತ್ತಮರನ್ನು ಕುರಿತು ನೀವು ನನ್ನಲ್ಲಿ ದಯೆಯಿಟ್ಟು ಭಕ್ತಿಯಿಂದ ಈ ರಾಜನು ಕೊಡುವ ಪಟ್ಟಣವನ್ನು ಸ್ವೀಕರಿಸಿರಿ. ನಾನೂ ನನ್ನ ವಂಶದವರೂ ನಿಮ್ಮನ್ನು ಕಾಪಾಡುತ್ತೇವೆ ಎಂದು ಬೇಡಿಕೊಂಡನು.

೮೪. ತರುವಾಯ ಬೃಹದ್ಬಲನು ಕೆಲವು ಮಂದಿ ಬ್ರಾಹ್ಮಣರನ್ನು ಕಷ್ಟದಿಂದ ಕರೆತಂದು ಇವರಿಗೆ ದಾನ ಮಾಡೆಂದು ರಾಜನಿಗೆ ತಿಳಿಸಿದನು.

೮೫–೮೬. ಸತ್ಯಸಂಧನು ಅವರ ಪಾದಗಳನ್ನು ತೊಳೆದು ಪಟ್ಟಣಕ್ಕಾಗಿ ಉತ್ತಮವಾದ ಭೂಮಿಯನ್ನು ದಾನ ಮಾಡಿದನು. ತಾನು ಹೊರಟುಹೋಗುತ್ತ ಈ ಪಟ್ಟಣವನ್ನು ಉತ್ತಮಗೊಳಿಸೆಂದು ಬೃಹದ್ಬಲನಿಗೆ ಅಪ್ಪಣೆ ಮಾಡಿದನು.

೮೭. ಆ ಸತ್ಯಸಂಧನು ಮಗಳೊಡನೆ ಹಾಟಕೇಶ್ವರಕ್ಷೇತ್ರಕ್ಕೆ ಹೋಗಿ ಮಹೇಶ್ವರಲಿಂಗವನ್ನು ಹೊಂದಿ ಬಹುಕಾಲ ತಪಸ್ಸನ್ನು ಮಾಡಿದನು.

೮೮. ಆ ಕರ್ಣೋತ್ಪಲೆಯೂ ಪವಿತ್ರವಾದ ಒಂದು ಸರೋವರವನ್ನು ಸೇರಿ ಅಲ್ಲಿ ಶ್ರದ್ಧೆಯಿಂದ ಗೌರಿಯನ್ನು ಪ್ರತಿಷ್ಠೆಮಾಡಿ ತಪಸ್ಸನ್ನಾಚರಿಸಿದಳು.

ಏತಸ್ಮಿನ್ನಂತರೇ ರಾಜಾ ಕಾಲಧರ್ಮಮುಪಾಗತಃ ।
ಆನರ್ತಾಧಿಪತಿರ್ಯುದ್ಧೇ ಹತಃ ಪುತ್ರೈಃ ಸಮನ್ವಿತಃ ॥ ೮೯ ॥
ತತಸ್ತೇ ಬ್ರಾಹ್ಮಣಾಃ ಸರ್ವೇ ಗರ್ತಾತೀರ್ಥಸಮುದ್ಭವಾಃ ।
ಸತ್ಯಸಂಧಂ ಸಮಭ್ಯೇತ್ಯ ಪ್ರೋಚುರ್ದುಃಖಸಮನ್ವಿತಾಃ ॥ ೯೦ ॥
ಪರಿಗ್ರಹಃ ಕೃತೋಽಸ್ಮಾಭಿಃ ಕೇವಲಂ ಪೃಥಿವೀಪತೇ ।
ನ ಚ ಕಿಂಚಿತ್ಫಲಂ ಜಾತಂ ವೃತ್ತಿಜಂ ನಃ ಪುರೋದ್ಭವಂ ॥ ೯೧ ॥
ತಸ್ಮಾತ್ಕುರು ಸ್ಥಿತಿಂ ತ್ವಂ ಚ ಸ್ವಧರ್ಮಪರಿವೃದ್ಧಯೇ ।
ಯೇನ ತದ್ವರ್ತನೋಪಾಯೋ ಹ್ಯಸ್ಮಾಕಂ ನೃಪಸತ್ತಮ ॥ ೯೨ ॥
ರಾಜಾ ಬೃಹದ್ಬಲೋ ಯುದ್ಧೇ ಕಾಲಧರ್ಮಮುಪಾಗತಃ ।
ಯಸ್ತ್ವಯಾ ದರ್ಶಿತೋಽಸ್ಮಾಕಂ ವೃತ್ತ್ಯರ್ಥಂ ನೃಪಸತ್ತಮ ॥ ೯೩ ॥

ಸತ್ಯಸಂಧ ಉವಾಚ :—

ಸನ್ಯಸ್ತೋಽಹಂ ದ್ವಿಜಶ್ರೇಷ್ಠಾ ವೃತ್ತಿಂ ಕರ್ತುಂ ನ ಚ ಕ್ಷಮಃ ।
ಯದಿ ಮೇ ಸ್ಯಾತ್ಪುಮಾನ್ ಕಶ್ಚಿದನ್ವಯೇಽಪಿ ನ ಸಂಶಯಃ ॥ ೯೪ ॥
ತಸ್ಮಾದ್ವ್ರಜಥ ಹರ್ಮ್ಯಂ ಸ್ವಂ ಪ್ರಸಾದಃ ಕ್ರಿಯತಾಂ ಮಮ ।
ಅಭಾಗ್ಯೈರ್ಭವದೀಯೈಶ್ಚ ಹತೋ ರಾಜಾ ಬೃಹದ್ಬಲಃ ॥ ೯೫ ॥

---

೮೯. ಈ ಮಧ್ಯದಲ್ಲಿ ಆನರ್ತದೇಶದ ದೊರೆಯಾದ ಬೃಹದ್ಬಲನು ಯುದ್ಧದಲ್ಲಿ ಪುತ್ರರೊಡನೆ ಮಡಿದನು.

೯೦. ಬಳಿಕ ಗರ್ತಾತೀರ್ಥದ ಬ್ರಾಹ್ಮಣರೆಲ್ಲ ಸತ್ಯಸಂಧನ ಸಮೀಪಕ್ಕೆ ಹೋಗಿ ದುಃಖದಿಂದ ಹೀಗೆಂದರು.

೯೧. "ಅರಸ! ನಾವು ದಾನವನ್ನು ಮಾತ್ರ ತೆಗೆದುಕೊಂಡೆವು. ನಮಗೆ ಪಟ್ಟಣದ ವೃತ್ತಿಯಿಂದ ಯಾವ ಫಲವೂ ಲಭಿಸಲಿಲ್ಲ.

೯೨. ಆದುದರಿಂದ ನೀನು ಸ್ವಧರ್ಮದ ಏಳಿಗೆಗಾಗಿ ಇಲ್ಲಿ ನೆಲೆಸು. ಅದರಿಂದ ನಮಗೆ ಜೀವನೋಪಾಯವು ಕಲ್ಪಿತವಾಗುವುದು.

೯೩. ರಾಜೇಂದ್ರ! ನೀನು ನಮಗೆ ವೃತ್ತಿಗಾಗಿ ತೋರಿಸಿದ ಬೃಹದ್ಬಲ ರಾಜನು ಯುದ್ಧದಲ್ಲಿ ಹತನಾದನು."

೯೪. ಸತ್ಯಸಂಧನು ಹೇಳುತ್ತಾನೆ:—"ದ್ವಿಜವರ್ಯರೆ! ನಾನು ಸನ್ಯಾಸಿಯಾಗಿರುವೆನು. ನಿಮ್ಮನ್ನು ಕಾಪಾಡಲು ಸಮರ್ಥನಲ್ಲ. ನಮ್ಮ ವಂಶದಲ್ಲಿ ನಿಶ್ಚಯವಾಗಿಯೂ ಯಾವನಾದರೂ ಒಬ್ಬ ಮನುಷ್ಯನಿದ್ದಾನು.

೯೫. ಆದುದರಿಂದ ನೀವು ನಿಮ್ಮ ಮನೆಗೆ ತೆರಳಿ ನನ್ನನ್ನು ಅನುಗ್ರಹಿಸಿರಿ. ಭಾಗ್ಯವಿಲ್ಲದ ನಿಮ್ಮವರಿಂದಲೇ ಬೃಹದ್ಬಲರಾಜನು ಮೃತನಾಗಿರುವನು."

ಏವಮುಕ್ತಾಸ್ತ್ವಶ್ಚ ತೇ ವಿಪ್ರಾ ಮತ್ವಾ ತಥ್ಯಂ ಚ ತದ್ವಚಃ ।
ಸ್ವಸ್ಥಾನಂ ತ್ವರಿತಾ ಜಗ್ಮುಃ ಸೋಽಪಿ ಚಕ್ರೇ ತಪಶ್ಚಿರಂ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸತ್ಯಸಂಧನೃಪತಿವೃತ್ತಾಂತವರ್ಣನಂ" ನಾಮ
ಪಂಚವಿಂಶತ್ಯಧಿಕಶತತಮೋಽಧ್ಯಾಯಃ

---

೯೬. ಅವನು ಹೀಗೆನ್ನಲು ಆ ಬ್ರಾಹ್ಮಣರು ಅವನ ಮಾತು ನಿಜವೆಂದರಿತು ತಮ್ಮ ಸ್ಥಾನಕ್ಕೆ ಶೀಘ್ರವಾಗಿ ಹೊರಟುಹೋದರು. ರಾಜನೂ ಬಹುಕಾಲ ತಪಸ್ಸನ್ನು ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸತ್ಯಸಂಧನೃಪತಿವೃತ್ತಾಂತವರ್ಣನ" ವೆಂಬ
ನೂರಿಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡ್ವಿಂಶತ್ಯಧಿಕಶತತಮೋಽಧ್ಯಾಯಃ

### ಸತ್ಯಸಂಧೇಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಏವಂ ತಸ್ಯ ತಪಃಸ್ಥಸ್ಯ ಪುತ್ರ್ಯಾ ಸಹ ದ್ವಿಜೋತ್ತಮಾಃ ।
ಆಜಗ್ಮುರ್ಬ್ರಾಹ್ಮಣಾಃ ಸರ್ವೇ ಚಮತ್ಕಾರಪುರೋದ್ಭವಾಃ ॥ ೧ ॥

ಬ್ರಾಹ್ಮಣಾ ಊಚುಃ :—

ಸಂದೇಹೇಷು ಚ ಸರ್ವೇಷು ವಿವಾದೇಷು ವಿಶೇಷತಃ ।
ಅಭಾವಾತ್ಪಾರ್ಥಿವೇಂದ್ರಸ್ಯ ಸಂಜಾತಶ್ಚ ಪರಾಭವಃ ॥ ೨ ॥
ತತಶ್ಚ ದ್ವಿಜವರ್ಯೈರ್ನ ಸನ್ನ್ಯಸ್ತಃ ಪೃಥಿವೀಪತಿಃ ।
ಪೃಷ್ಟಶ್ಚ ಪ್ರಾರ್ಥಿತಶ್ಚೈವ ನಿಜರಾಜ್ಯಸ್ಯ ರಕ್ಷಣೇ ।
ಅನ್ಯಸ್ಮಿನ್ ದಿವಸೇ ಪ್ರಾಹ ಕೃತಾಂಜಲಿಪುಟಃ ಸ್ಥಿತಃ ॥ ೩ ॥

ರಾಜೋವಾಚ :—

ಅನರ್ಹೋಽಹಂ ದ್ವಿಜಶ್ರೇಷ್ಠಾಃ ಸಂದೇಹಂ ಹರ್ತುಮೇವ ವಃ ।
ರಕ್ಷಾಂ ಕರ್ತುಂ ವಿಶೇಷೇಣ ತ್ಯಕ್ತಶಸ್ತ್ರೋಽಸ್ಮಿ ಚಾಽಧುನಾ ॥ ೪ ॥

---

### ಕನ್ನಡದ ಅನುವಾದ

#### ಸತ್ಯಸಂಧೇಶ್ವರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ಸತ್ಯಸಂಧನು ಹೀಗೆ ತಪಸ್ಸನ್ನು ಮಾಡುತ್ತಿರಲು ಚಮತ್ಕಾರಪುರದ ಬ್ರಾಹ್ಮಣರೆಲ್ಲ ಅಲ್ಲಿಗೆ ಬಂದರು.

೨. ಬ್ರಾಹ್ಮಣರು ಹೇಳುತ್ತಾರೆ:—ದೊರೆಯು ಇಲ್ಲದಿರುವುದರಿಂದ ಸಕಲ ಸಂದೇಹ ವಿವಾದಗಳಲ್ಲಿ ನಮಗೆ ಸೋಲಾಯಿತು.

೩. ಬಳಿಕ ಆ ಬ್ರಾಹ್ಮಣರು ಒಂದು ದಿನ ಕೈಮುಗಿದುಕೊಂಡು ನಿಂತಿರುವ ಸನ್ಯಾಸಿಯಾದ ದೊರೆಯನ್ನು ರಾಜ್ಯರಕ್ಷಣೆಗಾಗಿ ಬೇಡಿಕೊಂಡರು.

೪. ರಾಜನು ಹೇಳುತ್ತಾನೆ:—ದ್ವಿಜವರ್ಯರೆ! ಈಗ ಆಯುಧಗಳನ್ನು ತ್ಯಜಿಸಿರುವ ನಾನು ನಿಮ್ಮ ಸಂದೇಹವನ್ನು ನಿವಾರಿಸುವುದಕ್ಕೂ, ಕಾಪಾಡು ವುದಕ್ಕೂ ಅನರ್ಹನಾಗಿದ್ದೇನೆ.

ಬ್ರಾಹ್ಮಣಾ ಊಚುಃ:—
ಸರ್ವೇ ವಯಂ ಮಹಾರಾಜ ಭೂಪಸ್ಯಾಽಪ್ಯಧಿಕಾ ಯತಃ ।
ಅಹಂಕಾರೇಣ ದರ್ಪೇಣ ನಿಜಂ ಸ್ಥಾನಂ ಸಮಾಶ್ರಿತಾಃ ॥ ೫ ॥
ನ ಕಸ್ಯಚಿನ್ಮಹಾರಾಜ ಕದಾಽಪಿ ಚ ಕಥಂಚನ ।
ವರ್ತನಾಯಾಶ್ಚ ಸಂದೇಹಃ ಸ್ಥಾನಕೃತ್ಯೇಽಪಿ ಸಂಸ್ಥಿತಃ ॥ ೬ ॥
ಅಸಂಖ್ಯಾತಾ ಕೃತಾ ವೃತ್ತಿಃ ಪುರಾಽಸ್ಮಾಕಂ ಮಹಾತ್ಮನಾ ।
ತತಃ ಸಾ ವೃದ್ಧಿಮಾನೀತಾ ತತ್ಪರೈಃ ಪಾರ್ಥಿವೋತ್ತಮೈಃ ॥ ೭ ॥
ತ್ವಯಾ ಚೈವ ವಿಶೇಷೇಣ ಯಾವದ್ರಾಜಾ ಬೃಹದ್ಬಲಃ ।
ಆನರ್ತವಿಷಯೇ ರಾಜಾ ಯೋ ಯಃ ಸ್ಯಾತ್ಸ ಪ್ರಯಚ್ಛತಿ ॥ ೮ ॥
ಸರ್ವಾಂ ವೃತ್ತಿಂ ಗೃಹಸ್ಥಾನಾಂ ಯಥಾಯೋಗ್ಯಂ ಪ್ರಯತ್ನತಃ ।
ತವಾಗ್ರೇ ಕಿಂ ವಯಂ ಬ್ರೂಮಸ್ತ್ವಂ ವೇತ್ಸಿ ಸಕಲಂ ಯತಃ ॥ ೯ ॥
ಯಥಾ ವೃತ್ತಿಃ ಪುರಾ ದತ್ತಾ ಯಥಾ ಸಂರಕ್ಷಿತಾ ತ್ವಯಾ ।
ತಸ್ಮಾಚ್ಚಿಂತಯ ರಾಜೇಂದ್ರ ಸ್ಥಾನಂ ವರ್ತನಸಂಭವಂ ।
ಉಪಾಯಂ ಯೇನ ಮರ್ಯಾದಾ ವೃತ್ತಿಂ ಯಸ್ಮಾತ್ಸುಖೇನ ತು ॥ ೧೦ ॥
ತತಃ ಸ ಸುಚಿರಂ ಧ್ಯಾತ್ವಾ ಗರ್ತಾತೀರ್ಥಸಮುದ್ಭವಾನ್ ।
ಆಕಾರ್ಯೋಽಪಮನ್ಯುವಂಶಸ್ಯ ಸಂಭವಾನ್ ವೇದಪಾರಗಾನ್ ॥ ೧೧ ॥

---

೫. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ನಮ್ಮ ಸ್ಥಾನವನ್ನಾಶ್ರಯಿಸಿದ ನಾವೆಲ್ಲ ಅಹಂಕಾರದಿಂದ ದೊರೆಗಿಂತಲೂ ಅಧಿಕರಾದವರು.

೬. ಯಾವಾಗಲೂ ನಮ್ಮಲ್ಲೊಬ್ಬರಿಗೂ ವೃತ್ತಿ ಮತ್ತು ಸ್ಥಾನವಿಷಯದಲ್ಲಿ ಸಂದೇಹವುಂಟಾಗಲಿಲ್ಲ.

೭–೧೦. ಹಿಂದೆ ನಮಗೆ ಮಹಾತ್ಮನಾದ ದೊರೆಯು ಲೆಕ್ಕವಿಲ್ಲದಷ್ಟು ವೃತ್ತಿಯನ್ನಿತ್ತಿದ್ದನು. ಅನಂತರ ಅವನ ವಂಶದ ದೊರೆಗಳೂ ವಿಶೇಷವಾಗಿ ನೀನೂ ಅದನ್ನು ಬೃಹದ್ಬಲ ರಾಜನ ತನಕ ಅಭಿವೃದ್ಧಿಮಾಡಿಕೊಂಡು ಬಂದಿದ್ದೀರಿ. ಆನರ್ತದೇಶದ ಎಲ್ಲ ರಾಜರೂ ಗೃಹಸ್ಥರಿಗೆ ಅವರ ಯೋಗ್ಯತೆಯನ್ನನುಸರಿಸಿ ವೃತ್ತಿಯನ್ನು ಕೊಟ್ಟಿದ್ದಾರೆ. ಹಿಂದೆ ನೀವೆಲ್ಲ ಹೇಗೆ ವೃತ್ತಿಯನ್ನು ಕೊಟ್ಟಿದ್ದೀರಿ, ಹೇಗೆ ಕಾಪಾಡಿದ್ದೀರಿ ಎಂಬುದನ್ನೆಲ್ಲ ನೀನು ತಿಳಿದಿರುವುದರಿಂದ ನಿನ್ನ ಮುಂದೆ ಏನನ್ನು ಹೇಳಲಿ. ಮಹಾರಾಜ! ಆದುದರಿಂದ ನೀನು ಸುಖದಿಂದ ಸ್ಥಾನ ಮತ್ತು ವೃತ್ತಿಗಳನ್ನು ಕಾಪಾಡುವ ಉಪಾಯವನ್ನು ಆಲೋಚಿಸು.

೧೧–೧೫. ಅನಂತರ ಆ ಸತ್ಯಸಂಧನು ಬಹುಕಾಲ ಆಲೋಚಿಸಿ ಉಪಮನ್ಯು ವಂಶದ ಗರ್ತಾತೀರ್ಥ ನಿವಾಸಿಗಳಾದ ವೇದಪಾರಂಗತ ಬ್ರಾಹ್ಮಣರನ್ನು ಕರೆಯಿಸಿ

ಪ್ರಣಿಪಾತಂ ಪ್ರಕೃತ್ವಾಽಥ ತತಃ ಪ್ರೋವಾಚ ಸಾದರಂ ।
ಮದೀಯಸ್ಥಾನ ಸಂಸ್ಥಾನಾಂ ಬ್ರಾಹ್ಮಣಾನಾಂ ವಿಶೇಷತಃ ॥ ೧೨ ॥
ಸರ್ವಕೃತ್ಯಾನಿ ಕಾರ್ಯಾಣಿ ಭೃತ್ಯವದ್ವಿನಯಾನ್ವಿತೈಃ ।
ನಿತ್ಯಂ ರಕ್ಷ್ಯಾ ವಿಧಾತವ್ಯಾ ಯುಷ್ಮದೀಯಂ ವಚೋಽಖಿಲಂ ॥ ೧೩ ॥
ಏತೇ ಸಂಪಾಲಯಿಷ್ಯಂತಿ ಮರ್ಯಾದಾಕಾರಮುತ್ತಮಂ ।
ಸಂದೇಹೇಷು ಚ ಸರ್ವೇಷು ವಿವಾದೇಷು ವಿಶೇಷತಃ ॥ ೧೪ ॥
ರಾಜಕಾರ್ಯೇಷು ಚಾಽನ್ಯೇಷು ಏತೇ ದಾಸ್ಯಂತಿ ನಿರ್ಣಯಂ ।
ಯುಷ್ಮದೀಯಂ ವಚಃ ಶ್ರುತ್ವಾ ಶುಭಂ ವಾ ಯದಿ ವಾಽಶುಭಂ ॥ ೧೫ ॥
ಏತೇ ಪಾಲ್ಯಾಃ ಪ್ರಸಾದೇನ ಪುಷ್ಟಿಂ ನೇಯಾಶ್ಚ ಶಕ್ತಿತಃ ।
ಈರ್ಷ್ಯಾಂ ಸರ್ವಾಂ ಪರಿತ್ಯಜ್ಯ ಮದೀಯಸ್ಥಾನವೃದ್ಧಯೇ ॥ ೧೬ ॥
ಬಾಢಮಿತ್ಯೇವ ತೈಃ ಪ್ರೋಕ್ತಃ ಸ ರಾಜಾ ಬ್ರಾಹ್ಮಣೋತ್ತಮಾನ್ ।
ಚಮತ್ಕಾರಪುರೋದ್ಭೂತಾನ್ ಭೂಯಃ ಪ್ರೋವಾಚ ಸಾದರಂ ॥ ೧೭ ॥
ಯುಷ್ಮಾಕಂ ವರ್ತನಾರ್ಥಾಯ ಸರ್ವಕೃತ್ಯೇಷು ಸರ್ವದಾ ।
ಏತೇ ವಿಪ್ರಾ ಮಯಾ ದತ್ತಾ ಗರ್ತಾತೀರ್ಥಸಮುದ್ಭವಾಃ ॥ ೧೮ ॥
ಏತೇಷಾಂ ವಚನಾತ್ಸರ್ವಂ ಯುಷ್ಮದೀಯಂ ಪ್ರಜಾಯತಾಂ ।
ಪ್ರತಿಷ್ಠಾ ಜಾಯತೇ ನೂನಂ ಚಾತುಶ್ಚರಣ ಸೂಚಿತಾ ॥ ೧೯ ॥

---

ನಮಸ್ಕಾರ ಮಾಡಿ ಪ್ರೀತಿಯಿಂದ ಹೀಗೆ ಹೇಳಿದನು. "ನೀವು ನಿತ್ಯವೂ ನನ್ನ ಸ್ಥಾನದಲ್ಲಿರುವ ಬ್ರಾಹ್ಮಣರ ಸಮಸ್ತ ಕಾರ್ಯಗಳನ್ನು ಸೇವಕರಂತೆ ವಿನಯದಿಂದ ರಕ್ಷಿಸಬೇಕು. ಇವರು ನಿಮ್ಮ ಮರ್ಯಾದಾಕಾರವಾದ ಮಾತನ್ನೆಲ್ಲ ನೆರವೇರಿಸುತ್ತಾರೆ: ಸಮಸ್ತ ಸಂದೇಹ, ವಿವಾದ, ಇತರ ರಾಜಕಾರ್ಯ ಇವುಗಳಲ್ಲಿ ನಿಮ್ಮ ಶುಭ ಅಥವಾ ಅಶುಭಕರವಾದ ಮಾತನ್ನು ಕೇಳಿ ನಿರ್ಣಯಿಸುತ್ತಾರೆ.

೧೬. ನೀವು ಅಸೂಯೆಯನ್ನು ತ್ಯಜಿಸಿ ನನ್ನ ಸ್ಥಾನದ ವೃದ್ಧಿಗಾಗಿ ಇವರನ್ನು ಅನುಗ್ರಹಿಸಿ ಶಕ್ತ್ಯನುಸಾರ ಪೋಷಿಸಬೇಕು."

೧೭. ಅವರು ಹಾಗೆಯೇ ಆಗಲೆನ್ನಲು ಆ ಸತ್ಯಸಂಧನು ಚಮತ್ಕಾರಪುರದ ಬ್ರಾಹ್ಮಣೋತ್ತಮರನ್ನು ಕುರಿತು ಮರಳಿ ಇಂತೆಂದನು.

೧೮. "ನಿಮ್ಮ ವೃತ್ತಿರಕ್ಷಣೆಗಾಗಿ ಈ ಗರ್ತಾತೀರ್ಥದ ಬ್ರಾಹ್ಮಣರನ್ನು ನೇಮಿಸಿದ್ದೇನೆ.

೧೯. ನಿಮ್ಮ ಕಾರ್ಯವೆಲ್ಲ ಇವರ ಮಾತಿನಂತೆ ನಡೆಯಲಿ. ಇದರಿಂದ ನಿಮಗೆ ಚತುರ್ವೇದ ಸೂಚಿತವಾದ ಪ್ರತಿಷ್ಠೆಯು ನಿಶ್ಚಯವಾಗಿಯೂ ಉಂಟಾಗುವುದು.

ನಾಽನ್ಯಥಾ ಬ್ರಾಹ್ಮಣಶ್ರೇಷ್ಠಾಃ ಸ್ವಲ್ಪಂ ವಾ ಯದಿ ವಾ ಬಹು ।
ಪ್ರೋಕ್ತಂ ಲಕ್ಷಮಿತೈರನ್ಯೈರ್ಯುಷ್ಮದೀಯಪುರೋದ್ಭವೈಃ ॥ ೨೦ ॥
ಸೂತ ಉವಾಚ:—
ತತಸ್ತೇ ಬ್ರಾಹ್ಮಣಾ ಹೃಷ್ಟಾಸ್ತಾನಾದಾಯ ದ್ವಿಜೋತ್ತಮಾನ್ ।
ತೇಷಾಂ ಮತೇನ ಚಕ್ರುಶ್ಚ ಸರ್ವಕೃತ್ಯಾನಿ ಸರ್ವದಾ ॥ ೨೧ ॥
ತತಸ್ತತ್ರ ಪುರೇ ಜಾತಾ ಮರ್ಯಾದಾ ಧರ್ಮವರ್ಧಿನೀ ।
ಸರ್ವಕೃತ್ಯೇಷು ಸರ್ವೇಷಾಂ ತಥಾ ವೃದ್ಧಿಃ ಪುರಸ್ಯ ಚ ॥ ೨೨ ॥
ತೇಽಪಿ ತೇಷಾಂ ಪ್ರಸಾದೇನ ಗರ್ತಾತೀರ್ಥಭವಾ ದ್ವಿಜಾಃ ।
ಪರಾಂ ವಿಭೂತಿಮಾಸಾದ್ಯ ಮೋದಂತೇ ಸುಖಸಂಯುತಾಃ ॥ ೨೩ ॥
ಕಸ್ಯಚಿತ್ತ್ವಥ ಕಾಲಸ್ಯ ಸ ರಾಜಾ ತತ್ಪುರೋತ್ತಮಂ ।
ಸಮಭ್ಯೇತ್ಯ ದ್ವಿಜಾನ್ ಸರ್ವಾಂಸ್ತತಃ ಪ್ರೋವಾಚ ಸಾದರಂ ॥ ೨೪ ॥
ಯುಷ್ಮದೀಯಪ್ರಸಾದೇನ ಕ್ಷೇತ್ರೇಽತ್ರ ಸುಮಹತ್ತಪಃ ।
ಕೃತಂ ಸ್ವರ್ಗಂ ಪ್ರಯಾಸ್ಯಾಮಿ ಸಾಂಪ್ರತಂ ತು ದ್ವಿಜೋತ್ತಮಾಃ ॥ ೨೫ ॥
ನಾಽಸ್ಮಾಕಮನ್ವಯೇ ಕಶ್ಚಿತ್ಸಾಂಪ್ರತಂ ವರ್ತತೇ ನೃಪಃ ।
ತಸ್ಯಾಽಹಂ ಲಿಂಗಮೇತದ್ವೈ ದರ್ಶಯಾಮಿ ದ್ವಿಜೋತ್ತಮಾಃ ॥ ೨೬ ॥

---

೨೦. ಬ್ರಾಹ್ಮಣರೆ! ನಿಮ್ಮ ಪಟ್ಟಣದ ಇತರ ಲಕ್ಷಸಂಖ್ಯೆಯ ಜನರು ಹೇಳಿದ ಸ್ವಲ್ಪ ಅಥವಾ ಬಹು ಮಾತುಗಳು ಇದಕ್ಕೆ ವ್ಯತಿರಿಕ್ತವಾಗಿ ಆಗ ಬಾರದು.”

೨೧. ಸೂತನು ಹೇಳುತ್ತಾನೆ:—ಅನಂತರ ಆ ಬ್ರಾಹ್ಮಣರು ಸಂತೋಷ ಗೊಂಡು ಆ ಬ್ರಾಹ್ಮಣೋತ್ತಮರನ್ನು ಕರೆದುಕೊಂಡು ಹೋಗಿ ಅವರ ಅಭಿಪ್ರಾಯ ದಂತೆ ಸಮಸ್ತ ಕಾರ್ಯಗಳನ್ನು ಯಾವಾಗಲೂ ಮಾಡಿದರು.

೨೨. ತರುವಾಯ ಆ ಪಟ್ಟಣದಲ್ಲಿ ಸಕಲ ಕಾರ್ಯಗಳಲ್ಲಿಯೂ ಧರ್ಮ ವನ್ನು ಹೆಚ್ಚಿಸುವ ಒಂದು ಪದ್ಧತಿಯುಂಟಾಯಿತು. ಅದರಿಂದ ಸಕಲ ಜನರ ಮತ್ತು ಪಟ್ಟಣದ ವೃದ್ಧಿಯಾಯಿತು.

೨೩. ಆ ಗರ್ತಾತೀರ್ಥದ ಬ್ರಾಹ್ಮಣರೂ ಅವರ ಅನುಗ್ರಹದಿಂದ ಅತ್ಯಂತ ಐಶ್ವರ್ಯವನ್ನು ಹೊಂದಿ ಸುಖದಿಂದ ಆನಂದಗೊಂಡರು.

೨೪. ಕೆಲವು ಕಾಲದಮೇಲೆ ಆ ಸತ್ಯಸಂಧನು ಆ ಪಟ್ಟಣಕ್ಕೆ ಬಂದು ಸಮಸ್ತ ಬ್ರಾಹ್ಮಣರನ್ನೂ ಕುರಿತು ಪ್ರೀತಿಯಿಂದ ಇಂತೆಂದನು.

೨೫—೨೬. “ದ್ವಿಜವರ್ಯರೆ! ನಾನು ನಿಮ್ಮ ಅನುಗ್ರಹದಿಂದ ಈ ಕ್ಷೇತ್ರ ವಲ್ಲಿ ಮಹಾ ತಪಸ್ಸನ್ನಾಚರಿಸಿದೆನು .ಈಗ ಸ್ವರ್ಗಕ್ಕೆ ತೆರಳುವೆನು. ಈಗ ನಮ ವಂಶದಲ್ಲಿ ಪೂಜೆ, ವೃತ್ತಿ, ಭೋಗಗಳಿಗಾಗಿ ಈ ಶಿವ ಲಿಂಗವನ್ನು ತೋರಿಸಲು ಒಬ್ಬ ರಾಜನೂ ಇಲ್ಲ.

ಪೂಜಾರ್ಥಂ ಚಾಽಪಿ ವೃತ್ತ್ಯರ್ಥಂ ಭೋಗಾರ್ಥಂ ಚ ವಿಶೇಷತಃ ।
ತಸ್ಮಾದ್ಯುಷ್ಮಾಭಿರೇವಾಽಸ್ಯ ಪೂಜಾ ಕಾರ್ಯಾ ಪ್ರಯತ್ನತಃ ।
ರಥಯಾತ್ರಾ ವಿಶೇಷೇಣ ದಯಾಂ ಕೃತ್ವಾ ಮಮೋಪರಿ ॥ ೨೭ ॥

ಬ್ರಾಹ್ಮಣಾ ಊಚುಃ:—

ಸಪ್ತವಿಂಶತಿ ಲಿಂಗಾನಿ ಯಥೇಷ್ಟಾನಿ ಮಹೀತಲೇ ।
ಚಮತ್ಕಾರಸುತಾನಾಂ ಚ ಪೂಜ್ಯಂತೇ ಸರ್ವದೈವ ತು ॥ ೨೮ ॥
ಅಷ್ಟಾವಿಂಶತಿಮಂ ತದ್ವದೇತಲ್ಲಿಂಗಂ ತವೋದ್ಭವಂ ।
ಸರ್ವದಾ ಪೂಜಯಿಷ್ಯಾಮೋ ನಿಶ್ಚಿಂತೋ ಭವ ಪಾರ್ಥಿವ ॥ ೨೯ ॥
ಅಸ್ಯ ಯಾತ್ರಾಂ ಕರಿಷ್ಯಾಮಃ ಕಾರ್ತಿಕೇ ಮಾಸಿ ಸರ್ವದಾ ।
ಬಲಿಪೂಜೋಪಹಾರಾಂಶ್ಚ ಗೀತವಾದ್ಯಾನಿ ಶಕ್ತಿತಃ ॥ ೩೦ ॥
ಏವಮುಕ್ತಃ ಸ ತೈರ್ಹೃಷ್ಟೋ ಗತ್ವಾತ್ಮೀಯಂ ತದಾಶ್ರಮಂ ।
ಸ್ನಾಪಯಿತ್ವಾಽಥ ತಲ್ಲಿಂಗಂ ಪೂಜಾಂ ಚಕ್ರೇ ಪ್ರಭಕ್ತಿತಃ ॥ ೩೧ ॥

ಸೂತ ಉವಾಚ:—

ಏವಂ ಸಮರ್ಪಿತಂ ಲಿಂಗಂ ತೇನ ತದ್ಧರಸಂಭವಂ ।
ಸರ್ವೇಷಾಂ ಬ್ರಾಹ್ಮಣೇಂದ್ರಾಣಾಂ ವಂಶೋಚ್ಛೇದೇ ಸ್ಥಿತೇ ದ್ವಿಜಾಃ ॥ ೩೨ ॥
ಸಕಲಂ ಕಾರ್ತಿಕಂ ಮರ್ತ್ಯೋ ಯಸ್ತಚ್ಛ್ರದ್ಧಾಸಮನ್ವಿತಃ ।
ಸ್ನಾಪಯೇತ್ಪೂಜಯೇಚ್ಚಾಽಪಿ ಸ ನೂನಂ ಮುಕ್ತಿಮಾಪ್ನುಯಾತ್ ॥ ೩೩ ॥

---

೨೭. ಆದುದರಿಂದ ನೀವೇ ನನ್ನಲ್ಲಿ ದಯೆಯಿಟ್ಟು ಈ ಲಿಂಗಕ್ಕೆ ಪೂಜೆ, ರಥೋತ್ಸವಗಳನ್ನು ಮಾಡಿರಿ."

೨೮–೨೯. ಬ್ರಾಹ್ಮಣರು ಹೇಳುತ್ತಾರೆ:— ನಾವೀಗ ಯಾವಾಗಲೂ ಚಮತ್ಕಾರಪುರದ ರಾಜರು ಸ್ಥಾಪಿಸಿದ ಇಪ್ಪತ್ತೇಳು ಮಾಹೇಶ್ವರ ಲಿಂಗಗಳನ್ನು ಪೂಜಿಸುತ್ತಿದ್ದೇವೆ. ಮಹಾರಾಜ! ನೀನು ಸ್ಥಾಪಿಸಿದ ಈ ಇಪ್ಪತ್ತೆಂಟನೆಯ ಲಿಂಗವನ್ನೂ ಯಾವಾಗಲೂ ಪೂಜಿಸುತ್ತೇವೆ. ನೀನು ನಿಶ್ಚಿಂತನಾಗಿರು.

೩೦. ಕಾರ್ತಿಕ ಮಾಸದಲ್ಲಿ ಈ ಲಿಂಗಕ್ಕೆ ರಥೋತ್ಸವವನ್ನೂ, ಬಲಿ, ಪೂಜೆ, ಕಾಣಿಕೆ, ಸಂಗೀತ, ವಾದ್ಯ ಇವುಗಳನ್ನೂ ಶಕ್ತ್ಯನುಸಾರ ಮಾಡುತ್ತೇವೆ.

೩೧. ಅವರು ಹೀಗೆ ಹೇಳಲು ಆ ಸತ್ಯಸಂಧನು ತನ್ನ ಆಶ್ರಮಕ್ಕೆ ಹೋಗಿ ಆ ಶಿವಲಿಂಗವನ್ನು ಅಭಿಷೇಕ ಮಾಡಿ ಭಕ್ತಿಯಿಂದ ಪೂಜೆ ಮಾಡಿದನು.

೩೨. ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ಹೀಗೆ ಸಮಸ್ತ ಬ್ರಾಹ್ಮಣರ ವಂಶವು ನಷ್ಟವಾಗುತ್ತಿರಲು ಆ ಸತ್ಯಸಂಧನು ಆ ಶಿವಲಿಂಗವನ್ನು ಅವರಿಗೆ ಒಪ್ಪಿಸಿದನು.

೩೩. ಆ ಲಿಂಗವನ್ನು ಕಾರ್ತಿಕಮಾಸ ಪೂರ್ತಿ ಶ್ರದ್ಧೆಯಿಂದ ಅಭಿಷೇಕ ಮಾಡಿ ಪೂಜಿಸಿದ ಮನುಷ್ಯನು ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು.

ಸೋಮಸ್ಯ ದಿವಸೇ ಪ್ರಾಪ್ತೇ ವರ್ಷಂ ಯಾವತ್ಸತಕ್ಷಣಃ ।
ತಸ್ಯ ಪೂಜಾಂ ಕರೋತ್ಯೇವಂ ಸ್ನಾಪಯಿತ್ವಾ ವಿಧಾನತಃ ।
ಸೋಽಪಿ ಮುಕ್ತಿಂ ವ್ರಜೇನ್ಮರ್ತ್ಯ ಏತತ್ತಾತಾನ್ಮಯಾ ಶ್ರುತಂ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸತ್ಯಸಂಧೇಶ್ವರಮಾಹಾತ್ಮ್ಯವರ್ಣನಂ" ನಾಮ
ಷಡ್ವಿಂಶತ್ಯಧಿಕಶತತಮೋಽಧ್ಯಾಯಃ

---

೩೪. ಒಂದು ವರ್ಷ ಪ್ರತಿ ಸೋಮವಾರಗಳಲ್ಲಿ ಆ ಲಿಂಗಕ್ಕೆ ವಿಧಿಯಂತೆ ಅಭಿಷೇಕ ಮಾಡಿ ಪೂಜಿಸಿ ಉತ್ಸವ ಮಾಡುವವನು ಮೋಕ್ಷವನ್ನು ಹೊಂದುವನು. ಇದನ್ನು ನಾನು ನನ್ನ ತಂದೆಯಿಂದ ಕೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸತ್ಯಸಂಧೇಶ್ವರಮಾಹಾತ್ಮ್ಯವರ್ಣನ" ವೆಂಬ
ನೂರಿಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

## ಕರ್ಣೋತ್ಪಲಾತೀರ್ಥಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಯಾ ಸಾ ಕರ್ಣೋತ್ಪಲಾ ನಾಮ ತ್ವಯಾಽಸ್ಮಾಕಂ ಪ್ರಕೀರ್ತಿತಾ ।
ಕಿಂಚಿಜ್ಜಲಾಶ್ರಯಂ ಪ್ರಾಪ್ಯ ತಪಸ್ತಪತಿ ಸಂಸ್ಥಿತಾ ।
ತಸ್ಯಾಃ ಸರ್ವಂ ಸಮಾಚಕ್ಷ್ವ ಯಥಾ ತಪಸಿ ಸಾ ಸ್ಥಿತಾ ॥ ೧ ॥

ಸೂತ ಉವಾಚ :—

ಗೌರೀಪಾದಕೃತಸ್ಥಾನಾ ಶ್ರದ್ಧಯಾ ಪರಯಾ ಯುತಾ ।
ತಾವತ್ತುಷ್ಟಿಂ ಗತಾ ದೇವೀ ಗಿರಿಜಾ ಶಂಕರಪ್ರಿಯಾ ॥ ೨ ॥
ತತಃ ಪ್ರೋವಾಚ ತೇ ಪುತ್ರಿ ತುಷ್ಟಾಹಂ ವಾಂಛಿತಂ ವದ ।
ಯೇನ ಯಚ್ಛಾಮ್ಯಸಂದಿಗ್ಧಂ ಯದ್ಯಪಿ ಸ್ಯಾತ್ಸುದುರ್ಲಭಂ ॥ ೩ ॥

ಕರ್ಣೋತ್ಪಲೋವಾಚ :—

ಮಮ ಪತ್ಯುಃ ಕೃತೇ ದೇವಿ ಮಮ ತಾತಃ ಸುದುಃಖಿತಃ ।
ರಾಜ್ಯಾದ್ಭ್ರಷ್ಟಃ ಸುಖಾಚ್ಚಾಪಿ ಕುಟುಂಬೇನ ವಿವರ್ಜಿತಃ ॥ ೪ ॥
ತತಶ್ಚೈವ ತಪಸ್ತೇಪೇ ವೈರಾಗ್ಯಂ ಪರಮಂ ಗತಃ ।
ಅಹಂ ವಾರ್ಧಕ್ಯಮಾಪನ್ನಾ ಕೌಮಾರ್ಯೇಽಪಿ ಚ ಸಂಸ್ಥಿತಾ ॥ ೫ ॥

---

## ಕನ್ನಡದ ಅನುವಾದ

### ಕರ್ಣೋತ್ಪಲಾತೀರ್ಥಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಸತ್ಯಸಂಧನ ಮಗಳಾದ ಕರ್ಣೋತ್ಪಲೆಯು ಯಾವುದೋ ಒಂದು ಸರೋವರದಲ್ಲಿ ತಪಸ್ಸನ್ನು ಮಾಡಿದ ಳೆಂದು ಹೇಳಿದೆಯಷ್ಟೆ. ಅವಳು ಹೇಗೆ ತಪಸ್ಸನ್ನಾಚರಿಸಿದಳೆಂಬುದನ್ನು ಹೇಳು.

೨-೩. ಸೂತನು ಹೇಳುತ್ತಾನೆ:—ಆ ಕರ್ಣೋತ್ಪಲೆಯು ಗೌರಿಯ ಸನ್ನಿಧಿ ಯಲ್ಲಿ ಅತಿಶ್ರದ್ಧೆಯಿಂದ ತಪಸ್ಸನ್ನು ಮಾಡಲು ಅವಳು ಸಂತೋಷಗೊಂಡು, "ಮಗು! ನಾನು ನಿನ್ನಲ್ಲಿ ಸಂತುಷ್ಟಳಾಗಿದ್ದೇನೆ. ನಿನ್ನ ಇಷ್ಟಾರ್ಥವೇನೆಂಬು ದನ್ನು ಹೇಳು. ಅದು ದುರ್ಲಭವಾಗಿದ್ದರೂ ನಾನು ನಿಶ್ಚಯವಾಗಿಯೂ ನಿನಗೆ ಕೊಡುವೆನು" ಎಂದಳು.

೪-೫. ಕರ್ಣೋತ್ಪಲೆಯು ಹೇಳುತ್ತಾಳೆ:—ದೇವಿ! ತಂದೆಯು ನನಗೆ ಪತಿಯನ್ನು ಹುಡುಕುವುದಕ್ಕಾಗಿ ದುಃಖಗೊಂಡು ರಾಜ್ಯ, ಸುಖ, ಕುಟುಂಬ ಗಳನ್ನು ತ್ಯಜಿಸಿ ಅತಿಶಯ ವೈರಾಗ್ಯವನ್ನು ಹೊಂದಿ ತಪಸ್ಸನ್ನು ಮಾಡಿದನು. ನಾನು ಕುಮಾರಿಯಾಗಿದ್ದರೂ ಮುದುಕಿಯಾದೆನು.

ತಸ್ಮಾದ್ಭವತು ಮೇ ಭರ್ತಾ ಕಶ್ಚಿದ್ರೂಪೋತ್ಕಟಃ ಸ್ಮೃತಃ ।
ಸರ್ವೇಷಾಂ ದೇವಮರ್ತ್ಯಾನಾಂ ತ್ವತ್ಪ್ರಸಾದಾತ್ಸುರೇಶ್ವರಿ ॥ ೬ ॥
ತಥಾ ಸ್ಯಾತ್ಪರಮಂ ರೂಪಂ ತಾರುಣ್ಯಂ ತ್ವತ್ಪ್ರಸಾದತಃ ।
ಯಥಾಽಸ್ಯ ಜಾಯತೇ ಸೌಖ್ಯಂ ತಾಪಸಸ್ಯಾಽಪಿ ಮೇ ಪಿತುಃ ॥ ೭ ॥

ದೇವ್ಯುವಾಚ:—

ಮಾಘಮಾಸ ತೃತೀಯಾಯಾಂ ಶನೈಶ್ಚರದಿನೇ ಶುಭೇ ।
ನಕ್ಷತ್ರೇ ವಸುದೈವತ್ಯೇ ರೂಪಂ ಧ್ಯಾತ್ವಾಽಥ ಯೌವನಂ ॥ ೮ ॥
ತ್ವಯಾ ಸ್ನಾನಂ ಪ್ರಕರ್ತವ್ಯಂ ಸುಪುಣ್ಯೇಽತ್ರ ಜಲಾಶಯೇ ।
ತತೋ ದಿವ್ಯವಪುರ್ಭೂತ್ವಾ ಯೌವನೇನ ಸಮನ್ವಿತಾ ।
ಭವಿಷ್ಯಸಿ ನ ಸಂದೇಹಃ ಸತ್ಯಮೇತನ್ಮಯೋದಿತಂ ॥ ೯ ॥
ಅನ್ಯಾಽಪಿ ಯಾ ಮಹಾಭಾಗೇ ನಾರೀ ಸ್ನಾನಂ ಕರಿಷ್ಯತಿ ।
ತಸ್ಮಿನ್ನಹನಿ ಸಾಽಪ್ಯೇವಂ ರೂಪಯುಕ್ತಾ ಭವಿಷ್ಯತಿ ॥ ೧೦ ॥

ಸೂತ ಉವಾಚ:—

ಏವಮುಕ್ತ್ವಾಽಥ ಸಾ ದೇವೀ ಗತಾ ಚಾಽದರ್ಶನಂ ತತಃ ।
ಸಾಽಪಿ ಚಾಽನ್ವೇಷಯಾಮಾಸ ತೃತೀಯಾಂ ಶನಿನಾ ಸಹ ॥ ೧೧ ॥
ವಸುದೇವಾತ್ಮಕೇನೈವ ನಕ್ಷತ್ರೇಣ ಪ್ರಯತ್ನತಃ ।
ಧ್ಯಾಯಮಾನಾ ಚ ತಾಂ ದೇವೀಂ ಸರ್ವಕಾಮಪ್ರದಾಯಿನೀಂ ॥ ೧೨ ॥

---

೬. ಸುರೇಶ್ವರಿ! ನಿನ್ನ ಅನುಗ್ರಹದಿಂದ ನನಗೆ ದೇವಮಾನವರಲ್ಲಿ ಅತ್ಯಂತ ಸುಂದರನಾದ ಪತಿಯು ದೊರೆಯಲಿ.

೭. ಹಾಗೆಯೇ ಅಧಿಕ ಸೌಂದರ್ಯವೂ, ಯೌವನವೂ ಉಂಟಾಗಲಿ. ಮುನಿಯಾದ ನನ್ನ ತಂದೆಗೂ ಸೌಖ್ಯವಾಗಲಿ.

೮–೯. ದೇವಿಯು ಹೇಳುತ್ತಾಳೆ:—ಮಾಘ ಮಾಸದ ತದಿಗೆ ಶನಿವಾರದ ದಿನ ವಸುದೇವತಾಕವಾದ ನಕ್ಷತ್ರದಲ್ಲಿ ನೀನು ಈ ಪವಿತ್ರ ಸರೋವರದಲ್ಲಿ ತಾರುಣ್ಯದ ರೂಪವನ್ನು ಧ್ಯಾನಿಸಿ ಸ್ನಾನ ಮಾಡು. ಅನಂತರ ನೀನು ಯೌವನದಿಂದ ವಿರಾಜಿಸುವ ದಿವ್ಯ ಶರೀರವುಳ್ಳವಳಾಗುವೆ. ನಾನು ಹೇಳಿರುವುದು ನಿಜ.

೧೦. ಮಹಾತ್ಮಳೆ! ಆ ದಿನ ಅಲ್ಲಿ ಇತರ ಹೆಂಗಸು ಮಿಂದರೂ ಸುಂದರಿಯಾಗುವಳು.

೧೧–೧೨. ಸೂತನು ಹೇಳುತ್ತಾನೆ:—ಗೌರಿಯು ಹೀಗೆ ಹೇಳಿ ಅದೃಶ್ಯಳಾದಳು. ಆ ಕರ್ಣೋತ್ಪಲೆಯೂ ಸಕಲೇಷ್ಟಾರ್ಥಗಳನ್ನೀಯುವ ದೇವಿಯನ್ನು ಚಿಂತಿಸುತ್ತ ತದಿಗೆ, ಶನಿವಾರ, ವಸುದೇವತಾಕನಕ್ಷತ್ರ ಇವುಗಳಿಂದ ಸೇರಿದ ಯೋಗವನ್ನು ಹುಡುಕುತ್ತಿದ್ದಳು.

ತತಃ ಕತಿಪಯಾಽಹಸ್ಯ ಜಾತಾ ಸಾ ಯೋಗಸಂಯುತಾ ।
ತೃತೀಯಾ ಯಾ ಯಥೋಕ್ತಾ ಚ ತಯಾ ದೇವ್ಯಾ ಪುರಾ ದ್ವಿಜಾಃ ॥೧೩॥
ತತಃ ಸಾ ರೂಪಸೌಭಾಗ್ಯಂ ಯೌವನಂ ವಾಂಛಿತಂ ಪತಿಂ ।
ಧ್ಯಾಯಮಾನಾ ಜಲೇ ತಸ್ಮಿನ್ನರ್ಧರಾತ್ರೇ ವಿವೇಶ ಚ ॥ ೧೪ ॥
ತತೋ ದಿವ್ಯವಪುರ್ಭೂತ್ವಾ ಯೌವನೇನ ಸಮನ್ವಿತಾ ।
ನಿಷ್ಕ್ರಾಂತಾ ಸಲಿಲಾತ್ತಸ್ಮಾಜ್ಜನವಿಸ್ಮಯಕಾರಿಣೀ ॥ ೧೫ ॥
ಏತಸ್ಮಿನ್ನಂತರೇ ಪ್ರಾಪ್ತೋ ಗೌರೀವಾಕ್ಯಪ್ರಬೋಧಿತಃ ।
ತದರ್ಥಂ ಭಗವಾನ್ ಕಾಮಃ ಪತ್ನ್ಯರ್ಥಂ ಪ್ರೀತಿಸಂಯುತಃ ।
ಅಬ್ರವೀಚ್ಚ ಮಹಾಭಾಗೇ ಕಾಮೋಽಹಂ ಸ್ವಯಮಾಗತಃ ॥ ೧೬ ॥
ಪಾರ್ವತ್ಯಾದೇಶಿತಾ ಭಾರ್ಯಾ ತಸ್ಮಾನ್ಮೇ ಭವ ಮಾಚಿರಂ ॥ ೧೭ ॥
ಯಸ್ಮಾತ್ಪ್ರೀತ್ಯಾ ಸಮಾಯಾತಸ್ತವಾಂತಿಕಮಹಂ ಶುಭೇ ।
ತಸ್ಮಾತ್ಪ್ರೀತಿರಿತಿ ಖ್ಯಾತಾ ಮಮ ಭಾರ್ಯಾ ಭವಿಷ್ಯಸಿ ॥ ೧೮ ॥

ಕರ್ಣೋತ್ಪಲೋವಾಚ :—

ಯದ್ಯೇವಂ ಸ್ಮರ ಮತ್ತಾತಂ ತಂ ಗತ್ವಾ ಪ್ರಾರ್ಥಯ ಸ್ವಯಂ ।
ಸ್ವಚ್ಛಂದಾ ಸ್ಯಾದ್ಯತಃ ಕನ್ಯಾ ನ ಕಥಂಚಿತ್ಪ್ರವರ್ತಿತಾ ॥ ೧೯ ॥

---

೧೩. ದ್ವಿಜರೆ! ಅನಂತರ ಕೆಲವು ದಿನಗಳಲ್ಲಿ ದೇವಿಯು ಹೇಳಿದ ತದಿಗೆಯಿಂದ ಸೇರಿದ ಆ ಯೋಗವು ಸಂಭವಿಸಿತು.

೧೪. ಆಗ ಅವಳು ಆ ಸರೋವರದ ನೀರಿನಲ್ಲಿ ಅರ್ಧರಾತ್ರಿಯ ವೇಳೆಯಲ್ಲಿ ಸೌಂದರ್ಯದಿಂದ ಕೂಡಿದ ಯೌವನ, ಇಷ್ಟನಾದ ಪತಿ ಇವರನ್ನು ಸ್ಮರಿಸುತ್ತ ಪ್ರವೇಶಿಸಿದಳು.

೧೫. ತರುವಾಯ ಅವಳು ಯೌವನದಿಂದ ಕೂಡಿ ಜನರಿಗೆ ಆಶ್ಚರ್ಯವನ್ನುಂಟುಮಾಡುವ ದಿವ್ಯ ಶರೀರವನ್ನು ಧರಿಸಿ ಆ ನೀರಿನಿಂದ ಮೇಲಕ್ಕೆದ್ದಳು.

೧೬–೧೭. ಈ ಸಮಯದಲ್ಲಿ ಗೌರಿಯ ಮಾತಿನಿಂದ ಪ್ರೇರಿತನಾದ ಪೂಜ್ಯನಾದ ಕಾಮನು ಪತ್ನಿಗಾಗಿ ಪ್ರೀತಿಯಿಂದ ಅಲ್ಲಿಗೆ ಬಂದು ಅವಳನ್ನು ಕುರಿತು "ಮಹಾತ್ಮಳೆ! ಕಾಮನಾದ ನಾನು ನಾನಾಗಿಯೇ ಬಂದಿದ್ದೇನೆ. ಪಾರ್ವತಿಯ ಆದೇಶದಂತೆ ನೀನು ಶೀಘ್ರವಾಗಿ ನನಗೆ ಪತ್ನಿಯಾಗು.

೧೮. ನಾನು ಪ್ರೀತಿಯಿಂದ ನಿನ್ನೆಡೆಗೆ ಬಂದುದರಿಂದ ನೀನು ಪ್ರೀತಿಯೆಂದು ವಿಖ್ಯಾತಳಾಗಿ ನನಗೆ ಪತ್ನಿಯಾಗುವೆ."

೧೯. ಕರ್ಣೋತ್ಪಲೆಯು ಹೇಳುತ್ತಾಳೆ:—ಮನ್ಮಥ! ಹೀಗಾದರೆ ನೀನೇ ನನ್ನ ತಂದೆಯನ್ನು ಕೇಳು. ಕನ್ಯೆಯು ಸ್ವೇಚ್ಛೆಯಾಗಿ ಪ್ರವರ್ತಿಸಬಾರದು.

ಯ ಏಷ ದೃಶ್ಯತೇ ರಮ್ಯಃ ಪ್ರಾಸಾದೋ ನಾಽತಿದೂರತಃ ।
ಅಸ್ಯಾಂತೇ ತಿಷ್ಠತೇಽಸ್ಮಾಕಂ ತಾತಸ್ತಪಸಿ ಸಂಸ್ಥಿತಃ ॥ ೨೦ ॥
ಅತ್ರಾಽಹಂ ಪೂರ್ವತೋ ಗತ್ವಾ ತಸ್ಯ ತಿಷ್ಠಾಮಿ ಚಾಂತಿಕೇ ।
ಭವಾನಾಗತ್ಯ ಪಶ್ಚಾಚ್ಚ ಪ್ರಾರ್ಥಯಿಷ್ಯತಿ ಮಾಂ ತತಃ ॥ ೨೧ ॥
ಬಾಢಮಿತ್ಯೇವ ಕಾಮೋಕ್ತೇ ಗತಾ ಸಾ ತತ್ಸಮೀಪತಃ ।
ಪ್ರಣಿಪತ್ಯ ತತಃ ಪ್ರಾಹ ದಿಷ್ಟ್ಯಾ ತಾತ ಮಯಾ ಪುನಃ ॥ ೨೨ ॥
ಸಾಂಪ್ರತಂ ಯೌವನಂ ಕಾಂತಂ ಸಮಾರಾಧ್ಯ ಹರಪ್ರಿಯಾಂ ।
ತಸ್ಮಾತ್ಕುರು ವಿವಾಹಂ ಮೇ ಹೃತ್ಸ್ಥಂ ಸುಖಮವಾಪ್ನುಹಿ ॥ ೨೩ ॥
ಮದರ್ಥೇ ಪ್ರೇಷಿತೋ ಭರ್ತಾ ತಯಾ ದೇವ್ಯಾಽತಿಸುಂದರಃ ।
ಪುಷ್ಪಚಾಪಃ ಸ್ವಯಂ ಪ್ರಾಪ್ತಃ ಸೋಽಪಿ ತಾತ ತವಾಂತಿಕಂ ॥ ೨೪ ॥
ಅಥ ತಾಂ ಸ ಸಮಾಲೋಕ್ಯ ಸ್ವಾಂ ಸುತಾಂ ಯೌವನಾನ್ವಿತಾಂ ।
ಹರ್ಷೇಣ ಮಹತಾಯುಕ್ತಾಂ ಕಾಂತಯುಕ್ತಾಂ ವಿಶೇಷತಃ ।
ಅಬ್ರವೀದದ್ಯ ಮೇ ಪುತ್ರಿ ಸಂಜಾತಂ ತಪಸಃ ಫಲಂ ॥ ೨೫ ॥
ಜೀವಿತಸ್ಯ ಚ ಕಲ್ಯಾಣಿ ಯತ್ತ್ವಂ ಪ್ರಾಪ್ತಾ ನವಂ ವಯಃ ।
ಭರ್ತಾರಂ ಚ ತಥಾಽಭೀಷ್ಟಂ ದೇವ್ಯಾ ದತ್ತಂ ಮನೋಭವಂ ॥ ೨೬ ॥
ಏತಸ್ಮಿನ್ನಂತರೇ ಕಾಮಸ್ತಸ್ಯಾಂತಿಕಮುಪಾದ್ರವತ್ ।
ಅಬ್ರವೀದ್ದೇಹಿ ಮೇ ಭೂಪ ಸ್ವಾಂ ಕನ್ಯಾಂ ಚಾರುಹಾಸಿನೀಂ ॥ ೨೭ ॥

---

೨೦-೨೧. ನನ್ನ ತಂದೆಯು ಸಮೀಪದಲ್ಲಿಯೇ ಕಾಣುವ ಆ ಸುಂದರವಾದ ಪ್ರಾಸಾದದ ಬಳಿ ತಪಸ್ಸನ್ನು ಮಾಡುತ್ತಿರುವನು. ನಾನು ಮೊದಲು ಹೋಗಿ ಅವನ ಹತ್ತಿರ ಇರುವೆನು. ನೀನು ಅನಂತರ ಬಂದು ನನ್ನನ್ನು ಕೇಳು.

೨೨-೨೩. ಮನ್ಮಥನು ಅದಕ್ಕೆ ಒಪ್ಪಲು ಅವಳು ತಂದೆಯ ಸಮೀಪಕ್ಕೆ ಹೋಗಿ ನಮಸ್ಕಾರ ಮಾಡಿ ಹೀಗೆಂದಳು. "ಅಪ್ಪ! ಅದೃಷ್ಟವಶದಿಂದ ನಾನು ಗೌರೀದೇವಿಯನ್ನಾರಾಧಿಸಿ ಮನೋಹರವಾದ ಯೌವನವನ್ನು ಹೊಂದಿದ್ದೇನೆ. ಆದುದರಿಂದ ನನಗೆ ವಿವಾಹ ಮಾಡಿ ಸುಖವನ್ನು ಪಡೆ.

೨೪. ಆ ಗೌರೀದೇವಿಯು ನನಗೋಸ್ಕರ ಅತಿ ಸುಂದರನಾದ ಪತಿಯನ್ನು ಕಳುಹಿಸಿದ್ದಾಳೆ. ಆ ಮನ್ಮಥನು ತಾನೇ ನಿನ್ನ ಹತ್ತಿರ ಬಂದಿರುವನು" ಎಂದಳು.

೨೫-೨೬. ಆ ಸತ್ಯಸಂಧನು ಯೌವನದಿಂದ ವಿರಾಜಿಸುತ್ತ ಸಂತೋಷಗೊಂಡಿರುವ ಮಗಳನ್ನು ನೋಡಿ, "ಮಗು! ನೀನು ನೂತನ ವಯಸ್ಸನ್ನೂ, ದೇವಿಯು ಕೊಟ್ಟ ಇಷ್ಟನಾದ ಪತಿಯನ್ನೂ ಪಡೆದಿರುವುದರಿಂದ ನನ್ನ ತಪಸ್ಸಿನ ಮತ್ತು ಜೀವನದ ಫಲವು ಈ ದಿನ ಲಭಿಸಿತು" ಎಂದನು.

೨೭. ಇಷ್ಟರಲ್ಲಿ ಮನ್ಮಥನು ಅವನ ಹತ್ತಿರಕ್ಕೆ ಬಂದು, "ಮಹಾರಾಜ! ಸುಂದರಿಯಾದ ನಿನ್ನ ಕನ್ಯೆಯನ್ನು ನನಗೆ ಕೊಡು.

ಅಸ್ಯಾ ಅರ್ಥೇಽಹಮಾದಿಷ್ಟಃ ಸ್ವಯಂ ಗೌರ್ಯಾ ನೃಪೋತ್ತಮ ।
ಕಾಮದೇವ ಇತಿ ಖ್ಯಾತಸ್ತ್ರೈಲೋಕ್ಯಂ ಯೇನ ಮೋಹಿತಂ ॥ ೨೮ ॥
ತತಸ್ತಾಮರ್ಪಯಾಮಾಸ ತಾಂ ಕನ್ಯಾಂ ಸ ಮಹೀಪತಿಃ ।
ಕೃತ್ವಾಽಗ್ನಿಂ ಸಾಕ್ಷಿಣಂ ವಾಕ್ಯಾದ್ಬ್ರಾಹ್ಮಣಾನಾಂ ದ್ವಿಜೋತ್ತಮಾಃ ॥ ೨೯ ॥
ಸಾ ಚಾಽಸ್ಯ ಚಾಽಭವತ್ಪ್ರೀತಿಸ್ಥಾನಂ ಯಸ್ಮಾತ್ಸುಲೋಚನಾ ।
ರತೇರನಂತರಾ ತಸ್ಮಾತ್ಪ್ರೀತಿರ್ನಾಮಾಽಭವಚ್ಛುಭಾ ॥ ೩೦ ॥
ಏವಂ ತಯಾ ತಪಸ್ತಪ್ತಂ ತಸ್ಮಾತ್ತತ್ರ ಜಲಾಶಯೇ ।
ತನ್ನಾಮ್ನಾ ಖ್ಯಾತಿಮಾಯಾತಂ ಸಮಸ್ತೇಽತ್ರ ಮಹೀತಲೇ ॥ ೩೧ ॥
ಸಕಲಂ ಮಾಘಮಾಸಂ ಚ ಯಾ ಸ್ತ್ರೀ ಸ್ನಾನಂ ಸಮಾಚರೇತ್ ।
ಪುಮಾನ್ ವಾ ಪ್ರಾತರುತ್ಥಾಯ ಸ ಪ್ರಯಾಗಫಲಂ ಲಭೇತ್ ॥ ೩೨ ॥
ರೂಪವಾಂ ಜಾಯತೇ ದಕ್ಷಃ ಸದಾ ಜನ್ಮನಿ ಜನ್ಮನಿ ।
ನ ವಿಯೋಗಮವಾಪ್ನೋತಿ ಕದಾಚಿದ್ಬಾಂಧವೈಃ ಸಹ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕರ್ಣೋತ್ಪಲಾತೀರ್ಥಮಾಹಾತ್ಮ್ಯವರ್ಣನಂ" ನಾಮ
ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

---

೨೮. ಇವಳಿಗಾಗಿಯೇ ಗೌರಿಯು ನನ್ನನ್ನು ಅಪ್ಪಣೆಮಾಡಿ ಕಳುಹಿಸಿದ್ದಾಳೆ. ನಾನು ಮೂರು ಲೋಕಗಳನ್ನು ಮೋಹಗೊಳಿಸುವ ಕಾಮದೇವನು" ಎಂದನು.

೨೯. ಅನಂತರ ದೊರೆಯು ಆ ಕನ್ಯೆಯನ್ನು ಬ್ರಾಹ್ಮಣರ ಮಾತಿನಿಂದ ಅಗ್ನಿ ಸಾಕ್ಷಿಯಾಗಿ ಮನ್ಮಥನಿಗೆ ಒಪ್ಪಿಸಿದನು.

೩೦. ಸುಂದರಿಯಾದ ಅವಳು ರತಿಯ ಅನಂತರ ಕಾಮದೇವನಿಗೆ ಪ್ರೀತಿ ವಿಷಯಳಾದ್ದರಿಂದ ಪ್ರೀತಿಯೆಂದು ಹೆಸರಾಂತ ಹೆಂಡತಿಯಾದಳು.

೩೧. ಹೀಗೆ ಅವಳು ಅಲ್ಲಿ ತಪಸ್ಸನ್ನು ಮಾಡಿರುವುದರಿಂದ ಆ ಸರೋವರವು ಭೂಮಂಡಲವಲ್ಲೆಲ್ಲ ಅವಳ ಹೆಸರಿನಿಂದಲೇ ವಿಖ್ಯಾತವಾಯಿತು.

೩೨. ಅಲ್ಲಿ ಮಾಘ ಮಾಸವೆಲ್ಲ ಹೆಂಗಸಾಗಲಿ, ಗಂಡಸಾಗಲಿ ಬೆಳಗ್ಗೆ ಎದ್ದು ಮಿಂದರೆ ಅವರು ಪ್ರಯಾಗಸ್ನಾನದ ಫಲವನ್ನು ಪಡೆಯುವರು.

೩೩. ಅವರು ಪ್ರತಿ ಜನ್ಮದಲ್ಲಿಯೂ ಸುಂದರರೂ, ಕುಶಲರೂ ಆಗುವರು. ಬಾಂಧವರಿಂದ ಯಾವಾಗಲೂ ಅಗಲುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕರ್ಣೋತ್ಪಲಾತೀರ್ಥಮಾಹಾತ್ಮ್ಯವರ್ಣನ" ವೆಂಬ
ನೂರಿಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾವಿಂಶತ್ಯುತ್ತರಶತತಮೋಽಧ್ಯಾಯಃ

## ಅಟೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಸತ್ಯಸಂಧೋಽಪಿ ಹೃಷ್ಟಾತ್ಮಾ ಸುತಾಂ ದೃಷ್ಟ್ವಾ ಸುಖಾನ್ವಿತಾಂ ।
ಅಭೀಷ್ಟಪತಿನಾ ಯುಕ್ತಾಂ ಕೃತಕೃತ್ಯೋ ಬಭೂವ ಹ ॥ ೧ ॥
ತತಸ್ತಸ್ಯೈವ ಲಿಂಗಸ್ಯ ದಕ್ಷಿಣಾಂ ಮೂರ್ತಿಮಾಶ್ರಿತಃ ।
ದೃಢಂ ಪದ್ಮಾಸನಂ ಕೃತ್ವಾ ಸಮ್ಯಗ್ಧ್ಯಾನಪರಾಯಣಃ ॥ ೨ ॥
ಆತ್ಮಾನಮಾತ್ಮನೈವಾಽಥ ಬ್ರಹ್ಮದ್ವಾರೇಣ ಸಂಸ್ಥಿತಃ ।
ತತೋ ನಿಃಸಾರಯಾಮಾಸ ಪುಲಕೇನ ಸಮನ್ವಿತಃ ॥ ೩ ॥
ಅಥ ತೇ ಬ್ರಾಹ್ಮಣಾಸ್ತಸ್ಯ ಚಮತ್ಕಾರಪುರೋದ್ಭವಾಃ ।
ದೇವತಾದರ್ಶನಾರ್ಥಾಯ ಪ್ರಾಪ್ತಾ ದೃಷ್ಟ್ವಾ ಕಲೇವರಂ ॥ ೪ ॥
ಅಪ್ರಿಯಂ ತೇಜಸಾ ಹೀನಂ ಮೃತಮಸ್ಪೃಶ್ಯತಾಂ ಗತಂ ।
ಲಿಂಗಸ್ಯ ನಾಽತಿದೂರಸ್ಥಂ ದಾಹ್ಯಾರ್ಥಂ ಯತ್ನಮಾಶ್ರಿತಾಃ ॥ ೫ ॥
ಯಾವದ್ದುರ್ವಿಂ ಚಿತಾಂ ಕೃತ್ವಾ ತಮನ್ವೇಷ್ಟುಂ ಸಮುದ್ಯತಾಃ ।
ತಾವನ್ನಷ್ಟಂ ಶವಂ ತಚ್ಚ ಜ್ಞಾಯತೇ ನೈವ ಕುತ್ರಚಿತ್ ॥ ೬ ॥

---

## ಕನ್ನಡದ ಅನುವಾದ

### ಅಟೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಸತ್ಯಸಂಧನು ಇಷ್ಟನಾದ ಪತಿಯನ್ನು ಪಡೆದು ಸುಖಗೊಂಡ ಮಗಳನ್ನು ನೋಡಿ ಧನ್ಯನಾದನು.

೨-೩. ಅನಂತರ ಅವನು ಆ ಲಿಂಗದ ದಕ್ಷಿಣ ದಿಕ್ಕಿನಲ್ಲಿ ಪದ್ಮಾಸನದಿಂದ ಕುಳಿತು ಧ್ಯಾನಿಸುತ್ತ ರೋಮಾಂಚಗೊಂಡು ಬ್ರಹ್ಮರಂಧ್ರದಿಂದ ಪ್ರಾಣವನ್ನು ತಾನೇ ತ್ಯಜಿಸಿದನು.

೪-೫. ತರುವಾಯ ದೇವತಾದರ್ಶನಕ್ಕಾಗಿ ಅಲ್ಲಿಗೆ ಬಂದ ಚಮತ್ಕಾರಪುರದ ಬ್ರಾಹ್ಮಣರು ಅಹಿತವೂ, ತೇಜೋಹೀನವೂ, ಮೃತಿಯನ್ನು ಹೊಂದಿರುವುದೂ, ಅಸ್ಪೃಶ್ಯವೂ ಆಗಿ ಆ ಲಿಂಗದ ಹತ್ತಿರವಿರುವ ಸತ್ಯಸಂಧನ ಶರೀರವನ್ನು ನೋಡಿ ದಹನಕ್ಕಾಗಿ ಪ್ರಯತ್ನಿಸಿದರು.

೬. ಆ ಬ್ರಾಹ್ಮಣರು ದೊಡ್ಡ ಚಿತೆಯನ್ನು ರಚಿಸಿ ಅವನ ಶವವನ್ನು ಹುಡುಕಲು ಅದು ಸಿಗಲಿಲ್ಲ. ಏನಾಯಿತೆಂಬುದೂ ತಿಳಿಯಲಿಲ್ಲ.

ತತಶ್ಚ ವಿಸ್ಮಯಾವಿಷ್ಟಾಸ್ತಂ ಪ್ರಶಂಸಾಸಮನ್ವಿತೈಃ ।
ವಚನೈರ್ಬಹುಶೋ ಭೂಯೋ ವಿಕಥ್ಯ ಚ ಮುಹುರ್ಮುಹುಃ ॥ ೭ ॥
ತತಸ್ತಸ್ಯೋತ್ಥ ಲಿಂಗಸ್ಯ ಸರ್ವಂ ಪೂಜಾದಿಕಂ ಚ ಯತ್ ।
ಸರ್ವೇ ನಿರೂಪಯಾಮಾಸುಃ ಸಪ್ತವಿಂಶತಿಮಧ್ಯತಃ ॥ ೮ ॥
ಲಿಂಗಾನಾಂ ತದ್ಭವೇನ್ನಿತ್ಯಂ ಸತ್ಯಸಂಧಸ್ಯ ಭೂಪತೇಃ ।
ಕಾಮದಂ ಭಕ್ತಜಂತೂನಾಂ ಸರ್ವಪಾತಕನಾಶನಂ ॥ ೯ ॥

ಋಷಯ ಊಚುಃ:—

ಚಮತ್ಕಾರನರೇಂದ್ರಸ್ಯ ವಂಶೇ ಕ್ಷೀಣೇ ಮಹಾಮತೇ ।
ಆನರ್ತಾಧಿಪತಿಃ ಕೋಽನ್ಯಸ್ತತ್ರ ರಾಜಾ ಬಭೂವ ಹ ॥ ೧೦ ॥

ಸೂತ ಉವಾಚ:—

ಬೃಹದ್ಬಲೇ ಹತೇ ಭೂಪೇ ಸಂಗ್ರಾಮೇ ದ್ವಿಜಸತ್ತಮಾಃ ।
ಪುತ್ರಬಂಧುಸಮಾಯುಕ್ತಾಃ ಸರ್ವಲೋಕಾಃ ಸಮಾಯಯುಃ ॥ ೧೧ ॥
ಯತ್ರಸ್ಥಃ ಸಮಹೀಪಾಲಃ ಸತ್ಯಸಂಧಸ್ತಪೋಽನ್ವಿತಃ ।
ಶೋಕೋದ್ವಿಗ್ನಾಸ್ತತಃ ಪ್ರಾಹುಸ್ತಂ ಭೂಪಂ ರಹಸಿ ಸ್ಥಿತಂ ॥ ೧೨ ॥
ಕ್ಷೀಣೋಽಯಂ ತಾವಕೋ ವಂಶೋ ನ ಕಶ್ಚಿದ್ವಿದ್ಯತೇ ಯತಃ ।
ದಾಯಾದೋಽಪಿ ಕಥಂ ಪೃಥ್ವೀ ಸಂಪ್ರತೀಯಂ ಭವಿಷ್ಯತಿ ॥ ೧೩ ॥

---

೭–೮. ಅನಂತರ ಅವರು ಆಶ್ಚರ್ಯಗೊಂಡವರಾಗಿ ಅವನನ್ನು ಬಹಳವಾಗಿ ಹೊಗಳಿ ಅವನು ಸ್ಥಾಪಿಸಿದ ಶಿವಲಿಂಗವನ್ನು ಅಲ್ಲಿಯ ಇಪ್ಪತ್ತೇಳು ಲಿಂಗಗಳ ನಡುವೆ ಪೂಜಿಸಿದರು.

೯. ಆ ಸತ್ಯಸಂಧನಿಂದ ಸ್ಥಾಪಿತವಾದ ಲಿಂಗವು ಭಕ್ತರ ಸಕಲ ಪಾಪವನ್ನು ನಾಶಗೊಳಿಸುವುದೂ, ಇಷ್ಟಾರ್ಥವನ್ನೀಯುವುದೂ ಆಗಿರುವುದು.

೧೦. ಋಷಿಗಳು ಹೇಳುತ್ತಾರೆ:—ಪ್ರಾಜ್ಞನೆ! ಚಮತ್ಕಾರ ದೇಶದ ರಾಜನ ವಂಶವು ಕ್ಷೀಣವಾಗಲು ಆ ಆನರ್ತದೇಶಕ್ಕೆ ಬೇರೆ ಯಾರು ರಾಜರಾದರು?

೧೧–೧೨. ಸೂತನು ಹೇಳುತ್ತಾನೆ:— ದ್ವಿಜೋತ್ತಮರೆ! ಸಮರದಲ್ಲಿ ಬೃಹದ್ಬಲ ರಾಜನು ಹತನಾಗಲು ಸಮಸ್ತ ಪ್ರಜೆಗಳೂ ತಪಸ್ಸನ್ನು ಮಾಡುತ್ತಿರುವ ಸತ್ಯಸಂಧನ ಬಳಿಗೆ ಮಕ್ಕಳು ಬಂಧುಗಳು ಮೊದಲಾದವರೊಡನೆ ಬಂದು ರಹಸ್ಯದಲ್ಲಿ ದುಃಖದಿಂದ ಇಂತೆಂದರು.

೧೩. "ಮಹಾರಾಜ! ನಿನ್ನೀ ವಂಶವು ಕ್ಷೀಣವಾಗಿದೆ. ನಿನ್ನ ಸ್ವತ್ತನ್ನು ಅನುಭವಿಸುವವರು ಯಾರೂ ಇಲ್ಲ; ಈಗ ಈ ಭೂಮಿಯು ಹೇಗೆ ಸ್ಥಿರವಾಗಿಹುವುದು?

ಅರಾಜಕೇ ನೃಪಶ್ರೇಷ್ಠ ಮಾತ್ಸ್ಯೋ ನ್ಯಾಯಃ ಪ್ರವರ್ತತೇ ।
ರಾಷ್ಟ್ರೇ ಚೈವ ಪುರೇ ಚೈವ ಗ್ರಾಮೇ ಚೈವ ವಿಶೇಷತಃ ॥ ೧೪ ॥
ಪರದಾರರತಾ ಯೇ ಚ ಯೇ ಚ ತಸ್ಕರವೃತ್ತಯಃ ।
ಸರ್ವೇ ರಾಜಭಯಾದ್ರಾಜನ್ ಮರ್ಯಾದಾಂ ಪಾಲಯಂತಿ ವೈ ॥ ೧೫ ॥
ತಸ್ಮಾತ್ತ್ವಂ ತಪ ಉತ್ಸೃಜ್ಯ ರಾಜ್ಯಂ ಪೂರ್ವಕ್ರಮಾಗತಂ ।
ಕುರು ರಾಜ್ಯಂ ತಥಾ ದಾರಾನ್ ಪುತ್ರಾರ್ಥಂ ಪ್ರಾಪ್ಯ ಮಾಚಿರಂ ॥ ೧೬ ॥

ರಾಜೋವಾಚ :—

ಸನ್ಯಸ್ತೋಽಹಂ ದ್ವಿಜಶ್ರೇಷ್ಠಾ ನ ರಾಜ್ಯಂ ಕರ್ತುಮುತ್ಸಹೇ ।
ನ ಸುತಾನಾಂ ನ ದಾರಾಣಾಂ ಸಂಗ್ರಹಂ ಚ ಕಥಂಚನ ॥ ೧೭ ॥
ತತ್ಪುತ್ರಾರ್ಥಂ ಪ್ರವಕ್ಷ್ಯಾಮಿ ಯುಷ್ಮಾಕಂ ಸ್ವಾಮಿನಃ ಕೃತೇ ।
ಉಪಾಯಂ ಯೇನ ರಾಜಾ ಸ್ಯಾದಾನರ್ತೇ ಲೋಕಪಾಲಕಃ ॥ ೧೮ ॥
ಜಾಮದಗ್ನ್ಯೇನ ರಾಮೇಣ ಯದಾ ಕ್ಷತ್ರಂ ನಿಪಾತಿತಂ ।
ಗರ್ಭಸ್ಥಮಪಿ ಕಾರ್ತ್ಸ್ನ್ಯೇನ ಕೋಪೋಪಹತಚೇತಸಾ ॥ ೧೯ ॥
ತತಃ ಕ್ಷತ್ರಿಯಭಾರ್ಯಾಃ ಪ್ರಾಗೃತುಸ್ನಾನಾತ್ಸಮಾಯಯುಃ ।
ಬ್ರಾಹ್ಮಣಾನ್ ಪುತ್ರಜನ್ಮಾರ್ಥಂ ನ ಕಾಮಾರ್ಥಂ ಕಥಂಚನ ॥ ೨೦ ॥

---

೧೪. ದೊರೆಯೆ! ರಾಜರಿಲ್ಲದ ದೇಶ, ಪಟ್ಟಣ, ಗ್ರಾಮ ಇವುಗಳಲ್ಲಿ ಪ್ರಬಲರು ದುರ್ಬಲರನ್ನು ನಾಶಗೊಳಿಸುವ ಮಾತ್ಸ್ಯ ನ್ಯಾಯವುಂಟಾಗುವುದು.

೧೫. ಪರದಾರನಿರತರೂ, ಕಳ್ಳರೂ ರಾಜನ ಭಯದಿಂದ ಕಟ್ಟಳೆಯನ್ನು ಪಾಲಿಸುವರು.

೧೬. ಆದುದರಿಂದ ನೀನು ತಪಸ್ಸನ್ನು ತ್ಯಜಿಸಿ ಶೀಘ್ರವಾಗಿ ಪುತ್ರರಿಗಾಗಿ ಪತ್ನಿಯನ್ನು ಹೊಂದಿ ಕುಲಕ್ರಮಾಗತವಾದ ರಾಜ್ಯವನ್ನು ಆಳು."

೧೭. ರಾಜನು ಹೇಳುತ್ತಾನೆ:—ದ್ವಿಜವರ್ಯರೆ! ಸನ್ಯಾಸಿಯಾದ ನಾನು ರಾಜ್ಯವನ್ನಾಳಲು ಬಯಸುವುದಿಲ್ಲ. ಪುತ್ರದಾರರ ಸಂಗ್ರಹವನ್ನೂ ಮಾಡಲಾರೆನು.

೧೮. ರಾಜನಾಗುವ ಪುತ್ರನನ್ನು ಪಡೆಯಲು ನಿಮಗೆ ಉಪಾಯವನ್ನು ಹೇಳುವೆನು. ಅದರಿಂದ ಆನರ್ತದೇಶಕ್ಕೆ ದೊರೆಯು ಲಭಿಸುವನು.

೧೯—೨೦. ಜಮದಗ್ನಿಯ ಮಗನಾದ ಪರಶುರಾಮನು ಕೋಪಗೊಂಡು ಗರ್ಭದಲ್ಲಿರುವ ಕ್ಷತ್ರಿಯ ಶಿಶುವನ್ನೂ ಬಿಡದೆ ಕೊಲ್ಲಲು ಕ್ಷತ್ರಿಯರ ಪತ್ನಿಯರು ಪುತ್ರರನ್ನು ಪಡೆಯುವುದಕ್ಕಾಗಿ ಋತುಕಾಲದಲ್ಲಿ ಬ್ರಾಹ್ಮಣರನ್ನು ಸೇರಿದರು. ಕಾಮಕ್ಕಾಗಿ ಅಲ್ಲ.

ತತಃ ಪುತ್ರಾಃ ಸಮುತ್ಪನ್ನಾಸ್ತೇಜೋವೀರ್ಯಸಮನ್ವಿತಾಃ ।
ಕ್ಷೇತ್ರಜಾ ಭೂಮಿಪಾಲಾನಾಂ ಸಂಜಾತಾಶ್ಚ ಮಹೀಕ್ಷಿತಃ ॥ ೨೧ ॥
ತಸ್ಮಾದ್ಬೃಹದ್ಬಲಸ್ಯೈತಾ ಭಾರ್ಯಾಸ್ತಿಷ್ಠಂತಿ ಯಾ ಜನಾಃ ।
ಬ್ರಾಹ್ಮಣಾಂಸ್ತಾ ಉಪಾಗಮ್ಯ ಋತುಸ್ನಾತಾ ಯಥೋಚಿತಾನ್ ॥ ೨೨ ॥
ಲಭಿಷ್ಯಂತಿ ಚ ಪುತ್ರಾಂಸ್ತಾಸ್ತೇಭ್ಯಃ ಕ್ಷತ್ರಿಯಪುಂಗವಾನ್ ।
ಯೇ ಭೂಮಿಂ ಪಾಲಯಿಷ್ಯಂತಿ ಪಾಲಯಿಷ್ಯಂತಿ ಚ ಪ್ರಜಾಃ ॥ ೨೩ ॥
ತಥಾತ್ರಾಸ್ತಿ ಶುಭಂ ಕುಂಡಂ ವಾಸಿಷ್ಠಂ ಪುತ್ರಜನ್ಮದಂ ।
ಯತ್ರ ಸ್ನಾತಾ ಋತೌ ನಾರೀ ಸದ್ಯೋ ಗರ್ಭವತೀ ಭವೇತ್
ಅಮೋಘರೇತಾಃ ಕಾಂತಾ ಚ ಸ್ನಾನಾದತ್ರ ಪ್ರಜಾಯತೇ ॥ ೨೪ ॥
ಯೇ ಪೂರ್ವಂ ಕ್ಷತ್ರಿಯಾ ಜಾತಾ ಬ್ರಾಹ್ಮಣೈಃ ಕ್ಷತ್ರಿಣೀಷು ಚ ।
ತೇ ಸರ್ವೇ ತತ್ಪ್ರಭಾವೇನ ಸಂಜಾತಾ ನಾಽತ್ರ ಸಂಶಯಃ ॥ ೨೫ ॥
ಯಯಾ ಯಯಾ ದ್ವಿಜೋ ಯಶ್ಚ ಕ್ಷತ್ರಿಣ್ಯಾಭೂದ್ವೃತಃ ಪುರಾ ।
ತಯಾ ಸಹ ಸಮಾಗತ್ಯ ಸ್ನಾತಂ ಮಂತ್ರಪುರಸ್ಕೃತಂ ॥ ೨೬ ॥
ಸಕೃನ್ಮೈಥುನ ಸಂಸರ್ಗಾತ್ತತಸ್ತೀರ್ಥಪ್ರಭಾವತಃ ।
ಸರ್ವಾಸಾಂ ಯತ್ಸುತಾ ಜಾತಾ ದುಹಿತಾ ನ ಕಥಂಚನ ॥ ೨೭ ॥

---

೨೧. ಅನಂತರ ಕ್ಷತ್ರಿಯರ ಪತ್ನಿಯರಲ್ಲಿ ಜನಿಸಿದ ತೇಜೋವೀರ್ಯಗಳಿಂದ ಕೂಡಿದ ಆ ಪುತ್ರರು ರಾಜರಾದರು.

೨೨–೨೩. ಆದುದರಿಂದ ಬೃಹದ್ಬಲನ ಈ ಪತ್ನಿಯರು ಋತುಸ್ನಾನ ಮಾಡಿದವರಾಗಿ ತಮಗುಚಿತರಾದ ಬ್ರಾಹ್ಮಣರನ್ನು ಸೇರಿ ಕ್ಷತ್ರಿಯೋತ್ತಮರಾಗುವ ಮಕ್ಕಳನ್ನು ಪಡೆಯುವರು. ಅವರು ಭೂಮಿಯನ್ನೂ, ಪ್ರಜೆಗಳನ್ನೂ ಕಾಪಾಡುವರು.

೨೪. ಇಲ್ಲಿ ಪುತ್ರರನ್ನೀಯುವ ಶುಭಕರವಾದ ವಾಸಿಷ್ಠ ಕುಂಡವಿದೆ. ಇಲ್ಲಿ ಮಿಂದ ಋತುಸ್ನಾತಳಾದ ನಾರಿಯು ಕೂಡಲೆ ಗರ್ಭಿಣಿಯಾಗುವಳು. ಸಾಮಾನ್ಯ ಸ್ತ್ರೀಯು ಸಫಲರೇತಸ್ಸುಳ್ಳವಳಾಗುವಳು.

೨೫. ಹಿಂದೆ ಬ್ರಾಹ್ಮಣರಿಂದ ಕ್ಷತ್ರಿಯರಲ್ಲಿ ಜನಿಸಿದ ಕ್ಷತ್ರಿಯರೆಲ್ಲ ಆ ಕುಂಡದ ಮಾಹಾತ್ಮ್ಯದಿಂದಲೇ ಹುಟ್ಟಿರುವರು.

೨೬. ಹಿಂದೆ ಯಾವ ಕ್ಷತ್ರಿಯ ಸ್ತ್ರೀಯು ಯಾವ ಬ್ರಾಹ್ಮಣನನ್ನು ವರಿಸಿದಳೊ, ಆ ಬ್ರಾಹ್ಮಣನು ಅವಳೊಡನೆ ಈ ಕುಂಡಕ್ಕೆ ಬಂದು ಮಂತ್ರಪೂರ್ವಕವಾಗಿ ಮಿಂದಿರುವನು.

೨೭. ಈ ತೀರ್ಥದ ಪ್ರಭಾವದಿಂದ ಸಮಸ್ತ ಸ್ತ್ರೀಯರಿಗೂ ಒಂದು ಸಾರಿ ಪುರುಷರ ಸಂಬಂಧದಿಂದಲೇ ಪುತ್ರರು ಜನಿಸಿದರು. ಪುತ್ರಿಯು ಹುಟ್ಟಲಿಲ್ಲ.

ಯೇ ಕೇಚಿತ್ಸುತ್ರದಾ ಮಂತ್ರಾಶ್ಚಾತುಶ್ಚರಣ ಸಂಭವಾಃ ।
ತೇ ಸರ್ವೇಽತ್ರ ವಸಿಷ್ಠೇನ ಪ್ರಯುಕ್ತಾಃ ಕ್ಷತ್ರಮಿಚ್ಛತಾ ॥ ೨೮ ॥
ದಂಪತ್ಯೋಃ ಸ್ನಾನಮಾತ್ರೇಣ ಜಾತೇಽತ್ರ ಸ್ಯಾತ್ಸುಪುತ್ರಕಃ ।
ತಸ್ಮಾತ್ಸುಪುತ್ರದಂ ನಾಮ ಕುಂಡಮೇತನ್ನಿಗದ್ಯತೇ ॥ ೨೯ ॥
ತಸ್ಮಾದ್ಭಾರ್ಯಾಃ ಸಮಸ್ತಾಸ್ತಾ ಬೃಹದ್ಬಲಸಮುದ್ಭವಾಃ ।
ಅತ್ರ ಸ್ನಾನಂ ಪ್ರಕುರ್ವಂತು ಯಥೋಕ್ತ ವಿಧಿನಾ ಜನಾಃ ॥ ೩೦ ॥
ನೈವ ಕಿಂಚಿದಸತ್ಯಂ ಸ್ಯಾನ್ನ ಚ ನಿಂದಾಕರಂ ತಥಾ ।
ಶ್ರೂಯತೇ ಚ ಯತಃ ಶ್ಲೋಕಃ ಪೂರ್ವಾಚಾರ್ಯೈರುದಾಹೃತಃ ॥ ೩೧ ॥
ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುಚ್ಛ್ರಿತಂ ।
ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥ ೩೨ ॥
ತಚ್ಛ್ರುತ್ವಾ ತೇ ಜನಾಃ ಸರ್ವೇ ಸಚಿವಾನಾಂ ವಚೋಽಖಿಲಂ ।
ತದಾಚಖ್ಯುರ್ದ್ರುತಂ ಗತ್ವಾ ಸತ್ಯಸಂಧಸ್ಯ ಭೂಪತೇಃ ॥ ೩೩ ॥
ತತಸ್ತಾಃ ಸರ್ವಶೋ ದಾರಾ ಬ್ರಾಹ್ಮಣಾನತಿಸುಂದರಾನ್ ।
ಋತುಸ್ನಾತಾಃ ಸಮಾಜಗ್ಮುರ್ನೃಪಪತ್ನ್ಯಃ ಸುಹರ್ಷಿತಾಃ ॥ ೩೪ ॥

---

೨೮. ಕ್ಷತ್ರಿಯವಂಶವನ್ನು ಅಭಿವೃದ್ಧಿಗೊಳಿಸಲು ಇಚ್ಛಿಸುವ ವಸಿಷ್ಠನು ಚತುರ್ವೇದಗಳ ಪುತ್ರರನ್ನು ಕೊಡುವ ಮಂತ್ರಗಳನ್ನೆಲ್ಲ ಇಲ್ಲಿ ಪ್ರಯೋಗಿಸಿರುವನು.

೨೯. ಇಲ್ಲಿ ದಂಪತಿಗಳು ಸ್ನಾನ ಮಾಡುವುದರಿಂದ, ಸುಪುತ್ರನು ಜನಿಸುವುದರಿಂದ ಈ ಕುಂಡವು ಸುಪುತ್ರದ ಎಂದು ಹೇಳಿಸಿಕೊಳ್ಳುವುದು.

೩೦. ಆದುದರಿಂದ ಬೃಹದ್ಬಲನ ಪತ್ನಿಯರೆಲ್ಲ ವಿಧಿಯಂತೆ ಇಲ್ಲಿ ಸ್ನಾನ ಮಾಡಲಿ.

೩೧. ಇದು ಸುಳ್ಳೂ, ನಿಂದಾಕರವೂ ಅಲ್ಲ. ಈ ವಿಷಯದಲ್ಲಿ ಪೂರ್ವಾಚಾರ್ಯರು ಹೇಳಿರುವ ಶ್ಲೋಕವನ್ನು ಕೇಳಿದ್ದೇವೆ.

೩೨. ನೀರಿನಿಂದುಂಟಾದ ಅಗ್ನಿಯೂ, ಬ್ರಾಹ್ಮಣನಿಂದಾದ ಕ್ಷತ್ರಿಯ ವಂಶವೂ, ಕಲ್ಲಿನಿಂದುಂಟಾದ ಲೋಹವೂ ಇವುಗಳ ಸರ್ವವ್ಯಾಪಿಯಾದ ತೇಜಸ್ಸು ಸ್ವಕೀಯ ಕಾರಣಗಳಲ್ಲಿ ಶಾಂತವಾಗುತ್ತದೆ.

೩೩. ಆ ಜನರು ಸತ್ಯಸಂಧನ ಮಾತುಗಳನ್ನು ಕೇಳಿ ಅವೆಲ್ಲವನ್ನೂ ಬೃಹದ್ಬಲನ ಮಂತ್ರಿಗಳಿಗೆ ಹೇಳಿದರು.

೩೪. ಅನಂತರ ಋತುಸ್ನಾತರಾದ ರಾಣಿಯರು ಸಂತೋಷದಿಂದ ಅತಿ ಸುಂದರರಾದ ಬ್ರಾಹ್ಮಣರನ್ನು ಸೇರಿದರು.

ಯತ್ರ ತತ್ಪುತ್ರದಂ ತೀರ್ಥಂ ವಸಿಷ್ಠೇನ ವಿನಿರ್ಮಿತಂ ।
ತತ್ರ ಸ್ನಾತ್ವಾ ಸಕೃತ್ಸಂಗಂ ಸಮಾಸಾದ್ಯ ದ್ವಿಜೋದ್ಭವಂ ॥ ೩೫ ॥
ಸರ್ವಾಸ್ತಾಃ ಪುತ್ರವತ್ಯಶ್ಚ ಸಂಜಾತಾ ದ್ವಿಜಸತ್ತಮಾಃ ।
ಆಸೀತ್ತಸ್ಯ ನರೇಂದ್ರಸ್ಯ ಶತಂ ಪಂಚಭಿರನ್ವಿತಂ ॥ ೩೬ ॥
ತಾಸಾಂ ಸಮುಭವದ್ವಿಪ್ರಾಃ ಶತಂ ಪಂಚಾಧಿಕಂ ತಥಾ ॥ ೩೭ ॥
ಪ್ರತ್ಯೇಕಂ ನರಪುತ್ರಾಣಾಂ ವಂಶವೃದ್ಧಿಕರಂ ಪರಂ ।
ಆನಂದಜನನಂ ಸಮ್ಯಕ್ಸರ್ವೇಷಾಂ ರಾಷ್ಟ್ರವಾಸಿನಾಂ ॥ ೩೮ ॥
ತತ್ರ ಶ್ರೇಷ್ಠೋಽಭವತ್ಪುತ್ರೋ ಯ ಆನರ್ತಪತಿರ್ಭುವಿ ।
ಅಟೋ ನಾಮ ಸುವಿಖ್ಯಾತಃ ಸರ್ವಶತ್ರುನಿಬರ್ಹಣಃ ॥ ೩೯ ॥
ಅಟೇಶ್ವರ ಇತಿ ಖ್ಯಾತೋ ಯೇನ ದೇವೋಽತ್ರ ನಿರ್ಮಿತಃ ।
ಸುಭಕ್ತ್ಯಾ ಯೇನ ದೃಷ್ಟೇನ ವಂಶೋಚ್ಛಿತ್ತಿರ್ನಜಾಯತೇ ॥ ೪೦ ॥

ಋಷಯ ಊಚುಃ:—

ಕಸ್ಮಾತ್ತಸ್ಯ ಕೃತಂ ನಾಮ ಏತಚ್ಚಾಟ ಇತಿ ಸ್ಮೃತಂ ।
ಅನ್ವಯೇನ ಪರಿತ್ಯಕ್ತಂ ತಸ್ಮಾತ್ಕೀರ್ತಯ ಸೂತಜ ॥ ೪೧ ॥
ಸಚಿವೈರ್ಬ್ರಾಹ್ಮಣೈರ್ವಾಽಪಿ ತಸ್ಯೈತನ್ನಾಮ ನಿರ್ಮಿತಂ ।
ಮಾತ್ರಾ ವಾ ತತ್ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೪೨ ॥

ಸೂತ ಉವಾಚ:—

ನ ಮಾತ್ರಾ ತತ್ಕೃತಂ ನಾಮ ನ ವಿಪ್ರೈಃ ಸಚಿವೈರ್ನೃಪ ।
ತತ್ಕೃತಂ ದೇವದೂತೇನ ವ್ಯೋಮಸ್ಥೇನ ದ್ವಿಜೋತ್ತಮಾಃ ॥ ೪೩ ॥

---

೩೫—೩೮. ಆ ರಾಣಿಯರು ವಸಿಷ್ಠನು ನಿರ್ಮಿಸಿದ ಆ ಪುತ್ರದ ತೀರ್ಥದಲ್ಲಿ ಮಿಂದು ಒಂದು ಬಾರಿ ಬ್ರಾಹ್ಮಣರನ್ನು ಸೇರಿ ಪುತ್ರರನ್ನು ಪಡೆದರು. ಹೀಗೆ ಆ ರಾಣಿಯರಿಗೆ ವಂಶವೃದ್ಧಿಯನ್ನುಂಟುಮಾಡುವ ರಾಜ್ಯದ ಸಕಲ ಪ್ರಜೆಗಳಿಗೆ ಆನಂದವನ್ನೀಯುವ ನೂರೈದುಸ್ಸಮಂದಿ ಮಕ್ಕಳು ಜನಿಸಿದರು.

೩೯. ಅವರಲ್ಲಿ ಜ್ಯೇಷ್ಠಪುತ್ರನು ಅಟನೆಂದು ವಿಖ್ಯಾತನಾಗಿ ಸಕಲ ಶತ್ರುಗಳನ್ನೂ ನಾಶಗೊಳಿಸುವ ಆನರ್ತದೇಶದ ದೊರೆಯಾದನು.

೪೦. ಅವನು ಇಲ್ಲಿ ಅಟೇಶ್ವರನನ್ನು ಪ್ರತಿಷ್ಠೆಮಾಡಿರುವನು. ಆ ಅಟೇಶ್ವರನನ್ನು ಭಕ್ತಿಯಿಂದ ದರ್ಶನಮಾಡುವವನ ವಂಶವು ನಷ್ಟವಾಗುವುದಿಲ್ಲ.

೪೧. ಋಷಿಗಳು ಹೇಳುತ್ತಾರೆ:—ಸೂತ! ಆ ರಾಜಕುಮಾರನಿಗೆ ವಂಶಕ್ಕೆ ಸಂಬಂಧಿಸದ ಅಟ ಎಂಬ ಹೆಸರನ್ನು ಇಡಲು ಕಾರಣವನ್ನು ಹೇಳು.

೪೨—೪೩. ಮಂತ್ರಿಗಳಾಗಲಿ, ಬ್ರಾಹ್ಮಣರಾಗಲಿ, ತಾಯಿಯಾಗಲಿ ಈ ಹೆಸರನ್ನಿಟ್ಟರೆ? ನನಗೆ ಬಹಳ ಕೌತೂಹಲವುಂಟಾಗಿದೆ. ಅದನ್ನು ನಮಗೆ ಹೇಳು. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ತಾಯಿಯಾಗಲಿ;

ಯಥಾ ತಥಾ ಪ್ರವಕ್ಷ್ಯಾಮಿ ಶ್ರೋತವ್ಯಂ ಸುಸಮಾಹಿತೈಃ ।
ಯಯಾ ಸ ಭೂಪತಿರ್ಜಾತೋ ದಶಾರ್ಣಾಧಿಪತೇಃ ಸುತಾ ॥ ೪೪ ॥
ಸಾ ರೂಪಯೌವನೋಪೇತಾ ರೂಪಾಢ್ಯಂ ಪ್ರಾಪ್ಯ ಸದ್ದ್ವಿಜಂ ।
ಪ್ರಸ್ಥಿತಾ ಸ್ನಾತುಕಾಮಾಽಥ ಪುತ್ರತೀರ್ಥೇ ಮೃಗೇಕ್ಷಣಾ ॥ ೪೫ ॥
ಸಹಿತಾ ತೇನ ವಿಪ್ರೇಣ ಕಂದರ್ಪಪ್ರತಿಮೇನ ಚ ।
ಅಥ ತಾಭ್ಯಾಂ ಮಹಾನ್ರಾಗೋ ಮಿಥಃ ಸಂದರ್ಶನಾತ್ ಸ್ಥಿತಃ ॥ ೪೬ ॥
ತಾದೃಙ್ಮಾತ್ರಂ ಸುಕೃಚ್ಛ್ರೇಣ ಪ್ರಾಪ್ತಂ ತೀರ್ಥಂ ಸುತಪ್ರದಂ ।
ತತಃ ಸ್ನಾತ್ವಾ ಜಲೇ ತಸ್ಮಿನ್ನಿಷ್ಕ್ರಾಂತೌ ತೌ ಸುಕಾಮುಕೌ ॥ ೪೭ ॥
ವ್ರಜಮಾನೌ ಚ ಮಾರ್ಗೇಽಪಿ ಕಾಮಧರ್ಮಮುಪಾಗತೌ ।
ಅಥೌತ್ಸುಕ್ಯಾತ್ಸುಸಂಹೃಷ್ಟೌ ಲಜ್ಜಾಂ ತ್ಯಕ್ತ್ವಾ ಸುದೂರತಃ ॥ ೪೮ ॥
ನಿಂದಮಾನಸ್ಯ ಲೋಕಸ್ಯ ವಿಚ್ಛೇದವಚನೈಸ್ತದಾ ।
ವೀರ್ಯೋತ್ಸರ್ಗೇಽಥ ಸಂಜಾತೇ ಯಾವದುತ್ತಿಷ್ಠತೇ ದ್ವಿಜಃ ॥ ೪೯ ॥
ತಾವದಾಕಾಶಗಾ ವಾಣೀ ಸಹಸಾ ದೇವನಿರ್ಮಿತಾ ।
ಅಟಿತಾ ರಾಜಮಾರ್ಗೇಣ ವಿಪ್ರೇಣಾಽನೇನ ವೈ ಯತಃ ॥ ೫೦ ॥
ಉತ್ಪಾದಿತಸ್ತು ಪುತ್ರೋಽಯಮೌತ್ಸುಕ್ಯಾದ್ಬ್ರಾಹ್ಮಣೇನ ತು ।
ಅಟಾಖ್ಯೋ ಭೂಪತಿಸ್ತಸ್ಮಾಲ್ಲೋಕೇ ಖ್ಯಾತೋ ಭವಿಷ್ಯತಿ ॥ ೫೧ ॥

---

ಬ್ರಾಹ್ಮಣರಾಗಲಿ, ಮಂತ್ರಿಗಳಾಗಲಿ ಅವನಿಗೆ ಆ ಹೆಸರನ್ನಿಡಲಿಲ್ಲ. ಆಕಾಶವಲ್ಲಿ ಸಂಚರಿಸುವ ದೇವದೂತನು ಆ ಹೆಸರನ್ನಿಟ್ಟನು.

೪೪–೪೬. ಆ ದೇವದೂತನು ಹೇಗೆ ಆ ಹೆಸರನ್ನಿಟ್ಟನು? ಅವನು ಹೇಗೆ ರಾಜನಾದನು ಎಂಬುದನ್ನು ಹೇಳುವೆನು ಕೇಳು. ಸುಂದರಿಯಾದ ದಶಾರ್ಣ ದೇಶದ ರಾಜನ ಮಗಳು ಸುಂದರನಾದ ಬ್ರಾಹ್ಮಣನನ್ನು ಹೊಂದಿ ಅವನೊಡನೆ ಪುತ್ರದ ತೀರ್ಥದಲ್ಲಿ ಸ್ನಾನ ಮಾಡಲು ಹೊರಟಳು. ಆಗ ಅವರೀರ್ವರಿಗೆ ಪರಸ್ಪರ ದರ್ಶನದಿಂದ ಅತ್ಯಂತ ಪ್ರೀತಿಯುಂಟಾಯಿತು.

೪೭–೪೮. ಆ ಸುತಪ್ರದ ತೀರ್ಥವನ್ನು ಕಷ್ಟದಿಂದ ಹೊಂದಿ ಅಲ್ಲಿ ಮಿಂದು ಹೊರಟ ಆ ಇಬ್ಬರು ಕಾಮುಕರು ದಾರಿಯಲ್ಲಿ ಹೋಗುತ್ತ ನಾಚಿಕೆಯನ್ನು ತ್ಯಜಿಸಿ ಔತ್ಸುಕ್ಯಸಂತೋಷಗಳಿಂದ ಕಾಮಪರವಶರಾದರು.

೪೯. ಆಗ ಜನರು ಕಠಿನಮಾತುಗಳಿಂದ ಅವರನ್ನು ನಿಂದಿಸುತ್ತಿರಲು ದ್ವಿಜನು ವೀರ್ಯೋತ್ಸರ್ಗವನ್ನುಮಾಡಿ ಮೇಲಕ್ಕೆದ್ದನು.

೫೦–೫೩. ಅಷ್ಟರಲ್ಲಿ ಕೂಡಲೆ ದೇವತೆಗಳ ಆಕಾಶವಾಣಿಯು ಈರೀತಿ ಯಾಯಿತು. ಈ ಬ್ರಾಹ್ಮಣನು ರಾಜಮಾರ್ಗದಲ್ಲಿ ಸಂಚರಿಸುತ್ತ ಔತ್ಸುಕ್ಯದಿಂದ ಹುಟ್ಟಿಸಿದ ಈ ಬಾಲಕನು ಲೋಕದಲ್ಲಿ ದೀರ್ಘಾಯುಷ್ಮಂತನೂ, ಅನೇಕ ಪುತ್ರ

ದೀರ್ಘಾಯುರ್ಬಹುಪುತ್ರಶ್ಚ ಶತ್ರುಪಕ್ಷಕ್ಷಯಾವಹಃ ।
ಏತಸ್ಮಾತ್ಕಾರಣಾದ್ವಿಪ್ರಾ ಅಟಾಖ್ಯಃ ಸ ಬಭೂವ ಹ ॥ ೫೨ ॥
ಸ್ವವಂಶೋದ್ಧರಚಂದ್ರೋಽತ್ರ ವಾಂಛಿತಾರ್ಥಪ್ರದೋಽರ್ಥಿನಾಂ ।
ತೇನೈತತ್ಕ್ಷೇತ್ರಮಾಸಾದ್ಯ ಸ್ಥಾಪಿತಂ ಲಿಂಗಮುತ್ತಮಂ ।
ಸ್ವನಾಮ್ನಾ ಬ್ರಾಹ್ಮಣಶ್ರೇಷ್ಠಾಃ ಸರ್ವದೇಷ್ಟಪ್ರದಂ ನೃಣಾಂ ॥ ೫೩ ॥
ಯಸ್ತನ್ಮಾಘಚತುರ್ದಶ್ಯಾಂ ಪೂಜಯೇಚ್ಛ್ರದ್ಧಯಾನ್ವಿತಃ ।
ನ ತಸ್ಯ ಜಾಯತೇ ಕಿಂಚಿದ್ದುಃಖಂ ಸಂತಾನಸಂಭವಂ ॥ ೫೪ ॥
ಅಪಿ ವರ್ಷಶತಾ ನಾರೀ ಸ್ನಾತ್ವಾ ಕುಂಡೇ ಸುತಪ್ರದೇ ।
ಅಟೇಶ್ವರಂ ತತಃ ಪಶ್ಯೇಚ್ಛಿವಭಕ್ತಿಪರಾಯಣಾ ॥ ೫೫ ॥
ಸದ್ಯಃ ಪುತ್ರಮವಾಪ್ನೋತಿ ವಂಶವೃದ್ಧಿಕರಂ ಪರಂ ।
ತತ್ಪ್ರಸಾದಾನ್ನ ಸಂದೇಹಃ ಕಾರ್ತಿಕೇಯ ವಚೋ ಯಥಾ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಟೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ"
ನಾಮಾಷ್ಟಾವಿಂಶತ್ಯುತ್ತರಶತತಮೋಽಧ್ಯಾಯಃ

---

ಯುಳ್ಳವನೂ, ಶತ್ರು ಸಂಹಾರಕನೂ ಆಗಿ ಅಟನೆಂದು ಪ್ರಸಿದ್ಧ ದೊರೆಯಾಗುವನು. ವಿಪ್ರರೆ! ಇದರಿಂದಲೇ ಅವನು ಅಟನೆಂಬ ಹೆಸರನ್ನು ಪಡೆದಿರುವನು. ಮತ್ತು ತನ್ನ ವಂಶೋದ್ಧಾರಕನೂ, ಅರ್ಥಿಗಳಿಗೆ ಇಷ್ಟಾರ್ಥದಾಯಕನೂ ಆದನು. ಅವನು ಈ ಕ್ಷೇತ್ರಕ್ಕೆ ಬಂದು ತನ್ನ ಹೆಸರಿನಿಂದ ಮನುಷ್ಯರಿಗೆ ಇಷ್ಟಾರ್ಥವನ್ನು ನೀಡುವ ಶಿವಲಿಂಗವನ್ನು ಸ್ಥಾಪಿಸಿದನು.

೫೪. ಮಾಘ ಚತುರ್ದಶೀ ದಿನ ಶ್ರದ್ಧೆಯಿಂದ ಅಟೇಶ್ವರನನ್ನು ಪೂಜಿಸಿದವನಿಗೆ ಸಂತಾನಸಂಬಂಧವಾದ ಯಾವ ದುಃಖವೂ ಉಂಟಾಗುವುದಿಲ್ಲ.

೫೫–೫೬. ನೂರುವರ್ಷ ವಯಸ್ಸಿನ ಹೆಂಗಸೂ ಪುತ್ರಪ್ರದವಾದ ಈ ಕುಂಡದಲ್ಲಿ ಮಿಂದು ಶಿವಭಕ್ತಿ ನಿರತಳಾಗಿ ಅಟೇಶ್ವರನನ್ನು ದರ್ಶನಗೈದರೆ ಅವನ ಅನುಗ್ರಹದಿಂದ ಕೂಡಲೆ ಕಾರ್ತಿಕೇಯನ ಮಾತಿನಂತೆ ವಂಶವನ್ನು ವೃದ್ಧಿಗೊಳಿಸುವ ಪುತ್ರನನ್ನು ಪಡೆಯುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಟೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನೂರಿಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನತ್ರಿಂಶದುತ್ತರಶತತಮೋಽಧ್ಯಾಯಃ

### ಯಾಜ್ಞವಲ್ಕ್ಯಾಶ್ರಮಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾಽನ್ಯೋಽಪಿ ಚ ತತ್ರಾಽಸ್ತಿ ಯಾಜ್ಞವಲ್ಕ್ಯಸಮುದ್ಭವಃ ।
ಆಶ್ರಮೋ ಲೋಕವಿಖ್ಯಾತೋ ಮೂರ್ಖಾಣಾಮಪಿ ಸಿದ್ಧಿದಃ ॥ ೧ ॥
ಯತ್ರ ತಪ್ತ್ವಾ ತಪಸ್ತೀವ್ರಂ ಯಾಜ್ಞವಲ್ಕ್ಯೇನ ಧೀಮತಾ ।
ಸಂಪ್ರಾಪ್ತಾ ನಿಖಿಲಾ ವೇದಾ ಗುರುಣಾಽಪಹೃತಾಶ್ಚ ಯೇ ॥ ೨ ॥

ಋಷಯ ಊಚುಃ :—

ಕೋಽಸೌ ಗುರುರಭೂತ್ತಸ್ಯ ಯಾಜ್ಞವಲ್ಕ್ಯಸ್ಯ ಧೀಮತಃ ।
ಪಾಠಯಿತ್ವಾ ಪುನರ್ಯೇನ ಹೃತಾ ವೇದಾ ಮಹಾತ್ಮನಾ ॥ ೩ ॥
ಕಿಮರ್ಥಂ ಚ ಸಮಾಚಕ್ಷ್ವ ಸೂತಪುತ್ರಾಽತ್ರ ವಿಸ್ತರಾತ್ ।
ಕೌತುಕಂ ಪರಮಂ ಜಾತಂ ಸರ್ವೇಷಾಂ ನೋ ದ್ವಿಜನ್ಮನಾಂ ॥ ೪ ॥

ಸೂತ ಉವಾಚ :—

ಆಸೀದ್ಬ್ರಾಹ್ಮಣಶಾರ್ದೂಲಃ ಶಾಕಲ್ಯ ಇತಿ ವಿಶ್ರುತಃ ।
ಭಾರ್ಗವಾಽನ್ವಯಸಂಭೂತೋ ವೇದವೇದಾಂಗಪಾರಗಃ ॥ ೫ ॥

---

## ಕನ್ನಡದ ಅನುವಾದ

### ಯಾಜ್ಞವಲ್ಕ್ಯಾಶ್ರಮಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ಅಲ್ಲಿ ಇನ್ನೊಂದು ಪ್ರಪಂಚವಿಖ್ಯಾತವೂ, ಮೂರ್ಖರಿಗೂ ಸಿದ್ಧಿಯನ್ನು ಕೊಡುವುದೂ ಆದ ಯಾಜ್ಞವಲ್ಕ್ಯನ ಆಶ್ರಮವಿರುವುದು.

೨. ಅಲ್ಲಿ ಯಾಜ್ಞವಲ್ಕ್ಯನು ತೀವ್ರತಪವನ್ನಾಚರಿಸಿ ಗುರುವು ಅಪಹರಿಸಿದ ಸಮಗ್ರವೇದಗಳನ್ನು ಹೊಂದಿರುವನು.

೩–೪. ಋಷಿಗಳು ಹೇಳುತ್ತಾರೆ :—ಆ ಯಾಜ್ಞವಲ್ಕ್ಯನ ಗುರು ಯಾರು? ಮಹಾತ್ಮನಾದ ಅವನು ವೇದಗಳನ್ನು ಹೇಳಿಕೊಟ್ಟು ಅವುಗಳನ್ನು ಅಪಹರಿಸಲು ಕಾರಣವೇನು? ಈ ವಿಷಯವನ್ನು ನಮಗೆ ವಿಸ್ತಾರವಾಗಿ ಹೇಳು. ಬ್ರಾಹ್ಮಣರಾದ ನಮಗೆಲ್ಲ ಬಹಳ ಕುತೂಹಲವುಂಟಾಗಿದೆ.

೫–೬. ಸೂತನು ಹೇಳುತ್ತಾನೆ :—ಹಿಂದೆ ಬೃಹತ್ಕಲ್ಪದಲ್ಲಿ ವರ್ಧಮಾನವೆಂಬ ಪಟ್ಟಣದಲ್ಲಿ ವೇದ ವೇದಾಂಗಗಳನ್ನು ಸಂಪೂರ್ಣವಾಗಿ ಓದಿದವನೂ,

ಬೃಹತ್ಕಲ್ಪೇ ಪುರಾ ವಿಪ್ರಾ ವರ್ಧಮಾನೇ ಪುರೋತ್ತಮೇ ।
ಬಹುಶಿಷ್ಯಸಮಾಯುಕ್ತೋ ವೇದಾಽಧ್ಯಯನತತ್ಪರಃ ॥ ೬ ॥
ಸ ಸದಾ ಪ್ರಾತರುತ್ಥಾಯ ವಿದ್ಯಾದಾನಂ ಪ್ರಯಚ್ಛತಿ ।
ಶಿಷ್ಯೇಭ್ಯಶ್ಚಾನುರೂಪೇಭ್ಯಃ ಪ್ರಸಾದಾದ್ದ್ವಿಜಸತ್ತಮಾಃ ॥ ೭ ॥
ಚಕಾರ ಸ ತದಾ ವಿಪ್ರಾಃ ಪೌರೋಹಿತ್ಯಂ ಮಹೀಪತೇಃ ।
ಸೂರ್ಯವಂಶಪ್ರಸೂತಸ್ಯ ಸುಪ್ರಿಯಸ್ಯ ಮಹಾತ್ಮನಃ ॥ ೮ ॥
ಸ ತಸ್ಯ ಧರ್ಮಕೃತ್ಯಾನಿ ಸರ್ವಾಣ್ಯೇವ ದಿನೇ ದಿನೇ ।
ಕೃತ್ವಾ ಸ್ವಗೃಹಮಭ್ಯೇತಿ ಪೂಜಿತಸ್ತೇನ ಭೂಭುಜಾ ॥ ೯ ॥
ಏಕಂ ಶಿಷ್ಯಂ ಸಮಾರೋಪ್ಯ ಶಾಂತ್ಯರ್ಥಂ ತಸ್ಯ ಭೂಪತೇಃ ।
ಕಥಯಿತ್ವಾ ಪ್ರಮಾಣಂ ಚ ವಿಧಾನಂ ಹೋಮಸಂಭವಮ್ ॥ ೧೦ ॥
ಶಿಷ್ಯೋಽಪಿ ಸಕಲಂ ಕೃತ್ವಾ ತತ್ಕರ್ಮಸುಸಮಾಹಿತಃ ।
ಆಶೀರ್ವಾದಂ ಪ್ರದತ್ವಾ ಚ ಭೂಪತೇರ್ಗೃಹಮೇತಿ ಚ ॥ ೧೧ ॥
ಏವಂ ಪ್ರಕುರ್ವತಸ್ತಸ್ಯ ಶಾಕಲ್ಯಸ್ಯ ಮಹಾತ್ಮನಃ ।
ಪೌರೋಹಿತ್ಯಂ ಗತಃ ಕಾಲಃ ಕಿಯನ್ಮಾತ್ರೋ ದ್ವಿಜೋತ್ತಮಾಃ ॥ ೧೨ ॥
ತದಾ ವೈವಾಹಿಕೇ ಕಾಲೇ ಶಪ್ತೋಽಯಂ ಶಂಭುನಾ ಸ್ವಯಂ ।
ಸುನಿಂದ್ಯಾಂ ವಿಕೃತಿಂ ದೃಷ್ಟ್ವಾ ತಸ್ಯ ವೇದ್ಯಾಂ ಗತಸ್ಯ ಚ ॥ ೧೩ ॥

---

ಭಾರ್ಗವ ವಂಶದಲ್ಲಿ ಜನಿಸಿದವನೂ, ಅನೇಕ ಶಿಷ್ಯರಿಂದ ಕೂಡಿದವನೂ, ವೇದಾಧ್ಯಯನ ನಿರತನೂ ಆದ ಶಾಕಲ್ಯನೆಂಬ ಪ್ರಸಿದ್ಧ ಬ್ರಾಹ್ಮಣನಿದ್ದನು.

೭. ದ್ವಿಜವರ್ಯರೆ! ಅವನು ಯಾವಾಗಲೂ ಬೆಳಗ್ಗೆ ಎದ್ದು ಸರಿಯಾದ ಶಿಷ್ಯರಿಗೆ ಅನುಗ್ರಹಬುದ್ಧಿಯಿಂದ ವಿದ್ಯಾದಾನವನ್ನು ಮಾಡುತ್ತಿದ್ದನು.

೮–೯. ಸೂರ್ಯವಂಶದ ಸುಪ್ರಿಯನೆಂಬ ಮಹಾತ್ಮನಾದ ದೊರೆಗೆ ಆತನು ಪುರೋಹಿತನೂ ಆಗಿದ್ದನು. ಅವನು ಪ್ರತಿದಿನವೂ ಆ ದೊರೆಯ ಧರ್ಮಕಾರ್ಯಗಳನ್ನು ನೆರವೇರಿಸಿ ಅವನಿಂದ ಪೂಜೆಯನ್ನು ಕೈಗೊಂಡು ತನ್ನ ಮನೆಗೆ ಹೋಗುತ್ತಿದ್ದನು.

೧೦. ಆತನು ಒಬ್ಬ ಶಿಷ್ಯನಿಗೆ ಹೋಮದ ಪ್ರಮಾಣ ವಿಧಾನಗಳನ್ನು ಬೋಧಿಸಿ ಆ ರಾಜನ ಶಾಂತಿಗಾಗಿ ನೇಮಿಸಿದ್ದನು.

೧೧. ಶಿಷ್ಯನೂ ರಾಜನ ಕಾರ್ಯಗಳನ್ನೆಲ್ಲ ಸಾವಧಾನದಿಂದ ಮಾಡಿ ಅವನನ್ನು ಆಶೀರ್ವದಿಸಿ ಮನೆಗೆ ಹೋಗುತ್ತಿದ್ದನು.

೧೨. ಹೀಗೆ ಆ ರಾಜನಿಗೆ ಶಾಕಲ್ಯನು ಪೌರೋಹಿತ್ಯವನ್ನು ನಡೆಯಿಸುತ್ತಿರಲು ಕೆಲವು ಕಾಲವು ಕಳೆಯಿತು.

೧೩–೧೪. ಅನಂತರ ಶಾಕಲ್ಯನು ವಿವಾಹ ಕಾಲದಲ್ಲಿ ವೇದಿಕೆಯ ಮೇಲೆ ವಿಕಾರವೂ, ನಿಂದ್ಯವೂ ಆದ ರೂಪದಿಂದ ಬಂದುದರಿಂದ ಮಹೇಶ್ವರನಿಂದ ಶಾಪ

ಅಥ ತಂ ಯೋಜಯಾಮಾಸ ಶಾಂತ್ಯರ್ಥಂ ನೃಪಮಂದಿರೇ ।
ಯಾಜ್ಞವಲ್ಕ್ಯಂ ಸ ಶಾಕಲ್ಯಃ ಪ್ರತಿಪದ್ಯಾಗತಂ ತದಾ ॥ ೧೪ ॥
ಸೋಽಪಿ ತಾರುಣ್ಯಗರ್ವೇಣ ವೇಶ್ಯಾಕರಜವಿಕ್ಷತಃ ।
ಸರ್ವಾಂಗೇಷು ಸುನಿರ್ಲಜ್ಜಃ ಪ್ರಕಟಾಂಗೋ ಜಗಾಮ ವೈ ॥ ೧೫ ॥
ತತಶ್ಚ ಶಾಂತಿಕಂ ಕೃತ್ವಾ ಜಪಾಂತೇ ಭೂಪತಿಂ ಚ ತಂ ।
ಶಾಂತ್ಯೋದಕಪ್ರದಾನಾಯ ಹಾಸ್ಯಮಾನೋ ಜನೈರ್ಯಯೌ ॥ ೧೬ ॥
ಪಾರ್ಥಿವೋಽಪಿ ಚ ತಂ ದೃಷ್ಟ್ವಾ ತಾದೃಗ್ರೂಪಂ ವಿಟಂ ದ್ವಿಜಂ ।
ನಾಶೀರ್ಜಗ್ರಾಹ ತೇನೋಕ್ತಾಂ ವಾಕ್ಯಮೇತದುವಾಚ ಹ ॥ ೧೭ ॥
ಉಚ್ಛಿಷ್ಟೋಽಹಂ ದ್ವಿಜಶ್ರೇಷ್ಠ ಶಯ್ಯಾರೂಢೋ ವ್ಯವಸ್ಥಿತಃ ।
ಅತ್ರ ಶಾಲೋದ್ಭವೇ ಸ್ತಂಭೇ ತಸ್ಮಾದೇತಜ್ಜಲಂ ಕ್ಷಿಪ ॥ ೧೮ ॥
ಸೋಽಪಿ ಸಾಽವಜ್ಞಮಾಜ್ಞಾಯ ತಂ ಭೂಪಂ ಕುಪಿತಾನನಃ ।
ತಂ ಚ ಸ್ತಂಭಂ ಸಮುದ್ದಿಶ್ಯ ಧ್ಯಾತ್ವಾ ತದ್ಬ್ರಹ್ಮ ಶಾಶ್ವತಂ ॥ ೧೯ ॥
ದ್ಯಾಂ ತ್ವಾಮಾಲಿಖ್ಯ ಇತ್ಯೇವ ಪ್ರೋಕ್ತ್ವಾ ಮಂತ್ರಂ ಚ ಯಾಜುಷಂ ।
ಪ್ರಾಕ್ಷಿಪಚ್ಛಾಂತಿಕಂ ತೋಯಂ ತಸ್ಯ ಮೂರ್ಧನಿ ಸತ್ವರಂ ॥ ೨೦ ॥

---

ಗ್ರಸ್ತನಾದ ಬ್ರಹ್ಮನೇ ಯಾಜ್ಞವಲ್ಕ್ಯನ ರೂಪದಿಂದ ಬಂದಿರುವುದನ್ನರಿತು ಅವನನ್ನು ರಾಜನ ಶಾಂತಿಗಾಗಿ ನೇಮಿಸಿದನು.

೧೫. ಆ ಯಾಜ್ಞವಲ್ಕ್ಯನು ಯೌವನದ ಗರ್ವದಿಂದ ಸಮಸ್ತ ಅವಯವಗಳಲ್ಲಿಯೂ ಸೂಳೆಯ ನಖಗಳಿಂದ ಗಾಯಗೊಂಡವನೂ, ಲಜ್ಜೆಯಿಲ್ಲದವನೂ, ದಿಗಂಬರನೂ ಆಗಿ ರಾಜನ ಮನೆಗೆ ಹೋದನು.

೧೬. ಅನಂತರ ಶಾಂತಿ ಕರ್ಮವನ್ನಾಚರಿಸಿ ಜಪದ ಕೊನೆಯಲ್ಲಿ ಶಾಂತ್ಯುದಕವನ್ನು ಕೊಡುವುದಕ್ಕಾಗಿ ರಾಜನೆಡೆಗೆ ಜನರಿಂದ ಹಾಸ್ಯಮಾಡಿಸಿಕೊಳ್ಳಲ್ಪಡುತ್ತ ಹೋದನು.

೧೭. ದೊರೆಯೂ ಅಂತಹ ಜಾರನಾದ ಬ್ರಾಹ್ಮಣನನ್ನು ನೋಡಿ ಅವನು ನುಡಿದ ಆಶೀರ್ವಾದವನ್ನು ಸ್ವೀಕರಿಸದೆ ಇಂತೆಂದನು.

೧೮. "ದ್ವಿಜವರ್ಯನೆ! ಹಾಸಿಗೆಯಲ್ಲಿ ಕೂತಿರುವ ನಾನು ಅಶುದ್ಧನಾಗಿದ್ದೇನೆ. ಆದುದರಿಂದ ಶಾಂತ್ಯುದಕವನ್ನು ಈ ತೊಟ್ಟಿಯ ಕಂಬಕ್ಕೆ ಚಿಮುಕಿಸು."

೧೯–೨೦. ಆ ಬ್ರಾಹ್ಮಣನು ರಾಜನು ಅವಮಾನ ಮಾಡಿರುವುದನ್ನರಿತು ಕುಪಿತನಾಗಿ ಆ ಕಂಬವನ್ನು ಉದ್ದೇಶಿಸಿ ಶಾಶ್ವತನಾದ ಪರಬ್ರಹ್ಮನನ್ನು ಸ್ಮರಿಸಿ "ದ್ಯಾಂ ತ್ವಮಾಲಿಖ್ಯೇ"ತ್ಯಾದಿ ಯಜುರ್ವೇದಮಂತ್ರವನ್ನುಚ್ಚರಿಸಿ ಆ ಶಾಂತ್ಯುದಕವನ್ನು ಆ ಕಂಬದ ಶಿಖರದ ಮೇಲೆ ಪ್ರೋಕ್ಷಿಸಿದನು.

ತತಃ ಸ ಪತಿತೇ ತೋಯೇ ಸ್ತಂಭಃ ಪಲ್ಲವಶೋಭಿತಃ ।
ತತ್ಕ್ಷಣಾದೇವ ಸಂಜಜ್ಞೇ ಫಲಪುಷ್ಪೈರ್ವಿರಾಜಿತಃ ॥ ೨೧ ॥
ತಂ ದೃಷ್ಟ್ವಾ ಪಾರ್ಥಿವಃ ಸೋಽಥ ವಿಸ್ಮಯೋತ್ಫುಲ್ಲಲೋಚನಃ ।
ಪಶ್ಚಾತ್ತಾಪಂ ವಿಧಾಯಾಥ ವಾಕ್ಯಮೇತದುವಾಚ ಹ ॥ ೨೨ ॥
ಅಭಿಷೇಕಂ ದ್ವಿಜಶ್ರೇಷ್ಠ ಮಮಾಽಪಿ ತ್ವಂ ಪ್ರಯಚ್ಛ ಭೋಃ ।
ಅನೇನೈವತು ಮಂತ್ರೇಣ ಶುಚಿತ್ವಂ ಮೇ ವ್ಯವಸ್ಥಿತಂ ॥ ೨೩ ॥

ಯಾಜ್ಞವಲ್ಕ್ಯ ಉವಾಚ :—

ಮಮಾಽಭಿಷೇಕದಾನಸ್ಯ ತ್ವಮನರ್ಹೋಽಸಿ ಪಾರ್ಥಿವ ।
ತಸ್ಮಾದ್ಯಾಸ್ಯಾಮ್ಯಹಂ ಸದ್ಯೋ ಯತ್ರಸ್ಥಃ ಸ ಗುರುರ್ಮಮ ॥ ೨೪ ॥

ರಾಜೋವಾಚ :—

ತವ ದಾಸ್ಯಾಮಿ ವಸ್ತ್ರಾಣಿ ವಾಹನಾನಿ ವಸೂನಿ ಚ ।
ತಸ್ಮಾದ್ಯಚ್ಛಾಽಭಿಷೇಕಂ ಮೇ ಮಂತ್ರೇಣಾಽನೇನ ಸಾಂಪ್ರತಂ ॥ ೨೫ ॥

ಯಾಜ್ಞವಲ್ಕ್ಯ ಉವಾಚ :—

ನ ಹೋಮಾಂತಂ ವಿನಾ ಮಂತ್ರಃ ಸ್ಫುರತೇ ಪಾರ್ಥಿವೋತ್ತಮ ।
ಅಭಿಷೇಕವಿಧೌ ಪ್ರೋಕ್ತೋ ಯಃ ಪೂರ್ವಂ ಪದ್ಮಯೋನಿನಾ ।
ತಸ್ಮಾನ್ನಾಽಹಂ ಕರಿಷ್ಯಾಮಿ ತವ ಯದ್ವೈ ಹೃದಿ ಸ್ಥಿತಂ ॥ ೨೬ ॥

---

೨೧. ಆ ನೀರು ಬಿದ್ದಕೂಡಲೆ ಆ ಕಂಬವು ಚಿಗುರು, ಹೂವು, ಹಣ್ಣುಗಳಿಂದ ವಿರಾಜಿಸಿತು.

೨೨. ರಾಜನು ಆ ಕಂಬವನ್ನು ನೋಡಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಪಶ್ಚಾತ್ತಾಪದಿಂದ ಇಂತೆಂದನು.

೨೩. "ಬ್ರಾಹ್ಮಣೋತ್ತಮ! ನೀನು ಈ ಮಂತ್ರದಿಂದಲೇ ನನ್ನನ್ನು ಅಭಿಷೇಕ ಮಾಡು. ನಾನು ಶುದ್ಧನಾಗಿರುವೆನು."

೨೪. ಯಾಜ್ಞವಲ್ಕ್ಯನು ಹೇಳುತ್ತಾನೆ:—ಅರಸ! ನೀನು ನನ್ನ ಅಭಿಷೇಕಕ್ಕೆ ಅನರ್ಹನಾಗಿರುವೆ. ಆದುದರಿಂದ ನಾನು ನನ್ನ ಗುರುವಿನೆಡೆಗೆ ಹೋಗುವೆನು.

೨೫. ರಾಜನು ಹೇಳುತ್ತಾನೆ:—ನಿನಗೆ ವಸ್ತ್ರ, ವಾಹನ, ದ್ರವ್ಯಗಳನ್ನೀಯುವೆನು. ಈಗ ಈ ಮಂತ್ರದಿಂದ ನನ್ನನ್ನು ಅಭಿಷೇಕ ಮಾಡು.

೨೬. ಯಾಜ್ಞವಲ್ಕ್ಯನು ಹೇಳುತ್ತಾನೆ:—ಮಹಾರಾಜ! ಹಿಂದೆ ಬ್ರಹ್ಮನು ಹೇಳಿದ ಈ ಅಭಿಷೇಕಮಂತ್ರವು ಹೋಮದ ಕೊನೆಯಲ್ಲಿಯೇ ಹೊರತು ಬೇರೆ ವೇಳೆಯಲ್ಲಿ ಸ್ಫುರಿಸುವುದಿಲ್ಲ. ಆದುದರಿಂದ ನಾನು ನಿನ್ನ ಇಷ್ಟವನ್ನು ನೆರವೇರಿಸಲಾರೆನು.

ಇತ್ಯುಕ್ತ್ವಾ ವಚನಂ ಭೂಪಂ ಯಾಜ್ಞವಲ್ಕ್ಯಃ ಸ ವೈ ದ್ವಿಜಃ ।
ಜಗಾಮ ಸ್ವಗೃಹಂ ತೂರ್ಣಂ ನಿಃಸ್ಪೃಹತ್ವಂ ಸಮಾಶ್ರಿತಃ ॥ ೨೭ ॥
ಅಪರೇಽಹ್ನಿ ಸಮಾಯಾತಂ ಶಾಕಲ್ಯಮಥ ಭೂಪತಿಃ ।
ಪ್ರೋವಾಚ ಪ್ರಾಂಜಲಿರ್ಭೂತ್ವಾ ವಿನಯಾಽವನತಃ ಸ್ಥಿತಃ ॥ ೨೮ ॥
ಯಸ್ತ್ವಯಾ ಪ್ರೇಷಿತಃ ಕಲ್ಯೇ ಶಿಷ್ಯೋ ಬ್ರಾಹ್ಮಣಸತ್ತಮಃ ।
ಶಾಂತ್ಯರ್ಥಂ ಪ್ರೇಷಣೀಯಶ್ಚ ಭೂಯೋಽಪ್ಯೇವಂ ಗೃಹೇ ಮಮ ॥ ೨೯ ॥
ಬಾಢಮಿತ್ಯೇವ ಸ ಪ್ರೋಕ್ತ್ವಾ ತತೋ ಗತ್ವಾ ನಿಜಾಲಯಂ ।
ಯಾಜ್ಞವಲ್ಕ್ಯಂ ಸಮಾಹೂಯ ತತಃ ಪ್ರೋವಾಚ ಸಾದರಂ ॥ ೩೦ ॥
ಅದ್ಯಾಽಪಿ ತ್ವಂ ನರೇಂದ್ರಸ್ಯ ಶಾಂತ್ಯರ್ಥಂ ಭವನೇ ವ್ರಜ ।
ವಿಶೇಷಾತ್ಪಾರ್ಥಿವೇಂದ್ರೇಣ ಸಮಾಹೂತೋಽಸಿ ಪುತ್ರಕ ॥ ೩೧ ॥

ಯಾಜ್ಞವಲ್ಕ್ಯ ಉವಾಚ :—

ನಾಽಹಂ ತಾತ ಗಮಿಷ್ಯಾಮಿ ಶಾಂತ್ಯರ್ಥಂ ತಸ್ಯಮಂದಿರೇ ।
ಅವಲೇಪೇನ ಯುಕ್ತಸ್ಯ ಶುದ್ಧ್ಯಾ ವಿರಹಿತಸ್ಯ ಚ ॥ ೩೨ ॥
ಮಯಾ ತಸ್ಯಾಽಭಿಷೇಕಾರ್ಥಂ ಸಲಿಲಂ ಚೋದ್ಯತಂ ಚ ಯತ್ ।
ಸಲಿಲಂ ತೇನ ತತ್ಕಾಷ್ಠೇ ಸಮಾದಿಷ್ಟಂ ಕುಬುದ್ಧಿನಾ ॥ ೩೩ ॥

---

೨೭. ನಿಸ್ಪೃಹನಾದ ಆ ಯಾಜ್ಞವಲ್ಕ್ಯ ಬ್ರಾಹ್ಮಣನು ರಾಜನನ್ನು ಕುರಿತು ಹೀಗೆ ಹೇಳಿ ಶೀಘ್ರವಾಗಿ ತನ್ನ ಮನೆಗೆ ತೆರಳಿದನು.

೨೮. ಮಾರನೆಯ ದಿನ ಶಾಕಲ್ಯನು ಮನೆಗೆ ಬರಲು ದೊರೆಯು ಕೈಮುಗಿದು ಕೊಂಡು ವಿನಯದಿಂದ ಹೀಗೆಂದನು.

೨೯. "ನೀನು ಬೆಳಗ್ಗೆ ಶಾಂತಿಗಾಗಿ ಕಳುಹಿಸಿದ ಬ್ರಾಹ್ಮಣನನ್ನು ಮರಳಿ ನನ್ನ ಮನೆಗೆ ಕಳುಹಿಸು."

೩೦. ಶಾಕಲ್ಯನು ಹಾಗೆಯೇ ಆಗಲೆಂದು ತನ್ನ ಮನೆಗೆ ಹೋಗಿ ಯಾಜ್ಞವಲ್ಕ್ಯನನ್ನು ಕರೆದು ಪ್ರೀತಿಯಿಂದ ಹೀಗೆಂದನು.

೩೧. "ಮಗು! ಈ ದಿನವೂ ನೀನು ರಾಜನ ಶಾಂತಿಕರ್ಮಕ್ಕಾಗಿ ಅವನ ಮನೆಗೆ ಹೋಗು. ಅವನು ನಿನ್ನನ್ನು ವಿಶೇಷವಾಗಿ ಆಹ್ವಾನಿಸಿದ್ದಾನೆ.

೩೨. ಯಾಜ್ಞವಲ್ಕ್ಯನು ಹೇಳುತ್ತಾನೆ:—ತಾತ! ನಾನು ಅಹಂಕಾರ ಗೊಂಡಿರುವ ಅಶುದ್ಧನಾದ ಆ ರಾಜನ ಮನೆಗೆ ಹೋಗುವುದಿಲ್ಲ.

೩೩. ನಾನು ಅವನ ಅಭಿಷೇಕಕ್ಕಾಗಿ ಎತ್ತಿದ ನೀರನ್ನು ದುರ್ಮತಿಯಾದ ಅವನು ಕಟ್ಟಿಗೆಗೆ ಅಭಿಷೇಕಮಾಡೆಂದನು.

ತತೋ ಮಯಾಽಪಿ ತತ್ರೈವ ತತ್ಕ್ಷಣಾತ್ಸಲಿಲಂ ಚ ಯತ್ ।
ತಸ್ಮಿನ್ ಕಾಷ್ಠೇ ಪರಿಕ್ಷಿಪ್ತಂ ನೀತಂ ವೃದ್ಧಿಂ ಚ ತತ್ಕ್ಷಣಾತ್ ॥ ೩೪ ॥

ಶಾಕಲ್ಯ ಉವಾಚ :—

ಅಥ ಏವ ವಿಶೇಷೇಣ ಸಮಾಹೂತೋಽಸಿ ಪುತ್ರಕ ।
ತಸ್ಮಾತ್ತತ್ರ ದ್ರುತಂ ಗಚ್ಛ ಸಾಽವಜ್ಞೇಯಾ ಮಹೀಭುಜಃ ॥ ೩೫ ॥
ಅಪಮಾನಾದ್ಭವೇನ್ಮಾಸಂ ಪಾರ್ಥಿವಾನಾಮಸಂಶಯಂ ।
ಯಃ ಕರೋತಿ ಪುನಸ್ತತ್ರ ಮಾಸಂ ನ ಸ ಭವೇತ್ಪ್ರಿಯಃ ॥ ೩೬ ॥
ಕೋಪಪ್ರಸಾದವಸ್ತೂನಿ ವಿಚಿನ್ವಂತೀಹ ಯೇ ಸದಾ ।
ಆರೋಹಂತಿ ಶನೈರ್ಭೃತ್ಯಾ ಧುನ್ವಂತಮಪಿ ಪಾರ್ಥಿವಂ ॥ ೩೭ ॥
ಸಮೌ ಮಾನಾಪಮಾನೌ ಚ ಚಿತ್ತಜ್ಞಃ ಕಾಲವಿತ್ತಥಾ ।
ಸರ್ವಂಸಹಃ ಕ್ಷಮೀ ವಿಜ್ಞಃ ಸ ಭವೇದ್ರಾಜವಲ್ಲಭಃ ॥ ೩೮ ॥
ಅಪಮಾನಮನಾದೃತ್ಯ ತಸ್ಮಾದ್ಗಚ್ಛ ನೃಪಾಲಯಂ ।
ಮಮಾಜ್ಞಾಽಪಿ ನ ಲಂಘ್ಯೇತ ಏಷ ಧರ್ಮಃ ಸನಾತನಃ ॥ ೩೯ ॥

ಯಾಜ್ಞವಲ್ಕ್ಯ ಉವಾಚ :—

ಆಜ್ಞಾಭಂಗೋ ಧ್ರುವಂ ಭಾವೀ ಪರಿಪಾಟೀ ವ್ಯತಿಕ್ರಮಾತ್ ।
ಕರೋಷಿ ಯದಿ ಶಿಷ್ಯಾಣಾಂ ಯೇ ತ್ವಯಾ ತತ್ರ ಯೋಜಿತಾಃ ॥ ೪೦ ॥

---

೩೪. ಅನಂತರ ನಾನೂ ಅಲ್ಲಿಯೇ ನೀರನ್ನು ಚಿಮುಕಿಸಿ ಆ ಕಂಬವನ್ನು ಕೂಡಲೆ ಬೆಳೆಸಿದೆನು.

೩೫—೩೬. ಶಾಕಲ್ಯನು ಹೇಳುತ್ತಾನೆ:—ಮಗು! ಆದುದರಿಂದಲೇ ಅವನು ನಿನ್ನನ್ನು ಕರೆದಿದ್ದಾನೆ. ಆದಕಾರಣ ಜಾಗ್ರತೆಯಾಗಿ ಹೋಗು. ರಾಜರನ್ನು ಅವಮಾನ ಮಾಡಬೇಡ. ರಾಜರಿಗೆ ಅವಮಾನ ಮಾಡುವುದರಿಂದ ಅವರು ಕುಪಿತರಾಗುವರು. ಹಾಗೆ ಕೋಪಗೊಳಿಸಿದವನು ರಾಜರಿಗೆ ಪ್ರಿಯನಾಗುವುದಿಲ್ಲ.

೩೭. ಈ ಲೋಕದಲ್ಲಿ ಕೋಪಾನುಗ್ರಹಗಳು ಯಾವುದರಿಂದುಂಟಾಗುವುವು ಎಂದು ವಿವೇಚನೆಮಾಡುವ ಸೇವಕರು ಚಂಚಲಚಿತ್ತನಾದ ರಾಜನನ್ನೂ ವಶ ಮಾಡಿಕೊಳ್ಳುವರು.

೩೮. ಮಾನಾಪಮಾನಗಳು ಸಮವೆಂದು ತಿಳಿದವನೂ, ಚಿತ್ತವನ್ನರಿತವನೂ, ಕಾಲಜ್ಞನೂ, ಎಲ್ಲವನ್ನೂ ಸಹಿಸುವವನೂ, ಕ್ಷಮೆಯುಳ್ಳವನೂ ಆದ ಜ್ಞಾನಿಯು ರಾಜನಿಗೆ ಪ್ರಿಯನಾಗುವನು.

೩೯. ಆದುದರಿಂದ ನೀನು ಅಪಮಾನವನ್ನು ಲೆಕ್ಕಿಸದೆ ರಾಜನ ಮನೆಗೆ ಹೋಗು. ನನ್ನ ಅಪ್ಪಣೆಯನ್ನೂ ಮೀರಬೇಡ. ಇದು ಸನಾತನ ಧರ್ಮವು.

೪೦. ಯಾಜ್ಞವಲ್ಕ್ಯನು ಹೇಳುತ್ತಾನೆ:—ನೀನು ಅಲ್ಲಿ ನೇಮಿಸಿದ ಶಿಷ್ಯರ ವಿಷಯದಲ್ಲಿ ಕ್ರಮವನ್ನು ಮೀರಿದರೆ ಆಜ್ಞಾಭಂಗವು ಅವಶ್ಯವಾಗಿ ಆಗುವುದು..

ತಸ್ಮಾದ್ಯದಿ ಬಲಾನ್ಮಾಂ ತ್ವಂ ಯೋಜಯಿಷ್ಯಸಿ ತಂ ಪ್ರತಿ ।
ತ್ವಾಂ ತ್ಯಕ್ತ್ವಾಽನ್ಯತ್ರ ಯಾಸ್ಯಾಮಿ ಯತಃ ಪ್ರೋಕ್ತಂ ಮಹರ್ಷಿಭಿಃ ॥ ೪೧ ॥
ಗುರೋರಪ್ಯವಲಿಪ್ತಸ್ಯ ಕಾರ್ಯಾಽಕಾರ್ಯಮಜಾನತಃ ।
ಉತ್ಪಥೇ ವರ್ತಮಾನಸ್ಯ ಪರಿತ್ಯಾಗೋ ವಿಧೀಯತೇ ॥ ೪೨ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಶಾಕಲ್ಯಃ ಕ್ರೋಧಮೂರ್ಛಿತಃ ।
ತತಃ ಪ್ರೋವಾಚ ತಂ ಭೂಯೋ ಭರ್ತ್ಸ್ಯಮಾನೋ ಮುಹುರ್ಮುಹುಃ ॥ ೪೩ ॥
ಏಕಮಪ್ಯಕ್ಷರಂ ಯತ್ರ ಗುರುಃ ಶಿಷ್ಯೇ ನಿವೇದಯೇತ್ ।
ಪೃಥಿವ್ಯಾಂ ನಾಽಸ್ತಿ ತದ್ದ್ರವ್ಯಂ ಯದ್ದತ್ವಾ ಹ್ಯನೃಣೀ ಭವೇತ್ ॥ ೪೪ ॥
ತಸ್ಮಾದ್ಗಚ್ಛ ದ್ರುತಂ ದತ್ವಾ ಮದಧ್ಯಯನಮಾಲಯಂ ।
ತ್ಯಕ್ತ್ವಾ ವಿದ್ಯಾಂ ಮಯಾ ದತ್ತಾಂ ನೋ ಚೇಚ್ಛಪ್ಸ್ಯಾಮ್ಯಹಂ ತವ ॥ ೪೫ ॥
ಏವಮುಕ್ತ್ವಾಽಭಿಮಂತ್ರ್ಯಾಽಥ ನಾದಬಿಂದುಸಮುದ್ಭವೈಃ ।
ಮಂತ್ರೈರಾಥರ್ವಣೈಸ್ತೋಯಂ ಪಾನಾರ್ಥಂ ಚಾಽರ್ಪಯತ್ತತಃ ॥ ೪೬ ॥
ಸೋಽಪಿಬತ್ತತ್ಕ್ಷಣಾತ್ತೋಯಂ ತತ್ಪೀತ್ವಾ ವ್ಯಾಕುಲೇಂದ್ರಿಯಃ ।
ಉದ್ಗಿರದ್ವಾಂತಿಧರ್ಮೇಣ ತತ್ತ್ವವಿದ್ಯಾವಿಮಿಶ್ರಿತಂ ॥ ೪೭ ॥

---

೪೧—೪೨. ಆದುದರಿಂದ ನೀನು ನನ್ನನ್ನು ಬಲಾತ್ಕಾರವಾಗಿ ರಾಜನ ಶಾಂತಿ ಕರ್ಮದಲ್ಲಿ ನೇಮಿಸಿದರೆ ಅಹಂಕಾರಗೊಂಡವನೂ, ಕಾರ್ಯಾಕಾರ್ಯವನ್ನರಿಯದವನೂ, ದುರ್ಮಾರ್ಗಗಾಮಿಯೂ ಆದ ಗುರುವನ್ನೂ ತ್ಯಜಿಸಬಹುದೆಂದು ಮಹರ್ಷಿಗಳು ಹೇಳಿರುವುದರಿಂದ ನಾನು ನಿನ್ನನ್ನು ಬಿಟ್ಟು ಬೇರೆ ಕಡೆಗೆ ಹೋಗುವೆನು.

೪೩. ಸೂತನು ಹೇಳುತ್ತಾನೆ :—ಶಾಕಲ್ಯನು ಅವನ ಆ ಮಾತನ್ನು ಕೇಳಿ ಕ್ರುದ್ಧನಾಗಿ ಅವನನ್ನು ಬಹುವಾಗಿ ಗದರಿಸುತ್ತ ಇಂತೆಂದನು.

೪೪. ಗುರುವು ಯಾವನಿಗೆ ಒಂದಕ್ಷರವನ್ನುಪದೇಶಿಸುವನೋ ಅವನಿಗೆ ಆ ಗುರುವಿನ ಋಣವನ್ನು ಪರಿಹರಿಸಿಕೊಳ್ಳಬಯಸಿ, ಕೊಡಲು ಯೋಗ್ಯವಾದ ಯಾವ ವಸ್ತುವೂ ಭೂಮಿಯಲ್ಲಿಲ್ಲ.

೪೫. ಆದುದರಿಂದ ಶೀಘ್ರವಾಗಿ ನಾನು ಉಪದೇಶ ಮಾಡಿದ ವಿದ್ಯೆಯನ್ನು ನನಗೆ ಕೊಟ್ಟು ಮನೆಗೆ ಹೊರಡು. ಇಲ್ಲದಿದ್ದರೆ ನಾನು ನಿನ್ನನ್ನು ಶಪಿಸುವೆನು.

೪೬. ಶಾಕಲ್ಯನು ಹೀಗೆ ಹೇಳಿ ನಾದ ಬಿಂದುವಿನಿಂದುಂಟಾದ ಆಥರ್ವಣ ಮಂತ್ರಗಳಿಂದ ನೀರನ್ನು ಅಭಿಮಂತ್ರಿಸಿ ಕುಡಿಯಲು ಕೊಟ್ಟನು.

೪೭. ಯಾಜ್ಞವಲ್ಕ್ಯನು ಕೂಡಲೆ ಆ ನೀರನ್ನು ಕುಡಿದು ವ್ಯಥೆಗೊಂಡ ಇಂದ್ರಿಯಗಳುಳ್ಳವನಾಗಿ ತತ್ತ್ವವಿದ್ಯೆಯನ್ನು ವಾಂತಿಮಾಡಿದನು.

ತತಃ ಪ್ರೋವಾಚ ತಂ ಭೂಯಃ ಶಾಕಲ್ಯಂ ಕುಪಿತಾನನಃ ।
ಏಕಮಪ್ಯಕ್ಷರಂ ನಾಽಸ್ತಿ ತಾವಕೀಯಂ ಮಮೋದರೇ ॥ ೪೮ ॥
ತಸ್ಮಾಚ್ಛಿಷ್ಯೋಽಸ್ಮಿ ತೇ ನಾಽಹಂ ನ ಚ ಮೇ ತ್ವಂ ಗುರುಃ ಸ್ಥಿತಃ ।
ಸಾಂಪ್ರತಂ ಸ್ವೇಚ್ಛಯಾಽನ್ಯತ್ರ ಪ್ರಯಾಸ್ಯಾಮಿ ಕರೋಷಿ ಕಿಂ ॥ ೪೯ ॥
ಏವಮುಕ್ತ್ವಾಽಥ ನಿರ್ಗತ್ಯ ತಸ್ಮಾತ್ಸ್ಥಾನಾಚ್ಚಿರಂತರಾತ್ ।
ಪಪ್ರಚ್ಛ ಮಾನವಾನ್ ಭೂಯಃ ಸಿದ್ಧಿಕ್ಷೇತ್ರಾಣಿ ಚಾಽಸಕೃತ್ ॥ ೫೦ ॥
ತತಸ್ತಸ್ಯ ಸಮಾದಿಷ್ಟಂ ಕ್ಷೇತ್ರಮೇತನ್ಮನೀಷಿಭಿಃ ।
ಸಿದ್ಧಿದಂ ಸರ್ವಜಂತೂನಾಂ ನ ವೃಥಾ ಸ್ಯಾತ್ಕಥಂಚನ ॥ ೫೧ ॥
ಆಸ್ತಾಂ ತಾವತ್ತಪಸ್ತಪ್ತ್ವಾ ವ್ರತಂ ನಿಯಮಮೇವ ವಾ ।
ಹಾಟಕೇಶ್ವರಜೇ ಕ್ಷೇತ್ರೇ ಸಿದ್ಧಿಃ ಸಂವಸತೋಽಪಿ ಚ ॥ ೫೨ ॥
ಯೇನ ಯೇನ ಚ ಭಾವೇನ ತತ್ರ ಕ್ಷೇತ್ರೇ ವಸೇಜ್ಜನಃ ।
ತಸ್ಯಾಽನುರೂಪಿಣೀ ಸಿದ್ಧಿಃ ಶುಭಾ ಸ್ಯಾದ್ಯದಿ ವಾಽಶುಭಾ ॥ ೫೩ ॥
ತಚ್ಛ್ರುತ್ವಾ ಚ ದ್ರುತಂ ಪ್ರಾಪ್ಯ ಕ್ಷೇತ್ರಮೇತದ್ದ್ವಿಜೋತ್ತಮಾಃ ।
ಭಾನುಮಾರಾಧಯಾಮಾಸ ಸ್ಥಾಪಯಿತ್ವಾ ತತಃ ಪರಂ ॥ ೫೪ ॥

---

೪೮. ಅನಂತರ ಯಾಜ್ಞವಲ್ಕ್ಯನು ಶಾಕಲ್ಯನನ್ನುಕುರಿತು ಕೋಪಿಸಿಕೊಂಡವನಾಗಿ "ನಿನ್ನ ಉಪದೇಶದ ಒಂದಕ್ಷರವೂ ನನ್ನ ಹೊಟ್ಟೆಯಲ್ಲಿಲ್ಲ.

೪೯. ಆದುದರಿಂದ ನಾನು ನಿನ್ನ ಶಿಷ್ಯನಲ್ಲ. ನೀನೂ ನನಗೆ ಗುರುವಲ್ಲ. ಈಗ ನಾನು ಸ್ವೇಚ್ಛೆಯಾಗಿ ಬೇರೆ ಕಡೆ ಹೋಗುವೆನು. ಏನನ್ನು ಮಾಡುವೆ?" ಎಂದೆನು.

೫೦. ಅವನು ಹೀಗೆಂದು ನುಡಿದು ಬಹಳಕಾಲದಿಂದ ವಾಸಮಾಡುತ್ತಿದ್ದ ಆ ಸ್ಥಳದಿಂದ ಹೊರಟು ಮನುಷ್ಯರನ್ನು ಸಿದ್ಧಿಕ್ಷೇತ್ರಗಳು ಎಲ್ಲಿವೆಯೆಂದು ಪ್ರಶ್ನಿಸಿದನು.

೫೧. ಅನಂತರ ಅವನಿಗೆ ಜ್ಞಾನಿಗಳು, "ಈ ಕ್ಷೇತ್ರವು ಸಮಸ್ತ ಜಂತುಗಳಿಗೆ ಸಿದ್ಧಿಯನ್ನು ಕೊಡುವುದು. ಇಲ್ಲಿ ಮಾಡಿದ ಕರ್ಮವು ವ್ಯರ್ಥವಾಗುವುದಿಲ್ಲ.

೫೨. ಈ ಹಾಟಕಕ್ಷೇತ್ರದಲ್ಲಿ ತಪಸ್ಸು, ವ್ರತ ನಿಯಮಗಳಿರಲಿ, ವಾಸಮಾತ್ರದಿಂದಲೇ ಸಿದ್ಧಿಯುಂಟಾಗುವುದು.

೫೩. ಮನುಷ್ಯನು ಈ ಕ್ಷೇತ್ರದಲ್ಲಿ ಯಾವ ಯಾವ ಭಾವದಿಂದ ವಾಸಮಾಡುವನೋ ಅವನಿಗೆ ಅದಕ್ಕನುರೂಪವಾದ ಶುಭ ಅಥವಾ ಅಶುಭರೂಪವಾದ ಸಿದ್ಧಿಯುಂಟಾಗುವುದು" ಎಂದು ಹೇಳಿದರು.

೫೪-೫೫. ದ್ವಿಜವರ್ಯರೆ! ಆ ಯಾಜ್ಞವಲ್ಕ್ಯನು ಅವರ ಮಾತನ್ನು ಕೇಳಿ ಸೂರ್ಯನನ್ನು ಪ್ರತಿಷ್ಠೆಮಾಡಿ ಅವನನ್ನು ಜಿತೇಂದ್ರಿಯನೂ, ಮಿತಾಹಾರಿಯೂ,

ನಿಯತೋ ನಿಯತಾಹಾರೋ ಬ್ರಹ್ಮಚರ್ಯಪರಾಯಣಃ ।
ಗಾಯತ್ರಂ ನ್ಯಾಸಮಾಸಾದ್ಯ ನಿರ್ವಿಕಲ್ಪೇನ ಚೇತಸಾ ॥ ೫೫ ॥
ತತಶ್ಚ ಭಗವಾಂಸ್ತುಷ್ಟೋ ವರ್ಷಾಂತೇ ತಮುವಾಚ ಸಃ ।
ದರ್ಶನೇ ತಸ್ಯ ಸಂಸ್ಥಿತ್ವಾ ತೇಜಃ ಸಂಯಮ್ಯ ದಾರುಣಂ ॥ ೫೬ ॥
ಯಾಜ್ಞವಲ್ಕ್ಯ ವರಂ ಬ್ರೂಹಿ ಯತ್ತೇ ಮನಸಿ ರೋಚತೇ ।
ಸರ್ವಮೇವ ಪ್ರದಾಸ್ಯಾಮಿ ನಾಽದೇಯಂ ವಿದ್ಯತೇ ತ್ವಯಿ ॥ ೫೭ ॥

ಯಾಜ್ಞವಲ್ಕ್ಯ ಉವಾಚ :—

ಯದಿ ತುಷ್ಟಃ ಸುರಶ್ರೇಷ್ಠ ವೇದಾಽಧ್ಯಯನಸಂಭವೇ ।
ಗುರುರ್ಭವ ಮಮಾಽದ್ಯೈವ ಮಮೈತದ್ವಾಂಛಿತಂ ಹೃದಿ ॥ ೫೮ ॥

ಭಾಸ್ಕರ ಉವಾಚ :—

ಅಹಂ ತವ ಕೃಪಾವಿಷ್ಟಸ್ತೇಜಃ ಸಂಹೃತ್ಯ ತತ್ಪರಂ ।
ತತಶ್ಚಾಽತ್ರ ಸಮಾಯಾತಸ್ತೇನ ನೋ ದಹ್ಯಸೇ ದ್ವಿಜ ॥ ೫೯ ॥
ತಸ್ಮಾದತ್ರೈವ ಕುಂಡೇ ಚ ಮಂತ್ರಾನ್ ಸಾರಸ್ವತಾಂಛುಭಾನ್ ।
ವೇದೋಕ್ತಾನ್ ಕ್ಷೇಪಯಿಷ್ಯಾಮಿ ಸ್ವಯಮೇವ ದ್ವಿಜೋತ್ತಮ ॥ ೬೦ ॥

---

ಬ್ರಹ್ಮಚರ್ಯನಿರತನೂ, ಆಗಿ ನಿರ್ವಿಕಲ್ಪವಾದ ಮನಸ್ಸಿನಿಂದ ಗಾಯತ್ರೀ ನ್ಯಾಸವನ್ನು ಮಾಡಿ ಆರಾಧಿಸಿದನು.

೫೬. ಅನಂತರ ಪೂಜ್ಯನಾದ ಸೂರ್ಯನು ವರ್ಷದ ಅಂತ್ಯದಲ್ಲಿ ತನ್ನ ದಾರುಣತೇಜಸ್ಸನ್ನು ತಡೆದುಕೊಂಡು ಸಂತೋಷದಿಂದ ಪ್ರತ್ಯಕ್ಷನಾಗಿ ಯಾಜ್ಞವಲ್ಕ್ಯನನ್ನು ಕುರಿತು ಇಂತೆಂದನು.

೫೭. "ಯಾಜ್ಞವಲ್ಕ್ಯ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಎಲ್ಲವನ್ನೂ ಕೊಡುವೆನು. ನಿನಗೆ ಕೊಡಲನರ್ಹವಾದುದೇನೂ ಇರುವುದಿಲ್ಲ."

೫೮. ಯಾಜ್ಞವಲ್ಕ್ಯನು ಹೇಳುತ್ತಾನೆ:—ಸುರೋತ್ತಮ! ನೀನು ಪ್ರಸನ್ನನಾಗಿದ್ದರೆ ಈಗಲೇ ನನಗೆ ವೇದಾಧ್ಯಯನಕ್ಕೆ ಗುರುವಾಗು. ಇದೇ ನನ್ನ ಮನಸ್ಸಿನಲ್ಲಿರುವ ಇಷ್ಟಾರ್ಥವು.

೫೯. ಭಾಸ್ಕರನು ಹೇಳುತ್ತಾನೆ:—ಯಾಜ್ಞವಲ್ಕ್ಯ! ನಾನು ನಿನ್ನಲ್ಲಿ ದಯೆಯಿಟ್ಟು ನನ್ನ ತೇಜಸ್ಸನ್ನು ತಡೆದುಕೊಂಡು ಇಲ್ಲಿಗೆ ಬಂದಿದ್ದೇನೆ. ಆದುದರಿಂದ ನೀನು ದಗ್ಧನಾಗುವುದಿಲ್ಲ.

೬೦. ಆದುದರಿಂದ ಈ ಕುಂಡದಲ್ಲಿ ಮಂಗಳಕರವಾದ ವೇದೋಕ್ತ ಸಾರಸ್ವತ ಮಂತ್ರಗಳನ್ನು ನಾನೇ ಹಾಕುವೆನು.

ತತ್ರ ಸ್ನಾತ್ವಾ ಶುಚಿರ್ಭೂತ್ವಾ ಯತ್ಕಿಂಚಿದ್ವೇದಸಂಭವಂ ।
ಪಠಿಷ್ಯಸಿ ಸಕೃತ್ತತ್ತೇ ಕಂಠಸ್ಥಂ ಸಂಭವಿಷ್ಯತಿ ॥ ೬೧ ॥
ತತ್ವಾರ್ಥಂ ಪ್ರಕಟಂ ಕೃತ್ಸ್ನಂ ವಿದಿತಂ ತೇ ಭವಿಷ್ಯತಿ ।
ಮತ್ಪ್ರಸಾದಾನ್ನ ಸಂದೇಹಃ ಸತ್ಯಮೇತನ್ಮಯೋದಿತಂ ॥ ೬೨ ॥
ಅದ್ಯಾದಿಮಾನವಃ ಪ್ರಾತಃ ಸ್ನಾತ್ವಾ ತ್ವತ್ರ ಹ್ರದೇ ಚ ಯಃ ।
ಸಾವಿತ್ರೇಣ ಚ ಸೂಕ್ತೇನ ಮಾಂ ದೃಷ್ಟ್ವಾ ಪ್ರಪಠಿಷ್ಯತಿ ।
ತಸ್ಮೈ ತತ್ಸ್ಯಾದಸಂದಿಗ್ಧಂ ಯತ್ತವೋಕ್ತಂ ಮಯಾ ದ್ವಿಜ ॥ ೬೩ ॥
ಯಾಜ್ಞವಲ್ಕ್ಯ ಉವಾಚ:—
ಏವಂ ಭವತು ದೇವೇಶ ಯತ್ತ್ವಯೋಕ್ತಂ ವಚೋಽಖಿಲಂ ।
ಪರಂ ಮಮ ವಚೋಽನ್ಯಚ್ಚ ತಚ್ಛೃಣುಷ್ವ ಬ್ರವೀಮಿ ತೇ ॥ ೬೪ ॥
ನಾಽಹಂ ಮನುಷ್ಯಧರ್ಮಾಣಮುಪಾಧ್ಯಾಯಂ ಕಥಂಚನ ।
ಕರಿಷ್ಯಾಮಿ ಜಗನ್ನಾಥ ಕೃಪಾಂ ಕುರು ಮಮೋಪರಿ ॥ ೬೫ ॥
ತತಸ್ತಸ್ಯ ದದೌ ಸೂರ್ಯೋ ಲಘಿಮಾಂ ನಾಮ ಶೋಭನಾಂ ।
ವಿದ್ಯಾಂ ಹಿ ತತ್ಪ್ರಭಾವಾಯ ಸಂತುಷ್ಟೇನಾಂತರಾತ್ಮನಾ ॥ ೬೬ ॥
ತತಸ್ತಂ ಪ್ರಾಹ ಕರ್ಣಾಂತೇ ಮಮಾಶ್ವಾನಾಂ ಪ್ರವಿಶ್ಯ ವೈ ।
ಅಭ್ಯಾಸಂ ಕುರು ವಿದ್ಯಾನಾಂ ವೇದಾಧ್ಯಯನಮಾಚರ ॥ ೬೭ ॥

---

೬೧—೬೨. ನೀನು ಇದರಲ್ಲಿ ಮಿಂದು ಶುದ್ಧನಾಗಿ ಒಂದುಸಾರಿ ವೇದದ ಯಾವುದಾದರೊಂದು ಮಂತ್ರವನ್ನು ಪಠಿಸಿದರೆ ಅದು ಕೂಡಲೆ ನನ್ನ ಅನುಗ್ರಹ ದಿಂದ ಕಂಠಗತವಾಗುವುದು. ಅದರ ಸಂಪೂರ್ಣ ತತ್ವಾರ್ಥವೂ ತಿಳಿಯುವುದು. ನಾನು ಹೇಳಿರುವ ಈ ಮಾತು ನಿಜ.

೬೩. ಈದಿನ ಮೊದಲ್ಗೊಂಡು ಮಾನವನು ಈ ಕುಂಡದಲ್ಲಿ ಮಿಂದು ನನ್ನನ್ನು ದರ್ಶನಮಾಡಿ ಸಾವಿತ್ರಸೂಕ್ತವನ್ನು ಪಠಿಸಿದರೆ ಅವನಿಗೆ ನಾನು ನಿನಗೆ ಹೇಳಿದ ಫಲವೆಲ್ಲ ನಿಶ್ಚಯವಾಗಿಯೂ ಉಂಟಾಗುವುದು.

೬೪. ಯಾಜ್ಞವಲ್ಕ್ಯನು ಹೇಳುತ್ತಾನೆ:—ದೇವೇಶ! ನೀನು ಹೇಳಿದ ಮಾತೆಲ್ಲ ಆಗಲಿ. ಇನ್ನೊಂದನ್ನು ಹೇಳುತ್ತೇನೆ ಕೇಳು:

೬೫. ಜಗದೊಡೆಯ! ನಾನು ಮನುಷ್ಯನನ್ನು ಉಪಾಧ್ಯಾಯನನ್ನಾಗಿ ಹೊಂದುವುದಿಲ್ಲ. ನನ್ನಮೇಲೆ ದಯೆ ಮಾಡು.

೬೬. ಅನಂತರ ಸೂರ್ಯನು ಯಾಜ್ಞವಲ್ಕ್ಯನ ಪ್ರಭಾವದಿಂದ ಸಂತುಷ್ಟ ನಾಗಿ ಅವನಿಗೆ ಲಘಿಮಾ ಎಂಬ ವಿದ್ಯೆಯನ್ನು ಉಪದೇಶ ಮಾಡಿದನು.

೬೭. ಮತ್ತು ಅವನನ್ನು ಕುರಿತು ನೀನು ನನ್ನ ಕುದುರೆಗಳ ಕಿವಿಯೊಳಗೆ ಪ್ರವೇಶಿಸಿ ವಿದ್ಯೆಗಳನ್ನು ಅಭ್ಯಾಸಮಾಡು, ವೇದಾಧ್ಯಯನವನ್ನೂ ಮಾಡು.

ಮನ್ಮುಖಾದ್ಬ್ರಾಹ್ಮಣಶ್ರೇಷ್ಠ ಯದ್ಯೇತತ್ತವ ವಾಂಛಿತಂ ।
ನ ತೇ ಸ್ಯಾದ್ಯೇನ ದೋಷೋಽಯಂ ಮಮ ರಶ್ಮಿಸಮುದ್ಭವಃ ॥ ೧೮ ॥
ಏವಮುಕ್ತಃ ಸ ತೇನಾಽಥ ವಾಜಿಕರ್ಣಂ ಸಮಾಶ್ರಿತಃ ।
ಲಘುರ್ಭೂತ್ವಾಽಪಠದ್ವೇದಾನ್ ಭಾಸ್ಕರಸ್ಯ ಮುಖಾತ್ತತಃ ॥ ೧೯ ॥
ಏವಂ ಸಿದ್ಧಿಂ ಸಮಾಪನ್ನೋ ಯಾಜ್ಞವಲ್ಕ್ಯೋ ದ್ವಿಜೋತ್ತಮಾಃ ।
ಕೃತ್ವೋಪನಿಷದಂ ಚಾರು ವೇದಾರ್ಥೈಃ ಸಕಲೈರ್ಯುತಂ ॥ ೨೦ ॥
ಜನಕಾಯ ನರೇಂದ್ರಾಯ ವ್ಯಾಖ್ಯಾಯ ಚ ತತಃ ಪರಂ ।
ಕಾತ್ಯಾಯನಂ ಸುತಂ ಪ್ರಾಪ್ಯ ವೇದಸೂತ್ರಸ್ಯ ಕಾರಕಮ್ ॥ ೨೧ ॥
ತ್ಯಕ್ತ್ವಾ ಕಲೇವರಂ ತತ್ರ ಬ್ರಹ್ಮದ್ವಾರಿ ವಿನಿರ್ಮಿತೇ ।
ತತ್ತೇಜೋ ಬ್ರಹ್ಮಣೋ ಗಾತ್ರೇ ಯೋಜಯಾಮಾಸ ಶಕ್ತಿತಃ ॥ ೨೨ ॥
ತಸ್ಯ ತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ತಂ ಚ ದಿವಾಕರಂ ।
ನಾದಬಿಂದುಂ ಪಠಿತ್ವಾ ಚ ತದಗ್ರೇ ಮುಕ್ತಿಮಾಪ್ನುಯಾತ್ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯಾಜ್ಞವಲ್ಕ್ಯಾಶ್ರಮಮಾಹಾತ್ಮ್ಯವರ್ಣನಂ"
ನಾಮೈಕೋನತ್ರಿಂಶದುತ್ತರಶತತಮೋಽಧ್ಯಾಯಃ

---

೧೮. ಬ್ರಾಹ್ಮಣೋತ್ತಮ! ನನ್ನ ಕಾಂತಿಗಳ ದೋಷದಿಂದ ನಿನಗಿಷ್ಟವಾದ ವಿದ್ಯಾಭ್ಯಾಸವು ನನ್ನ ಮುಖದಿಂದ ಆಗಲಾರದು.

೧೯. ಸೂರ್ಯನು ಹೀಗೆನ್ನಲು ಆ ಯಾಜ್ಞವಲ್ಕ್ಯನು ಸೂಕ್ಷ್ಮರೂಪವನ್ನು ತಾಳಿ ಕುದುರೆಯ ಕಿವಿಯನ್ನು ಹೊಕ್ಕು ಸೂರ್ಯನ ಮುಖದಿಂದ ವೇದಗಳನ್ನು ಕಲಿತನು.

೨೦–೨೨. ದ್ವಿಜವರ್ಯರೆ! ಯಾಜ್ಞವಲ್ಕ್ಯನು ಹೀಗೆ ಸಿದ್ಧಿಯನ್ನು ಪಡೆದು ಸಕಲ ವೇದಾರ್ಥಗಳಿಂದ ಕೂಡಿದ ಉಪನಿಷತ್ತನ್ನು ರಚಿಸಿ ಅದನ್ನು ಜನಕರಾಜನಿಗೆ ಪ್ರವಚನಮಾಡಿ ವೇದಸೂತ್ರವನ್ನು ರಚಿಸಿದ ಕಾತ್ಯಾಯನನೆಂಬ ಪುತ್ರನನ್ನು ಹೊಂದಿ ಶರೀರವನ್ನು ಬ್ರಹ್ಮದ್ವಾರದಲ್ಲಿ ತ್ಯಜಿಸಿ ತನ್ನ ಶಕ್ತಿಯಿಂದ ತೇಜಸ್ಸನ್ನು ಬ್ರಹ್ಮನ ಶರೀರದಲ್ಲಿ ಸೇರಿಸಿದನು.

೨೩. ಆ ತೀರ್ಥದಲ್ಲಿ ಮಿಂದು ಸೂರ್ಯನನ್ನು ನೋಡಿ ಅವನ ಮುಂದೆ ನಾದಬಿಂದುವನ್ನು ಪಠಿಸಿದ ಮನುಷ್ಯನು ಮುಕ್ತಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯಾಜ್ಞವಲ್ಕ್ಯಾಶ್ರಮ ಮಾಹಾತ್ಮ್ಯವರ್ಣನ"ವೆಂಬ
ನೂರಿಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ತ್ರಿಂಶದುತ್ತರಶತತಮೋಽಧ್ಯಾಯಃ

## ಪಂಚಪಿಂಡಾಗೌರ್ಯುತ್ಪತ್ತಿವರ್ಣನಂ

ಋಷಯ ಊಚುಃ:—

ಯಾಜ್ಞವಲ್ಕ್ಯಸುತಃ ಸೂತ ಯಸ್ತ್ವಯಾ ಪರಿಕೀರ್ತಿತಃ ।
ಕೇನಾ ತಸ್ಯ ಮಾತಾಽಭೂತ್ಸರ್ವಂ ನೋ ಬ್ರೂಹಿ ವಿಸ್ತರಾತ್ ॥ ೧ ॥

ಸೂತ ಉವಾಚ :—

ತಸ್ಯ ಭಾರ್ಯಾದ್ವಯಂ ಶ್ರೇಷ್ಠಮಾಸೀತ್ಸರ್ವಗುಣಾನ್ವಿತಂ ।
ಏಕಾ ಗುಣವತೀ ತಸ್ಯ ಮೈತ್ರೇಯೀತಿ ಪ್ರಕೀರ್ತಿತಾ ॥ ೨ ॥
ಜ್ಯೇಷ್ಠಾ ಚಾಽನ್ಯಾಥ ಕಲ್ಯಾಣೀ ಖ್ಯಾತಾ ಕಾತ್ಯಾಯನೀತಿ ಚ ।
ತಸ್ಯಾಃ ಕಾತ್ಯಾಯನಃ ಪುತ್ರೋ ವೇದಾರ್ಥಾನಾಂ ಪ್ರಜಲ್ಪಕಃ ॥ ೩ ॥
ತಾಭ್ಯಾಂ ಕುಂಡದ್ವಯಂ ತತ್ರ ಸಂತಿಷ್ಠತಿ ಸುಶೋಭನಂ ।
ಯತ್ರ ಸ್ನಾತಾ ನರಾ ಯಾಂತಿ ಲೋಕಾಂಸ್ತಾಂಶ್ಚ ಮಹೋದಯಾನ್ ॥
ಕಾತ್ಯಾಯನ್ಯಾಶ್ಚ ತೀರ್ಥಸ್ಯ ಶಾಂಡಿಲ್ಯಾಸ್ತೀರ್ಥಮುತ್ತಮಂ ।
ಪತಿವ್ರತಾತ್ವಯುಕ್ತಾಯಾಸ್ತಥಾಽನ್ಯತ್ತತ್ರ ಸಂಸ್ಥಿತಂ ॥ ೫ ॥

---

## ಕನ್ನಡದ ಅನುವಾದ

### ಪಂಚಪಿಂಡಾಗೌರ್ಯುತ್ಪತ್ತಿವರ್ಣನ

೧. ಋಷಿಗಳು ಹೇಳುತ್ತಾರೆ:—'ಸೂತ! ನೀನು ಯಾಜ್ಞವಲ್ಕ್ಯನ ಮಗನೆಂದು ಹೇಳಿದೆಯಷ್ಟೆ. ಅವನ ತಾಯಿ ಯಾರು? ಎಲ್ಲವನ್ನೂ ನಮಗೆ ವಿಸ್ತಾರವಾಗಿ ಹೇಳು.

೨–೩. ಸೂತನು ಹೇಳುತ್ತಾನೆ:—ಆ ಯಾಜ್ಞವಲ್ಕ್ಯನಿಗೆ ಮೈತ್ರೇಯೀ, ಕಾತ್ಯಾಯನೀ ಎಂಬ ಇಬ್ಬರು ಗುಣಶೀಲರಾದ ಹೆಂಡತಿಯರಿದ್ದರು. ಅವರಲ್ಲಿ ಕನಿಷ್ಠಳಾದ ಕಾತ್ಯಾಯನಿಯಲ್ಲಿ ಕಾತ್ಯಾಯನನೆಂಬ ವೇದಾರ್ಥವನ್ನು ವಿವರಿಸಿದ ಪುತ್ರನು ಜನಿಸಿದನು.

೪. ಅಲ್ಲಿ ಅವರೀರ್ವರ ಎರಡು ಕುಂಡಗಳು ಇವೆ. ಅವುಗಳಲ್ಲಿ ಮಿಂದ ಮನುಷ್ಯರು ಉತ್ತಮಲೋಕಕ್ಕೆ ತೆರಳುವರು.

೫. ಕಾತ್ಯಾಯನೀತೀರ್ಥದ ಬಳಿಯಲ್ಲಿ ಪತಿವ್ರತೆಯಾದ ಶಾಂಡಿಲ್ಯೆಯ ಉತ್ತಮವಾದ ಮತ್ತೊಂದು ತೀರ್ಥವಿದೆ.

ಯತ್ರ ಕಾತ್ಯಾಯನೀ ಪ್ರಾಪ್ತಾ ಶಾಂಡಿಲ್ಯಾ ಪ್ರತಿಬೋಧಿತಾ ।
ವೈರಾಗ್ಯಂ ಪರಮಂ ಪ್ರಾಪ್ತಾ ಸಪತ್ನೀದುಃಖ ದುಃಖಿತಾ ॥ ೬ ॥
ತತ್ರ ಯಾ ಕುರುತೇ ಸ್ನಾನಂ ತೃತೀಯಾಯಾಂ ಸಮಾಹಿತಾ ।
ನಾರೀ ಮಾರ್ಗಸಿತೇ ಪಕ್ಷೇ ಸಾ ಸೌಭಾಗ್ಯವತೀ ಭವೇತ್ ॥ ೭ ॥
ಅಥ ದೌರ್ಭಾಗ್ಯಸಂಪನ್ನಾ ಕಾಣಾ ವೃದ್ಧಾಽಥ ವಾಮನಾ ।
ಅಭೀಷ್ಟಾ ಜಾಯತೇ ಸಾ ಚ ತತ್ಪ್ರಭಾವಾದ್ದ್ವಿಜೋತ್ತಮಾಃ ॥ ೮ ॥

ಋಷಯ ಊಚುಃ:—

ಕೀದೃಕ್ಸಪತ್ನಿಜಂ ದುಃಖಂ ಕಾತ್ಯಾಯನ್ಯಾ ಉಪಸ್ಥಿತಂ ।
ಉಪದೇಶಃ ಕಥಂ ಲಬ್ಧಃ ಶಾಂಡಿಲ್ಯಾಃ ಸೂತ ಕೀದೃಶಃ ॥ ೯ ॥
ಕಾತ್ಯಾಯನ್ಯಾ ಸಮಾಚಕ್ಷ್ವ ಕೌತುಕಂ ನೋ ವ್ಯವಸ್ಥಿತಂ ।
ಸಾಮಾನ್ಯೋ ಭವಿತಾ ನೈಷ ಉಪದೇಶಸ್ತಯೇರಿತಃ ॥ ೧೦ ॥

ಸೂತ ಉವಾಚ:—

ಮೈತ್ರೇಯ್ಯಾ ಸಹ ಸಂಸಕ್ತಂ ಯಾಜ್ಞವಲ್ಕ್ಯಂ ವಿಲೋಕ್ಯ ಸಾ ।
ಕಾತ್ಯಾಯನೀ ಸುದುಃಖಾರ್ತಾ ಸಂಜಾತಾ ಚೇರ್ಷ್ಯಯಾ ತತಃ ॥ ೧೧ ॥
ಸಾ ನ ಸ್ನಾತಿ ನ ಭುಂಕ್ತೇ ಚ ನ ಹಾಸ್ಯಂ ಕುರುತೇ ಕ್ವಚಿತ್ ।
ಕೇವಲಂ ಬಾಷ್ಪಪೂರ್ಣಾಕ್ಷೀ ನಿಃಶ್ವಾಸಾಢ್ಯಾ ಬಭೂವ ಹ ॥ ೧೨ ॥

---

೬. ಇಲ್ಲಿ ಸವತಿಯಿಂದ ದುಃಖಗೊಂಡ ಕಾತ್ಯಾಯನಿಯು ಶಾಂಡಿಲ್ಯೆಯ ಉಪದೇಶದಿಂದ ಅತ್ಯಂತ ವೈರಾಗ್ಯವನ್ನು ಹೊಂದಿದಳು.

೭. ಅಲ್ಲಿ ಮಾರ್ಗಶೀರ್ಷ ಮಾಸದ ಶುಕ್ಲಪಕ್ಷ ತೃತೀಯಾ ದಿನ ಸಾವಧಾನ ಮನಸ್ಸಿನಿಂದ ಮಿಂದ ಹೆಂಗಸು ಸೌಭಾಗ್ಯವತಿಯಾಗುವಳು.

೮. ದ್ವಿಜವರ್ಯರೆ! ದೌರ್ಭಾಗ್ಯಸಂಪನ್ನಳೂ, ಕುರುಡಳೂ, ಮುದುಕಿಯೂ ಆದವಳು ಆ ತೀರ್ಥದ ಮಾಹಾತ್ಮ್ಯದಿಂದ ಇಷ್ಟವಾದ ರೂಪವುಳ್ಳವಳಾಗುವಳು.

೯–೧೦. ಋಷಿಗಳು ಹೇಳುತ್ತಾರೆ:—ಕಾತ್ಯಾಯನಿಗೆ ಬಂದ ಸವತಿಯ ದುಃಖವು ಎಂಥಾದ್ದು? ಅವಳಿಗೆ ಶಾಂಡಿಲ್ಯೆಯ ಎಂತಹ ಉಪದೇಶವು ಹೇಗೆ ಲಭಿಸಿತು. ನಮಗೆ ಕುತೂಹಲವುಂಟಾಗಿದೆ: ಶಾಂಡಿಲ್ಯೆಯ ಉಪದೇಶವು ಸಾಮಾನ್ಯವಾಗಿರಲಾರದು.

೧೧. ಸೂತನು ಹೇಳುತ್ತಾನೆ:—ಆ ಕಾತ್ಯಾಯನಿಯು ಮೈತ್ರೇಯಿಯೊಡನೆ ಸೇರಿದ ಯಾಜ್ಞವಲ್ಕ್ಯನನ್ನು ನೋಡಿ ಅಸೂಯೆಯಿಂದ ದುಃಖಗೊಂಡಳು.

೧೨. ಅವಳು ಸ್ನಾನ ಭೋಜನಗಳನ್ನು ಮಾಡಲಿಲ್ಲ. ಒಂದೆಡೆಯಲ್ಲಿಯೂ ಹಾಸ್ಯಮಾಡಲಿಲ್ಲ: ಕೇವಲ ಕಣ್ಣೀರನ್ನು ಸುರಿಸುತ್ತ ನಿಟ್ಟುಸಿರನ್ನು ಬಿಡುತ್ತಿದ್ದಳು.

ತತಃ ಕದಾಚಿದೇವಾಽಥ ಫಲಾರ್ಥಂ ನಿರ್ಗತಾ ಬಹಿಃ ।
ಅಪಶ್ಯಚ್ಛಾಂಡಿಲೀಂ ನಾಮ ಪತಿಪಾರ್ಶ್ವೇ ವ್ಯವಸ್ಥಿತಾಂ ॥ ೧೩ ॥
ಕೃತಾಂಜಲಿಪುಟಾಂ ಸಾಧ್ವೀಂ ವಿನಯಾವನತಾಂ ಸ್ಥಿತಾಂ ।
ಸೋಽಪಿ ತಸ್ಯಾ ಮುಖಾಸಕ್ತಃ ಸಾಽನುರಾಗಃ ಪ್ರಸನ್ನದೃಕ್ ॥ ೧೪ ॥
ಗುಣದೋಷೋದ್ಭವಾಂ ವಾರ್ತಾಮಾಪೃಚ್ಛ್ಯಾಽಕಥಯತ್ತಥಾ ।
ಸಾ ಚ ತೌ ದಂಪತೀ ದೃಷ್ಟ್ವಾ ಸಂಹೃಷ್ಟಾವಿತರೇತರಂ ॥ ೧೫ ॥
ಚಿತ್ತೇ ಸ್ವೇ ಚಿಂತಯಾಮಾಸ ಸುಧನ್ಯೇಯಂ ತಪಸ್ವಿನೀ ।
ಯಸ್ಯಾಃ ಪತಿರ್ಮುಖಾಸಕ್ತೋ ಗುಣದೋಷಪ್ರಜಲ್ಪಕಃ ।
ಸಾಽನುರಾಗಶ್ಚ ಸುಸ್ನಿಗ್ಧೋ ನಾಽನ್ಯಾಂ ನಾರೀಂ ಬಿಭರ್ತಿ ಚ ॥ ೧೬ ॥
ಏವಂ ಸಂಚಿಂತ್ಯ ಸಾ ಸಾಧ್ವೀ ಭೂಯೋ ಭೂಯೋ ದ್ವಿಜೋತ್ತಮಾಃ ।
ಜಗಾಮ ಸ್ವಾಶ್ರಮಂ ಪಶ್ಚಾನ್ನಿಂದ್ಯಮಾನಾ ಸ್ವಕಂ ವಪುಃ ॥ ೧೭ ॥
ತತಃ ಕದಾಚಿದೇಕಾಂತೇ ಸ್ಥಿತಾಂ ತಾಂ ಶಾಂಡಿಲೀಂ ದ್ವಿಜಾಃ ।
ಬಹಿರ್ಗತೇ ಭರ್ತರಿ ಚ ತಸ್ಯಾಃ ಕಾರ್ಯೇಣ ಕೇನಚಿತ್ ॥ ೧೮ ॥
ಕಾತ್ಯಾಯನೀ ಸಮಾಗಮ್ಯ ತತಃ ಪಪ್ರಚ್ಛ ಸಾದರಂ ।
ವದ ಕಲ್ಯಾಣಿ ಮೇ ಕಂಚಿದುಪದೇಶಂ ಮಹೋದಯಂ ॥ ೧೯ ॥

---

೧೩–೧೬. ಅನಂತರ ಒಂದಾನೊಂದು ದಿನ ಹಣ್ಣಿಗಾಗಿ ಹೊರಗೆ ಹೋದ ಅವಳು ಪತಿಯ ಹತ್ತಿರ ಕೈಮುಗಿದುಕೊಂಡು ವಿನಯದಿಂದ ನಮ್ರಳಾಗಿ ನಿಂತಿರುವ ಶಾಂಡಿಲ್ಯೆಯನ್ನು ನೋಡಿದಳು. ಆ ಪತಿಯೂ ಆ ಪತ್ನಿಯ ಮುಖವನ್ನು ಅನುರಾಗದಿಂದ ನೋಡುತ್ತ ಪ್ರಸನ್ನವಾದ ದೃಷ್ಟಿಯುಳ್ಳವನಾಗಿ ಗುಣದೋಷಗಳ ಸಂಬಂಧವಾದ ವೃತ್ತಾಂತವನ್ನು ಪ್ರಶ್ನಿಸಿ ಹೇಳುತ್ತಿದ್ದನು. ಆ ಕಾತ್ಯಾಯನಿಯು ಪರಸ್ಪರವಾಗಿ ಅನುರಾಗಗೊಂಡ ಆ ದಂಪತಿಗಳನ್ನು ನೋಡಿ ಮನಸ್ಸಿನಲ್ಲಿ ಆಲೋಚಿಸಿದಳು. "ಈ ಅಂಗನೆಯು ಧನ್ಯಳು. ಇವಳ ಪತಿಯು ಅನುರಾಗವುಳ್ಳವನೂ, ಗುಣದೋಷಗಳನ್ನು ಹೇಳುವವನೂ, ಪ್ರಿಯನೂ ಆಗಿ ಇತರ ಸ್ತ್ರೀಯನ್ನು ಮನಸ್ಸಿನಲ್ಲಿ ಆಲೋಚಿಸುವುದಿಲ್ಲ."

೧೭. ಆ ಸಾಧ್ವಿಯು ಹೀಗೆ ಬಾರಿಬಾರಿಗೂ ಆಲೋಚಿಸಿ ತನ್ನ ಶರೀರವನ್ನು ನಿಂದಿಸುತ್ತ ಆಶ್ರಮಕ್ಕೆ ತೆರಳಿದಳು.

೧೮–೨೧. ಅನಂತರ ಒಂದಾನೊಂದು ದಿನ ಕಾತ್ಯಾಯನಿಯು, ಯಾವುದೋ ಒಂದು ಕೆಲಸಕ್ಕಾಗಿ ಶಾಂಡಿಲಿಯ ಪತಿಯು ಹೊರಗೆ ಹೋಗಿರುವ ಕಾರಣ ಏಕಾಕಿನಿಯಾಗಿರುವ ಆಕೆಯನ್ನು ಸಮೀಪಿಸಿ ಪ್ರೀತಿಯಿಂದ ಇಂತೆಂದಳು.

ಮುಖಪ್ರೇಕ್ಷಃ ಸದಾ ಭರ್ತಾ ಯೇನ ಸ್ತ್ರೀಣಾಂ ಪ್ರಜಾಯತೇ ।
ನಾಽಪಮಾನಂ ಕರೋತ್ಯೇವ ದುರುಕ್ತವಚನೈಃ ಕ್ವಚಿತ್ ॥ ೨೦ ॥
ನಾಽನ್ಯಾಂ ಸಂಗಚ್ಛತೇ ನಾರೀಂ ಚಿತ್ತೇನಾಽಪಿ ಕಥಂಚನ ।
ಅಹಂ ಭರ್ತುಃ ಕೃತೈರ್ದುಃಖೈರತೀವ ಪರಿಪೀಡಿತಾ ।
ಸಪತ್ನೀಜೈರ್ವಿಶೇಷೇಣ ತಸ್ಮಾನ್ಮೇ ತ್ವಂ ಪ್ರಕೀರ್ತಯ ॥ ೨೧ ॥
ಯಥಾ ತೇ ವಶಗೋ ಭರ್ತಾ ಸಂಜಾತಃ ಕಾಮದಃ ಸದಾ ।
ಮನಸಾಽಪಿ ನ ಸಂದಧ್ಯಾನ್ನಾರೀಮೇಷ ಕಥಂಚನ ॥ ೨೨ ॥

ಶಾಂಡಿಲ್ಯುವಾಚ :—

ಶೃಣು ಸಾಧ್ವಿ ಪ್ರವಕ್ಷ್ಯಾಮಿ ತವಾಽಹಂ ಗುಹ್ಯಮುತ್ತಮಂ ।
ಯಥಾ ಮಮಾಽಭವದ್ವಶ್ಯೋ ಮುಖಪ್ರೇಕ್ಷಸ್ತಥಾ ಪತಿಃ ॥ ೨೩ ॥
ಮಮ ತಾತಃ ಕುರುಕ್ಷೇತ್ರೇ ಶಾಂಡಿಲ್ಯೋ ಮುನಿಸತ್ತಮಃ ।
ವಾನಪ್ರಸ್ಥಾಶ್ರಮೇಽತಿಷ್ಠತ್ಪೂರ್ವೇ ವಯಸಿ ಸಂಸ್ಥಿತಃ ॥ ೨೪ ॥
ತತ್ರೈಕಾಽಹಂ ಸಮುತ್ಪನ್ನಾ ಕನ್ಯಾ ತಸ್ಯ ಮಹಾತ್ಮನಃ ।
ವೃದ್ಧಿಂ ಗತಾ ಕ್ರಮೇಣಾಽಥ ತಸ್ಮಿನ್ನೇವ ತಪೋವನೇ ॥ ೨೫ ॥

---

"ಮಂಗಳಕರಳೆ! ಯಾವುದರಿಂದ ಪತಿಯು ಯಾವಾಗಲೂ ಪತ್ನಿಯ ಮುಖವನ್ನು ನೋಡುತ್ತಿರುವನೊ, ಒಂದು ಸಲವೂ ದುಷ್ಟಮಾತುಗಳಿಂದ ಅಪಮಾನ ಮಾಡುವುದಿಲ್ಲವೊ, ಮನಸ್ಸಿನಿಂದಲೂ ಇತರ ಹೆಂಗಸನ್ನು ಚಿಂತಿಸುವುದಿಲ್ಲವೊ ಅಂತಹ ಯಾವುದಾದರೊಂದು ಮಂತ್ರವನ್ನು ನನಗೆ ಉಪದೇಶ ಮಾಡು. ನಾನು ಪತಿಯು ಉಂಟುಮಾಡಿದ ದುಃಖದಿಂದಲೂ, ಸವತಿಯ ಕಷ್ಟದಿಂದಲೂ ಅತ್ಯಂತ ಪೀಡಿತಳಾಗಿದ್ದೇನೆ. ಆದುದರಿಂದ ನೀನು ಅದನ್ನು ಹೇಳು.

೨೨. ನಿನ್ನ ಪತಿಯು ಸ್ವಾಧೀನನಾಗಿ ಯಾವಾಗಲೂ ಇಷ್ಟವನ್ನು ನೆರವೇರಿಸುವಂತೆ ನನ್ನ ಪತಿಯೂ ಮನಸ್ಸಿನಿಂದಲೂ ಇತರ ಸ್ತ್ರೀಯನ್ನು ಚಿಂತಿಸಬಾರದು."

೨೩. ಶಾಂಡಿಲಿಯು ಹೇಳುತ್ತಾಳೆ:—ಸಾಧ್ವಿಯೆ! ನನ್ನ ಪತಿಯು ಸ್ವಾಧೀನನೂ, ಅನುರಾಗಿಯೂ ಹೇಗೆ ಆದನೆಂಬ ರಹಸ್ಯವನ್ನು ನಿನಗೆ ಹೇಳುವೆನು ಕೇಳು.

೨೪. ನನ್ನ ತಂದೆಯಾದ ಶಾಂಡಿಲ್ಯನು ಪೂರ್ವವಯಸ್ಸಿನಲ್ಲಿ ಕುರುಕ್ಷೇತ್ರದಲ್ಲಿ ವಾನಪ್ರಸ್ಥಾಶ್ರಮದಲ್ಲಿದ್ದನು.

೨೫. ಅಲ್ಲಿ ಆ ಮಹಾತ್ಮನಿಗೆ ನಾನೊಬ್ಬಪುತ್ರಿಯೇ ಹುಟ್ಟಿ ಆ ತಪೋವನದಲ್ಲಿ ಕ್ರಮವಾಗಿ ಬೆಳೆದೆನು.

ಕರೋಮಿ ತತ್ರ ಶುಶ್ರೂಷಾಂ ಹೋಮಕಾಲೇ ಯಥೋಚಿತಾಂ ।
ನೀವಾರಾದೀನಿ ಧಾನ್ಯಾನಿ ನಿತ್ಯಂ ಚೈವಾನಯಾಮ್ಯಹಂ ॥ ೨೬ ॥
ಕಸ್ಯ ಚಿತ್ತ್ವಥ ಕಾಲಸ್ಯ ನಾರದೋ ಮುನಿಸತ್ತಮಃ ।
ಆಶ್ರಮೇ ಮಮ ತಾತಸ್ಯ ಸುಶ್ರಾಂತಃ ಸಮುಪಾಗತಃ ॥ ೨೭ ॥
ತಾತಾದೇಶಾತ್ತತಸ್ತತ್ರ ಮಯಾ ಸ ವಿಶ್ರಮಃ ಕೃತಃ ।
ಪಾದಶೌಚಾದಿಭಿಃ ಕೃತ್ಯೈಃ ಸ್ನಾನಾದ್ಯೈಶ್ಚ ತಥಾಪರೈಃ ॥ ೨೮ ॥
ತತೋ ಭುಕ್ತ್ವಾಽವಸಾನೇಽಥ ನಿವಿಷ್ಟಃ ಸುಖಸಂಸ್ಥಿತಃ ।
ಮಮ ಮಾತ್ರಾ ಪರಿಪೃಷ್ಟೋ ವಿನಯಾದ್ವರವರ್ಣಿನೀ ॥ ೨೯ ॥
ಏಕೇಯಂ ಕನ್ಯಕಾಽಸ್ಮಾಕಂ ಜಾತೇ ವಯಸಿ ಸಂಸ್ಥಿತೇ ।
ಸಂಜಾತಾ ಮುನಿಶಾರ್ದೂಲ ಪ್ರಾಣೇಭ್ಯೋಽಪಿ ಗರೀಯಸೀ ॥ ೩೦ ॥
ತದಸ್ಯಾಃ ಕೀರ್ತಯ ಕ್ಷಿಪ್ರಂ ಸುಖೋಪಾಯಂ ಸುಖೋದಯಂ ।
ವ್ರತಂ ವಾ ನಿಯಮಂ ವಾ ತ್ವಂ ಹೋಮಂ ವಾ ಮಂತ್ರಮೇವ ವಾ ॥ ೩೧ ॥
ಯೇನ ಚೀರ್ಣೇನ ಭರ್ತಾ ಸ್ಯಾತ್ಸುಸೌಮ್ಯಃ ಸದ್ಗುಣಾನ್ವಿತಃ ।
ಪ್ರಿಯಂವದೋ ಮುಖಪ್ರೇಕ್ಷಃ ಪರನಾರೀಪರಾಙ್ಮುಖಃ ॥ ೩೨ ॥
ತಸ್ಯಾಸ್ತದ್ವಚನಂ ಶ್ರುತ್ವಾ ಸ ಮುನಿಸ್ತದನಂತರಂ ।
ಚಿರಂ ಧ್ಯಾತ್ವಾ ವಚಃ ಪ್ರಾಹ ಪ್ರಸನ್ನವದನಸ್ತತಃ ॥ ೩೩ ॥

---

೨೬. ನಾನು ಅಲ್ಲಿ ತಂದೆಯನ್ನು ಸೇವಿಸುತ್ತ ಹೋಮಕಾಲದಲ್ಲಿ ನವಣೆ ಮೊದಲಾದ ಧಾನ್ಯಗಳನ್ನು ತರುತ್ತಿದ್ದೆನು.

೨೭–೨೮. ಒಂದಾನೊಂದು ದಿನ ನಾರದ ಮುನಿವರ್ಯನು ಅತ್ಯಂತ ಬಳಲಿದವನಾಗಿ ನಮ್ಮ ತಂದೆಯ ಆಶ್ರಮಕ್ಕೆ ಬಂದನು. ನಾನು ಅವನನ್ನು ಅಲ್ಲಿ ಪಾದ್ಯ, ಸ್ನಾನ ಮೊದಲಾದುವುಗಳಿಂದ ವಿಶ್ರಾಂತಿಗೊಳಿಸಿದೆನು.

೨೯. ಅವನು ಊಟವಾದ ಬಳಿಕ ಸುಖವಾಗಿ ಕುಳಿತಿರಲು ನಮ್ಮ ತಾಯಿಯು ವಿನಯದಿಂದ ಹೀಗೆ ಪ್ರಶ್ನೆಮಾಡಿದಳು.

೩೦. "ಮುನಿವರ್ಯನೆ! ನಮಗೆ ಈ ಮುದಿವಯಸ್ಸಿನಲ್ಲಿ ಪ್ರಾಣಕ್ಕಿಂತಲೂ ಶ್ರೇಷ್ಠಳಾದ ಓರ್ವಕನ್ಯೆಯು ಹುಟ್ಟಿರುವಳು.

೩೧–೩೨. ಆದುದರಿಂದ ಯಾವುದನ್ನು ಮಾಡಿದರೆ ಈಕೆಯ ಪತಿಯು ಸೌಮ್ಯನೂ, ಗುಣವಂತನೂ, ಹಿತವಾಗಿ ನುಡಿಯುವವನೂ, ಅನುರಾಗಿಯೂ, ಪರಸ್ತ್ರೀಯನ್ನು ನೋಡದವನೂ ಆಗುವನೊ, ಅಂತಹ ಸುಖವನ್ನುಂಟುಮಾಡುವ ವ್ರತ, ನಿಯಮ, ಹೋಮ, ಮಂತ್ರ ಇವುಗಳಲ್ಲಿ ಯಾವುದಾದರೊಂದನ್ನು ಶೀಘ್ರವಾಗಿ ಹೇಳು."

೩೩. ನಾರದನು ಅವಳ ಆ ಮಾತನ್ನು ಕೇಳಿ ಬಹಳಹೊತ್ತು ಆಲೋಚಿಸಿ ಪ್ರಸನ್ನಮುಖನಾಗಿ ಇಂತೆಂದನು.

ಹಾಟಕೇಶ್ವರಜೇ ಕ್ಷೇತ್ರೇ ಪಂಚಪಿಂಡಾ ವ್ಯವಸ್ಥಿತಾ ।
ಗೌರೀ ಗೌರ್ಯಾ ಸ್ವಯಂ ತತ್ರ ಸ್ಥಾಪಿತಾ ಪರಮೇಶ್ವರೀ ॥ ೩೪ ॥
ತಾಮೇಷಾ ವತ್ಸರಂ ಯಾವಚ್ಛ್ರದ್ಧಯಾ ಪರಯಾ ಯುತಾ ।
ಸದಾ ಪೂಜಯತು ಪ್ರೀತ್ಯಾ ತೃತೀಯಾಯಾಂ ವಿಶೇಷತಃ ॥ ೩೫ ॥
ತತೋ ವರ್ಷಾಂತಮಾಸಾದ್ಯ ಸಂಪ್ರಾಪ್ಸ್ಯತಿ ಯಥೋಚಿತಂ ।
ಭರ್ತಾರಂ ನಾಽತ್ರ ಸಂದೇಹೋ ಯಾದೃಗ್ರೂಪಂ ಯಥೋಚಿತಂ ॥ ೩೬ ॥
ತತ್ರ ಪೂರ್ವಂ ಗತಾ ಗೌರೀ ಪರಿತ್ಯಜ್ಯ ಮಹೇಶ್ವರಂ ।
ಗಂಗೇರ್ಷ್ಯಯಾ ಮಹಾಭಾಗೇ ಜ್ಞಾತ್ವಾ ಕ್ಷೇತ್ರಂ ಸುಸಿದ್ಧಿದಂ ॥ ೩೭ ॥
ತತಃ ಸಾ ಚಿಂತಯಾಮಾಸ ಕಾಂ ದೇವೀಂ ಪೂಜಯಾಮ್ಯಹಂ ।
ಸೌಭಾಗ್ಯಾಽರ್ಥಂ ಯತೋಽನ್ಯಾ ಮಾಂ ಪೂಜಯಂತಿ ಸುರಸ್ತ್ರಿಯಃ ॥೩೮॥
ತಸ್ಮಾದಹಂ ಪ್ರಭಕ್ತ್ಯಾಢ್ಯಾ ಸ್ವಯಮಾತ್ಮಾನಮೇವ ಚ ।
ಆತ್ಮನೈವ ಕೃತೋತ್ಸಾಹಾ ಪೂಜಯಿಷ್ಯಾಮಿ ಸಿದ್ಧಯೇ ॥ ೩೯ ॥
ತತಃ ಪ್ರಾಣಾಽಗ್ನಿಹೋತ್ರೋತ್ಥೈರ್ಮಂತ್ರೈರಾಥರ್ವಣೈಃ ಶುಭೈಃ ।
ಮೃತ್ಪಿಂಡಾನ್ ಪಂಚ ಸಂಯೋಜ್ಯ ಹ್ಯೇಕಸ್ಥಾನೇ ಸಮಾಹಿತಾ ॥ ೪೦ ॥
ಪೃಥ್ವೀಮಪಶ್ಚ ತೇಜಶ್ಚ ವಾಯುಮಾಕಾಶಮೇವ ಚ ।
ತೇಷು ಸಂಯೋಜಯಾಮಾಸ ಮೃತ್ಪಿಂಡೇಷು ನಿಧಾಯ ಸಾ ॥ ೪೧ ॥

---

೩೪. ಹಾಟಕೇಶ್ವರ ಕ್ಷೇತ್ರದಲ್ಲಿ ಗೌರಿಯು ತಾನೇ ಸ್ಥಾಪಿಸಿರುವ ಪಂಚಪಿಂಡರೂಪಳಾದ ಗೌರಿಯು ಇರುವಳು.

೩೫. ಇವಳು ಆ ಗೌರಿಯನ್ನು ಒಂದು ವರ್ಷಕಾಲ ಅತ್ಯಂತ ಶ್ರದ್ಧೆಯಿಂದ ಯಾವಾಗಲೂ ತದಿಗೆಯ ದಿನ ಪೂಜಿಸಲಿ.

೩೬. ಅನಂತರ ಇವಳು ಒಂದು ವರ್ಷದ ಕೊನೆಯಲ್ಲಿ ತನಗುಚಿತನೂ, ಸುಂದರನೂ ಆದ ಪತಿಯನ್ನು ಪಡೆಯುವಳು.

೩೭. ಮಹಾತ್ಮಳೆ! ಹಿಂದೆ ಗೌರೀ ದೇವಿಯು ಗಂಗೆಯ ಮೇಲಿನ ಅಸೂಯೆಯಿಂದ ಮಹೇಶ್ವರನನ್ನು ತ್ಯಜಿಸಿ ಸಿದ್ಧಿಯನ್ನೀಯುವ ಈ ಕ್ಷೇತ್ರವನ್ನು ಹೊಂದಿದಳು.

೩೮–೪೧. ಅನಂತರ ಅವಳು ಯಾವ ದೇವಿಯನ್ನು ನಾನು ಪೂಜಿಸಲಿ ಎಂದು ಚಿಂತಿಸಿದಳು.' ಇತರ ಸ್ತ್ರೀಯರು ಸೌಭಾಗ್ಯಕ್ಕಾಗಿ ನನ್ನನ್ನು ಪೂಜಿಸುವುದರಿಂದ ನಾನು ನನ್ನನ್ನೇ ಭಕ್ತಿಯಿಂದ ಇಷ್ಟಸಿದ್ಧಿಗಾಗಿ ಪೂಜಿಸುವೆನು ಎಂದು ನಿಶ್ಚಯಿಸಿದಳು. ಅನಂತರ ಆ ಗೌರಿಯು ಐದು ಮಣ್ಣಿನ ಉಂಡೆಗಳನ್ನು ಒಂದೆಡೆ ಸೇರಿಸಿ ಅವುಗಳಲ್ಲಿ ಪ್ರಾಣಾಗ್ನಿ ಹೋತ್ರಗಳಿಂದುಂಟಾದ ಶುಭವನ್ನುಂಟುಮಾಡುವ ಆಥರ್ವಣ ಮಂತ್ರಗಳಿಂದ ಭೂಮಿ, ನೀರು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚ ಭೂತಗಳನ್ನು ಸ್ಥಾಪಿಸಿದಳು.

ಮಹದ್ಭೂತಾನಿ ಚೈತಾನಿ ಪಂಚ ದೇವೀ ಯತವ್ರತಾ ।
ತತಃ ಸಂಪೂಜಯಾಮಾಸ ಪುಷ್ಪಧೂಪಾನುಲೇಪನೈಃ ॥ ೪೨ ॥
ಅಥ ತಾಂ ತತ್ರ ವಿಜ್ಞಾಯ ತಪಃಸ್ಥಾಂ ಗಿರಿಜಾಂ ಭವಃ ।
ತನ್ಮಂತ್ರಾಕೃಷ್ಟ ಚಿತ್ತಶ್ಚ ಸತ್ವರಂ ಸಮುಪಾಗತಃ ॥ ೪೩ ॥
ಪ್ರೋವಾಚ ಚ ಪೃಹೃಷ್ಟಾತ್ಮಾ ಕಸ್ಮಾತ್ತ್ವಮಿಹಚಾಽಗತಾ ।
ಮಾಂ ಮುಕ್ತ್ವಾ ದೋಷನಿರ್ಮುಕ್ತಂ ಮುಖಪ್ರೇಕ್ಷಂ ಸದಾರತಂ ॥ ೪೪ ॥
ತಸ್ಮಾದಾಗಚ್ಛ ಕೈಲಾಸಂ ವೃಷಾರೂಢಾ ಮಯಾ ಸಹ ।
ಅಥವಾ ಕಾರಣಂ ಬ್ರೂಹಿ ಯದಿ ದೋಷೋಽಸ್ತಿಮೇ ಕ್ವಚಿತ್ ॥ ೪೫ ॥

ದೇವ್ಯುವಾಚ :—

ತ್ವಂ ಮೂರ್ಧ್ನಾ ಜಾಹ್ನವೀಂ ಧತ್ಸೇ ಮೂರ್ತಾಂ ಪದಜಲಾತ್ಮಿಕಾಂ ।
ತಸ್ಮಾನ್ನಾಽಹಂ ಗಮಿಷ್ಯಾಮಿ ಮಂದಿರಂ ತೇ ಕಥಂಚನ ॥ ೪೬ ॥
ಯಾವನ್ನ ತ್ಯಜಸಿ ವ್ಯಕ್ತಂ ಮಮ ಸಾಪತ್ನ್ಯತಾಂ ಗತಾಂ ।
ತಥಾ ನಿತ್ಯಂ ಪ್ರಣಾಮಂ ತ್ವಂ ಕರೋಷಿ ವೃಷಭಧ್ವಜ ॥ ೪೭ ॥
ಪ್ರತ್ಯಕ್ಷಮಪಿ ಮೇ ನಿತ್ಯಂ ಸಂಧ್ಯಾಯಾಶ್ಚ ನ ಲಜ್ಜಸೇ ।
ತಸ್ಮಾದೇತತ್ಪರಿತ್ಯಜ್ಯ ಕರ್ಮ ಲಜ್ಜಾಕರಂ ಪರಂ ॥ ೪೮ ॥

---

೪೨. ದೇವಿಯು ಆ ಪಂಚ ಮಹಾಭೂತಗಳನ್ನು ನಿಯಮದಿಂದ ಪುಷ್ಪ, ಧೂಪ, ಗಂಧಗಳಿಂದ ಆರಾಧಿಸಿದಳು.

೪೩. ತರುವಾಯ ಮಹೇಶ್ವರನು ಅವಳು ತಪಸ್ಸು ಮಾಡುತ್ತಿರುವುದನ್ನರಿತು ಮಂತ್ರಗಳಿಂದ ಸೆಳೆಯಲ್ಪಟ್ಟ ಮನಸ್ಸುಳ್ಳವನಾಗಿ ಅಲ್ಲಿಗೆ ಶೀಘ್ರವಾಗಿ ಬಂದನು.

೪೪. "ದೇವಿ! ನೀನು ದೋಷವಿಲ್ಲದವನೂ, ಯಾವಾಗಲೂ ನಿನ್ನ ಮುಖವನ್ನೇ ನೋಡುತ್ತಿರುವವನೂ ಆದ ನನ್ನನ್ನು ತ್ಯಜಿಸಿ ಇಲ್ಲಿಗೆ ಏತಕ್ಕೆ ಬಂದಿರುವೆ?" ಎಂದು ಸಂತೋಷದಿಂದ ಕೇಳಿದನು.

೪೫. "ಆದುದರಿಂದ ವೃಷಭವನ್ನೇರಿ ನನ್ನೊಡನೆ ಕೈಲಾಸಕ್ಕೆ ಬಾ. ಅಥವಾ ನನ್ನಲ್ಲಿ ದೋಷವಿದ್ದರೆ ಅದಕ್ಕೆ ಕಾರಣವನ್ನು ಹೇಳು" ಎಂದೂ ಹೇಳಿದನು.

೪೬. ದೇವಿಯು ಹೇಳುತ್ತಾಳೆ:—ನೀನು ಪಾದದ ಜಲರೂಪಳಾದ ಗಂಗೆಯನ್ನು ತಲೆಯಮೇಲೆ ಹೊತ್ತಿರುವುದರಿಂದ ನಾನು ನಿನ್ನ ಮನೆಗೆ ಬರುವುದಿಲ್ಲ.

೪೭–೪೯. ಮಹೇಶ್ವರ! ನೀನು ನನ್ನ ಸವತಿಯಾದ ಆ ಗಂಗೆಯನ್ನು ಇನ್ನೂ ತ್ಯಜಿಸುವುದಿಲ್ಲ. ನನ್ನ ಮುಂದೆಯೇ ಅವಳಿಗೆ ಸಂಧ್ಯಾಕಾಲದಲ್ಲಿ ನಿತ್ಯವೂ ನಮಸ್ಕಾರ ಮಾಡುತ್ತ ನಾಚಿಕೆಗೊಳ್ಳುವುದಿಲ್ಲ. ಆದುದರಿಂದ ಈ ಲಜ್ಜಾ

ಆಕಾರಯಸಿ ಮಾಂ ದೇವ ತತ್ಸ್ಯಾದ್ಯದಿ ಮತಂ ಮಮ ।
ಅನ್ಯಥಾಽಹಂ ನ ಯಾಸ್ಯಾಮಿ ತವ ಹರ್ಮ್ಯೇ ಕಥಂಚನ ।
ಏತಚ್ಛ್ರುತ್ವಾ ಯದಿಷ್ಟಂ ತೇ ಕುರುಷ್ವ ವೃಷಭಧ್ವಜ ॥ ೪೯ ॥
ದೇವ ಉವಾಚ:—
ನಾಽಹಂ ಸೌಖ್ಯೇನ ತಾಂ ಗಂಗಾಂ ಧಾರಯಾಮಿ ಸುರೇಶ್ವರಿ ॥ ೫೦ ॥
ಭಗೀರಥೇನ ಭೂಪೇನ ಪ್ರಾರ್ಥಿತೋ ಜ್ಞಾತಿಕಾರಣಾತ್ ।
ದಿವ್ಯಂ ವರ್ಷಸಹಸ್ರಂತು ತಪಸ್ತಪ್ತ್ವಾ ಸುದಾರುಣಂ ॥ ೫೧ ॥
ಯೇನ ನೋ ಯಾತಿ ಪಾತಾಲಂ ಗಂಗಾಸ್ವರ್ಗಪರಿಚ್ಯುತಾ ।
ತಸ್ಮಾತ್ತ್ವಂ ದೇವ ಮದ್ವಾಕ್ಯಾತ್ಸ್ವಮೂರ್ಧ್ನಾ ವಹ ಜಾಹ್ನವೀಂ ॥ ೫೨ ॥
ಮಯಾ ತಸ್ಯ ಪ್ರತಿಜ್ಞಾತಂ ಧಾರಯಿಷ್ಯಾಮ್ಯಸಂಶಯಂ ।
ಆಕಾಶಾಜ್ಜಾಹ್ನವೀವೇಗಂ ಪತಂತಂ ಧರಣೀತಲೇ ॥ ೫೩ ॥
ನೋ ಚೇದ್ವ್ರಜೇತ ಪಾತಾಲಂ ಯದತ್ರವಿಷಯೇ ಸ್ಥಿತಂ ।
ತತೋಽಹಂ ಸಂಪ್ರವಕ್ಷ್ಯಾಮಿ ತದಿಹೈಕಮನಾಃ ಶೃಣು ॥ ೫೪ ॥
ಏಷಾ ಗಂಗಾ ವರಾರೋಹೇ ಮಮ ಮೂರ್ಧ್ನೋ ವಿನಿರ್ಗತಾ ।
ಹಿಮವಂತಂ ನಗಂ ಭಿತ್ವಾ ದ್ವಿಧಾ ಜಾತಾ ತತಃ ಪರಂ ॥ ೫೫ ॥

---

ದಾಯಕವಾದ ಕೆಲಸವನ್ನು ತ್ಯಜಿಸಿ ನನ್ನ ಅಭಿಲಾಷೆಯನ್ನು ಪೂರೈಸಿ ನನ್ನನ್ನು ಕರೆ. ಹಾಗಿಲ್ಲದಿದ್ದರೆ ನಾನು ನಿನ್ನ ಮನೆಗೆ ಬರುವುದಿಲ್ಲ. ಇದನ್ನು ಕೇಳಿ ನಿನ್ನ ಇಷ್ಟಬಂದಂತೆ ಮಾಡು.

೫೦. ಮಹಾದೇವನು ಹೇಳುತ್ತಾನೆ:—ಸುರೇಶ್ವರಿ! ನಾನು ಗಂಗೆಯನ್ನು ಸೌಖ್ಯಕ್ಕಾಗಿ ತಲೆಯಲ್ಲಿ ಧರಿಸಿಲ್ಲ.

೫೧—೫೨. ಭಗೀರಥನು ಹಿಂದೆ ತನ್ನ ಜ್ಞಾತಿಗಳಿಗಾಗಿ ದಿವ್ಯ ಸಾವಿರ ವರ್ಷಕಾಲ ಭಯಂಕರ ತಪಸ್ಸನ್ನು ಮಾಡಿ, "ಸ್ವಾಮಿ! ಸ್ವರ್ಗದಿಂದ ಬಿದ್ದ ಈ ಗಂಗೆಯು ಪಾತಾಳಕ್ಕೆ ಹೋಗದಂತೆ ಇವಳನ್ನು ನೀನು ನನ್ನ ಮಾತಿನಿಂದ ತಲೆಯಲ್ಲಿ ಧರಿಸು" ಎಂದು ನನ್ನನ್ನು ಪ್ರಾರ್ಥಿಸಿದನು.

೫೩. ನಾನು "ಅವನಿಗೆ ಆಕಾಶದಿಂದ ವೇಗವಾಗಿ ಬೀಳುತ್ತಿರುವ ಗಂಗೆಯನ್ನು ನಿಶ್ಚಯವಾಗಿಯೂ ಧರಿಸುವೆನು" ಎಂದು ಮಾತು ಕೊಟ್ಟೆನು.

೫೪. ಹಾಗೆ ನಾನು ಮಾಡದೆ ಇದ್ದಿದ್ದರೆ ಗಂಗೆಯು ಭೂಲೋಕದಲ್ಲಿ ನಿಲ್ಲದೆ ಪಾತಾಳಕ್ಕೆ ಹೋಗುತ್ತಿದ್ದಳು. ಆದುದರಿಂದ ನಾನು ನಿನಗೆ ಹೇಳುತ್ತೇನೆ. ಒಮ್ಮನಸ್ಸಿನಿಂದ ಕೇಳು.

೫೫. ಸುಂದರಿ! ನನ್ನ ತಲೆಯಿಂದ ಹೊರಟ ಈ ಗಂಗೆಯು ಹಿಮಾಲಯವನ್ನು ಭೇದಿಸಿ ಎರಡು ವಿಧವಾಗಿ ಆದಳು.

ತತಃ ಸಿಂಧ್ವಭಿಧಾನಾ ಸಾ ಪಶ್ಚಿಮಂ ಸಾಗರಂ ಗತಾ ।
ಶತಾನಿ ನವ ಸಂಗೃಹ್ಯ ನದೀನಾಂ ಪರಮೇಶ್ವರೀ ॥ ೫೬ ॥
ತಥಾ ಗಂಗಾಽಭಿಧಾನಾ ಚ ಸೈವ ಪ್ರಾಕ್ಸಾಗರಂ ಗತಾ ।
ತಾವತೀಶ್ಚ ಸಮಾದಾಯ ನದೀಃ ಪರ್ವತನಂದಿನಿ ॥ ೫೭ ॥
ಏವಮಷ್ಟಾದಶೈತಾನಿ ನದೀನಾಂ ಪರ್ವತಾತ್ಮಜೇ ।
ಶತಾನಿ ಸಾಗರೇ ಯಾಂತಿ ತೇನ ನಿತ್ಯಂ ಸ ತಿಷ್ಠತಿ ॥ ೫೮ ॥
ಸತತಂ ಶೋಷ್ಯಮಾಣೋಽಪಿ ವಾಡವೇನ ದಿವಾನಿಶಂ ।
ಸಮುದ್ರಸಲಿಲಂ ಮೇಘಾಃ ಸಮಾದಾಯ ತತಃ ಪರಂ ॥ ೫೯ ॥
ಮರ್ತ್ಯಲೋಕೇ ಪ್ರವರ್ಷಂತಿ ತತಃ ಸಸ್ಯಂ ಪ್ರಜಾಯತೇ ।
ಸಸ್ಯೇನ ಜೀವತೇ ಲೋಕಃ ಪ್ರಭವಂತಿ ಮಖಾಸ್ತಥಾ ।
ಮಖಾಂಶೇನ ಸುರಾಃ ಸರ್ವೇ ತೃಪ್ತಿಂ ಯಾಂತಿ ತತಃ ಪರಂ ॥ ೬೦ ॥
ಏತಸ್ಮಾತ್ಕಾರಣಾನ್ಮೂರ್ಧ್ನಿ ದೇವಿ ಗಂಗಾಂ ದಧಾಮ್ಯಹಂ ।
ನ ಸ್ನೇಹಾತ್ಕಾಮತೋ ನೈವ ಜಗದ್ಯೇನ ಪ್ರವರ್ತತೇ ॥ ೬೧ ॥
ಅಥವಾ ಸಂತ್ಯಜಾಮ್ಯೇನಾಂ ಯದಿ ಮೂರ್ಧ್ನಃ ಕಥಂಚನ ।
ತದ್ದೂರಂ ವೇಗತೋ ಭಿತ್ವಾ ಪೃಥ್ವೀಂ ಯಾತಿ ರಸಾತಲಂ ॥ ೬೨ ॥

---

೫೬. ಪರಮೇಶ್ವರಿ! ಅನಂತರ ಅವಳು ಸಿಂಧುವೆಂದು ಹೆಸರನ್ನಾಂತು ಒಂಬೈನೂರು ನದಿಗಳನ್ನು ಸೇರಿಸಿಕೊಂಡು ಪಶ್ಚಿಮ ಸಮುದ್ರವನ್ನು ಸೇರಿದಳು.

೫೭. ಪಾರ್ವತಿ! ಅವಳು ಹಾಗೆಯೇ ಗಂಗೆಯೆಂದು ಹೆಸರನ್ನು ಹೊಂದಿ ಅಷ್ಟೇ ನದಿಗಳನ್ನು ತೆಗೆದುಕೊಂಡು ಪೂರ್ವ ಸಮುದ್ರಕ್ಕೆ ಹೋದಳು.

೫೮–೬೦. ಹೀಗೆ ಹದಿನೆಂಟು ನೂರು ನದಿಗಳಿಂದ ಕೂಡಿರುವ ಸಮುದ್ರವು ವಾಡವಾಗ್ನಿಯಿಂದ ಯಾವಾಗಲೂ ಒಣಗಿಸಲ್ಪಡುತ್ತಿದ್ದರೂ ಒಂದೇ ರೀತಿಯಾಗಿ ಇರುವುದು. ಮೇಘಗಳು ಸಮುದ್ರದ ನೀರನ್ನು ತೆಗೆದುಕೊಂಡು ಭೂಮಿಯಮೇಲೆ ಸುರಿಸುವುವು. ಅದರಿಂದ ಸಸ್ಯಗಳು ಬೆಳೆಯುವುವು. ಆ ಸಸ್ಯಗಳಿಂದ ಜನರು ಜೀವಿಸುವರು. ಆ ಜನರು ಯಜ್ಞಗಳನ್ನು ಮಾಡುವರು. ಆ ಯಜ್ಞಾಂಶದಿಂದ ದೇವತೆಗಳೆಲ್ಲ ತೃಪ್ತಿಗೊಳ್ಳುವರು.

೬೧. ದೇವಿ! ನಾನು ಗಂಗೆಯನ್ನು ಜಗತ್ತಿನ ಅಭಿವೃದ್ಧಿಗಾಗಿಯೇ ತಲೆಯಲ್ಲಿ ಧರಿಸಿರುವೆನು. ಸ್ನೇಹ ಮತ್ತು ಕಾಮದಿಂದಲ್ಲ.

೬೨. ನಾನು ಈ ಗಂಗೆಯನ್ನು ತಲೆಯಿಂದ ಬಿಟ್ಟರೆ ಅದು ವೇಗದಿಂದ ಭೂಮಿಯನ್ನು ಭೇದಿಸಿ ಪಾತಾಳಕ್ಕೆ ಹೋಗುವುದು.

ತತಃ ಶೋಷಂ ವ್ರಜೇದಾಶು ಸಮುದ್ರಃ ಸರಿತಾಂ ಪತಿಃ ।
ಔರ್ವೇಣ ಪೀಯಮಾನೋಽತ್ರ ತತೋ ವೃಷ್ಟಿರ್ನಜಾಯತೇ ।
ವೃಷ್ಟ್ಯಭಾವಾಜ್ಜಗನ್ನಾಶಃ ಸತ್ಯಮೇತನ್ಮಯೋದಿತಮ್ ॥ ೬೩ ॥
ಏವಂ ಗಂಗಾಕೃತೇ ಪ್ರೋಕ್ತಂ ಮಯಾ ತವ ಸುರೇಶ್ವರಿ ।
ಶೃಣು ಸಂಧ್ಯಾಕೃತೇಽನ್ಯಚ್ಚ ಯೇನ ತಾಂ ಪ್ರಣಮಾಮ್ಯಹಂ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಂಚಪಿಂಡಾಗೌರ್ಯುತ್ಪತ್ತಿವರ್ಣನಂ" ನಾಮ
ತ್ರಿಂಶದುತ್ತರಶತತಮೋಽಧ್ಯಾಯಃ

---

೬೩. ಅನಂತರ ವಾಡವಾಗ್ನಿಯು ಸತತವೂ ಕುಡಿಯುವುದರಿಂದ ಶೀಘ್ರವಾಗಿ ಸಮುದ್ರವು ಒಣಗುವುದು, ಅನಂತರ ಮಳೆ ಸುರಿಯುವುದಿಲ್ಲ. ಮಳೆಯಿಲ್ಲದಿದ್ದರೆ ಪ್ರಪಂಚವು ನಾಶವಾಗುವುದು. ನಾನು ಹೇಳಿರುವುದು ನಿಜ.

೬೪. ಸುರೇಶ್ವರಿ! ನಾನು ಹೀಗೆ ಗಂಗಾ ವಿಷಯವನ್ನು ಹೇಳಿದ್ದೇನೆ. ಸಂಧ್ಯಾಕಾಲದಲ್ಲಿ ಅವಳನ್ನು ಏಕೆ ನಮಸ್ಕಾರ ಮಾಡುತ್ತೇನೆಂಬುದನ್ನು ಹೇಳುತ್ತೇನೆ ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಂಚಪಿಂಡಾಗೌರ್ಯುತ್ಪತ್ತಿವರ್ಣನ" ವೆಂಬ
ನೂರಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕತ್ರಿಂಶದುತ್ತರಶತತಮೋಽಧ್ಯಾಯಃ

### ವರರುಚಿಸ್ಥಾಪಿತ ಗಣಪತಿಮಾಹಾತ್ಮ್ಯವರ್ಣನಂ

ದೇವ ಉವಾಚ :—

ಏಷಾ ರಾತ್ರಿಃ ಸಮಾದಿಷ್ಟಾ ದಾನವಾನಾಂ ಸುರೇಶ್ವರಿ ।
ಪಿಶಾಚಾನಾಂ ಚ ಭೂತಾನಾಂ ರಾಕ್ಷಸಾನಾಂ ವಿಶೇಷತಃ ॥ ೧ ॥
ಯತ್ಕಿಂಚಿತ್ಕ್ರಿಯತೇ ಕರ್ಮ ತತ್ರ ಸ್ನಾನಾದಿಕಂ ಶುಭಂ ।
ತತ್ಸರ್ವಂ ಜಾಯತೇ ತೇಷಾಂ ಪುರಾ ದತ್ತಂ ಸ್ವಯಂಭುವಾ ॥ ೨ ॥
ಮರ್ಯಾದಾ ತೈಃ ಸಮಂ ಯೇನ ದೇವಾನಾಂ ಚ ಯದಾ ಕೃತಾ ।
ಅರ್ಹಾಣಾಂ ಯಜ್ಞಭಾಗಸ್ಯ ಕಾಶ್ಯಪಾನಾಮಥಾಗ್ರಜಾಂ ॥ ೩ ॥
ತದರ್ಥಂ ದಶಸಾಹಸ್ರಾ ದಾನವಾ ಯುದ್ಧದುರ್ಮದಾಃ ।
ಕುಂತಪ್ರಾಸಕರಾ ಭಾನುಂ ರುಂಧಂತ್ಯುದ್ಗತಕಾರ್ಮುಕಾಃ ॥ ೪ ॥
ತಮುದ್ದಿಶ್ಯ ಸಹಸ್ರಾಂಶುಂ ಯಜ್ಜಲಂ ಪರಿಕ್ಷಿಪ್ಯತೇ ।
ಸಾವಿತ್ರೇಣ ಚ ಮಂತ್ರೇಣ ತೇಷಾಂ ತಜ್ಜಾಯತೇ ಫಲಂ ॥ ೫ ॥
ತೇ ಹತಾಸ್ತೇನ ತೋಯೇನ ವಜ್ರತುಲ್ಯೇನ ತತ್ಕ್ಷಣಾತ್ ।
ಪ್ರಮುಂಚಂತಿ ಸಹಸ್ರಾಂಶುಂ ನಿತ್ಯಮೇವ ಸುರೇಶ್ವರಿ ॥ ೬ ॥

---

### ಕನ್ನಡದ ಅನುವಾದ

#### ವರರುಚಿಸ್ಥಾಪಿತಗಣಪತಿಮಾಹಾತ್ಮ್ಯವರ್ಣನ

೧. ಮಹೇಶ್ವರನು ಹೇಳುತ್ತಾನೆ:—ಸುರೇಶ್ವರಿ! ಈ ರಾತ್ರಿಯು ದಾನವ, ಪಿಶಾಚ, ಭೂತ, ರಾಕ್ಷಸರಿಗಾಗಿ ನಿರ್ಮಿತವಾಗಿದೆ.

೨. ಈ ರಾತ್ರಿಯಲ್ಲಿ ಮಾಡಿದ ಸ್ನಾನಾದಿ ಶುಭಕರ್ಮಗಳೆಲ್ಲ ಆ ದಾನವಾದಿಗಳಿಗೆ ಸೇರುವುದೆಂದು ಹಿಂದೆ ಬ್ರಹ್ಮನು ವರವನ್ನಿತ್ತಿರುವನು.

೩. ಅದರಿಂದ ದೇವತೆಗಳು ಆ ದಾನವರೊಡನೆ ಯಜ್ಞಭಾಗವು ನಮಗೆ ಸಲ್ಲತಕ್ಕದ್ದೆಂದು ಒಂದು ನಿಯಮವನ್ನು ಮಾಡಿಕೊಂಡರು.

೪. ಅದಕ್ಕೋಸ್ಕರ ಹತ್ತುಸಾವಿರ ಮಂದಿ ದಾನವರು ಕುಂತ, ಪ್ರಾಸ, ಬಿಲ್ಲುಗಳನ್ನು ಹಿಡಿದುಕೊಂಡು ಸೂರ್ಯನನ್ನು ತಡೆಯುತ್ತಾರೆ.

೫. ಆ ಸೂರ್ಯನನ್ನುದ್ದೇಶಿಸಿ ಗಾಯತ್ರೀ ಮಂತ್ರದಿಂದ ಕೊಟ್ಟ ಅರ್ಘ್ಯದ ಫಲವು ಆ ದಾನವರಿಗೆ ಉಂಟಾಗುವುದು.

೬. ಸುರೇಶ್ವರಿ! ಆ ದಾನವರು ವಜ್ರದಂತಿರುವ ಆ ನೀರಿನಿಂದ ಕೂಡಲೇ ಹತರಾಗಿ ಸೂರ್ಯನನ್ನು ಬಿಡುತ್ತಾರೆ.

ಏತಸ್ಮಾತ್ಕಾರಣಾತ್ತೋಯಮಸ್ತ್ರರೂಪಂ ಕ್ಷಿಪಾಮ್ಯಹಂ ।
ಸಂಧ್ಯಾಕಾಲಂ ಸಮುದ್ದಿಶ್ಯ ಭಾನುಂ ಸಂಧ್ಯಾಂ ನ ಪಾರ್ವತಿ ॥ ೭ ॥
ಯದ್ಯದಾಚರತಿ ಶ್ರೇಷ್ಠಸ್ತತ್ತ ದುತ್ತರತಃ ಸ್ಥಿತಃ ।
ಉದಯಾರ್ಥಂ ರವಿಂ ಯಾಂತಂ ನಿರುಂಧಂತಿ ಚ ದಾರುಣಾಃ ॥ ೮ ॥
ತೇಽಪಿ ಸಂಧ್ಯಾಜಲೈರ್ದೇವಿ ನಿಹತಾ ಬ್ರಾಹ್ಮಣೋತ್ತಮೈಃ ।
ಮಯಾ ಚ ತಂ ವಿಮುಂಚಂತಿ ಮೂರ್ಛಿತಾ ನಿಪತಂತಿ ಚ ॥ ೯ ॥
ಏತಸ್ಮಾತ್ಕಾರಣಾದ್ದೇವಿ ಸಂಧ್ಯಯೋರುಭಯೋರಪಿ ।
ಅಹಂಚಾನ್ಯೇ ಚ ವಿಪ್ರಾ ಯೇ ತೇ ನಮಂತಿ ದಿವಾಕರಂ ॥ ೧೦ ॥
ತಸ್ಮಾತ್ತ್ವಂ ಗೃಹಮಾಗಚ್ಛ ತ್ಯಕ್ತ್ವೇರ್ಷ್ಯಾಂ ಪರ್ವತಾತ್ಮಜೇ ।
ಪ್ರಶಸ್ಯಾಂ ತ್ವಾಂ ಪರಿತ್ಯಕ್ತ್ವಾ ನಾನ್ಯಾಸ್ತಿ ಹೃದಯೇ ಮಮ ॥ ೧೧ ॥

ದೇವ್ಯುವಾಚ :—

ನಿಷ್ಕಾಮೋ ವಾ ಸಕಾಮೋ ವಾ ಸಂಧ್ಯಾಂ ಸ್ತ್ರೀಸಂಜ್ಞಿತಾಮಿಮಾಂ ।
ಯತ್ತ್ವಂ ನಮಸಿ ದೇವೇಶ ತಸ್ಮೇ ದುಃಖಂ ಪ್ರಜಾಯತೇ ॥ ೧೨ ॥
ತಸ್ಮಾದ್ಗಂಗಾ ಪರಿತ್ಯಾಗಂ ಸಂಧ್ಯಾಯಾಶ್ಚ ವಿಶೇಷತಃ ।
ಯಾವನ್ನ ಕುರುಷೇ ದೇವ ತಾವತ್ತುಷ್ಟಿರ್ನ ಮೇ ಭವೇತ್ ॥ ೧೩ ॥

---

೭. ಪಾರ್ವತಿ! ಆದುದರಿಂದ ನಾನು ಸಂಧ್ಯಾಕಾಲದಲ್ಲಿ ಸೂರ್ಯನನ್ನು ಉದ್ದೇಶಿಸಿ ಅಸ್ತ್ರರೂಪವಾದ ನೀರನ್ನು ಎಸೆಯುವೆನು. ಸಂಧ್ಯೆಯನ್ನುದ್ದೇಶಿಸಿ ಅಲ್ಲ.

೮–೯. ಉತ್ತಮನಾದವನು ಏನೇನನ್ನು ಮಾಡುವನೋ ಅದನ್ನೇ ಕೆಳಗಿನವರು ಆಚರಿಸುವರು. ಉದಯಿಸುತ್ತಿರುವ ಸೂರ್ಯನನ್ನು ತಡೆಯುತ್ತಿರುವ ದಾರುಣರಾದ ಆ ದಾನವರು ನಾನೂ, ಬ್ರಾಹ್ಮಣರೂ ಕೊಟ್ಟ ಸಂಧ್ಯಾಜಲದಿಂದ ಹತರಾಗಿ ಸೂರ್ಯನನ್ನು ಬಿಟ್ಟು ಮೂರ್ಛೆಗೊಂಡು ಬೀಳುವರು.

೧೦. ದೇವಿ! ಈ ಕಾರಣದಿಂದಲೇ ಎರಡು ಸಂಧ್ಯಾಕಾಲಗಳಲ್ಲಿ ನಾನೂ ಇತರ ಬ್ರಾಹ್ಮಣರೂ ಸೂರ್ಯನನ್ನು ವಂದಿಸುತ್ತೇವೆ.

೧೧. ಪಾರ್ವತಿ! ಆದುದರಿಂದ ನೀನು ಅಸೂಯೆಯನ್ನು ತ್ಯಜಿಸಿ ಮನೆಗೆ ಬಾ. ಶ್ರೇಷ್ಠಳಾದ ನಿನ್ನ ಹೊರತು ನನ್ನ ಮನಸ್ಸಿನಲ್ಲಿ ಬೇರೆ ಯಾರೂ ಇಲ್ಲ.

೧೨. ದೇವಿಯು ಹೇಳುತ್ತಾಳೆ:—ದೇವೇಶ! ನೀನು ಫಲಾಪೇಕ್ಷೆಯಿಂದಲೋ, ಫಲಾಪೇಕ್ಷೆಯಿಲ್ಲದೆಯೋ ಹೆಂಗಸಾದ ಸಂಧ್ಯೆಯನ್ನು ನಮಸ್ಕಾರ ಮಾಡುವುದರಿಂದ ನನಗೆ ದುಃಖವುಂಟಾಗುತ್ತದೆ.

೧೩. ಆದುದರಿಂದ ಸ್ವಾಮಿ! ನೀನು ಗಂಗೆ, ಸಂಧ್ಯೆ ಇವರಿಬ್ಬರನ್ನು ಬಿಡದಿರುವವರೆಗೆ ನನಗೆ ಸಂತೋಷವುಂಟಾಗುವುದಿಲ್ಲ.

ಏವಮುಕ್ತ್ವಾಽಥ ಸಾ ದೇವೀ ವಿಶೇಷವ್ರತಮಾಸ್ಥಿತಾ ।
ಅವಮನ್ಯ ಮಹಾದೇವಂ ಪ್ರಾರ್ಥಯಾನಮಪಿ ಸ್ವಯಂ ॥ ೧೪ ॥
ತತಃ ಸ ಚಿಂತಯಾಮಾಸ ಕಿಮೇತತ್ಕಾರಣಂ ಸ್ಥಿತಂ ।
ವಿರಕ್ತಾಽಪಿ ಮಮೋತ್ಕಂಠಾಂ ಯೇನೈಷಾ ಪ್ರಕರೋತಿ ನ ॥ ೧೫ ॥
ನ ಚ ಸಾಮ್ನಾ ವ್ರಜೇತ್ತುಷ್ಟಿಂ ಕಥಂಚಿದಪಿ ಪಾರ್ವತೀ ।
ಮೃಷೇರ್ಷ್ಯಾಧಾರಿಣೀ ದೇವೀ ನೈತತ್ಸ್ವಲ್ಪಂ ಹಿ ಕಾರಣಂ ॥ ೧೬ ॥
ತತೋ ಮಂತ್ರಪ್ರಭಾವಂ ತಂ ವಿಜ್ಞಾಯ ಪರಮೇಶ್ವರಃ ।
ಧ್ಯಾನಂ ಧೃತ್ವಾ ಸುಸೂಕ್ಷ್ಮೇಣ ಜ್ಞಾನೇನಾಽಥ ಸ್ವಯಂ ತತಃ ॥ ೧೭ ॥
ತಮೇವ ಮಂತ್ರಂ ಮಂತ್ರೇಣ ನ್ಯಾಸೇನ ಚ ವಿಶೇಷತಃ ।
ಸಮ್ಯಗಾರಾಧಯಾಮಾಸ ಸಂಪೂಜ್ಯಾತ್ಮಾನಮಾತ್ಮನಾ ॥ ೧೮ ॥
ಯಥಾ ದೇವ್ಯಾತ್ಮಭೂತಾನಿ ಪೃಥಕ್ಕೃತ್ವಾ ಚ ಪಂಚ ಚ ।
ಪೂಜಿತಾನಿ ತಥಾ ದೇವಃ ಸರ್ವೇಷಾಮಂತರೇ ಗತಃ ॥ ೧೯ ॥
ತಾನ್ಯೇವ ಪೂಜಯಾಮಾಸ ಪೃಥಕ್ಕೃತ್ವಾ ಸಮಾಧಿತಃ ।
ನಿಯೋಜ್ಯ ಚ ಪುನರ್ಬಾಹ್ಯೇ ತತಃ ಪೂಜಾಂ ಸಮಾಚರತ್ ॥ ೨೦ ॥
ತಸ್ಮಾನ್ನಾಽಸ್ತಿ ಪರಃ ಕಶ್ಚಿತ್ಪೂಜ್ಯಪೂಜ್ಯಃ ಸ ಏವ ಚ ।
ಐಶ್ವರ್ಯಾತ್ಸರ್ವದೇವಾನಾಮೀಶಾನಸ್ತೇನ ನಿರ್ಮಿತಃ ॥ ೨೧ ॥

---

೧೪. ಆ ಪಾರ್ವತಿಯು ಹೀಗೆ ಹೇಳಿ ಮಹೇಶ್ವರನು ಪ್ರಾರ್ಥಿಸುತ್ತಿದ್ದರೂ ಅವನನ್ನು ಅವಮಾನಮಾಡಿ ವಿಶೇಷವಾದ ವ್ರತವನ್ನಾಶ್ರಯಿಸಿದಳು.

೧೫. ಅನಂತರ ಮಹಾದೇವನು ಹೀಗೆ ಆಲೋಚಿಸಿದನು. "ಇವಳು ವೈರಾಗ್ಯಗೊಂಡು ನನ್ನಲ್ಲಿ ಔತ್ಸುಕ್ಯವನ್ನು ತೋರಿಸದಿರಲು ಕಾರಣವೇನು?

೧೬. ಸುಮ್ಮನೆ ಅಸೂಯೆಗೊಂಡಿರುವ ಈ ಪಾರ್ವತಿಯು ಸಾಮೋಪಾಯದಿಂದ ಹೇಗೂ ಪ್ರಸನ್ನಳಾಗುವುದಿಲ್ಲ. ಇದಕ್ಕೆ ಕಾರಣವು ಸ್ವಲ್ಪವಾಗಿರಲಾರದು."

೧೭–೧೮. ಅನಂತರ ಮಹಾದೇವನು ಸೂಕ್ಷ್ಮಜ್ಞಾನದಿಂದ ಧ್ಯಾನಿಸಿ ಆ ಮಂತ್ರಪ್ರಭಾವವನ್ನರಿತು ಮಂತ್ರ ಮತ್ತು ನ್ಯಾಸಗಳಿಂದ ತನ್ನನ್ನು ತಾನೇ ಚೆನ್ನಾಗಿ ಆರಾಧಿಸಿದನು.

೧೯–೨೦. ದೇವಿಯು ಪಂಚ ಭೂತಗಳನ್ನು ಪ್ರತ್ಯೇಕಿಸಿ ಪೂಜಿಸಿದಂತೆಯೇ ಸರ್ವಾಂತರ್ಯಾಮಿಯಾದ ಮಹೇಶ್ವರನು ಅದೇ ಭೂತಗಳನ್ನು ಪ್ರತ್ಯೇಕಿಸಿ ಸಮಾಧಿಯಿಂದ ಪೂಜಿಸಿದನು. ಅನಂತರ ಒಟ್ಟಿಗೆ ಸೇರಿಸಿ ಬಾಹ್ಯದಲ್ಲಿಯೂ ಪೂಜಿಸಿದನು.

೨೧. ಆ ಮಹಾದೇವನು ಸಮಸ್ತ ದೇವತೆಗಳಿಗೆ ಈಶ್ವರನಾದ್ದರಿಂದ ಅವನು ನಿರ್ಮಿಸಿದ ಈಶ್ವರನಿಗಿಂತ ಬೇರೆ ಪೂಜ್ಯನಿಲ್ಲ.

ಏವಂ ಯಾವತ್ಸ ಈಶಾನಃ ಸಮಾರಾಧಯತಿ ಪ್ರಭುಃ ।
ತಾವದ್ದೇವೀ ಸಮಾಯಾತಾ ಮಂತ್ರಾಕೃಷ್ಟಾ ಚ ಯತ್ರ ಸಃ ॥ ೨೨ ॥
ತತಃ ಪ್ರೋವಾಚ ತಂ ದೇವಂ ಪ್ರಣಿಪತ್ಯ ಕೃತಾಂಜಲಿಃ ।
ಜ್ಞಾತಂ ಮಯಾ ವಿಭೋ ಸರ್ವಂ ನ ಮಾಂ ತ್ಯಜ ತವ ಪ್ರಿಯಾಂ ॥ ೨೩ ॥
ತಸ್ಮಾದಾಗಚ್ಛ ಗಚ್ಛಾವೋ ಯತ್ರ ತ್ವಂ ವಾಂಛಸಿ ಪ್ರಭೋ ।
ಕ್ಷಮ್ಯತಾಂ ದೇವ ಮೇ ಸರ್ವಂ ನ ಕೃತಂ ಯದ್ವಚಸ್ತವ ॥ ೨೪ ॥
ತತಸ್ತುಷ್ಟೋ ಮಹಾದೇವಸ್ತಾಮಾಲಿಂಗ್ಯ ಶುಚಿಸ್ಮಿತಾಂ ।
ಇದಮಾಹ ವಿಹಸ್ಯೋಚ್ಚೈರ್ಮೇಘಗಂಭೀರಯಾ ಗಿರಾ ॥ ೨೫ ॥
ಯೈಷಾ ತ್ವಯಾತ್ಮಭೂತೋತ್ಥಾ ನಿರ್ಮಿತಾ ಪರಮಾ ತನುಃ ।
ಏತಾಂ ಯಾ ಕಾಮಿನೀ ಕಾಚಿತ್ಪೂಜಯಿಷ್ಯತಿ ಭಕ್ತಿತಃ ।
ಅನೇನೈವ ವಿಧಾನೇನ ತಸ್ಯಾ ಭರ್ತಾ ಭವಿಷ್ಯತಿ ॥ ೨೬ ॥
ತೃತೀಯಾಯಾಂ ವಿಶೇಷೇಣ ಯಾವತ್ಸಂವತ್ಸರಂ ಶುಭೇ ।
ಸಾ ಲಭಿಷ್ಯತಿ ಸತ್ಕಾಂತಂ ಪುತ್ರದಂ ಸರ್ವಕಾಮದಂ ॥ ೨೭ ॥
ತದ್ವೈತಾಂ ಮಾಮಕೀಂ ಮೂರ್ತಿಮೀಶಾನಾಖ್ಯಾಂ ಚ ಯೇ ನರಾಃ ।
ತೇಷಾಂ ದುಷ್ಟಾಽಪಿ ಯಾ ಕಾಂತಾ ಸೌಮ್ಯಾ ಚೈವ ಭವಿಷ್ಯತಿ ॥ ೨೮ ॥

---

೨೨. ಆ ಮಹೇಶ್ವರನು ಹೀಗೆ ಆರಾಧಿಸುತ್ತಿರಲು ಗೌರಿಯು ಅವನ ಮಂತ್ರದಿಂದ ಆಕೃಷ್ಟಳಾಗಿ ಅವನೆಡೆಗೆ ಬಂದಳು.

೨೩. ಅನಂತರ ಅವಳು ಶಿವನನ್ನು ವಂದಿಸಿ ಕೈಮುಗಿದುಕೊಂಡು ಇಂತೆಂದಳು. "ಸ್ವಾಮಿ! ನಾನು ಎಲ್ಲವನ್ನೂ ತಿಳಿದೆನು. ನೀನು ನಿನ್ನ ಪ್ರಿಯಳಾದ ನನ್ನನ್ನು ತ್ಯಜಿಸಬೇಡ.

೨೪. ನೀನು ಅಪೇಕ್ಷಿಸಿದ ಕಡೆಗೆ ಹೋಗೋಣ. ನಾನು ನಿನ್ನ ಮಾತನ್ನು ನಡೆಯಿಸಲಿಲ್ಲ. ಅದನ್ನು ಕ್ಷಮಿಸು."

೨೫. ತರುವಾಯ ಮಹಾದೇವನು ಸಂತುಷ್ಟನಾಗಿ ಮುಗುಳ್ನಗೆಯುಳ್ಳ ಆ ಗೌರಿಯನ್ನು ಆಲಿಂಗಿಸಿ ನಕ್ಕು ಮೇಘದಂತೆ ಗಂಭೀರವಾದ ಮಾತಿನಿಂದ ಹೀಗೆಂದನು.

೨೬. "ನೀನು ಪಂಚಭೂತಗಳಿಂದ ನಿರ್ಮಿಸಿದ ಈ ಮೂರ್ತಿಯನ್ನು ಈ ಕ್ರಮದಿಂದಲೇ ಭಕ್ತಿಯಿಂದ ಪೂಜಿಸಿದ ಕಾಮಿನಿಯು ಪತಿಯನ್ನು ಪಡೆಯುವಳು.

೨೭. ಒಂದು ವರ್ಷಕಾಲ ತದಿಗೆಯ ದಿನ ಪೂಜಿಸಿದವಳು ಪುತ್ರನನ್ನು ಕೊಡುವ ಒಳ್ಳೆಯ ಪತಿಯನ್ನು ಪಡೆಯುವಳು.

೨೮. ಹಾಗೆಯೇ ಈಶಾನವೆಂಬ ನನ್ನ ಮೂರ್ತಿಯನ್ನು ಪೂಜಿಸಿದ ಪುರುಷರ ದುಷ್ಟರಾದ ಪತ್ನಿಯರೂ ಸೌಮ್ಯರಾಗುವರು.

ಯೇ ಪುನಃ ಕನ್ಯಕಾಹೇತೋಃ ಪೂಜಯಿಷ್ಯಂತಿ ಭಕ್ತಿತಃ ।
ಯಾಂ ಕನ್ಯಾಂ ಮನಸಿ ಸ್ಥಾಪ್ಯ ತಾಂ ಲಭಿಷ್ಯಂತ್ಯಸಂಶಯಂ ॥ ೨೯ ॥
ನಿಷ್ಕಾಮಾಶ್ಚಾಽಪಿ ಯೇ ಮರ್ತ್ಯಾ ಪೂಜಯಿಷ್ಯಂತಿ ಸರ್ವದಾ ।
ತೇ ಯಾಸ್ಯಂತಿ ಪರಾಂ ಸಿದ್ಧಿಂ ಜರಾಮರಣವರ್ಜಿತಾಂ ॥ ೩೦ ॥
ಏವಮುಕ್ತ್ವಾ ಮಹಾದೇವೋ ವೃಷಮಾರೋಪ್ಯ ತಾಂ ಪ್ರಿಯಾಂ ।
ಸ್ವಯಮಾರುಹ್ಯ ಪಶ್ಚಾಚ್ಚ ಕೈಲಾಸಂ ಪರ್ವತಂ ಗತಃ ॥ ೩೧ ॥

ನಾರದ ಉವಾಚ :—

ತಸ್ಮಾತ್ತವ ಸುತೇಯಂ ಯಾ ತಾಮಾರಾಧಯತು ದ್ರುತಂ ।
ಪಂಚಪಿಂಡಮಯೀಂ ಗೌರೀಂ ಯಾವತ್ಸಂವತ್ಸರಂ ಶುಭಾಂ ॥ ೩೨ ॥
ತೃತೀಯಾಯಾಂ ವಿಶೇಷೇಣ ತತಃ ಪ್ರಾಪ್ಸ್ಯತಿ ಸತ್ಪತಿಂ ।
ಮುಖಪ್ರೇಕ್ಷಮತಿಪ್ರೀತಂ ರೂಪಾದಿಭಿರ್ಗುಣೈರ್ಯುತಂ ॥ ೩೩ ॥

ಶಾಂಡಿಲ್ಯುವಾಚ :—

ಏವಮುಕ್ತ್ವಾ ಮುನಿಶ್ರೇಷ್ಠೋ ನಾರದಃ ಪ್ರಯಯೌ ತತಃ ।
ತೀರ್ಥಯಾತ್ರಾಂ ಪ್ರತಿ ಪ್ರೀತ್ಯಾ ಮಮ ಮಾತ್ರಾ ವಿಸರ್ಜಿತಃ ॥ ೩೪ ॥
ಮಯಾಽಪಿ ಚ ತದಾದೇಶಾತ್ಕೌಮಾರ್ಯೇಽಪಿ ಚ ಸಂಸ್ಥಯಾ ।
ಪೂಜಯಾ ವತ್ಸರಂ ಯಾವತ್ಪೂಜಿತಾ ಪತಿಕಾಮ್ಯಯಾ ॥ ೩೫ ॥

---

೨೯. ಕನ್ಯೆಗಾಗಿ ಭಕ್ತಿಯಿಂದ ಪೂಜಿಸಿದವರು ತಾವು ಚಿಂತಿಸಿದ ಕನ್ಯೆಯನ್ನು ನಿಶ್ಚಯವಾಗಿಯೂ ಪಡೆಯುವರು.

೩೦. ನಿಷ್ಕಾಮರಾಗಿ ಯಾವಾಗಲೂ ಪೂಜಿಸುವ ಮಾನವರು ಜರಾಮರಣವಿಲ್ಲದ ಉತ್ತಮ ಸಿದ್ಧಿಯನ್ನು ಹೊಂದುವರು.''

೩೧. ಮಹಾದೇವನು ಹೀಗೆ ಹೇಳಿ ಪ್ರಿಯಳಾದ ಆ ಗೌರಿಯನ್ನು ವೃಷಭದ ಮೇಲೆ ಕುಳ್ಳಿರಿಸಿಕೊಂಡು, ತಾನು ಹಿಂಭಾಗದಲ್ಲಿ ಕುಳಿತು ಕೈಲಾಸಕ್ಕೆ ತೆರಳಿದನು.

೩೨–೩೩. ನಾರದನು ಹೇಳುತ್ತಾನೆ:—ಆದುದರಿಂದ ನಿನ್ನ ಈ ಮಗಳು ಒಂದು ವರ್ಷಕಾಲ ತದಿಗೆಯ ದಿನ ಪಂಚಪಿಂಡರೂಪಳಾದ ಆ ಗೌರಿಯನ್ನು ಪೂಜಿಸಲಿ. ಅದರಿಂದ ಮುಖವನ್ನು ನೋಡುವವನೂ, ಅತ್ಯಂತಪ್ರಿಯನೂ, ರೂಪಾದಿಗುಣಗಳಿಂದ ಕೂಡಿರುವವನೂ ಆದ ಒಳ್ಳೆಯ ಸತಿಯನ್ನು ಹೊಂದುವಳು.

೩೪. ಶಾಂಡಿಲಿಯು ಹೇಳುತ್ತಾಳೆ:—ಮುನಿವರ್ಯನಾದ ನಾರದನು ಹೀಗೆ ಹೇಳಿ ನನ್ನ ತಾಯಿಯು ಪ್ರೀತಿಯಿಂದ ಕಳುಹಿಸಲು ತೀರ್ಥಯಾತ್ರೆಗೆ ಹೋದನು.

೩೫–೩೬. ಕುಮಾರಿಯಾದ ನಾನೂ ಆ ನಾರದನ ಅಪ್ಪಣೆಯಂತೆ ಗೌರಿ

ತೃತೀಯಾಯಾಂ ವಿಶೇಷೇಣ ಮಾರ್ಗಮಾಸಾದಿತಃ ಶುಭೇ ।
ನೈವೇದ್ಯೈರ್ವಿವಿಧೈರ್ದಾನೈರ್ಗಂಧಮಾಲ್ಯಾನುಲೇಪನೈಃ ॥ ೩೬ ॥
ತತ್ಪ್ರಭಾವಾದಯಂ ಪ್ರಾಪ್ತೋ ಜೈಮಿನಿರ್ನಾಮ ಸದ್ದ್ವಿಜಃ ।
ಕಾತ್ಯಾಯನಿ ಯಥಾ ದೃಷ್ಟಸ್ತ್ವಯಾ ಕಿಂ ಕೀರ್ತಿತೈಃ ಪರೈಃ ॥ ೩೭ ॥
ತಸ್ಮಾತ್ತ್ವಮಪಿ ಕಲ್ಯಾಣಿ ಪೂಜಯೈನಾಂ ಸಮಾಹಿತಾ ।
ಸಂಪ್ರಾಪ್ಸ್ಯಸಿ ಸುಸೌಭಾಗ್ಯಂ ಮೈತ್ರೇಯ್ಯಾ ಸದೃಶಂ ಶುಭೇ ॥ ೩೮ ॥
ತ್ವಯಾ ನ ಪೂಜಿತಾ ಚೇಯಂ ಕೌಮಾರ್ಯೇ ವರ್ತಮಾನಯಾ ।
ಯಾವತ್ಸಂವತ್ಸರಂ ಗೌರೀ ತೃತೀಯಾಯಾಂ ನ ಚಾಽಧಿಕಂ ॥ ೩೯ ॥
ಸಾಪತ್ನ್ಯಂ ತೇನ ಸಂಜಾತಂ ಸೌಭಾಗ್ಯೇಽಪಿ ನಿರರ್ಗಲೇ ।
ಯಥೋಕ್ತವಿಧಿನಾ ದೇವೀ ಸತ್ಯಮೇತನ್ಮಯೋದಿತಂ ॥ ೪೦ ॥

ಸೂತ ಉವಾಚ :—

ಶ್ರುತ್ವಾ ಕಾತ್ಯಾಯನೀ ಸರ್ವಂ ಶಾಂಡಿಲ್ಯಾ ಯತ್ಪ್ರಕೀರ್ತಿತಂ ।
ತತಃ ಪ್ರಣಮ್ಯ ತಾಂ ಪೃಷ್ಟ್ವಾ ಸ್ವಮೇವ ಭವನಂ ಯಯೌ ॥ ೪೧ ॥
ಮಾರ್ಗಶೀರ್ಷೇಽಥ ಸಂಪ್ರಾಪ್ತೇ ತೃತೀಯಾ ದಿವಸೇ ಸಿತೇ ।
ತಾಂ ದೇವೀಂ ಪೂಜಯಾಮಾಸ ವರ್ಷಂ ಯಾವತ್ಕೃತಕ್ಷಣಾ ॥ ೪೨ ॥

---

ಯನ್ನು ಪತಿಪ್ರಾಪ್ತಿಗಾಗಿ ಒಂದು ವರ್ಷ ತದಿಗೆಯ ದಿನ ನಾನಾವಿಧ ನೈವೇದ್ಯ, ದಾನ, ಗಂಧ, ಮಾಲ್ಯಾದಿಗಳಿಂದ ಪೂಜಿಸಿದೆನು.

೩೭. ಕಾತ್ಯಾಯನಿ! ಆ ಗೌರಿಯ ಪ್ರಭಾವದಿಂದ ನೀನು ನೋಡಿದಂತಿರುವ ಈ ಜೈಮಿನಿಯೆಂಬ ಬ್ರಾಹ್ಮಣನನ್ನು ಪತಿಯನ್ನಾಗಿ ಪಡೆದೆನು. ಇನ್ನು ಹೊಗಳಿ ಪ್ರಯೋಜನವೇನು ?

೩೮. ಮಂಗಳಕರಳೆ! ನೀನೂ ಸಾವಧಾನ ಮನಸ್ಸಿನಿಂದ ಈ ಗೌರಿಯನ್ನು ಪೂಜಿಸು. ಮೈತ್ರೇಯಿಯಂತೆ ನೀನೂ ಸೌಭಾಗ್ಯವತಿಯಾಗುವೆ.

೩೯–೪೦. ಕುಮಾರಿಯಾದ ನೀನು ಒಂದು ವರ್ಷ ತೃತೀಯಾ ದಿನ ವಿಧಿಯಂತೆ ಗೌರೀ ದೇವಿಯನ್ನು ಪೂಜಿಸಲಿಲ್ಲ. ಆದುದರಿಂದ ಸಂಪೂರ್ಣ ಸೌಭಾಗ್ಯವಿದ್ದರೂ ಸವತಿಯ ದುಃಖವುಂಟಾಯಿತು. ನಾನು ಹೇಳಿರುವುದು ನಿಜ.

೪೧. ಸೂತನು ಹೇಳುತ್ತಾನೆ:—ಕಾತ್ಯಾಯನಿಯು ಶಾಂಡಿಲಿಯು ಹೇಳಿದ್ದನ್ನೆಲ್ಲ ಕೇಳಿ ಅವಳನ್ನು ನಮಸ್ಕರಿಸಿ ತನ್ನ ಮನೆಗೆ ಹೋದಳು.

೪೨. ಅನಂತರ ಮಾರ್ಗಶೀರ್ಷಮಾಸವು ಬರಲು ತದಿಗೆಯ ದಿನ ಪೂಜೆಯನ್ನು ಆರಂಭಿಸಿ ಒಂದು ವರ್ಷಕಾಲ ಉತ್ಸವಪೂರ್ವಕವಾಗಿ ಗೌರಿಯನ್ನು ಪೂಜಿಸಿದಳು.

ಗೌರಿಣೀರ್ಭೋಜಯಾಮಾಸ ಮೃಷ್ಟಾನ್ನೈರ್ಭೋಜನೈ ರಸೈಃ ।
ತೈಲಕ್ಷಾರಪರಿತ್ಯಕ್ತೈರ್ಗಂಧೈಃ ಕುಂಕುಮಪೂರ್ವಕೈಃ ॥ ೪೩ ॥
ತತಸ್ತು ವತ್ಸರೇ ಪೂರ್ಣೇ ಯಾಜ್ಞವಲ್ಕ್ಯಸ್ತದಂತಿಕಂ ।
ಗತ್ವಾ ಪ್ರೋವಾಚ ಕಿಂ ಕಷ್ಟಂ ತ್ವಂ ಕರೋಷಿ ಶುಚಿಸ್ಮಿತೇ ॥ ೪೪ ॥
ಮಯಾ ಕಾಂತೇನ ರಕ್ತೇನ ಕಾಮದೇನ ಸದೈವ ತು ।
ತಸ್ಮಾದಾಗಚ್ಛ ಗಚ್ಛಾವ ಸ್ವನೇವ ಭವನಂ ಶುಭೇ ॥ ೪೫ ॥
ಏವಮುಕ್ತ್ವಾ ತು ತಾಂ ಹೃಷ್ಟಾಂ ಗೃಹೀತ್ವಾ ದಕ್ಷಿಣೇ ಕರೇ ।
ಜಗಾಮ ಭವನಂ ಪಶ್ಚಾತ್ಪುಲಕಾಂಕಿತಗಾತ್ರಜಾಂ ॥ ೪೬ ॥
ತತಃ ಪರಂ ತ್ವಯಾ ಸಾರ್ಧಂ ವರ್ತತೇ ಹರ್ಷಿತಾನನಃ ।
ಮೈತ್ರೇಯ್ಯಾ ಸಹಿತೋ ಯದ್ವದವಿಶೇಷೇಣ ಸರ್ವದಾ ॥ ೪೭ ॥
ತತಃ ಸಂಜನಯಾಮಾಸ ತಸ್ಯಾಂ ಪುತ್ರಂ ಗುಣಾನ್ವಿತಂ ।
ಕಾತ್ಯಾಯನಾಭಿಧಾನಂ ಚ ಯಜ್ಞವಿದ್ಯಾವಿಚಕ್ಷಣಂ ॥ ೪೮ ॥
ಪುತ್ರೋ ವರರುಚಿರ್ಯಸ್ಯ ಬಭೂವ ಗುಣಸಾಗರಃ ।
ಸರ್ವಜ್ಞಃ ಸರ್ವಕೃತ್ಯೇಷು ವೇದವೇದಾಂಗಪಾರಗಃ ॥ ೪೯ ॥
ಸ್ಥಾಪಿತೋಽತ್ರ ಶುಭೇ ಕ್ಷೇತ್ರೇ ಯೇನ ವಿದ್ಯಾರ್ಥಿನಾಂ ಕೃತೇ ।
ಸಮಾರಾಧ್ಯ ವಿಶೇಷೇಣ ಚತುರ್ಥ್ಯಾಂ ಶುಕ್ಲವಾಸರೇ ॥ ೫೦ ॥

---

೪೩. ಕನ್ಯೆಯರನ್ನು ಕುಂಕುಮ ಮೊದಲಾದ ಗಂಧಗಳಿಂದ ಪೂಜಿಸಿ ಎಣ್ಣೆ, ವಗರುಗಳಿಲ್ಲದ ರಸಗಳಿಂದ ಸಹಿತವಾದ ಮೃಷ್ಟಾನ್ನವನ್ನು ಭೋಜನಮಾಡಿಸಿದಳು.

೪೪–೪೫. ತರುವಾಯ ಒಂದು ವರ್ಷ ಕಳೆಯಲು ಯಾಜ್ಞವಲ್ಕ್ಯನು ಅವಳ ಹತ್ತಿರ ಹೋಗಿ, "ಪ್ರಿಯಳೆ! ಪ್ರಿಯನೂ, ಕಾಮುಕನೂ ಆದ ನನ್ನಿಂದ ಸಹಿತಳಾದ ನೀನು ಏತಕ್ಕೆ ಕಷ್ಟವಾದ ಈ ಕಾರ್ಯವನ್ನು ಮಾಡುತ್ತಿರುವೆ? ಬಾ ಮನೆಗೆ ಹೋಗೋಣ" ಎಂದನು.

೪೬. ಹೀಗೆ ಹೇಳಿ ಸಂತೋಷದಿಂದ ರೋಮಾಂಚಗೊಂಡ ಅವಳ ಬಲಗೈಯನ್ನು ಹಿಡಿದುಕೊಂಡು ಮನೆಗೆ ಹೋದನು.

೪೭. ಅನಂತರ ಆ ಯಾಜ್ಞವಲ್ಕ್ಯನು ಆ ಕಾತ್ಯಾಯನಿಯೊಡನೆ ಮೈತ್ರೇಯಿಯೊಡನೆ ಇರುವಂತೆಯೇ ಸಂತೋಷದಿಂದ ವಾಸಿಸುತ್ತಿದ್ದನು.

೪೮. ಅನಂತರ ಅವನಿಗೆ ಕಾತ್ಯಾಯನಿಯಲ್ಲಿ ಗುಣಶಾಲಿಯೂ, ಯಜ್ಞವಿದ್ಯೆಯಲ್ಲಿ ನಿಪುಣನೂ ಆದ ಕಾತ್ಯಾಯನನೆಂಬ ಪುತ್ರನು ಜನಿಸಿದನು.

೪೯. ಅವನಿಗೆ ಸಕಲ ಕಾರ್ಯಗಳನ್ನರಿತವನೂ, ವೇದವೇದಾಂಗ ಪಾರಂಗತನೂ, ಗುಣಸಾಗರನೂ ಆದ ವರರುಚಿಯೆಂಬ ಪುತ್ರನು ಹುಟ್ಟಿದನು.

೫೦–೫೧. ಆ ವರರುಚಿಯು ಈ ಶುಭಕ್ಷೇತ್ರದಲ್ಲಿ ವಿದ್ಯಾರ್ಥಿಗಳಿಗಾಗಿ ಸಮಸ್ತ ವಿದ್ಯಾದಾಯಕನಾದ ಮಹಾಗಣಪತಿಯನ್ನು ಚತುರ್ಥೀ ಶುಕ್ರವಾರದ ದಿನ

ಮಹಾಗಣಪತಿರ್ಭಕ್ತ್ಯಾ ಸರ್ವವಿದ್ಯಾಪ್ರದಾಯಕಃ ।
ಯಸ್ತಸ್ಯ ಪುರತೋ ವಿಪ್ರಾಃ ಶಾಂತಿಪಾಠವಿಧಾನತಃ ॥ ೫೧ ॥
ಗೃಹ್ಣಾತಿ ಪುಷ್ಪಮಾಲಾಂ ಯಃ ಪಠೇಚ್ಛಕ್ತ್ಯಾ ದ್ವಿಜೋತ್ತಮಾಃ ।
ವೇದಾಂತಕೃತ್ಸ ವಿಪ್ರಃ ಸ್ಯಾತ್ಸದಾ ಜನ್ಮನಿ ಜನ್ಮನಿ ॥ ೫೨ ॥
ಅಶಕ್ತ್ಯಾ ಚಾಽಥ ಪಾಠಸ್ಯ ಯೋ ಗೃಹ್ಣಾತಿ ಧನೇನ ಚ ।
ಸವಿಶೇಷಾದ್ಭವೇದ್ವಿಪ್ರೋ ವೇದವೇದಾಂಗಪಾರಗಃ ॥ ೫೩ ॥
ವಿದುಷಾಂ ಸ ಗೃಹೇ ಜನ್ಮ ಯಾಜ್ಞಿಕಾನಾಂ ಸದಾ ಲಭೇತ್ ।
ನ ಕಾದಾಚಿತ್ತು ಮೂರ್ಖಾಣಾಂ ನಿಂದಿತಾನಾಂ ಕಥಂಚನ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವರರುಚಿಸ್ಥಾಪಿತಗಣಪತಿಮಾಹಾತ್ಮ್ಯವರ್ಣನಂ"
ನಾಮೈಕತ್ರಿಂಶದುತ್ತರಶತತಮೋಽಧ್ಯಾಯಃ

---

ಭಕ್ತಿಯಿಂದ ಪೂಜಿಸಿ ಪ್ರತಿಷ್ಠೆಮಾಡಿದನು. ವಿಪ್ರರೆ! ಅವನ ಮುಂದೆ ಶಾಂತಿ ಪಾಠವಿಧಿಯಿಂದ ಪುಷ್ಪಮಾಲೆಯನ್ನು ಹಿಡಿದು ಶಕ್ತ್ಯನುಸಾರ ಪಠಿಸುವವನು ಪ್ರತಿಜನ್ಮದಲ್ಲಿಯೂ ವೇದಾಂತವನ್ನು ರಚಿಸುವ ಬ್ರಾಹ್ಮಣನಾಗುವನು.

೫೩. ಇಲ್ಲಿ ಪಾಠಮಾಡಲು ಅಶಕ್ತನಾಗಿ ದ್ರವ್ಯದಿಂದ ಸ್ವೀಕರಿಸುವವನು ವೇದವೇದಾಂಗಪಾರಂಗತನಾದ ಬ್ರಾಹ್ಮಣನಾಗುವನು.

೫೪. ಅವನು ವಿದ್ವಾಂಸರಾದ ಯಾಜ್ಞಿಕರ ಮನೆಯಲ್ಲಿ ಜನಿಸುವನು. ಒಂದು ಸಲವೂ ನಿಂದ್ಯರಾದ ಮೂರ್ಖರ ಮನೆಯಲ್ಲಿ ಹುಟ್ಟುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವರರುಚಿಸ್ಥಾಪಿತಗಣಪತಿಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾತ್ರಿಂಶದುತ್ತರಶತತಮೋಽಧ್ಯಾಯಃ

### ವಾಸ್ತುಪದೋತ್ಪತ್ತಿಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ತ್ವಯಾ ಸೂತಜ ತತ್ರಸ್ಥಂ ಯಾಜ್ಞವಲ್ಕ್ಯಸ್ಯ ಕೀರ್ತಿತಂ ।
ತೀರ್ಥಂ ವರರುಚೇಶ್ಚೈವ ವೈನಾಯಕ್ಯಂ ಪ್ರವಿದ್ಯತೇ ॥ ೧ ॥
ಕಾತ್ಯಾಯನಸ್ಯ ನ ಪ್ರೋಕ್ತಂ ಕಿಂಚಿತ್ತತ್ರ ಮಹಾಮತೇ ।
ಕಿಂ ವಾ ತೇನ ಕೃತಂ ನೈವ ಕಿಂ ವಾ ತೇ ವಿಸ್ಮೃತಿಂ ಗತಂ ॥ ೨ ॥
ತಸ್ಮಾದಾಚಕ್ಷ್ವ ನಃ ಶೀಘ್ರಂ ಯದಿ ಕಿಂಚಿನ್ಮಹಾತ್ಮನಾ ।
ಕ್ಷೇತ್ರೇಽತ್ರ ನಿರ್ಮಿತಂ ತೀರ್ಥಂ ಸರ್ವಸಿದ್ಧಿಪ್ರದಾಯಕಂ ॥ ೩ ॥

ಸೂತ ಉವಾಚ :—

ತೇನ ವಾಸ್ತುಪದಂ ನಾಮ ತತ್ರ ತೀರ್ಥಂ ವಿನಿರ್ಮಿತಂ ।
ಕಾತ್ಯಾಯನೇನ ವಿಪ್ರೇಣ ಸರ್ವಕಾಮಪ್ರದಂ ನೃಣಾಂ ॥ ೪ ॥

---

### ಕನ್ನಡದ ಅನುವಾದ

### ವಾಸ್ತುಪದೋತ್ಪತ್ತಿಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ ! ನೀನು ಅಲ್ಲಿರುವ ಯಾಜ್ಞವಲ್ಕ್ಯೇಶ್ವರನನ್ನೂ, ವರರುಚಿಯು ಸ್ಥಾಪಿಸಿರುವ ವಿನಾಯಕನನ್ನೂ ಹೇಳಿದೆ.

೨. ಕಾತ್ಯಾಯನನ ಸಂಬಂಧವಾದ ಏನನ್ನೂ ಹೇಳಲಿಲ್ಲ. ಆ ಕಾತ್ಯಾಯನನು ಏನನ್ನೂ ಮಾಡಲಿಲ್ಲವೊ? ಅಥವಾ ನೀನೇ ಮರೆತೆಯೊ?

೩. ಆದುದರಿಂದ ಮಹಾತ್ಮನಾದ ಕಾತ್ಯಾಯನನು ಈ ಕ್ಷೇತ್ರದಲ್ಲಿ ನಿರ್ಮಿಸಿದ ಸಮಸ್ತ ಸಿದ್ಧಿಯನ್ನೀಯುವ ಯಾವುದಾದರೊಂದು ತೀರ್ಥವನ್ನು ನಮಗೆ ಹೇಳು.

೪. ಸೂತನು ಹೇಳುತ್ತಾನೆ :—ಕಾತ್ಯಾಯನನೆಂಬ ಬ್ರಾಹ್ಮಣನು ಈ ಕ್ಷೇತ್ರದಲ್ಲಿ ಮನುಷ್ಯರಿಗೆ ಸಕಲೇಷ್ಟಾರ್ಥಗಳನ್ನು ಕೊಡುವ ವಾಸ್ತುಪದವೆಂಬ ತೀರ್ಥವನ್ನು ನಿರ್ಮಿಸಿರುವನು.

ಚತ್ವಾರಿಂಶತ್ತ್ರಿಭಿರ್ಯುಕ್ತಾ ದೇವತಾ ಯತ್ರ ಪಂಚ ಚ ।
ಪೂಜ್ಯಂತೇ ಪೂಜಿತಾಶ್ಚಾಪಿ ಸಿದ್ಧಿಂ ಯಚ್ಛಂತಿ ತತ್ಕ್ಷಣಾತ್ ॥ ೫ ॥

ಋಷಯ ಊಚುಃ:—

ತಸ್ಮಾತ್ತಾ ದೇವತಾಸ್ಸೂತ ಪೂಜ್ಯಂತೇ ತತ್ರ ಸಂಸ್ಥಿತಾಃ ।
ನಾಮತಶ್ಚ ವಿಭಾಗೇನ ಕೀರ್ತಯಸ್ವ ಪೃಥಕ್ಪೃಥಕ್ ॥ ೬ ॥

ಸೂತ ಉವಾಚ:—

ಪೂರ್ವಂ ಕಿಂಚಿನ್ಮಹದ್ಭೂತಂ ನಿರ್ಗತಂ ಧರಣೀತಲಾತ್ ।
ಅಪೂರ್ವಂ ರೌದ್ರಮತ್ಯುಗ್ರಂ ಕೃಷ್ಣದಂತಂ ಭಯಾನಕಂ ॥ ೭ ॥
ಶಂಕುಕರ್ಣಂ ಕೃಶಾಸ್ಯಂ ಚ ಊರ್ಧ್ವಕೇಶಂ ಭಯಾನಕಂ ।
ದೇವಾನಾಂ ನಾಶನಾರ್ಥಾಯ ಮಾನುಷಾಣಾಂ ವಿಶೇಷತಃ ॥ ೮ ॥
ಆಕೃಷ್ಟಂ ದಾನವೇಂದ್ರೇಣ ಮಂತ್ರೈಶ್ಶುಕ್ರಪ್ರದರ್ಶಿತೈಃ ।
ಅವಧ್ಯಂ ಸರ್ವಶಸ್ತ್ರಾಣಾಮಸ್ತ್ರಾಣಾಂ ಚ ವಿಶೇಷತಃ ॥ ೯ ॥
ಅಥ ದೇವಾಸ್ಸಮಾಲೋಕ್ಯ ತತ್ತಾದೃಕ್ಸುಭಯಾವಹಂ ।
ಜಘ್ನುಶ್ಚಾಸ್ತ್ರೈಸ್ಸಿತೈಶ್ಚಿತ್ರೈಃ ಕೋಪೇನ ಮಹತಾನ್ವಿತಾಃ ॥ ೧೦ ॥
ನೈವ ಶೇಕುಸ್ತದಂಗೇಷು ಪ್ರಹರ್ತುಂ ಯತ್ನಮಾಸ್ಥಿತಾಃ ।
ಭಕ್ಷ್ಯಂತೇ ಕೇವಲಂ ತೇನ ಶತಶೋಽಥ ಸಹಸ್ರಶಃ ॥ ೧೧ ॥

---

೫. ಇಲ್ಲಿ ಜನರು ನಲವತ್ತೆಂಟು ದೇವತೆಗಳನ್ನು ಪೂಜಿಸುತ್ತಾರೆ. ಹಾಗೆ ಪೂಜೆಗೊಂಡ ಅವರು ಕೂಡಲೆ ಸಿದ್ಧಿಯನ್ನು ಕೊಡುವರು.

೬. ಋಷಿಗಳು ಹೇಳುತ್ತಾರೆ:—ಸೂತ! ಅಲ್ಲಿ ಆ ದೇವತೆಗಳನ್ನು ಏಕೆ ಪೂಜಿಸುತ್ತಾರೆ. ಆ ದೇವತೆಗಳ ನಾಮವನ್ನು ಪ್ರತ್ಯೇಕವಾಗಿ ಹೇಳು.

೭–೯. ಸೂತನು ಹೇಳುತ್ತಾನೆ:—ಹಿಂದೆ ಭೂಮಿಯಿಂದ ಅಪೂರ್ವವೂ, ಭಯಂಕರವೂ, ಕರಿಯ ಹಲ್ಲುಳ್ಳುದೂ, ಶಂಕುವಿನಂತೆ ಕಿವಿಗಳುಳ್ಳುದೂ, ಕೃಶವಾದ ಮುಖವುಳ್ಳುದೂ, ಮೇಲ್ಮುಖವಾದ ಕೂದಲುಳ್ಳುದೂ, ದೇವಮನುಷ್ಯರ ನಾಶಕ್ಕಾಗಿ ಶುಕ್ರಾಚಾರ್ಯನು ಉಪದೇಶಿಸಿದ ಮಂತ್ರಗಳಿಂದ ದಾನವರಾಜನು ಆಕರ್ಷಿಸಿರುವುದೂ, ಸಕಲ ಶಸ್ತ್ರಾಸ್ತ್ರಗಳಿಗೆ ಅವಧ್ಯವೂ ಆದ ಒಂದು ಮಹಾ ಭೂತವು ಮೇಲಕ್ಕೆದ್ದಿತು.

೧೦. ಅನಂತರ ದೇವತೆಗಳು ಅಂತಹ ಭಯಂಕರ ಭೂತವನ್ನು ಕಂಡು ಕೋಪದಿಂದ ಹರಿತವಾದ ನಾನಾವಿಧ ಶಸ್ತ್ರಗಳಿಂದ ಅದನ್ನು ಹೊಡೆದರು.

೧೧. ಆದರೆ ಅತಿ ಪ್ರಯತ್ನದಿಂದಲೂ ಅದರ ಅವಯವಗಳಿಗೆ ಹೊಡೆಯಲು ಅವರಾರೂ ಶಕ್ತರಾಗಲಿಲ್ಲ. ಅದು ಸಾವಿರಾರು ಮಂದಿಗಳನ್ನು ಭಕ್ಷಿಸಿತು.

ಅಥ ತೇ ಯತ್ನಮಾಸ್ಥಾಯ ಸರ್ವೇ ದೇವಾಸ್ಸವಾಸವಾಃ ।
ಬ್ರಹ್ಮಾಣಮಗ್ರತಃ ಕೃತ್ವಾ ತದ್ಭೂತಮಭಿದುದ್ರುವುಃ ॥ ೧೨ ॥
ತತಸ್ಸಂಗೃಹ್ಯ ಯತ್ನೇನ ಸರ್ವಗಾತ್ರೇಷು ಸರ್ವತಃ ।
ತಚ್ಚ ಪಂಚಗುಣೈರ್ದೇವೈಃ ಪಾತಿತಂ ಧರಣೀತಲೇ ॥ ೧೩ ॥
ಉಪವಿಷ್ಟಾಸ್ತತಸ್ತಸ್ಯ ಸರ್ವೇ ಭೂತ್ವಾ ಸಮಂತತಃ ।
ಪ್ರಹಾರಾನ್ ಸಂಪ್ರಯಚ್ಛಂತಿ ನ ಲಗಂತಿ ಚ ತಸ್ಯ ತೇ ॥ ೧೪ ॥
ಆಥರ್ವಣೇನ ಸೂಕ್ತೇನ ಜಾತಂ ಚಾಮೃತಬಿಂದುನಾ ।
ತದ್ಭೂತಂ ಪ್ರೇಷಿತಂ ದೈತ್ಯೈರ್ಮುಂಡೇನ ಚ ತದಂತಿಕಂ ॥ ೧೫ ॥
ಏವಂ ವರ್ಷಸಹಸ್ರಾಂತಂ ತತ್ತಥೈವ ವ್ಯವಸ್ಥಿತಂ ।
ನ ಮುಂಚಂತಿ ಭಯಾತ್ತೇ ತು ನ ಹಂತುಂ ಶಕ್ನುವಂತಿ ಚ ॥ ೧೬ ॥
ತಸ್ಯೋದರೇ ಸ್ಥಿತೋ ಬ್ರಹ್ಮಾ ಶಕ್ರಾದ್ಯಾ ಅಪರಾಶ್ಚಯೇ ।
ಚತುರ್ದಿಕ್ಷು ಸ್ಥಿತಾ ಕ್ರುದ್ಧಾ ಮಹದ್ಯತ್ನೇನ ಸಂಸ್ಥಿತಾಃ ।
ತತಸ್ತೇ ದಾನವಾಸ್ಸರ್ವೇ ಮಂತ್ರಂ ಚಕ್ರುಃ ಪರಸ್ಪರಂ ॥ ೧೭ ॥
ಅಸ್ಯ ಭೂತಸ್ಯ ರೌದ್ರಸ್ಯ ಶುಕ್ರಸೃಷ್ಟಸ್ಯ ತತ್ಕ್ಷಣಾತ್ ।
ಏಕ ಏವಾತ್ರ ನಿರ್ದಿಷ್ಟ ಉಪಾಯೋ ದೇವಸಂಕ್ಷಯಃ ॥ ೧೮ ॥

---

೧೨. ಅನಂತರ ಇಂದ್ರನಿಂದ ಸಹಿತರಾದ ಆ ದೇವತೆಗಳು ಬ್ರಹ್ಮನನ್ನು ಮುಂದಿರಿಸಿಕೊಂಡು ಆ ಭೂತವನ್ನು ಅಟ್ಟಿಸಿಕೊಂಡು ಹೋದರು.

೧೩. ಅದರ ಐದರಷ್ಟು ಹೆಚ್ಚಾಗಿರುವ ದೇವತೆಗಳು ಆ ಭೂತವನ್ನು ಪ್ರಯತ್ನದಿಂದ ಎಲ್ಲ ಅಂಶಗಳಲ್ಲಿಯೂ ಹಿಡಿದುಕೊಂಡು ಭೂಮಿಯಲ್ಲಿ ಕೆಡವಿದರು.

೧೪. ಅವರೆಲ್ಲ ಅದರ ಸುತ್ತಲೂ ಕುಳಿತುಕೊಂಡು ಅದನ್ನು ಪ್ರಹರಿಸಿದರು. ಆದರೆ ಆ ಏಟು ಅದಕ್ಕೆ ತಗಲಲಿಲ್ಲ.

೧೫. ದೈತ್ಯರು ಅವರ ಹತ್ತಿರಕ್ಕೆ ಅಥರ್ವಣ ವೇದದ ಮುಂಡಕೋಪನಿಷತ್ತಿನಿಂದಲೂ ಅಮೃತಬಿಂದುವಿನಿಂದಲೂ ಉಂಟಾದ ಭೂತವನ್ನು ಕಳುಹಿಸಿದರು.

೧೬. ಹೀಗೆ ನೂರು ವರ್ಷಗಳ ಕೊನೆಯಲ್ಲಿಯೂ ಆ ಭೂತವು ಹಾಗೆಯೇ ಇದ್ದಿತು. ದೇವತೆಗಳು ಭಯದಿಂದ ಅದನ್ನು ಬಿಡಲೂ ಇಲ್ಲ. ಹೊಡೆಯಲು ಸಮರ್ಥರೂ ಆಗಲಿಲ್ಲ.

೧೭–೧೮. ಬ್ರಹ್ಮನು ಅದರ ಹೊಟ್ಟೆಯಲ್ಲಿಯೂ, ಇಂದ್ರಾದಿದೇವತೆಗಳು ನಾಲ್ಕು ದಿಕ್ಕುಗಳಲ್ಲಿಯೂ ಕ್ರುದ್ಧರಾಗಿ ಮಹಾ ಪ್ರಯತ್ನದಿಂದ ಇದ್ದರು. ಅನಂತರ ಸಮಸ್ತ ದಾನವರೂ ಒಟ್ಟಿಗೆ ಸೇರಿ ಪರಸ್ಪರವಾಗಿ ಶುಕ್ರನು ಸೃಷ್ಟಿಸಿದ ಈ ಭಯಂಕರ ಭೂತಕ್ಕೆ ದೇವತೆಗಳ ನಾಶವೊಂದೇ (ಉಪಾಯ) ಉದ್ದೇಶವಾಗಿದೆ ಎಂದಾಲೋಚಿಸಿದರು.

ತತಃ ಶಸ್ತ್ರಾಣಿ ತೀಕ್ಷ್ಣಾನಿ ದಾನವಾಸ್ತೇ ಮಹಾಬಲಾಃ ।
ಮುಂಚಂತೋ ವಿವಿಧಾನ್ನಾದಾನ್ ಸಮಾಜಗ್ಮುಸ್ಸಹಸ್ರಶಃ ॥ ೧೯ ॥
ಏತಸ್ಮಿನ್ನಂತರೇ ವಿಷ್ಣುರಾಗತಸ್ತತ್ರ ತತ್ಕ್ಷಣಾತ್ ।
ಆಹ ಭೂತಂ ತದಾ ವಿಷ್ಣುರ್ವಚಸಾಹ್ಲಾದಯನ್ನಿವ ॥ ೨೦ ॥
ಯೋ ಯಸ್ಮಿನ್ಸಂಸ್ಥಿತೋ ಗಾತ್ರೇ ದೇವಸ್ತವ ಸಮುದ್ಭವೇ ।
ತತ್ರ ಪೂಜಾಂ ಸಮಾದಾಯ ತಸ್ಮಾತ್ತ್ವಾಂ ತರ್ಪಯಿಷ್ಯತಿ ॥ ೨೧ ॥
ನೈವಂ ವಿಧಾತು ಲೋಕೇಽಸ್ಮಿನ್ಪೂಜಾ ದೇವಸ್ಯ ಸಂಸ್ಥಿತಾ ।
ಕಸ್ಯಚಿದ್ಯಾದೃಶೀ ತೇಽದ್ಯ ಮಯಾ ಸಂಪ್ರತಿಪಾದಿತಾ ॥ ೨೨ ॥
ತತಸ್ತೇನ ಪ್ರತಿಜ್ಞಾತಮವಿಕಲ್ಪೇನ ಚೇತಸಾ ।
ಏವಂ ತೇಽಹಂ ಕರಿಷ್ಯಾಮಿ ಪರಂ ಮೇ ವಚನಂ ಶೃಣು ॥ ೨೩ ॥
ಯದಿ ಕಶ್ಚಿನ್ನ ಮೇ ಪೂಜಾಂ ಕರಿಷ್ಯತಿ ಕದಾಚನ ।
ಕಥಂಚಿನ್ಮಾನವಃ ಕಶ್ಚಿತ್ಸಮೇ ಭಕ್ಷ್ಯೋ ಭವಿಷ್ಯತಿ ॥ ೨೪ ॥

ಸೂತ ಉವಾಚ :—

ಬಾಢಮಿತ್ಯೇವ ಚ ಪ್ರೋಕ್ತೇ ತತೋ ದೇವೇನ ಚಕ್ರಿಣಾ ।
ತದ್ಭೂತಂ ನಿಶ್ಚಲಂ ಜಾತಂ ಹರ್ಷೇಣ ಮಹತಾಽನ್ವಿತಂ ॥ ೨೫ ॥

---

೧೯. ಅನಂತರ ಅತ್ಯಂತ ಬಲಿಷ್ಠರಾದ ಆ ದಾನವರೆಲ್ಲ ತೀಕ್ಷ್ಣವಾದ ಶಸ್ತ್ರಗಳನ್ನು ಪ್ರಯೋಗಿಸುತ್ತ ಸಿಂಹನಾದಮಾಡುತ್ತ ಅಲ್ಲಿಗೆ ಬಂದರು.

೨೦. ಈ ಸಮಯದಲ್ಲಿ ವಿಷ್ಣುವು ಕೂಡಲೆ ಅಲ್ಲಿಗೆ ಬಂದು ಮಾತಿನಿಂದಲೇ ಸಂತೋಷಪಡಿಸುವವನಂತೆ ಆ ಭೂತವನ್ನು ಕುರಿತು ಇಂತೆಂದನು.

೨೧. "ನಿನ್ನ ಶರೀರದಲ್ಲಿ ಯಾವ ಸ್ಥಳದಲ್ಲಿ ಯಾವ ದೇವತೆಯಿರುವನೋ ಅವನು ಅಲ್ಲಿಯೇ ನಿನ್ನನ್ನು ಪೂಜಿಸಿ ತೃಪ್ತಿಗೊಳಿಸುತ್ತಾನೆ.

೨೨. ನಾನು ಈಗ ನಿನಗೆ ಹೇಳಿದಂತಹ ಪೂಜೆಯು ಪ್ರಪಂಚದಲ್ಲಿ ಯಾವ ದೇವತೆಗೂ ಇರುವುದಿಲ್ಲ."

೨೩. ತರುವಾಯ ಆ ಭೂತವು ನಿಶ್ಚಲಮನಸ್ಸಿನಿಂದ ಅದನ್ನು ಒಪ್ಪಿ, "ನಾನು ಹೀಗೆಯೇ ಮಾಡುತ್ತೇನೆ. ಆದರೆ ನನ್ನ ಮಾತನ್ನು ಕೇಳು.

೨೪. ಮನುಷ್ಯರಲ್ಲಿ ಯಾವನಾದರೂ ಒಬ್ಬನು ನನ್ನನ್ನು ಪೂಜಿಸದಿದ್ದರೆ ಅವನು ನನಗೆ ಭಕ್ಷ್ಯನಾಗುವನು."

೨೫. ಸೂತನು ಹೇಳುತ್ತಾನೆ:—ವಿಷ್ಣುವು ಹಾಗೆಯೇ ಆಗಲೆನ್ನಲು ಆ ಭೂತವು ಅತಿ ಸಂತೋಷದಿಂದ ನಿಶ್ಚಲವಾಯಿತು.

ತತೋ ದೇವಾಸ್ಸಮುತ್ಸೃಜ್ಯ ತತ್ತ್ಯಕ್ತ್ವಾ ಶಸ್ತ್ರಪಾಣಯಃ ।
ಜಘ್ನುಶ್ಚ ನಿಶಿತೈಶ್ಶಸ್ತ್ರೈಃ ಪಲಾಯನಸಮುತ್ಸುಕಾನ್ ।
ಲಜ್ಜಾಹೀನಾನ್ ಗತಾಮರ್ಷಾನ್ದೀನವಾಕ್ಯಪ್ರಜಲ್ಪಕಾನ್ ॥ ೨೬ ॥
ತತಸ್ಸ್ವಸ್ಥಸ್ಯ ಭೂತ್ವಾ ತು ಹರಿರ್ದೈತ್ಯೈರ್ನಿಪಾತಿತೈಃ ।
ಪ್ರೋವಾಚ ಪದ್ಮಜಂ ನಾಮ ಭೂತಸ್ಯಾಸ್ಯ ಕುರುಷ್ವಭೋಃ ॥ ೨೭ ॥

ಬ್ರಹ್ಮೋವಾಚ :—

ಅನೇನ ತವ ವಾಕ್ಯಸ್ಯ ಪ್ರೋಕ್ತಂ ವಾಕ್ಯಂ ಹರೇ ಯತಃ ।
ವಾಸ್ತ್ವೇತದಿತಿ ಯಸ್ಮಾಚ್ಚ ತಸ್ಮಾದ್ವಾಸ್ತು ಭವಿಷ್ಯತಿ ॥ ೨೮ ॥
ಏವಮುಕ್ತ್ವಾ ಹೃಷೀಕೇಶ ಆಹೂಯ ವಿಶ್ವಕರ್ಮಣೇ ।
ವಿಧಾನಂ ಕಥಯಾಮಾಸ ಪೂಜಾರ್ಥಂ ವಿಸ್ತರಾನ್ವಿತಂ ॥ ೨೯ ॥
ಏತಸ್ಮಿನ್ನಂತರೇ ಪ್ರಾಹ ಯಾಜ್ಞವಲ್ಕ್ಯಸುತಸ್ಸುಧೀಃ ।
ವಿಶ್ವಕರ್ಮಾಣಮಾಹೂಯ ಪ್ರಥಮಂ ದ್ವಿಜಸತ್ತಮಾಃ ॥ ೩೦ ॥
ಹಾಟಕೇಶ್ವರಜೇ ಕ್ಷೇತ್ರೇ ಮಮಾಶ್ರಮಪದಂ ಕುರು ।
ಅನೇನೈವ ವಿಧಾನೇನ ಪ್ರೋಕ್ತೇನ ತು ಮಹಾಮತೇ ॥ ೩೧ ॥
ತತೋಽಹಂ ಸಕಲಂ ಬುದ್ಧ್ವಾ ವೃದ್ಧಿಂ ನೇಷ್ಯಾಮಿ ಭೂತಲೇ ।
ಬಾಲಾವಬೋಧನಾರ್ಥಾಯ ತಸ್ಮಾದಾಗಚ್ಛ ಸತ್ವರಂ ॥ ೩೨ ॥

---

೨೬. ಅನಂತರ ದೇವತೆಗಳು ಆ ಭೂತವನ್ನು ತ್ಯಜಿಸಿ ಆಯುಧವನ್ನು ಹಿಡಿದುಕೊಂಡು ಹರಿತವಾದ ಶಸ್ತ್ರಗಳಿಂದ ಓಡುತ್ತಿರುವವರೂ, ನಾಚಿಕೆಯಿಲ್ಲದವರೂ, ಕೋಪರಹಿತರೂ, ದೈನ್ಯದಿಂದ ಮಾತಾಡುವವರೂ ಆದ ಆ ದೈತ್ಯರನ್ನು ಹೊಡೆದರು.

೨೭. ದೈತ್ಯರು ಕೆಳಗೆ ಬಿದ್ದುದರಿಂದ ವಿಷ್ಣುವು ಸ್ವಸ್ಥನಾಗಿ ಬ್ರಹ್ಮನನ್ನು ಕುರಿತು ಈ ಭೂತಕ್ಕೆ ನಾನು ಹೇಳಿದಂತೆ ಪೂಜೆಮಾಡು ಎಂದನು.

೨೮. ಬ್ರಹ್ಮನು ಹೇಳುತ್ತಾನೆ:—ವಿಷ್ಣುವೆ! ನಿನ್ನ ಮಾತಿಗೆ ನಾನು ವಾಸ್ತು ಎಂದು ಹೇಳಿರುವುದರಿಂದ ಈ ಭೂತವು ವಾಸ್ತುವೆಂದು ಹೆಸರನ್ನು ಪಡೆಯುವುದು.

೨೯. ವಿಷ್ಣುವು ಹೀಗೆಯೇ ಆಗಲೆಂದು ವಿಶ್ವಕರ್ಮನನ್ನು ಕರೆಯಿಸಿ ಪೂಜೆಗಾಗಿ ವಿಸ್ತಾರವಾದ ವಿಧಾನವನ್ನು ಹೇಳಿದನು.

೩೦. ದ್ವಿಜವರ್ಯರೆ! ಇಷ್ಟರಲ್ಲಿ ವಿದ್ವಾಂಸನಾದ ಯಾಜ್ಞವಲ್ಕ್ಯನ ಮಗನು ಮೊದಲು ವಿಶ್ವಕರ್ಮನನ್ನು ಕರೆದು ಇಂತೆಂದನು.

೩೧. "ಪ್ರಾಜ್ಞನೆ! ನೀನು ಈ ವಿಧಾನದಿಂದಲೇ ಹಾಟಕೇಶ್ವರಕ್ಷೇತ್ರದಲ್ಲಿ ನನ್ನ ಆಶ್ರಮವನ್ನು ನಿರ್ಮಿಸು.

೩೨. ಅನಂತರ ನಾನು ಬಾಲರ ತಿಳಿವಳಿಕೆಗಾಗಿ ಎಲ್ಲವನ್ನೂ ತಿಳಿದುಕೊಂಡು ಇದನ್ನು ಅಭಿವೃದ್ಧಿಗೊಳಿಸುವೆನು. ಆದುದರಿಂದ ಶೀಘ್ರವಾಗಿ ಬಾ."

ತತಸ್ಸಂಪ್ರೇಷಯಾಮಾಸ ತಂ ಬ್ರಹ್ಮಾಪಿ ತದಂತಿಕಂ ।
ವಿಶ್ವಕರ್ಮಾಣಮಾಹೂಯ ಸ್ವಸುತಸ್ಯ ಹಿತೇ ಸ್ಥಿತಃ ॥ ೩೩ ॥
ವಿಶ್ವಕರ್ಮಾಪಿ ತತ್ರೈತ್ಯ ವಾಸ್ತುಪೂಜಾಂ ತಥೋದಿತಾಂ ।
ಚಕಾರ ಬ್ರಹ್ಮಣಾ ಪ್ರೋಕ್ತಾಂ ಯಾದೃಶೀಂ ಸಕಲಾಂ ತತಃ ॥ ೩೪ ॥
ಕಾತ್ಯಾಯನೋಽಪಿ ತಾಂ ಸರ್ವಾಂ ದೃಷ್ಟ್ವಾ ಚಕ್ರೇ ಸಹಸ್ರಶಃ ।
ತದಾ ವಿಶ್ವಹಿತಾರ್ಥಾಯ ಶಾಲಾಕರ್ಮಾದಿ ಪೂರ್ವಿಕಾಂ ॥ ೩೫ ॥
ಏವಂ ವಾಸ್ತುಪದಂ ಜಾತಂ ತಸ್ಮಿನ್‌ಕ್ಷೇತ್ರೇ ದ್ವಿಜೋತ್ತಮಾಃ ।
ಅಸ್ಮಿನ್ ಕ್ಷೇತ್ರೇ ನರಃ ಪಾಪಾತ್ಸ್ಪೃಷ್ಟೋ ಮುಚ್ಯೇತ ಕರ್ಮಣಾ ॥ ೩೬ ॥
ತಥಾ ನ ಪ್ರಾಪ್ನುಯಾದ್ದೋಷಂ ಗೃಹಜಾತಂ ಕಥಂಚನ ।
ಶಿಲ್ಪೋತ್ಥಂ ಕುಪದೋತ್ಥಂ ಚ ಕುವಾಸ್ತುಜಮಥಾಪಿ ಚ ॥ ೩೭ ॥
ವೈಶಾಖಸ್ಯ ತೃತೀಯಾಯಾಂ ಶುಕ್ಲಾಯಾಂ ರೋಹಿಣೀಷು ಚ ।
ತತ್ಪದಂ ನಿಹಿತಂ ತತ್ರ ವಾಸ್ತೋಸ್ತೇನ ಮಹಾತ್ಮನಾ ॥ ೩೮ ॥
ತಸ್ಮಿನ್ನಪಿ ಚ ಯಃ ಪೂಜಾಂ ತೇನೈವ ವಿಧಿನಾ ನರಃ ।
ತಸ್ಯ ಯಃ ಕುರುತೇ ಸಮ್ಯಕ್ಸ ಭೂಪತ್ವಮಾಪ್ನುಯಾತ್ ॥ ೩೯ ॥

---

೩೩. ಅನಂತರ ಬ್ರಹ್ಮನು ತನ್ನ ಮಗನ ಹಿತಕ್ಕಾಗಿ ವಿಶ್ವಕರ್ಮನನ್ನು ಕರೆದು ಅವನ ಬಳಿಗೆ ಕಳುಹಿಸಿದನು.

೩೪. ವಿಶ್ವಕರ್ಮನೂ ಅಲ್ಲಿಗೆ ಬಂದು ಬ್ರಹ್ಮನು ಹೇಳಿದಂತೆ ವಾಸ್ತುಪೂಜೆಯನ್ನು ಸಾಂಗವಾಗಿ ನೆರವೇರಿಸಿದನು.

೩೫. ಕಾತ್ಯಾಯನನೂ ಆ ಪೂಜೆಯನ್ನೆಲ್ಲ ನೋಡಿ ಪ್ರಪಂಚದ ಹಿತಕ್ಕಾಗಿ ಶಾಲಾಕರ್ಮಾದಿಗಳನ್ನು ಮಾಡಿದನು.

೩೬. ದ್ವಿಜವರ್ಯರೆ! ಹೀಗೆ ಈ ಕ್ಷೇತ್ರದಲ್ಲಿ ವಾಸ್ತುಸ್ಥಾನವು ಕಲ್ಪಿತವಾಯಿತು. ಈ ಕ್ಷೇತ್ರದಲ್ಲಿರುವ ಮಾನವನು ಪಾಪಕರ್ಮಗಳಿಂದ ಮುಕ್ತನಾಗುವನು.

೩೭. ಹಾಗೆಯೇ ಮನೆ, ಶಿಲ್ಪ, ಕುಪಾದ, ಕುವಾಸ್ತು ಇವುಗಳಿಂದುಂಟಾದ ದೋಷಗಳನ್ನು ಹೊಂದುವುದಿಲ್ಲ.

೩೮. ಕಾತ್ಯಾಯನನು ಆ ಕ್ಷೇತ್ರದಲ್ಲಿ ವೈಶಾಖ ಶುದ್ಧ ತೃತೀಯಾ ರೋಹಿಣೀ ನಕ್ಷತ್ರದಲ್ಲಿ ಆ ವಾಸ್ತುಸ್ಥಾನವನ್ನು ಸ್ಥಾಪಿಸಿದನು.

೩೯. ಅಲ್ಲಿ ಬ್ರಹ್ಮನು ಹೇಳಿದ ವಿಧಿಯಂತೆ ಚೆನ್ನಾಗಿ ಪೂಜಿಸಿದವನು ರಾಜನಾಗುವನು.

ಗೃಹಂ ದೋಷಾನ್ವಿತಂ ಪ್ರಾಪ್ಯ ಶಿಲ್ಪಾದಿಭಿರುಪದ್ರುತಂ ।
ತಸ್ಯೋಪಸಂಗಮಂ ಪ್ರಾಪ್ಯ ಸಮೃದ್ಧಿಂ ಯಾತಿ ತದ್ದಿನೇ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಾಸ್ತುಪದೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ದ್ವಾತ್ರಿಂಶದುತ್ತರಶತತಮೋಽಧ್ಯಾಯಃ

---

೪೦. ದೋಷಸಹಿತವಾದುದೂ, ಶಿಲ್ಪದಿಂದ ಕೆಡಿಸಲ್ಪಟ್ಟುದೂ ಆದ ಮನೆಯನ್ನು ಹೊಂದಿದ್ದರೂ, ಆ ದಿನ ವಾಸ್ತುಸ್ಥಾನವನ್ನು ಸೇರಿದವನು ಸಂಪತ್ತಿನಿಂದ ಸಮೃದ್ಧನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಾಸ್ತುಪದೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ

## ಅಜಾಗೃಹೋತ್ಪತ್ತಿಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

ತಥಾಽನ್ಯಾಽಪಿ ಚ ತತ್ರಾಽಸ್ತಿ ದೇವತಾ ದ್ವಿಜಸತ್ತಮಾಃ ।
ಅಜಾಗೃಹೇತಿ ವಿಖ್ಯಾತಾ ಸರ್ವರೋಗಕ್ಷಯಾವಹಾ ॥ ೧ ॥
ಅಜಾಪಾಲೋ ಯದಾ ರಾಜಾ ಸರ್ವಲೋಕ ಹಿತೇ ರತಃ ।
ಅಜಾರೂಪಾಃ ಪ್ರಯಾಂತಿಸ್ಮ ವ್ಯಾಧಯಃ ಸಕಲಾ ದ್ವಿಜಾಃ ।
ತದಾ ರಾತ್ರೌ ಸಮಾನೀಯ ತಸ್ಮಿನ್‌ಸ್ಥಾನೇ ದಧಾತಿ ಸಃ ॥ ೨ ॥
ತತಸ್ತದಾಶ್ರಯಾತ್ಸ್ಥಾನಮಜಾಗೃಹಮಿತಿ ಸ್ಮೃತಂ ।
ಸರ್ವೈರ್ಜನೈರ್ಧರಾಪೃಷ್ಠೇ ದರ್ಶನಾದ್ವ್ಯಾಧಿನಾಶನಂ ॥ ೩ ॥
ತತ್ರೈಶ್ವರ್ಯಮಭೂತ್ಪೂರ್ವಂ ಯತ್ತದ್ವೋ ಬ್ರಾಹ್ಮಣಸತ್ತಮಾಃ ।
ಅಹಂ ವಃ ಕೀರ್ತಯಿಷ್ಯಾಮಿ ಶ್ರೋತವ್ಯಂ ಸುಸಮಾಹಿತೈಃ ॥ ೪ ॥
ತತ್ರಾಗತೋ ದ್ವಿಜಃ ಕಶ್ಚಿತ್ಕ್ಷೇತ್ರೇ ತಾಪಸರೂಪಧೃಕ್ ।
ತೀರ್ಥಯಾತ್ರಾ ಪ್ರಸಂಗೇನ ರಾತ್ರೌ ಪ್ರಾಪ್ತಃ ಶ್ರಮಾನ್ವಿತಃ ॥ ೫ ॥

---

## ಕನ್ನಡದ ಅನುವಾದ

### ಅಜಾಗೃಹೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಅಲ್ಲಿ ಸಮಸ್ತ ರೋಗಗಳನ್ನು ಪರಿಹರಿಸುವ ಅಜಾಗೃಹಾ ಎಂಬ ಮತ್ತೊಂದು ದೇವತೆಯಿದೆ.

೨. ಹಿಂದೆ ಸಮಸ್ತ ಜನರಿಗೆ ಹಿತವನ್ನುಂಟುಮಾಡುವ ಅಜಾಪಾಲನೆಂಬ ಓರ್ವ ದೊರೆಯಿದ್ದನು. ಅವನು ಅಜರೂಪಗಳಾದ ವ್ಯಾಧಿಗಳನ್ನು ರಾತ್ರಿಯವೇಳೆ ಆ ಸ್ಥಳದಲ್ಲಿ ಸೇರಿಸುತ್ತಿದ್ದನು.

೩. ಆ ಸ್ಥಾನವು ಅಜಗಳಿಗೆ ಆಶ್ರಯವಾದ್ದರಿಂದ ಸಕಲ ಜನರು ಅದನ್ನು ಅಜಾಗೃಹ ಎಂದು ಕರೆದರು. ಅದು ದರ್ಶನದಿಂದ ಸಮಸ್ತ ವ್ಯಾಧಿಗಳನ್ನು ನಿವಾರಿಸುವುದು.

೪. ಬ್ರಾಹ್ಮಣವರ್ಯರೆ! ಅಲ್ಲಿ ಹಿಂದೆ ನೆಲೆಸಿದ್ದ ಐಶ್ವರ್ಯವನ್ನು ನಿಮಗೆ ಹೇಳುತ್ತೇನೆ. ಸಾವಧಾನಮನಸ್ಸುಳ್ಳವರಾಗಿ ಕೇಳಿರಿ.

೫. ಅಲ್ಲಿಗೆ ಒಬ್ಬ ಮುನಿರೂಪವನ್ನು ಧರಿಸಿದ ಬ್ರಾಹ್ಮಣನು ತೀರ್ಥಯಾತ್ರೆಯ ನಿಮಿತ್ತದಿಂದ ರಾತ್ರಿಯವೇಳೆ ಆಯಾಸಗೊಂಡು ಬಂದನು.

ಅಜಾವೃಂದಮಥಾಲೋಕ್ಯ ನಿವಿಷ್ಟಂ ಸುಸುಖಾನ್ವಿತಂ ।
ರೋಮಂಥಕರ್ಮಸಂಯುಕ್ತಂ ವಿಶ್ವಸ್ತಮಕುತೋಭಯಂ ॥ ೬ ॥
ಸ ಜ್ಞಾತ್ವಾ ಮಾನುಷೇಣಾಽತ್ರ ಭವಿತವ್ಯಮಸಂಶಯಂ ।
ನ ಶೂನ್ಯಾಃ ಪಶವೋ ರಾತ್ರೌ ಸ್ಥಾಸ್ಯಂತಿ ವಿಜನೇ ವನೇ ॥ ೭ ॥
ತತಃ ಫೂತ್ಕೃತ್ಯ ಫೂತ್ಕೃತ್ಯ ದಿವಂ ಯಾವನ್ನ ಸಂದಧೇ ।
ಕಶ್ಚಿದ್ವಾಚಂ ಪ್ರಸುಪ್ತಶ್ಚ ತಾವತ್ತತ್ರೈವ ಚಿಂತಯನ್ ॥ ೮ ॥
ಅವಶ್ಯಂ ಮಾನುಷೇಣಾಽತ್ರ ಪಶೂನಾಂ ರಕ್ಷಣಾಯ ಚ ।
ಆಗಂತವ್ಯಂ ಕುತೋಽಪ್ಯಾಶು ತಸ್ಮಾತ್ತಿಷ್ಠಾಮಿ ನಿರ್ಭಯಃ ॥ ೯ ॥
ಏವಂ ತಸ್ಯ ಪ್ರಸುಪ್ತಸ್ಯ ಗತಾ ಸಾ ರಜನೀ ತತಃ ।
ತತಸ್ತ್ವರಿತವತ್ತಸ್ಯ ಸುಶ್ರಾಂತಸ್ಯ ದ್ವಿಜೋತ್ತಮಾಃ ॥ ೧೦ ॥
ಅಥ ಯಾವತ್ಪ್ರಭಾತೇ ಸ ಪ್ರಪಶ್ಯತಿ ನಿಜಾಂ ತನುಂ ।
ತಾವತ್ಕುಷ್ಠಾದಿಭೀ ರೋಗೈಃ ಸಮಂತಾತ್ಪರಿವಾರಿತಾಂ ॥ ೧೧ ॥
ಅಶಕ್ತಶ್ಚಲಿತುಂ ಸ್ಥಾನಾದಪಿ ಚೈಕಂ ಪದಂ ಕ್ವಚಿತ್ ।
ತೇಜೋಹೀನೋಽಪಿ ರೌದ್ರೇಣ ಚಿಂತಯಾಮಾಸ ವೈ ತತಃ ॥ ೧೨ ॥
ಕಿಮಿದಂ ಕಾರಣಂ ಯೇನ ಮನ್ಮೈಷಾ ಸಂಸ್ಥಿತಾ ತನುಃ ।
ಅಕಸ್ಮಾದೇವ ರೋಗೋಽಯಂ ಚಲಿತುಂ ನೈವ ಚ ಕ್ಷಮಃ ॥ ೧೩ ॥

---

೬—೭. ಅವನು ಅಲ್ಲಿ ಸುಖಿಗಳೂ, ಮೆಲಕುಹಾಕುತ್ತಿರುವುವೂ, ನಂಬಿಕೆಯಿಂದಿರುವುವೂ, ಭಯವಿಲ್ಲದಿರುವುವೂ ಆದ ಆಡುಗಳ ಸಮೂಹವನ್ನು ನೋಡಿ ಇಲ್ಲಿ ಮನುಷ್ಯನಿರಬೇಕು. ನಿರ್ಜನವಾದ ಈ ಕಾಡಿನಲ್ಲಿ ರಾತ್ರಿಯವೇಳೆ ಪಶುಗಳು ಯಾರೂ ಇಲ್ಲದೆ ವಾಸಿಸುವುದಿಲ್ಲ.

೮. ಅವನು ಆಕಾಶಕ್ಕೆ ಫೂತ್ಕಾರಮಾಡಿದಾಗ ಯಾರೂ ಮಾತಾಡದಿರಲು ಅಲ್ಲಿಯೇ ಹೀಗೆ ಚಿಂತಿಸುತ್ತ ಮಲಗಿದನು.

೯. "ನಿಶ್ಚಯವಾಗಿಯೂ ಮನುಷ್ಯನು ಎಲ್ಲಿಂದಲಾದರೂ ಪಶುಗಳ ರಕ್ಷಣೆಗಾಗಿ ಇಲ್ಲಿಗೆ ಬರಬಹುದು. ಆದುದರಿಂದ ನಿರ್ಭಯವಾಗಿ ಇಲ್ಲಿರುವೆನು."

೧೦. ಆಯಾಸಗೊಂಡ ಅವನು ಹೀಗೆ ಚಿಂತಿಸುತ್ತ ಮಲಗಲು ಆ ರಾತ್ರಿಯು ಶೀಘ್ರವಾಗಿ ಕಳೆಯಿತು.

೧೧. ಅವನು ಬೆಳಗ್ಗೆ ಎದ್ದು ತನ್ನ ದೇಹವನ್ನು ನೋಡುವಷ್ಟರಲ್ಲಿ ಅದು ಕುಷ್ಠಾದಿರೋಗಗಳಿಂದ ತುಂಬಿದ್ದಿತು.

೧೨. ಭಯಂಕರ ರೋಗದಿಂದ ಪೀಡಿತನಾದ ಅವನು ತೇಜಸ್ಸಿಲ್ಲದವನಾಗಿ ಆ ಸ್ಥಳದಿಂದ ಒಂದು ಹೆಜ್ಜೆಯನ್ನೂ ಇಡಲು ಸಮರ್ಥನಾಗಲಿಲ್ಲ.

೧೩. "ನನ್ನ ಈ ಶರೀರವು ಆಕಸ್ಮಿಕವಾಗಿ ವ್ಯಾಧಿಯನ್ನು ಹೊಂದಿ ಚಲಿಸಲಸಮರ್ಥವಾಗಲು ಕಾರಣವೇನು?"

ಏವಂ ಚಿಂತಯಮಾನಸ್ಯ ತಸ್ಯ ವಿಪ್ರಸ್ಯ ತತ್ಕ್ಷಣಾತ್ ।
ದ್ವಾದಶಾರ್ಕಪ್ರತೀಕಾಶಃ ಪುರುಷಃ ಸಮುಪಾಗತಃ ॥ ೧೪ ॥
ತಂ ಯೂಥಂ ಕಾಲಯಾಮಾಸ ತತಃ ಸಂಜ್ಞಾಭಿರಾಹ್ವಯನ್ ।
ಪೃಥಕ್ತ್ವೇನ ಸಮಾದಾಯ ಯಷ್ಟಿಂ ಸವ್ಯೇನ ಪಾಣಿನಾ ॥ ೧೫ ॥
ಅಥಾಽಪಶ್ಯತ್ಸ ತಂ ವಿಪ್ರಂ ವ್ಯಾಧಿಭಿಃ ಸರ್ವತೋ ವೃತಂ ।
ಅಶಕ್ತಂ ಚಲಿತುಂ ಕ್ವಾಽಪಿ ತತಃ ಪ್ರೋವಾಚ ಸಾದರಂ ॥ ೧೬ ॥
ಕಸ್ತ್ವಮೇವಂವಿಧಃ ಪ್ರಾಪ್ತಃ ಸ್ಥಾನೇ ಚಾಽತ್ರ ದ್ವಿಜೋತ್ತಮ ।
ನಾಽಸ್ತಿ ರಾಜ್ಯೇ ಮಮ ವ್ಯಾಧಿಃ ಕಸ್ಯಚಿತ್ಕುತ್ರಚಿತ್ ಸ್ಫುಟಂ ॥ ೧೭ ॥
ಅಜೋ ನಾಮ ನರೇಂದ್ರೋಽಹಂ ಯದಿ ತೇ ಶ್ರೋತ್ರಮಾಗತಃ ।
ವ್ಯಾಧೀಂಶ್ಚ ಛಾಗರೂಪೇಣ ರಕ್ಷಾಮಿ ಜನಕಾರಣಾತ್ ॥ ೧೮ ॥
ತಸ್ಮಾದ್ಬ್ರೂಹಿ ಶರೀರಸ್ಥೋ ಯಸ್ತೇ ವ್ಯಾಧಿರ್ವ್ಯವಸ್ಥಿತಃ ।
ಯೇನಾಽಹಂ ನಿಗ್ರಹಂ ತಸ್ಯ ಕರೋಮಿ ದ್ವಿಜಸತ್ತಮ ॥ ೧೯ ॥

ಬ್ರಾಹ್ಮಣ ಉವಾಚ:—

ತೀರ್ಥಯಾತ್ರಾಪರೋಽಹಂ ಚ ಭ್ರಮಾಮಿ ಕ್ಷಿತಿಮಂಡಲೇ ।
ಕ್ರಮೇಣಾತ್ರ ಸಮಾಯಾತಃ ಕ್ಷೇತ್ರೇಽಸ್ಮಿನ್ ಹಾಟಕೇಶ್ವರೇ ॥ ೨೦ ॥

---

೧೪. ಆ ಬ್ರಾಹ್ಮಣನು ಹೀಗೆ ಚಿಂತಿಸುತ್ತಿರಲು ದ್ವಾದಶಸೂರ್ಯರಿಗೆ ಸಮಾನನಾದ ಒಬ್ಬ ಮನುಷ್ಯನು ಅಲ್ಲಿಗೆ ಬಂದನು.

೧೫. ಅವನು ಎಡಗೈಯಿಂದ ದೊಣ್ಣೆಯನ್ನು ಹಿಡಿದುಕೊಂಡು ಸಂಜ್ಞೆಗಳಿಂದ ಆ ಹಿಂಡನ್ನು ಪ್ರತ್ಯೇಕವಾಗಿ ಕರೆದನು.

೧೬. ಅನಂತರ ಅವನು ವ್ಯಾಧಿಗ್ರಸ್ತನಾಗಿ ಎಲ್ಲಿಯೂ ಚಲಿಸಲಸಮರ್ಥನಾದ ಆ ಬ್ರಾಹ್ಮಣನನ್ನು ನೋಡಿ ಪ್ರೀತಿಯಿಂದ ಇಂತೆಂದನು.

೧೭. "ದ್ವಿಜವರ್ಯನೆ! ಈ ಸ್ಥಳಕ್ಕೆ ಈ ರೀತಿಯಾಗಿ ಬಂದ ನೀನಾರು? ನನ್ನ ರಾಜ್ಯದಲ್ಲಿ ಎಲ್ಲಿಯೂ ಯಾರಿಗೂ ವ್ಯಾಧಿಯಿರುವುದಿಲ್ಲ.

೧೮. ನಾನು ಅಜನೆಂಬ ರಾಜನು. ನೀನು ನನ್ನನ್ನು ಕೇಳಿರಬಹುದು. ಆಡಿನ ರೂಪವನ್ನು ಧರಿಸಿದ ವ್ಯಾಧಿಗಳನ್ನು ಇಲ್ಲಿ ಜನರಿಗಾಗಿ ತಡೆಯುತ್ತಿದ್ದೇನೆ.

೧೯. ಆದುದರಿಂದ ನಿನ್ನ ದೇಹದಲ್ಲಿ ಯಾವ ರೋಗವಿದೆ? ಹೇಳು. ಅದನ್ನು ನಿಗ್ರಹಿಸುವೆನು."

೨೦. ಬ್ರಾಹ್ಮಣನು ಹೇಳುತ್ತಾನೆ:—"ಮಹಾರಾಜ! ನಾನು ತೀರ್ಥಯಾತ್ರೆಗಾಗಿ ಭೂಮಿಯಲ್ಲಿ ಸಂಚರಿಸುತ್ತ ಈ ಹಾಟಕೇಶ್ವರಕ್ಷೇತ್ರಕ್ಕೆ ಬಂದೆನು.

ನಿಶಾವಕ್ತ್ರೇ ನೃಪಶ್ರೇಷ್ಠ ವಾಸಃ ಸಂಚಿಂತಿತೋ ಮಯಾ ।
ದೃಷ್ಟ್ವಾಮೂಂಶ್ಚ ಪಶೂನ್‌ಭೂಪ ಮಾನುಷಂ ಭಾವ್ಯಮೇವ ಹಿ ॥ ೨೧ ॥
ತತಶ್ಚಾಽತ್ರ ಪ್ರಸುಪ್ತೋಽಹಂ ಪಶೂನಾಮಂತಿಕೇ ನೃಪ ॥ ೨೨ ॥
ಅಥ ಯಾವತ್ಪ್ರಭಾತೇಽಹಂ ಪ್ರಪಶ್ಯಾಮಿ ನಿಜಾಂ ತನುಂ ।
ತಾವತ್ಕುಷ್ಠಾದಿರೋಗೈಶ್ಚ ಸಮಂತಾತ್ಪರಿವಾರಿತಾಂ ॥ ೨೩ ॥
ನಾನ್ಯತ್ಕಿಂಚಿನ್ನೃಪಶ್ರೇಷ್ಠ ಕಾರಣಂ ವೇದ್ಮಿ ತತ್ತ್ವತಃ ।
ಕಿಮೇತೇನ ನೃಪಶ್ರೇಷ್ಠ ಭೂಯೋ ಭೂಯಃ ಪ್ರಜಲ್ಪಿತಾ ।
ಬಹುತ್ವಾತ್ಕುರು ತಸ್ಮಾನ್ಮೇ ಯಥಾ ಸ್ಯಾನ್ನೀರುಜಾ ತನುಃ ॥ ೨೪ ॥
ತತಸ್ತೇ ವ್ಯಾಧಯಃ ಪ್ರೋಕ್ತಾ ಅಜಾಪಾಲೇನ ಭೂಭುಜಾ ।
ಕೇನಾಜ್ಞಾ ಖಂಡಿತಾ ಮೇಽದ್ಯ ಕೋ ವಧ್ಯಃ ಸಾಂಪ್ರತಂ ಮಮ ॥ ೨೫ ॥

ವ್ಯಾಧಯ ಊಚುಃ:—

ಮಾ ಕೋಪಂ ಕುರು ಭೂಪಾಲ ಕೃತ್ಯೇಽಸ್ಮಿಂಸ್ತ್ವಂ ಕಥಂಚನ ।
ಯಸ್ಮಾದೇಷ ದ್ವಿಜೋ ವಿಷ್ಟಃ ಸಾಂಪ್ರತಂ ವ್ಯಾಧಿಭಿಸ್ತ್ರಿಭಿಃ ॥ ೨೬ ॥
ರಾಜಯಕ್ಷ್ಮಾ ಚ ಕುಷ್ಠಂ ಚ ಪಾಮಾ ಚ ದ್ವಿಜಸತ್ತಮ ।
ಏತೇ ಸಂಸರ್ಗಜಾ ದೋಷಾಸ್ತ್ರಯೋಽಪ್ಯಾಪಿ ಪ್ರಕೀರ್ತಿತಾಃ ॥ ೨೭ ॥

---

೨೧—೨೨. ಸಾಯಂಕಾಲ ಇಲ್ಲಿ ವಾಸಮಾಡಬೇಕೆಂದು ಆಲೋಚಿಸಿ ಈ ಪಶುಗಳನ್ನು ನೋಡಿ ಇವುಗಳೊಡನೆ ಮನುಷ್ಯನಿರಬೇಕೆಂದು ಅವುಗಳ ಜತೆಯಲ್ಲಿಯೇ ಮಲಗಿದೆನು.

೨೩. ಬಳಿಕ ಬೆಳಗ್ಗೆ ಎದ್ದು ನನ್ನ ಶರೀರವನ್ನು ನೋಡಲು ಅದು ಕುಷ್ಠಾದಿ ರೋಗಗಳಿಂದ ಪೀಡಿತವಾಗಿದ್ದಿತು.

೨೪. ಮಹಾರಾಜ! ನಾನು ನಿಜವಾಗಿಯೂ ಬೇರೆ ಯಾವ ಕಾರಣವನ್ನೂ ತಿಳಿಯುವುದಿಲ್ಲ. ಪುನಃ ಪುನಃ ಈ ಮಾತಿನಿಂದ ಏನು ಪ್ರಯೋಜನ, ವ್ಯಾಧಿಯು ಹೆಚ್ಚಿರುವುದರಿಂದ ನನ್ನೀ ಶರೀರವನ್ನು ರೋಗವಿಲ್ಲದಂತೆ ಮಾಡು.”

೨೫. ಅನಂತರ ಅಜಾಪಾಲನು ವ್ಯಾಧಿಗಳನ್ನು ಕುರಿತು, “ನನ್ನ ಆಜ್ಞೆಯನ್ನು ಮೀರಿದವರಾರು? ಈಗ ನಾನು ಯಾರನ್ನು ಕೊಲ್ಲಬೇಕು” ಎಂದು ಕೇಳಿದನು.

೨೬. ವ್ಯಾಧಿಗಳು ಹೇಳುತ್ತವೆ:—“ಅರಸ! ಈ ಬ್ರಾಹ್ಮಣನು ಮೂರು ವ್ಯಾಧಿಗಳಿಂದ ಪೀಡಿತನಾಗಿರುವುದರಿಂದ ಈ ವಿಷಯದಲ್ಲಿ ನೀನು ಕೋಪಿಸಿಕೊಳ್ಳ ಬೇಡ.

೨೭. ಕ್ಷಯ, ಕುಷ್ಠ, ಕಜ್ಜಿ ಈ ಮೂರು ರೋಗಗಳು ಸಂಸರ್ಗದಿಂದ ಉಂಟಾಗುವುವು ಎಂದು ಹೇಳಲ್ಪಟ್ಟಿವೆ.

ಏತೇಷಾಂ ಪ್ರಥಮಂ ಯೌ ದ್ವೌ ನಿವೃತ್ತಿರಹಿತೌ ಸ್ಮೃತೌ ।
ಔಷಧೈಶ್ಚೈವ ಮಂತ್ರೈಶ್ಚ ಶೇಷಾ ನಾಶಂ ವ್ರಜಂತಿ ಚ ॥ ೨೮ ॥
ಆಭ್ಯಾಂ ಚ ಬ್ರಹ್ಮಶಾಪೋಽಸ್ತಿ ಯೇನ ನಾಽಸ್ತಿ ನಿವರ್ತನಂ ।
ತಸ್ಮಾದತ್ರ ನೃಪಶ್ರೇಷ್ಠ ಕುರು ಯತ್ತೇ ಕ್ಷಮಂ ಭವೇತ್ ॥ ೨೯ ॥
ಏತೇನ ಬ್ರಾಹ್ಮಣೇನೈತೇ ಸ್ಪೃಷ್ಟಾ ರಾಜಂಸ್ತ್ರಯೋಽಪಿ ಚ ।
ತಸ್ಮಾತ್ತಾವತ್ತನುಂ ಚಾಽಸ್ಯಾವಿಶತಾಂ ತಾವಸಂಶಯಂ ॥ ೩೦ ॥
ಅಪರಂ ಶೃಣು ಭೂಪಾಲ ವಚನಂ ನೋ ಮುಖಾಚ್ಚ್ಯುತಂ ।
ಹಿತಾಯ ಸರ್ವಜಂತೂನಾಂ ತವ ಶ್ರೇಯೋ ವಿವೃದ್ಧಯೇ ॥ ೩೧ ॥
ಯತ್ರ ಸ್ಥಾನಂ ಚಿರಂ ತತ್ರ ಮೇದಿನ್ಯಾಂ ವಿಹಿತಂ ನೃಪ ।
ಪುರೀಷಂ ಚ ಸಮಾವಿದ್ಧಾ ತೇನೈಷಾ ಮೇದಿನೀ ದ್ರುತಂ ॥ ೩೨ ॥
ಕಾಲಾಂತರೇಽಪಿ ಯೇ ಮರ್ತ್ಯಾ ಭೂಮ್ಯಾಮಸ್ಯಾಂ ಸಮಾಗತಾಃ ।
ಭೂಮೇಃ ಸ್ಪರ್ಶಂ ಕರಿಷ್ಯಂತಿ ತೇ ಭವಿಷ್ಯಂತಿ ಚೇದೃಶಾಃ ॥ ೩೩ ॥
ವಯಂ ಶೇಷಾ ಮಹಾರಾಜ ವ್ಯಾಧಯೋ ಯೇ ವ್ಯವಸ್ಥಿತಾಃ ।
ತ್ವಯಾ ಮುಕ್ತಾ ಭವಿಷ್ಯಾಮೋ ಮಂತ್ರೌಷಧವಶಾನುಗಾಃ ॥ ೩೪ ॥
ನೈತೌ ಪುನಸ್ತು ದುರ್ಗ್ರಾಹ್ಯೌ ಬ್ರಹ್ಮಶಾಪಸಮುದ್ಭವೌ ॥ ೩೫ ॥

---

೨೮. ಇವುಗಳಲ್ಲಿ ಮೊದಲನೆಯ ಎರಡು ರೋಗಗಳಿಗೆ ಔಷಧದಿಂದಲೂ, ಮಂತ್ರಗಳಿಂದಲೂ ಪರಿಹಾರವಿಲ್ಲ. ಮೂರನೆಯದು ಪರಿಹಾರವಾಗುವುದು.

೨೯. ಇವುಗಳಿಗೆ ಬ್ರಹ್ಮಶಾಪವಿರುವುದರಿಂದ ಇವು ಪರಿಹಾರವಾಗುವುದಿಲ್ಲ. ಆದುದರಿಂದ ಈ ವಿಷಯದಲ್ಲಿ ಉಚಿತವಾದುದನ್ನು ಮಾಡು.

೩೦. ದೊರೆಯೆ! ಈ ಬ್ರಾಹ್ಮಣನು ಈ ಮೂರು ರೋಗಗಳನ್ನೂ ಮುಟ್ಟಿರುವುದರಿಂದ ಇವು ಇವನ ಶರೀರವನ್ನು ಪ್ರವೇಶಿಸಿದುವು.

೩೧. ಸಕಲ ಜಂತುಗಳ ಹಿತಕ್ಕಾಗಿಯೂ, ನಿನ್ನ ಶ್ರೇಯಸ್ಸಿಗಾಗಿಯೂ ನಾವು ಹೇಳುವ ಮತ್ತೊಂದು ಮಾತನ್ನು ಕೇಳು.

೩೨–೩೩. ಅಮೇಧ್ಯದಿಂದ ವ್ಯಾಪ್ತವಾದ ಭೂಮಿಯನ್ನು ಕಾಲಾಂತರದಲ್ಲಿ ಸ್ಪರ್ಶಮಾಡಿದ ಮನುಷ್ಯರೂ ಇಂತಹ ವ್ಯಾಧಿಗಳಿಂದ ಪೀಡಿತರಾಗುವರು.

೩೪. ಮಹಾರಾಜ! ಉಳಿದ ವ್ಯಾಧಿಗಳಾದ ನಾವೆಲ್ಲ ನಿನ್ನಿಂದ ಬಿಡಲ್ಪಟ್ಟವರಾಗಿ ಮಂತ್ರ ಮತ್ತು ಔಷಧಗಳಿಗೆ ಅಧೀನರಾಗುವೆವು.

೩೫. ಬ್ರಾಹ್ಮಣ ಶಾಪದಿಂದ ಗ್ರಸ್ತವಾದ ಕ್ಷಯ ಮತ್ತು ಕುಷ್ಠರೋಗಗಳು ಯಾವುದಕ್ಕೂ ವಶವಾಗುವುದಿಲ್ಲ.”

ತಚ್ಛ್ರುತ್ವಾ ಪಾರ್ಥಿವಃ ಸೋಽಪಿ ತಸ್ಮಿನ್‌ಸ್ಥಾನೇ ವ್ಯವಸ್ಥಿತಃ ।
ತಂ ಬ್ರಾಹ್ಮಣಂ ಪುನಃ ಪ್ರಾಹ ನ ಭೇತವ್ಯಂ ಕದಾಚನ ॥ ೩೬ ॥
ಅಹಂ ತ್ವಾಂ ರಕ್ಷಯಿಷ್ಯಾಮಿ ವ್ಯಾಧೇರಸ್ಮಾತ್ಸುದಾರುಣಾತ್ ।
ಅತ್ರ ತಸ್ಮಾತ್ಪ್ರತೀಕ್ಷಸ್ವ ಕಂಚಿತ್ಕಾಲಂ ಮಮಾಜ್ಞಯಾ ॥ ೩೭ ॥
ಏವಮುಕ್ತ್ವಾ ತತಶ್ಚಕ್ರೇ ತದರ್ಥಂ ಸುಮಹತ್ತಪಃ ।
ಆರಾಧಯನ್ ಪ್ರಭಕ್ತ್ಯಾ ಚ ಸಮ್ಯಕ್ತಾಂ ಕ್ಷೇತ್ರದೇವತಾಂ ॥ ೩೮ ॥
ಮುಂಡೇನಾಥರ್ವಶೀರ್ಷೇಣ ದಿವಾರಾತ್ರಮತಂದ್ರಿತಃ ।
ಕ್ಷೇತ್ರಪಾಲೋತ್ಥ ಸೂಕ್ತೇನ ವಾಸ್ತುಸೂಕ್ತೇನ ಚ ದ್ವಿಜಾಃ ॥ ೩೯ ॥
ಸಿದ್ಧಾರ್ಥೈರ್ರಕ್ತಪುಷ್ಪೈಶ್ಚ ಗುಗ್ಗುಲೇನ ಸುಧೂಪಿತೈಃ ।
ಹೋಮಂ ಕುರ್ವನ್ನೃಪಃ ಪಶ್ಚಾನ್ನೀಲರುದ್ರಾನ್ವಿಶೇಷತಃ ॥ ೪೦ ॥
ಅಥ ನಕ್ತಾಽವಸಾನೇನ ತಸ್ಯ ಹೋಮಸ್ಯ ಚೋತ್ಥಿತಾ ।
ಭಿತ್ವಾ ಧರಾತಲಂ ದೇವೀ ಮಂತ್ರಾಕೃಷ್ಟಾ ವಿನಿರ್ಗತಾ ॥ ೪೧ ॥
ದೇವತಾ ತಸ್ಯ ಕ್ಷೇತ್ರಸ್ಯ ತತಃ ಪ್ರೋವಾಚ ತಂ ನೃಪಂ ॥ ೪೨ ॥
ಏಕಾಽಹಂ ತವ ಭೂಪಾಲ ಹೋಮಸ್ಯಾಽಸ್ಯ ಪ್ರಭಾವತಃ ।
ವಿನಿರ್ಗತಾ ಧರಾಪೃಷ್ಠಾತ್ಕ್ಷೇತ್ರಸ್ಯಾಸ್ಯಾಧಿಪಾ ಸ್ಮೃತಾ ॥ ೪೩ ॥

---

೩೬–೩೭. ಅದನ್ನು ಕೇಳಿ ಆ ದೊರೆಯು ಆ ಸ್ಥಳದಲ್ಲಿಯೇ ಇದ್ದು ಆ ಬ್ರಾಹ್ಮಣನನ್ನು ಕುರಿತು ಇಂತೆಂದನು. "ಎಲೈ ದ್ವಿಜನೆ! ನೀನು ಹೆದರಬೇಡ. ನಾನು ನಿನ್ನನ್ನು ಭಯಂಕರವಾದ ಈ ವ್ಯಾಧಿಯಿಂದ ರಕ್ಷಿಸುವೆನು. ಆದುದರಿಂದ ಇಲ್ಲಿಯೇ ನೀನು ನನ್ನ ಅಪ್ಪಣೆಯಿಂದ ಕೆಲವುಕಾಲ ನಿರೀಕ್ಷಿಸು."

೩೮–೪೦. ಆ ದೊರೆಯು ಹೀಗೆ ಹೇಳಿ ಆ ಕ್ಷೇತ್ರದೇವತೆಯನ್ನು ಹಗಲು ರಾತ್ರಿ ಆಲಸ್ಯವಿಲ್ಲದೆ ಅಥರ್ವಣ ವೇದದ ಮುಂಡಕೋಪನಿಷತ್ತಿನಿಂದಲೂ, ಕ್ಷೇತ್ರಪಾಲ ವಾಸ್ತು ಸೂಕ್ತಗಳಿಂದಲೂ, ಬಿಳಿಯ ಸಾಸಿನೆ, ಕೆಂಪು ಪುಷ್ಪ ಗಳಿಂದಲೂ, ಗುಗ್ಗುಲು ಧೂಪಗಳಿಂದಲೂ ಪೂಜಿಸುತ್ತ ನೀಲರುದ್ರರನ್ನುದ್ದೇಶಿಸಿ ಹೋಮ ಮಾಡುತ್ತ ಮಹಾ ತಪಸ್ಸನ್ನಾಚರಿಸಿದನು.

೪೧–೪೨. ತರುವಾಯ ರಾತ್ರಿಯ ಕೊನೆಯಲ್ಲಿ ಹೋಮದ ಪ್ರಭಾವದಿಂದ ಮಂತ್ರಗಳಿಂದ ಸೆಳೆಯಲ್ಪಟ್ಟ ಆ ಕ್ಷೇತ್ರದ ದೇವತೆಯಾದ ದೇವಿಯು ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆ ಬಂದು ದೊರೆಯನ್ನು ಕುರಿತು ಇಂತೆಂದಳು.

೪೩. "ಮಹಾರಾಜ! ಈ ಕ್ಷೇತ್ರದ ಅಧಿದೇವತೆಯಾದ ನಾನು ನಿನ್ನ ಹೋಮದ ಪ್ರಭಾವದಿಂದ ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆ ಬಂದಿರುತ್ತೇನೆ.

ತಸ್ಮಾದ್ವದ ಮಹಾಭಾಗ ಯತ್ತೇ ಕೃತ್ಯಂ ಕರೋಮ್ಯಹಂ ।
ಪರಾಂ ತುಷ್ಟಿಮನುಪ್ರಾಪ್ತಾ ತಸ್ಮಾದ್ಬ್ರೂಹಿ ಯದೀಪ್ಸಿತಂ ॥ ೪೪ ॥

ರಾಜೋವಾಚ :—

ಅತ್ರ ಸ್ಥಾನೇ ಸದಾ ಸ್ಥೇಯಂ ತ್ವಯಾ ದೇವಿ ವಿಶೇಷತಃ ।
ವ್ಯಾಧಿಸಂಸರ್ಗಜೋ ದೋಷೋ ಭೂಮೇರಸ್ಯಾ ಯಥಾ ವ್ರಜೇತ್ ॥ ೪೫ ॥
ಅದ್ಯ ಪ್ರಭೃತಿ ದೇವೇಶಿ ತಥಾ ನೀತಿರ್ವಿಧೀಯತಾಂ ।
ನೋಚೇದಸ್ಯಾಃ ಪ್ರಸಂಗೇನ ಪ್ರಭವಿಷ್ಯಂತಿ ಮಾನವಾಃ ॥ ೪೬ ॥
ವ್ಯಾಧಿಗ್ರಸ್ತಾ ಯಥಾ ವಿಪ್ರೋ ಯೋಽಯಂ ಸಂದೃಶ್ಯತೇ ಪುರಃ ।
ಮಯಾಽತ್ರ ವ್ಯಾಧಯಃ ಕಾಲಂ ಚಿರಂ ಸಂಸ್ಥಾಪಿತಾ ಯತಃ ।
ಭವಿಷ್ಯತಿ ಚ ಮೇ ದೋಷೋ ನೋಚೇದ್ದೇವಿ ನ ಸಂಶಯಃ ॥ ೪೭ ॥
ತಥಾಽಯಂ ಬ್ರಾಹ್ಮಣೋ ರೋಗಾತ್ತ್ವತ್ಪ್ರಸಾದಾತ್ಸುರೇಶ್ವರಿ ।
ಮುಕ್ತೋ ಭವತು ಮೇದಿನ್ಯಾಮತ್ರ ಸ್ಥೇಯಂ ಸದಾ ತ್ವಯಾ ॥ ೪೮ ॥

ಕ್ಷೇತ್ರದೇವತೋವಾಚ :—

ಏತತ್ಸ್ಥಾನಂ ಮಯಾ ಸರ್ವಂ ವ್ಯಾಧಿದೋಷವಿವರ್ಜಿತಂ ।
ವಿಹಿತಂ ಸರ್ವದೈವಾಽತ್ರ ಸ್ಥಾಸ್ಯೇಽಹಮಿಹ ಸರ್ವದಾ ॥ ೪೯ ॥
ಸಾಂಪ್ರತಂ ಯೋಽತ್ರ ಮೇ ಸ್ಥಾನೇ ವ್ಯಾಧಿಗ್ರಸ್ತಃ ಸಮೇಷ್ಯತಿ ।
ಪೂಜಯಿಷ್ಯತಿ ಮಾಂ ಭಕ್ತ್ಯಾ ನೀರೋಗಃ ಸ ಭವಿಷ್ಯತಿ ॥ ೫೦ ॥

---

೪೪. ಭಾಗ್ಯಶಾಲಿಯೆ! ಆದುದರಿಂದ ನಿನ್ನ ಯಾವ ಕೆಲಸವನ್ನು ನಾನು ಮಾಡಲಿ. ಅತ್ಯಂತ ಸಂತುಷ್ಟಳಾಗಿದ್ದೇನೆ. ನಿನ್ನ ಇಷ್ಟಾರ್ಥವನ್ನು ಹೇಳು."

೪೫–೪೭. ರಾಜನು ಹೇಳುತ್ತಾನೆ:—ದೇವಿ! ನೀನು ಇಲ್ಲಿ ಯಾವಾಗಲೂ ನೆಲೆಸಿರು. ಈ ದಿನ ಮೊದಲ್ಗೊಂಡು ಈ ಭೂಮಿಗೆ ವ್ಯಾಧಿಸಂಬಂಧವಾದ ದೋಷವು ಸಂಭವಿಸದಂತೆ ಮಾಡು, ಹಾಗೆ ಮಾಡದಿದ್ದರೆ ಇದರ ಸಂಬಂಧದಿಂದ ಮನುಷ್ಯರು ಮುಂದೆ ಕಾಣುತ್ತಿರುವ ಈ ಬ್ರಾಹ್ಮಣನಂತೆ ವ್ಯಾಧಿಗ್ರಸ್ತರಾಗುವರು. ನಾನು ಬಹುಕಾಲದಿಂದ ವ್ಯಾಧಿಗಳನ್ನು ಇಲ್ಲಿ ಸ್ಥಾಪಿಸಿರುವುದರಿಂದ ನನಗೆ ದೋಷವು ಉಂಟಾಗುವುದು.

೪೮. ಹಾಗೆಯೇ ಈ ಬ್ರಾಹ್ಮಣನು ನಿನ್ನ ಅನುಗ್ರಹದಿಂದ ರೋಗಮುಕ್ತನಾಗಿ ಇಲ್ಲಿಯೇ ಯಾವಾಗಲೂ ಇರಲಿ.

೪೯. ಕ್ಷೇತ್ರದೇವತೆಯು ಹೇಳುತ್ತಾಳೆ:—ನಾನು ಈ ಸ್ಥಳವನ್ನು ರೋಗದೋಷವಿಲ್ಲದಂತೆ ಮಾಡಿರುವೆನು. ಯಾವಾಗಲೂ ಇಲ್ಲಿಯೇ ಇರುವೆನು.

೫೦. ಈ ಸ್ಥಳಕ್ಕೆ ರೋಗಪೀಡಿತನು ಬಂದು ನನ್ನನ್ನು ಪೂಜಿಸಿದರೆ ಅವನು ರೋಗಮುಕ್ತನಾಗುವನು.

ತಸ್ಮಾದದ್ಯ ದ್ವಿಜೇಂದ್ರೋಽಯಂ ಮಾಂ ಪೂಜಯತು ಸಾದರಂ ।
ಭಕ್ತ್ಯಾ ಪರಮಯಾ ಯುಕ್ತಃ ಶುಚಿರ್ಭೂತ್ವಾ ಸಮಾಹಿತಃ ॥ ೫೧ ॥
ಅತ್ರಕ್ಷೇತ್ರೇ ಪರಾಽನ್ಯಾಽಸ್ತಿ ವಿಖ್ಯಾತಾ ಚಂದ್ರಕೂಪಿಕಾ ।
ತಸ್ಯಾಂ ಸ್ನಾತು ಯಥಾ ನ್ಯಾಯಂ ನಿತ್ಯಮೇವ ಮಹೀಪತೇ ॥ ೫೨ ॥
ದಕ್ಷಶಾಪ ಪ್ರಶಪ್ತೇನ ಯಾ ಚಂದ್ರೇಣ ಪುರಾ ಕೃತಾ ।
ಸ್ವಸ್ನಾನಾರ್ಥಂ ಕ್ಷಯವ್ಯಾಧಿಪ್ರಗ್ರಸ್ತೇನ ಮಹಾತ್ಮನಾ ॥ ೫೩ ॥
ತಥಾ ಖಂಡಶಿಲಾ ನಾಮ ದೇವತಾ ಚಾಽತ್ರ ತಿಷ್ಠತಿ ।
ಸೌಭಾಗ್ಯಕೂಪಿಕಾ ಸ್ನಾನಂ ಕೃತ್ವಾ ತಾಂ ಚ ಪ್ರಪಶ್ಯತು ॥ ೫೪ ॥
ಯಾ ಕೃತಾ ಕಾಮದೇವೇನ ಕುಷ್ಠಗ್ರಸ್ತೇನ ವೈ ಪುರಾ ।
ಸ್ನಪನಾರ್ಥಂ ಚ ಕುಷ್ಠಸ್ಯ ವಿನಾಶಾಯ ಚ ಸಾದರಂ ॥ ೫೫ ॥
ತಥಾ ಚಾಽಪ್ಸರಸಾಂ ಕುಂಡಮತ್ರಾಽಸ್ತಿ ನೃಪಸತ್ತಮ ।
ತತ್ರ ಸ್ನಾತ್ವಾ ರವೇರಹ್ನಿ ತತಃ ಪಾಮಾ ಪ್ರಶಾಮ್ಯತಿ ॥ ೫೬ ॥

ಸೂತ ಉವಾಚ :—

ತತಃ ಸ ಬ್ರಾಹ್ಮಣಃ ಪ್ರಾಪ್ಯ ಸುಪುಣ್ಯಾಂ ಚಂದ್ರಕೂಪಿಕಾಂ ।
ಸ್ನಾನಂ ಕೃತ್ವಾ ಚ ತಾಂ ದೇವೀಂ ಪೂಜಯಾಮಾಸ ಭಕ್ತಿತಃ ।
ಯಾವನ್ಮಾಸಂ ತತೋ ಮುಕ್ತಃ ಸತ್ವರಂ ರಾಜಯಕ್ಷ್ಮಣಾ ॥ ೫೭ ॥

---

೫೧. ಆದುದರಿಂದ ಈ ಬ್ರಾಹ್ಮಣನು ಈಗ ಶುದ್ಧನಾಗಿ ಅತ್ಯಂತ ಭಕ್ತಿಯಿಂದ ನನ್ನನ್ನು ಪೂಜಿಸಲಿ.

೫೨. ಮಹಾರಾಜ! ಈ ಕ್ಷೇತ್ರದಲ್ಲಿ ಪ್ರಸಿದ್ಧವಾದ ಮತ್ತೊಂದು ಚಂದ್ರಕೂಪಿಕೆಯು ಇದೆ. ಇವನು ಅಲ್ಲಿ ನಿತ್ಯವೂ ಸ್ನಾನಮಾಡಲಿ.

೫೩. ಹಿಂದೆ ದಕ್ಷನಿಂದ ಶಾಪಗ್ರಸ್ತನಾಗಿ ವ್ಯಾಧಿಪೀಡಿತನಾದ ಚಂದ್ರನು ಇಲ್ಲಿ ತನ್ನ ಸ್ನಾನಕ್ಕಾಗಿ ಆ ಚಂದ್ರಕೂಪಿಕೆಯನ್ನು ನಿರ್ಮಿಸಿದ್ದಾನೆ.

೫೪. ಹಾಗೆಯೇ ಇಲ್ಲಿ ಖಂಡಶಿಲಾ ಎಂಬ ದೇವಿಯು ಇದ್ದಾಳೆ. ಸೌಭಾಗ್ಯ ಕೂಪಿಕೆಯಲ್ಲಿ ಮಿಂದು ಅವಳನ್ನೂ ದರ್ಶನಮಾಡಲಿ.

೫೫. ಇದನ್ನು ಹಿಂದೆ ಕುಷ್ಠರೋಗದಿಂದ ಪೀಡಿತನಾದ ಮನ್ಮಥನು ಸ್ನಾನಕ್ಕಾಗಿಯೂ, ಕುಷ್ಠರೋಗದ ಪರಿಹಾರಕ್ಕಾಗಿಯೂ ನಿರ್ಮಿಸಿದನು.

೫೬. ನೃಪೇಂದ್ರ! ಇಲ್ಲಿ ಅಪ್ಸರ ಕುಂಡವಿದೆ. ಇಲ್ಲಿ ಭಾನುವಾರದ ದಿನ ಮಿಂದರೆ ಕಜ್ಜಿಯು ಪರಿಹಾರವಾಗುವುದು.

೫೭. ಸೂತನು ಹೇಳುತ್ತಾನೆ:—ಅನಂತರ ಆ ಬ್ರಾಹ್ಮಣನು ಒಂದು ತಿಂಗಳು ಚಂದ್ರಕೂಪಿಕೆಯಲ್ಲಿ ಮಿಂದು ಭಕ್ತಿಯಿಂದ ದೇವಿಯನ್ನು ಪೂಜಿಸಿ ಕೂಡಲೆ ಕ್ಷಯರೋಗದಿಂದ ಮುಕ್ತನಾದನು.

ತತಃ ಸೌಭಾಗ್ಯಕೂಪೀಂ ತಾಂ ದೃಷ್ಟ್ವಾ ಕಾಮವಿನಿರ್ಮಿತಾಂ ।
ತಥಾ ಸ್ನಾನಂ ವಿಧಾಯಾಽಥ ಪಶ್ಯನ್ ಖಂಡಶಿಲಾಂ ಚ ತಾಂ ॥ ೫೮ ॥
ತದ್ವನ್ಮಾಸೇನ ನಿರ್ಮುಕ್ತಃ ಕುಷ್ಠೇನ ದ್ವಿಜಸತ್ತಮಾಃ ।
ತಸ್ಯಾ ದೇವ್ಯಾಃ ಪ್ರಭಾವೇನ ಕೂಪಿಕಾಯಾಂ ವಿಶೇಷತಃ ॥ ೫೯ ॥
ತತಶ್ಚಾಪ್ಸರಸಾಂ ಕುಂಡೇ ಸ್ನಾತ್ವೈಕಂ ರವಿ ವಾಸರಂ ।
ಪಾಮಯಾ ಸಂಪರಿತ್ಯಕ್ತೋ ಬುದ್ಧ್ಯೇವ ವಿಷಯಾತ್ಮಕಃ ॥ ೬೦ ॥
ತತಃ ಸ ಬ್ರಾಹ್ಮಣೋ ಜಾತೋ ದ್ವಾದಶಾರ್ಕಸಮಪ್ರಭಃ ।
ತೋಷೇಣ ಮಹತಾಯುಕ್ತೋ ದತ್ತ್ವಾಶೀಸ್ತಸ್ಯ ಭೂಪತೇಃ ॥ ೬೧ ॥
ಪ್ರಿಯಯಾ ವಾಂಛಿತಂ ದೇಶಮನುಜ್ಞಾತಶ್ಚ ಭೂಭುಜಾ ।
ದೇವತಾಭ್ಯಾಂ ಪ್ರಣಾಮಂ ಚ ತಾಭ್ಯಾಂ ಕೃತ್ವಾ ಪುನಃ ಪುನಃ ॥ ೬೨ ॥
ಸೋಽಪಿ ರಾಜಾ ಸ ದೋಷಾಂಸ್ತಾನಜಾರೂಪಾನ್ವಿಲೋಕ್ಯ ಚ ।
ಸ್ವಸ್ಯೈವ ಬ್ರಾಹ್ಮಣಂ ದೃಷ್ಟ್ವಾ ತಂ ತಥಾ ಸಂಪ್ರಹರ್ಷಿತಃ ॥ ೬೩ ॥
ಸ್ವಯಂ ಚ ಪ್ರಿಯಯಾ ತತ್ರ ಯತ್ರಸ್ಥೋ ಹಾಟಕೇಶ್ವರಃ ।
ತೇನೈವ ಚ ಶರೀರೇಣ ನಿಜಕಾಂತಾಸಮನ್ವಿತಃ ॥ ೬೪ ॥
ಅಜಾಗೃಹೇ ಸ್ಥಿತಾ ಯಸ್ಮಾತ್ತಾಸ್ಯ ದೇವೀ ಕ್ಷೇತ್ರದೇವತಾ ।
ಅಜಾಗೃಹಾ ತತಃ ಖ್ಯಾತಾ ಸರ್ವತ್ರೈವ ದ್ವಿಜೋತ್ತಮಾಃ ॥ ೬೫ ॥

---

೫೮–೫೯. ದ್ವಿಜವರ್ಯರೆ! ಅನಂತರ ಅವನು ಒಂದು ತಿಂಗಳು ಕಾಮನು ನಿರ್ಮಿಸಿದ ಸೌಭಾಗ್ಯಕೂಪಿಕೆಯನ್ನು ನೋಡಿ ಅಲ್ಲಿ ಮಿಂದು ಖಂಡಶಿಲೆಯನ್ನು ದರ್ಶನಮಾಡಿ ಆ ದೇವಿಯ ಅನುಗ್ರಹದಿಂದಲೂ, ಕೂಪಿಕೆಯ ಪ್ರಭಾವದಿಂದಲೂ ಕುಷ್ಠರೋಗದಿಂದ ಮುಕ್ತನಾದನು.

೬೦. ತರುವಾಯ ಭಾನುವಾರದ ದಿನ ಅಪ್ಸರಕುಂಡದಲ್ಲಿ ಮಿಂದು ವಿಷಯ ಲಂಪಟನು ಬುದ್ಧಿಯಿಂದ ಬಿಡಲ್ಪಡುವಂತೆ ಕಜ್ಜಿಯಿಂದ ಬಿಡಲ್ಪಟ್ಟನು.

೬೧–೬೨. ಬಳಿಕ ದ್ವಾದಶಾದಿತ್ಯರಂತೆ ಪ್ರಕಾಶಮಾನನಾದ ಆ ಬ್ರಾಹ್ಮಣನು ಅತ್ಯಂತ ಸಂತೋಷಭರಿತನಾಗಿ ದೊರೆಗೆ ಆಶೀರ್ವಾದವನ್ನಿತ್ತು ಆ ದೇವತೆಗಳಿಗೆ ನಮಸ್ಕಾರ ಮಾಡಿ ರಾಜನ ಅನುಮತಿಯಿಂದ ತನಗೆ ಇಷ್ಟಬಂದ ದೇಶಕ್ಕೆ ತೆರಳಿದನು.

೬೩. ಆ ಅಜಾಪಾಲನು ಅಜಾರೂಪಿಗಳಾದ ಆ ವ್ಯಾಧಿಗಳನ್ನೂ, ಆ ಬ್ರಾಹ್ಮಣನನ್ನೂ ನೋಡಿ ಸಂತೋಷಗೊಂಡನು.

೬೪. ತಾನೂ ಪತ್ನಿಯೊಡನೆ ಆ ಶರೀರದಿಂದಲೇ ಹಾಟಕೇಶ್ವರನೆಡೆಗೆ ಹೋದನು.

೬೫. ದ್ವಿಜವರ್ಯರೆ! ಆ ಕ್ಷೇತ್ರದೇವತೆಯು ಅಜಾಗೃಹದಲ್ಲಿ ಇದ್ದುದ ರಿಂದ ಎಲ್ಲೆಡೆಯಲ್ಲಿಯೂ ಅಜಾಗೃಹಾ ಎಂದು ವಿಖ್ಯಾತಳಾದಳು.

ಅದ್ಯಾಽಪಿ ಯಕ್ಷ್ಮಣಾ ಗ್ರಸ್ತೋ ಯಸ್ತಾಂ ಪೂಜಯತೇ ನರಃ ।
ತೇನೈವ ವಿಧಿನಾ ಸಮ್ಯಕ್ಸ ನೀರೋಗೋ ದ್ರುತಂ ಭವೇತ್ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಜಾಗೃಹೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ

---

೬೬. ಈಗಲೂ ಕ್ಷಯರೋಗಿಯು ಆ ವಿಧಿಯಿಂದ ಚೆನ್ನಾಗಿ ಆ ಅಜಾಗೃಹೆಯನ್ನು ಪೂಜಿಸಿದರೆ ರೋಗಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಜಾಗೃಹೋತ್ಪತ್ತಿಮಾಹಾತ್ಮ್ಯವರ್ಣನ" ವೆಂಬ
ನೂರಮೂವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

### ಖಂಡಶಿಲಾಸೌಭಾಗ್ಯಕೂಪಿಕೋತ್ಪತ್ತಿಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಯದಾ ದಕ್ಷೇಣ ಕ್ರುದ್ಧೇನ ಪುರಾ ಶಪ್ತೋ ಹಿಮದ್ಯುತಿಃ ।
ತತ್ಸರ್ವಂ ಭವತಾ ಪ್ರೋಕ್ತಂ ಸೋಮನಾಥ ಕಥಾನಕಂ ॥ ೧ ॥
ಸಾಂಪ್ರತಂ ವದ ಕಾಮಸ್ಯ ಯಥಾ ಕುಷ್ಠೋಽಭವತ್ಪುರಾ ।
ಯೇನ ದೋಷೇಣ ಶಾಪಶ್ಚ ಕೇನ ತಸ್ಯ ನಿಯೋಜಿತಃ ॥ ೨ ॥
ಶಿಲಾಖಂಡಾ ಚ ಯಾ ದೇವೀ ತಥಾ ಸೌಭಾಗ್ಯಕೂಪಿಕಾ ।
ಯಥಾ ತತ್ರ ಸಮುತ್ಪನ್ನಾ ತಥಾಽಸ್ಮಾಕಂ ಪ್ರಕೀರ್ತಯ ॥ ೩ ॥

ಸೂತ ಉವಾಚ :—

ಪುರಾಽಽಸೀದ್ಬ್ರಾಹ್ಮಣೋ ನಾಮ ಹಾರೀತ ಇತಿ ವಿಶ್ರುತಃ ।
ಸ ತಪಸ್ತತ್ರ ಸಂತೇಪೇ ವಾನಪ್ರಸ್ಥಾಶ್ರಮೇ ವಸನ್ ॥ ೪ ॥
ತಸ್ಯ ಭಾರ್ಯಾಽಭವತ್ಸಾಧ್ವೀ ರೂಪೌದಾರ್ಯಸಮನ್ವಿತಾ ।
ತ್ರೈಲೋಕ್ಯ ಸುಂದರೀ ಸಾಕ್ಷಾಲ್ಲಕ್ಷ್ಮೀರಿವ ಮಧುದ್ವಿಷಃ ॥ ೫ ॥

---

## ಕನ್ನಡದ ಅನುವಾದ

### ಖಂಡಶಿಲಾಸೌಭಾಗ್ಯಕೂಪಿಕೋತ್ಪತ್ತಿಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಹಿಂದೆ ಕ್ರುದ್ಧನಾದ ದಕ್ಷನು ಚಂದ್ರನನ್ನು ಶಪಿಸಿರುವುದನ್ನೂ, ಸೋಮನಾಥನ ಕಥೆಯನ್ನೂ ನೀನು ಹೇಳಿರುವೆ.

೨. ಈಗ ಮನ್ಮಥನಿಗೆ ಕುಷ್ಠರೋಗವು ಹೇಗೆ ಬಂದಿತು? ಯಾವ ತಪ್ಪಿನಿಂದ ಯಾರು ಅವನನ್ನು ಶಪಿಸಿದರು, ಅದನ್ನು ಹೇಳು.

೩. ಸೌಭಾಗ್ಯಕೂಪಿಕೆಯೂ ಅಲ್ಲಿ ಶಿಲಾಖಂಡಾ ದೇವಿಯೂ ಹೇಗಾದ ರೆಂಬುದನ್ನು ನಮಗೆ ಹೇಳು.

೪. ಸೂತನು ಹೇಳುತ್ತಾನೆ:—ಹಿಂದೆ ಹಾರೀತನೆಂಬ ಬ್ರಾಹ್ಮಣನು ಇದ್ದನು. ಅವನು ಅಲ್ಲಿ ವಾನಪ್ರಸ್ಥಾಶ್ರಮದಲ್ಲಿರುತ್ತ ತಪಸ್ಸನ್ನು ಮಾಡಿದನು.

೫–೬. ಅವನಿಗೆ ಪತಿವ್ರತೆಯೂ, ರೂಪೌದಾರ್ಯಗಳಿಂದ ಕೂಡಿದವಳೂ, ವಿಷ್ಣುವಿನ ಪತ್ನಿಯಾದ ಲಕ್ಷ್ಮಿಯಂತಿರುವವಳೂ, ಸಕಲ ಗುಣಗಳುಳ್ಳವಳೂ

ಖ್ಯಾತಾ ಪೂರ್ಣಕಲಾ ನಾಮ ಸರ್ವೈಃ ಸಮುದಿತಾ ಗುಣೈಃ ।
ತಾಂ ದೃಷ್ಟ್ವಾ ಪದ್ಮಜೋಽಪ್ಯಾಶು ಕಾಮಸ್ಯ ವಶಗೋಽಭವತ್ ॥ ೬ ॥
ಕದಾಚಿದಪಿ ಸಂಪ್ರಾಪ್ತಸ್ತಸ್ಮಿನ್ ಕ್ಷೇತ್ರೇ ಮನೋಭವಃ ।
ಸಹ ರತ್ಯಾ ತಥಾ ಪ್ರೀತ್ಯಾ ಕಾಮೇಶ್ವರ ದಿದೃಕ್ಷಯಾ ॥ ೭ ॥
ಏತಸ್ಮಿನ್ನಂತರೇ ಸಾಽಪಿ ಸ್ನಾನಾರ್ಥಂ ತತ್ರ ಚಾಽಽಗತಾ ।
ಕೃತ್ವಾ ವಸ್ತ್ರಪರಿತ್ಯಾಗಂ ಪ್ರವಿವೇಶ ಜಲಾಶಯಂ ॥ ೮ ॥
ಅಥ ತಾಂ ಕಾಮದೇವೋಽಪಿ ಸಮಾಲೋಕ್ಯ ಶುಭಾನನಾಂ ।
ಆತ್ಮೀಯೈರಪಿ ನಿರ್ವಿದ್ಧೋ ಹೃದಯೇ ಪುಷ್ಪ ಸಾಯಕೈಃ ॥ ೯ ॥
ತತೋ ರತಿಂ ಪರಿತ್ಯಕ್ತ್ವಾ ಪ್ರೀತಿಂ ಚ ಶರಪೀಡಿತಃ ।
ವಿಜನಂ ಕಂಚಿದಾಸಾದ್ಯ ಪ್ರಸುಪ್ತಃ ಸ ತರೋ ರಧಃ ॥ ೧೦ ॥
ಗಾತ್ರೈಃ ಪುಲಕಿತೈಃ ಸರ್ವೈರ್ನಿಃಶ್ವಾಸಾನ್ನಿಃಶ್ವಸನ್ಮುಹುಃ ।
ಅಗ್ನಿವರ್ಣಾನ್ ಸುದೀರ್ಘಾಂಶ್ಚ ಬಾಷ್ಪಪೂರ್ಣವಿಲೋಚನಃ ॥ ೧೧ ॥
ತಿಷ್ಠನ್ ಸ ದರ್ಶನೇ ತಸ್ಯಾ ಏಕದೃಷ್ಟ್ಯಾ ವ್ಯಲೋಕಯತ್ ।
ಯೋಗೀವ ಸುಸಮಾಧಿಸ್ಥೋ ಧ್ಯಾಯಂಸ್ತದ್ಬ್ರಹ್ಮ ಸಂಸ್ಥಿತಂ ॥ ೧೨ ॥
ಸಾಽಪಿ ಕಾಮಂ ಸಮಾಲೋಕ್ಯ ಸಾಽನುರಾಗಂ ಪುರಃ ಸ್ಥಿತಂ ।
ಜೃಂಭಾಭಂಗ ಕೃತಾಸ್ಯಂ ಚ ವೇಪಮಾನ ಶರೀರಕಂ ॥ ೧೩ ॥

---

ಆದ ಪೂರ್ಣಕಲೆಯೆಂಬುವಳು ಪತ್ನಿಯಾಗಿದ್ದಳು. ಬ್ರಹ್ಮನೂ ಅವಳನ್ನು ನೋಡಿ ಕೂಡಲೆ ಕಾಮವಶನಾದನು.

೭. ಒಂದಾನೊಂದು ವೇಳೆ ಮನ್ಮಥನು ಕಾಮೇಶ್ವರನನ್ನು ನೋಡಲು ರತಿ ಯೊಡನೆ ಪ್ರೀತಿಯಿಂದ ಆ ಕ್ಷೇತ್ರಕ್ಕೆ ಬಂದನು.

೮. ಈ ಸಮಯದಲ್ಲಿ ಆ ಪೂರ್ಣಕಲೆಯೂ ಸ್ನಾನಕ್ಕಾಗಿ ಅಲ್ಲಿಗೆ ಬಂದಳು. ಅವಳು ಬಟ್ಟೆಯನ್ನು ಬಿಚ್ಚಿ ಕೊಳಕ್ಕೆ ಇಳಿದಳು.

೯. ಆಗ ಮನ್ಮಥನು ಅವಳನ್ನು ನೋಡಿ ತನ್ನ ಪುಷ್ಪಬಾಣಗಳಿಂದ ಹೃದಯ ದಲ್ಲಿ ಹೊಡೆಯಲ್ಪಟ್ಟನು.

೧೦. ಅವನು ಅನಂತರ ರತಿಯನ್ನೂ, ಪ್ರೀತಿಯನ್ನೂ ಬಿಟ್ಟು ನಿರ್ಜನ ಸ್ಥಳವನ್ನು ಸೇರಿ ಮರದ ಕೆಳಗೆ ಮಲಗಿದನು.

೧೧–೧೨. ಸರ್ವಾಂಗಗಳಲ್ಲಿಯೂ ರೋಮಾಂಚಗೊಂಡು ಕಣ್ಣೀರನ್ನು ಸುರಿಸುತ್ತ ಬೆಂಕಿಯಂತಿರುವ ನೀಳವಾದ ಶ್ವಾಸವನ್ನು ಬಿಡುತ್ತ ಆ ಪೂರ್ಣಕಲೆಯು ನೋಡುವಂತೆ ನಿಂತು ಅವಳನ್ನು ಸಮಾಧಿಸ್ಥನಾಗಿ ಪರಬ್ರಹ್ಮನನ್ನು ಧ್ಯಾನಿಸುವ ಯೋಗಿಯಂತೆ ಒಂದೇ ದೃಷ್ಟಿಯಿಂದ ನೋಡಿದನು.

೧೩–೧೪. ಅವಳೂ ಅನುರಾಗವುಳ್ಳವನೂ, ಆಕಳಿಸುವ ಮುಖವುಳ್ಳವನೂ, ನಡುಗುತ್ತಿರುವ ದೇಹವುಳ್ಳವನೂ ಆದ ಮನ್ಮಥನನ್ನು ಕಂಡು ಅವನ ರೂಪದಿಂದ

ಸಾಽಪಿ ತದ್ಬಾಣನಿರ್ಭಿನ್ನಾ ಸಾಽಭಿಲಾಷಾ ಬಭೂವ ಹ ।
ಕಾಮಂ ಪ್ರತಿ ವಿಶೇಷೇಣ ತಸ್ಯ ರೂಪೇಣ ಮೋಹಿತಾ ॥ ೧೪ ॥
ಅಥ ತಸ್ಮಾಜ್ಜಲಾತ್ಕೃಚ್ಛ್ರಾದ್ವಿನಿಷ್ಕ್ರಮ್ಯ ಶುಚಿಸ್ಮಿತಾ ।
ತೀರೋಪಾಂತಂ ಸಮಾಸಾದ್ಯ ಸ್ಥಿತಾ ತದ್ದೃಷ್ಟಿಗೋಚರೇ ॥ ೧೫ ॥
ತತಃ ಕಾಮಃ ಸಮುತ್ಥಾಯ ಶನೈಸ್ತದಂತಿಕಂ ಯಯೌ ।
ಕೃತಾಂಜಲಿಪುಟೋ ಭೂತ್ವಾ ತತಃ ಪ್ರೋವಾಚ ಸಾದರಂ ॥ ೧೬ ॥
ಕಾ ತ್ವಮತ್ರ ವಿಶಾಲಾಕ್ಷಿ ಪ್ರಾಪ್ತಾ ಸ್ನಾತುಂ ಜಲಾಶಯೇ ।
ಮಮ ನಾಶಾಯ ಚಾರ್ವಂಗಿ ತಸ್ಮಾಚ್ಛೃಣು ವಚೋ ಮಮ ॥ ೧೭ ॥
ಅಹಂ ಪುಷ್ಪಶರೋ ಲೋಕೇ ಪ್ರಸಿದ್ಧಶ್ಚಾರುಹಾಸಿನಿ ।
ವಿಡಂಬನಾಂ ಮಯಾ ನೀತಾ ದೇವಾ ಅಪಿ ನಿಜೈಃ ಶರೈಃ ॥ ೧೮ ॥
ಮದ್ಬಾಣೇನಾಹತೋ ರುದ್ರಃ ಸ್ವಶರೀರೇ ನಿತಂಬಿನೀಂ ।
ಅರ್ಧೇನ ಧಾರಯಾಮಾಸ ತ್ಯಕ್ತ್ವಾ ಲಜ್ಜಾಂ ಸುದೂರತಃ ॥ ೧೯ ॥
ಬ್ರಹ್ಮಾ ಮಚ್ಛರನಿರ್ಭಿನ್ನಃ ಸ್ವಸುತಾಂ ಚಕಮೇ ತತಃ ।
ಜನಯಾಮಾಸ ತಾನ್ವಿಪ್ರಾನ್ ವಾಲಖಿಲ್ಯಾಂಸ್ತಥಾವಿಧಾನ್ ॥ ೨೦ ॥
ಅಹಲ್ಯಾಂ ಚಕಮೇ ಶಕ್ರೋ ಗೌತಮಸ್ಯ ಪ್ರಿಯಾಂ ಸತೀಂ ।
ಮದ್ಬಾಣೈಃ ಪೀಡಿತೋಽತೀವ ಸ್ವರ್ಗಾದೇತ್ಯ ಧರಾತಲಂ ॥ ೨೧ ॥

---

ಮೋಹಿತಳಾಗಿ ಅವನ ಬಾಣಗಳಿಂದ ಹೊಡೆಯಲ್ಪಟ್ಟು ಅವನಲ್ಲಿ ಅಭಿಲಾಷೆಗೊಂಡಳು.

೧೫. ತರುವಾಯ ಆ ನೀರಿನಿಂದ ಕಷ್ಟಪಟ್ಟುಕೊಂಡು ಹೊರಟು ನಗುತ್ತ ದಡದ ಹತ್ತಿರ ಬಂದು ಕಾಮನು ನೋಡುವಂತೆ ನಿಂತಳು.

೧೬. ಮನ್ಮಥನು ಮೆಲ್ಲಗೆ ಎದ್ದು ಅವಳ ಹತ್ತಿರ ಹೋಗಿ ಕೈಮುಗಿದುಕೊಂಡು ಪ್ರೀತಿಯಿಂದ ಇಂತೆಂದನು.

೧೭. "ಸುಂದರಾಂಗಿ! ನನ್ನನ್ನು ಕೊಲ್ಲುವುದಕ್ಕಾಗಿ ಈ ಕೊಳಕ್ಕೆ ಸ್ನಾನ ಮಾಡಲು ಬಂದ ನೀನಾರು? ನನ್ನ ಮಾತನ್ನು ಕೇಳು.

೧೮. ನಾನು ಪ್ರಪಂಚದಲ್ಲಿ ಪ್ರಸಿದ್ಧನಾದ ಮನ್ಮಥನು. ನಾನು ನನ್ನ ಬಾಣಗಳಿಂದ ದೇವತೆಗಳನ್ನೂ ಹಾಸ್ಯಾಸ್ಪದರನ್ನಾಗಿ ಮಾಡಿದ್ದೇನೆ.

೧೯. ನನ್ನ ಬಾಣಗಳಿಂದ ಹೊಡೆಯಲ್ಪಟ್ಟ ರುದ್ರನು ಲಜ್ಜೆಯನ್ನು ತ್ಯಜಿಸಿ ತನ್ನ ಶರೀರದ ಅರ್ಧಭಾಗದಿಂದ ಹೆಂಗಸನ್ನು ಧರಿಸಿದ್ದಾನೆ.

೨೦. ಬ್ರಹ್ಮನೂ ನನ್ನ ಬಾಣಗಳಿಂದ ಹೊಡೆಯಲ್ಪಟ್ಟು ತನ್ನ ಮಗಳನ್ನೇ ಕಾಮಿಸಿ ಅಂತಹ ವಾಲಖಿಲ್ಯರೆಂಬ ಬ್ರಾಹ್ಮಣರನ್ನು ಹುಟ್ಟಿಸಿದನು.

೨೧. ಇಂದ್ರನೂ ನನ್ನ ಬಾಣಗಳಿಂದ ಪೀಡಿತನಾಗಿ ಸ್ವರ್ಗದಿಂದ ಧರೆಗೆ ಬಂದು ಗೌತಮನ ಪ್ರಿಯಸತಿಯಾದ ಅಹಲ್ಯೆಯನ್ನು ಕಾಮಿಸಿದನು.

ಏವಂ ದೇವ ಅಪಿ ಕ್ಷ್ನಿಣ್ಣಾ ಮಚ್ಛರೈರ್ಯೇ ಮಹತ್ತರಾಃ ।
ಕಿಂ ಪುನರ್ಮಾನವಾಃ ಸುಭ್ರೂಃ ಕೃಮಿಪ್ರಾಯಾಃ ಸುಚಂಚಲಾಃ ॥ ೨೨ ॥
ಆಕೀಟಾಂತಂ ಜಗತ್ಸರ್ವಮಾಬ್ರಹ್ಮಾಂತಂ ತಥೈವ ಚ ।
ವಿಡಂಬನಾಂ ಪರಾಂ ಪ್ರಾಪ್ತಂ ಮಚ್ಛರೈಶ್ಚಾರುಹಾಸಿನಿ ॥ ೨೩ ॥
ಅಹಂ ಪುನಸ್ತ್ವಯಾ ಭೀರು ನೀತೋಽವಸ್ಥಾಮಿಮಾಂ ಶುಭೇ ॥ ೨೪ ॥
ತಸ್ಮಾದ್ದೇಹಿ ಮಹಾಭಾಗೇ ಮಮಾದ್ಯ ರತದಕ್ಷಿಣಾಂ ।
ಯಾವನ್ನ ಯಾಂತಿ ಸಂತ್ಯಜ್ಯ ಮಮ ಪ್ರಾಣಾಃ ಕಲೇವರಾತ್ ॥ ೨೫ ॥

ಸೂತ ಉವಾಚ :—

ಸಾಽಪಿ ತದ್ವಚನಂ ಶ್ರುತ್ವಾ ಪತಿವ್ರತಪರಾಯಣಾ ।
ಹನ್ಯಮಾನಾ ವಿಶೇಷೇಣ ತದ್ಬಾಣೈರ್ಹೃದಯೇ ಭೃಶಂ ॥ ೨೬ ॥
ಅನಭಿಜ್ಞಾ ಚ ಸಾ ಸಾಧ್ವೀ ಕಾಮಧರ್ಮಸ್ಯ ಕೇವಲಂ ।
ತಾಪಸೈಃ ಸಹ ಸಂವೃದ್ಧಾ ನಾಽನ್ಯಂ ಜಾನಾತಿ ಕಿಂಚನ ॥ ೨೭ ॥
ವಕ್ತುಂ ತದ್ವಿಷಯೇ ಯಚ್ಚ ಪ್ರೋಚ್ಯತೇ ಕಾಮಪೀಡಿತೈಃ ।
ಅಧೋಮುಖಾಽಲಿಖದ್ಭೂಮಿಮಂಗುಷ್ಠೇನ ಸ್ಥಿತಾ ಚಿರಂ ॥ ೨೮ ॥
ಏತಸ್ಮಿನ್ನಂತರೇ ಭಾನುಃ ಪ್ರಾಪ್ತಶ್ಚಾಽಸ್ತಂ ಗಿರಿಂ ಪ್ರತಿ ।
ವಿಹಾರಸಮಯೇ ಪ್ರಾಪ್ತ ಆಹಿತಾಗ್ನಿರ್ನಿವೇಶನೇ ॥ ೨೯ ॥

---

೨೨. ಹೀಗೆ ದೊಡ್ಡ ದೊಡ್ಡ ದೇವತೆಗಳೇ ನನ್ನ ಶರಗಳಿಂದ ಪೀಡಿತರಾಗಿರುವಾಗ ಚಂಚಲರಾದ ಕೃಮಿಯಂತಿರುವ ಮಾನವರ ವಿಷಯವೇನು ?

೨೩. ಸುಂದರಿ! ಕೀಟದಿಂದ ಮೊದಲುಗೊಂಡು ಬ್ರಹ್ಮನವರೆಗೆ ಸಮಸ್ತ ಜಗತ್ತೂ ನನ್ನ ಬಾಣಗಳಿಗೆ ಅಧೀನವಾಗಿದೆ.

೨೪–೨೫. ಎಲೌ ಭಯಶೀಲಳೆ! ನೀನು ನನ್ನನ್ನೇ ಇಂತಹ ಅವಸ್ಥೆಗೀಡಾಗಿಸಿರುವೆ. ಆದುದರಿಂದ ನನ್ನ ಪ್ರಾಣಗಳು ಶರೀರವನ್ನು ಬಿಟ್ಟು ಹೊರಡುವಷ್ಟರಲ್ಲಿ ನನಗೆ ರತದಕ್ಷಿಣೆಯನ್ನು ಕೊಡು.

೨೬–೨೮. ಸೂತನು ಹೇಳುತ್ತಾನೆ:—ಆ ಕಾಮನ ಮಾತನ್ನು ಕೇಳಿ ಅವನ ಬಾಣಗಳಿಂದ ವಿಶೇಷವಾಗಿ ಹೊಡೆಯಲ್ಪಟ್ಟ ಸಾಧ್ವಿಯಾದ ಅವಳು ತಾಪಸರೊಡನೆ ಬೆಳೆದು ಬೇರೆ ಏನನ್ನೂ ತಿಳಿಯದವಳಾದ್ದರಿಂದ ಕಾಮಧರ್ಮವನ್ನರಿಯದವಳಾಗಿ, ಕಾಮಪೀಡಿತರು ಆಡುವ ಮಾತುಗಳನ್ನು ಆಡಲು ತಿಳಿಯದವಳಾಗಿ, ತಲೆತಗ್ಗಿಸಿಕೊಂಡು, ಕಾಲಿನ ಹೆಬ್ಬೆರಳಿನಿಂದ ಭೂಮಿಯನ್ನು ಕೆರೆಯುತ್ತ ಬಹಳ ಹೊತ್ತು ನಿಂತಳು.

೨೯–೩೦. ಇಷ್ಟರಲ್ಲಿ ಸೂರ್ಯನು ಅಸ್ತಂಗತನಾದನು. ಮನೆಯಲ್ಲಿ ಹೋಮಕಾಲವು ಪ್ರಾಪ್ತನಾಗಲು ಹಾರೀತನು ಪತ್ನಿಯ ದಾರಿಯನ್ನು ಬಹಳ

ಹಾರೀತೋಽಪಿ ಚಿರಂ ವೀಕ್ಷ್ಯ ತನ್ಮಾರ್ಗಂ ಚಾಕೃತಾಶನಃ ।
ತತಃ ಸ ಚಿಂತಯಾಮಾಸ ಕಸ್ಮಾತ್ಸಾ ಚಾಽತ್ರ ನಾಽಽಗತಾ ॥ ೩೦ ॥
ಸ್ನಾತ್ವಾ ತೀರ್ಥವರೇ ತಸ್ಮಿನ್ ದೃಷ್ಟ್ವಾ ತಾಂ ಚಂದ್ರಕೂಪಿಕಾಂ ।
ಕಾಮೇಶ್ವರಂ ಚ ದೇವೇಶಂ ಕಾಮದಂ ಸುಖದಂ ನೃಣಾಂ ॥ ೩೧ ॥
ತತಃ ಶಿಷ್ಯಸಮಾಯುಕ್ತೋ ವೀಕ್ಷಮಾಣ ಇತಸ್ತತಃ ।
ತಂ ದೇಶಂ ಸಮನುಪ್ರಾಪ್ತೋ ಯತ್ರ ತೌ ದ್ವಾವಪಿ ಸ್ಥಿತೌ ॥ ೩೨ ॥
ಆಲಪನ್ ಬಹುಧಾ ಕಾಮೋ ಹನ್ಯಮಾನೋ ನಿಜೈಃ ಶರೈಃ ।
ಸಾಽಪಿ ಚೈವ ವಿಶೇಷೇಣ ವ್ರೀಡಯಾಽಧೋಮುಖೀ ಸ್ಥಿತಾ ॥ ೩೩ ॥
ಸ ಗುಲ್ಮಾಂತರಿತಃ ಸರ್ವಂ ತಚ್ಛ್ರುತ್ವಾ ಕಾಮಜಲ್ಪಿತಂ ।
ತಸ್ಯಾಶ್ಚ ತದ್ಗತಂ ಭಾವಂ ತತಃ ಕೋಪಾದುವಾಚ ಸಃ ॥ ೩೪ ॥
ಯಸ್ಮಾತ್ಪಾಪ ತ್ವಯಾ ಪತ್ನೀ ಮನ್ಮೈವಂ ಶರಪೀಡಿತಾ ।
ಅನಭಿಜ್ಞಾ ತಥಾ ಸಾಧ್ವೀ ಪತಿಧರ್ಮಪರಾಯಣಾ ।
ಕುಷ್ಠವ್ಯಾಧಿಸಮಾಯುಕ್ತಸ್ತಸ್ಮಾದ್ವಿಪ್ರಿಯದರ್ಶನಃ ॥ ೩೫ ॥
ತ್ವಂ ಭವಿಷ್ಯಸಿ ಪಾಪಾತ್ಮನ್ ಮುಕ್ತೋ ದಾರೈಃ ಸ್ವಕೈರಪಿ ।
ಸಾಽಪಿ ಚೈವ ವಿಶೇಷೇಣ ವ್ರೀಡಯಾಽಧೋಮುಖೀ ಸ್ಥಿತಾ ॥ ೩೬ ॥

---

ಹೊತ್ತು ನೋಡಿ, ಊಟಮಾಡದೆ, ಇಲ್ಲಿಗೆ ಅವಳು ಇನ್ನೂ ಏಕೆ ಬರಲಿಲ್ಲವೆಂದು ಚಿಂತಿಸಿದನು.

೩೧–೩೨. ಅವನು ಶಿಷ್ಯರೊಡನೆ ಆ ತೀರ್ಥದಲ್ಲಿ ಮಿಂದು ಚಂದ್ರಕೂಪಿಕೆಯನ್ನೂ, ಮನುಷ್ಯರಿಗೆ ಇಷ್ಟಾರ್ಥವನ್ನು ನೀಡುವ ಕಾಮೇಶ್ವರನನ್ನೂ ದರ್ಶನಮಾಡಿ ಅತ್ತ ಇತ್ತ ನೋಡುತ್ತ ಅವರಿಬ್ಬರಿರುವ ಸ್ಥಳಕ್ಕೆ ಬಂದನು.

೩೩. ಆಗ ಮನ್ಮಥನು ತನ್ನ ಬಾಣಗಳಿಂದ ತಾನೇ ಪೀಡಿತನಾಗಿ ಮಾತನಾಡುತ್ತಿದ್ದನು. ಆ ಹೆಂಗಸೂ ಅತ್ಯಂತ ಲಜ್ಜೆಯಿಂದ ತಲೆಯನ್ನು ತಗ್ಗಿಸಿಕೊಂಡು ನಿಂತಿದ್ದಳು.

೩೪. ಹಾರೀತನು ಪೊದೆಯಲ್ಲಿ ಅಡಗಿಕೊಂಡು ಮನ್ಮಥನ ಮಾತನ್ನೆಲ್ಲ ಕೇಳಿ ಪತ್ನಿಯ ಭಾವವನ್ನೂ ತಿಳಿದು ಕೋಪದಿಂದ ಇಂತೆಂದನು.

೩೫–೩೬. "ಎಲೆವೋ ಪಾಪಿಯಾದ ಮನ್ಮಥನೆ! ನೀನು ಏನೂ ಅರಿಯದ ಪತಿವ್ರತೆಯಾದ ನನ್ನ ಪತ್ನಿಯನ್ನು ಬಾಣಗಳಿಂದ ಪೀಡಿಸಿರುವುದರಿಂದ ಕುಷ್ಠವ್ಯಾಧಿಯಿಂದ ಕುರೂಪಿಯಾಗಿ ನಿನ್ನ ಪತ್ನಿಯರಿಂದ ತ್ಯಜಿಸಲ್ಪಡುವೆ." ಪೂರ್ಣಕಲೆಯೂ ಅತಿಶಯವಾದ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ನಿಂತಳು.

ಏಷಾಽಪಿ ಚ ಶಿಲಾಪ್ರಾಯಾ ಭವಿಷ್ಯತಿ ವಿಚೇತನಾ ।
ತ್ವಾಂ ದೃಷ್ಟ್ವಾ ಯಾ ಸರಾಗಾಽಭೂನ್ನಿಜಧರ್ಮಬಹಿಷ್ಕೃತಾ ॥ ೩೭ ॥
ತತಃ ಪ್ರಸಾದಯಾಮಾಸ ತಂ ಕಾಮಃ ಪ್ರಣಿಪತ್ಯ ಚ ।
ನ ಜ್ಞಾತೇಯಂ ಮಯಾ ವಿಪ್ರ ತವ ಭಾರ್ಯೇತಿ ಸುಂದರೀ ॥ ೩೮ ॥
ತೇನ ಪ್ರೋಕ್ತಾ ವಿರುದ್ಧಾನಿ ವಾಕ್ಯಾನಿ ವಿವಿಧಾನಿ ಚ ।
ಏತಸ್ಯಾ ನಾಽಸ್ತಿ ದೋಷೋಽತ್ರ ಮದ್ಬಾಣೈಃ ಪೀಡಿತಾ ಭೃಶಂ ॥ ೩೯ ॥
ಸಾನುರಾಗಾ ಪರಂ ಜಾತಾ ನೋಕ್ತಂ ಕಿಂಚಿದ್ವಚೋ ಮುನೇ ।
ತಸ್ಮಾನ್ನಾರ್ಹಸಿ ಶಾಪಂ ತ್ವಂ ದಾತುಮಸ್ಯಾಃ ಕಥಂಚನ ॥ ೪೦ ॥
ಮಮಾಽಸ್ತ್ಯೇಷೋಽಪರಾಧೋಽತ್ರ ತಸ್ಮಾನ್ಮೇ ನಿಗ್ರಹಂ ಕುರು ।
ಭೂಯೋಽಪಿ ಬ್ರಾಹ್ಮಣಶ್ರೇಷ್ಠ ಅಸ್ಯಾಃ ಶಾಪಸಮುದ್ಭವಂ ॥ ೪೧ ॥
ಅಪಿ ರುದ್ರಾದಯೋ ದೇವಾ ಮದ್ಬಾಣೇಭ್ಯೋ ದ್ವಿಜೋತ್ತಮ ।
ಸೋಢುಂ ಶಕ್ತಾ ನ ತೇ ಯಸ್ಮಾತ್ತತ್ಕಥಂ ಸ್ಯಾದಿಯಂ ಶಿಲಾ ॥ ೪೨ ॥
ತಥಾಽತ್ರ ತ್ರಿವಿಧಂ ಪಾಪಂ ಪ್ರವದಂತಿ ಮನೀಷಿಣಃ ।
ಮಾನಸಂ ವಾಚಿಕಂ ಚೈವ ಕರ್ಮಜಂ ಚ ತೃತೀಯಕಂ ।
ತದಸ್ಮಾಕಂ ದ್ವಿಧಾ ಜಾತಮೇಕಂ ಚಾಽಸ್ಯಾ ಮುನೀಶ್ವರ ॥ ೪೩ ॥

---

೩೭. "ನಿನ್ನನ್ನು ನೋಡಿ ಅನುರಾಗಗೊಂಡು ತನ್ನ ಧರ್ಮವನ್ನು ತ್ಯಜಿಸಿದ ಇವಳೂ ಅಚೇತನವಾದ ಶಿಲೆಯಾಗುವಳು" ಎಂದು ಆ ಹಾರೀತನು ಅವಳನ್ನೂ ಶಪಿಸಿದನು.

೩೮. ಅನಂತರ ಮನ್ಮಥನು ಆ ಹಾರೀತನನ್ನು ವಂದಿಸಿ "ಇವಳು ನಿನ್ನ ಪತ್ನಿಯೆಂದು ನಾನು ತಿಳಿಯಲಿಲ್ಲ.

೩೯. ಆದುದರಿಂದ ನಾನು ಇವಳ ವಿಷಯದಲ್ಲಿ ಆಡಬಾರದ ಮಾತುಗಳ ನ್ನಾಡಿದೆನು. ನನ್ನ ಬಾಣಗಳಿಂದ ಪೀಡಿತಳಾದ ಇವಳ ತಪ್ಪಿಲ್ಲ.

೪೦. ನನ್ನಿಂದ ಅನುರಾಗಗೊಂಡ ಇವಳು ಯಾವ ಮಾತನ್ನೂ ಆಡಲಿಲ್ಲ. ಆದುದರಿಂದ ನೀನು ಇವಳಿಗೆ ಶಾಪವನ್ನು ಕೊಡಲರ್ಹನಲ್ಲ.

೪೧–೪೨. ಬ್ರಾಹ್ಮಣೋತ್ತಮ! ಇವಳಿಗೆ ಶಾಪವನ್ನು ಕೊಡುವ ವಿಷಯ ದಲ್ಲಿ ನನ್ನ ತಪ್ಪಿದೆ. ಆದುದರಿಂದ ನನ್ನನ್ನು ನಿಗ್ರಹಿಸು. ರುದ್ರಾದಿ ದೇವತೆಗಳೂ ನನ್ನ ಬಾಣವನ್ನು ಸಹಿಸಲಶಕ್ತರಾದ್ದರಿಂದ ಇವಳು ಹೇಗೆ ಶಿಲೆಯಾದಾಳು?

೪೩. ಸಜ್ಜನರು ಪಾಪವು ಮೂರು ವಿಧವಾಗಿದೆಯೆಂದು ಹೇಳುತ್ತಾರೆ. ಮಾನಸ, ವಾಚಿಕ, ಕರ್ಮಜ ಎಂಬ ಆ ಮೂರು ವಿಧವಾದ ಪಾಪಗಳಲ್ಲಿ ನನಗೆ ಎರಡು ವಿಧವಾದ ಪಾಪವುಂಟಾಗಿದೆ. ಇವಳಿಗೆ ಒಂದು ವಿಧವಾದ ಪಾಪ ಮಾತ್ರ ಉಂಟಾಗಿದೆ.

ಭಾರ್ಯಾಯಾಸ್ತೇ ಸುರೂಪಾಯಾಸ್ತಸ್ಮಾತ್ಸಂಪೂರ್ಣನಿಗ್ರಹಂ ।
ಕರಿಷ್ಯಸಿ ನ ತೇ ಭೀತಿಃ ಕಾಚಿದಸ್ತಿ ಪರತ್ರಚಾ ॥ ೪೪ ॥
ಮನಸ್ತಾಪಾದ್ವ್ರಜೇತ್ಪಾಪಂ ಮಾನಸಂ ವಾಚಿಕಂ ಚ ಯತ್ ।
ತಸ್ಯ ಪ್ರಸಾದನೇನೈವ ಯಸ್ಯೋಪರಿ ವಿಜಲ್ಪಿತಂ ॥ ೪೫ ॥
ಪ್ರಾಯಶ್ಚಿತ್ತೈರ್ಯಥೋಕ್ತೈಶ್ಚ ಕರ್ಮಜಂ ಪಾತಕಂ ವ್ರಜೇತ್ ।
ಧರ್ಮಶಾಸ್ತ್ರೈಃ ಪರಿಪ್ರೋಕ್ತಂ ಯತಃ ಸರ್ವೈರ್ಮಹಾಮುನೇ ॥ ೪೬ ॥

ಹಾರೀತ ಉವಾಚ :—

ಅನ್ಯತ್ರ ವಿಷಯೋ ತಸ್ಯಾಃ ಪಾತಕಂ ಕಾಮದೇವ ತೇ ।
ಏತಸ್ಯ ತವ ಧರ್ಮಸ್ಯ ಪ್ರಾಧಾನ್ಯಂ ಮನಸಃ ಸ್ಮೃತಂ ॥ ೪೭ ॥
ತಸ್ಮಾದೇವಂ ವಿಧಾ ಚೇಯಂ ಸದಾ ಸ್ಥಾಸ್ಯತಿ ಚಾಽಧಮ ।
ಕಿಂ ಪುನಃ ಕುರು ಯತ್ಕೃತ್ಯಂ ನಾಽಹಂ ವಕ್ಷ್ಯಾಮಿ ಕಿಂಚನ ॥ ೪೮ ॥
ಪ್ರಥಮಂ ಮನಸಾ ಸರ್ವಂ ಚಿಂತ್ಯತೇ ತದನಂತರಂ ।
ತತಃ ಪ್ರಜಲ್ಪತೇ ವಾಚಾ ಕ್ರಿಯತೇ ಕರ್ಮಣಾ ತತಃ ॥ ೪೯ ॥
ಪ್ರಮಾಣಂ ಹಿ ಮನಸ್ತಸ್ಮಾತ್ಸರ್ವಕೃತ್ಯೇಷು ಸರ್ವದಾ ।
ಏತಸ್ಮಾತ್ಕಾರಣಾತ್ಪೂರ್ಣೋ ಮಯಾಽಸ್ಯಾ ನಿಗ್ರಹಃ ಕೃತಃ ॥ ೫೦ ॥

---

೪೪. ಸುಂದರಿಯಾದ ನಿನ್ನ ಭಾರ್ಯೆಯನ್ನು ಸಂಪೂರ್ಣವಾಗಿ ನಿಗ್ರಹಿಸುವ ನಿನಗೆ ಪರಲೋಕದ ಭಯವಿಲ್ಲವೆ?

೪೫. ಮಾನಸ ಪಾಪವು ಮನಸ್ಸಿನ ಪಶ್ಚಾತ್ತಾಪದಿಂದಲೂ, ವಾಚಿಕ ಪಾಪವು ಯಾರ ವಿಷಯದಲ್ಲಿ ಮಾತನಾಡಿರುವನೋ ಅವನನ್ನು ಸಮಾಧಾನ ಗೊಳಿಸುವುದರಿಂದಲೂ ಪರಿಹಾರವಾಗುವುದು.

೪೬. ಕರ್ಮಜ ಪಾಪವು ವಿಹಿತ ಪ್ರಾಯಶ್ಚಿತ್ತಗಳಿಂದ ನಿವಾರಣೆಯಾಗುವುದು. ಮಹರ್ಷಿಯೆ! ಸಕಲ ಧರ್ಮಶಾಸ್ತ್ರಗಳೂ ಇದನ್ನು ಹೇಳಿರುವುವು."

೪೭. ಹಾರೀತನು ಹೇಳುತ್ತಾನೆ:—ನಿನ್ನ ಮತ್ತು ಅವಳ ಮಾನಸಿಕ ಪಾಪವು ಬೇರೆ ಬೇರೆ ವಿಷಯಕವಾದುದು. ಮಾನಸಿಕ ಪಾಪವೇ ಪ್ರಧಾನವಾದುದೆಂದು ಧರ್ಮಶಾಸ್ತ್ರವು ಹೇಳುವುದು.

೪೮. ನೀಚ! ಆದುದರಿಂದ ಇವಳು ಯಾವಾಗಲೂ ಹೀಗೆಯೇ ಇರುವಳು. ನೀನು ಏನನ್ನು ಬೇಕಾದರೂ ಮಾಡು. ನಾನು ಒಂದನ್ನೂ ಹೇಳುವುದಿಲ್ಲ.

೪೯. ಮನುಷ್ಯನು ಮೊದಲು ಎಲ್ಲವನ್ನೂ ಮನಸ್ಸಿನಿಂದ ಆಲೋಚಿಸುವನು. ಅನಂತರ ಅದನ್ನು ಬಾಯಿಯಿಂದ ಹೇಳಿ ಮಾಡುವನು.

೫೦. ಸಮಸ್ತ ಕಾರ್ಯಗಳಲ್ಲಿಯೂ ಮನಸ್ಸು ಪ್ರಮಾಣವಾದ್ದರಿಂದ ಇವಳನ್ನು ನಾನು ಸಂಪೂರ್ಣವಾಗಿ ನಿಗ್ರಹಮಾಡಿದ್ದೇನೆ.

ಸೂತ ಉವಾಚ:—

ಏವಮುಕ್ತ್ವಾ ಮುನಿಶ್ರೇಷ್ಠೋ ಹಾರೀತಃ ಸ್ವಾಶ್ರಮಂ ಯಯೌ ।
ಸಾಽಪಿ ಪೂರ್ಣಕಲಾ ಜಾತಾ ಶಿಲಾರೂಪಾ ಚ ತತ್ಕ್ಷಣಾತ್ ॥ ೫೧ ॥
ಕಾಮದೇವೋಽಪಿ ಕುಷ್ಠೇನ ಗ್ರಸ್ತೋ ರೌದ್ರೇಣ ಚ ದ್ವಿಜಾಃ ।
ಶೀರ್ಣನಾಸಾಂಘ್ರಿಪಾಣಿಶ್ಚ ನೇತ್ರಾಣಾಮಪ್ರಿಯೋಽಭವತ್ ॥ ೫೨ ॥
ಅಥ ಕಾಮೇ ನಿರುತ್ಸಾಹೇ ಸಂಜಾತೇ ದ್ವಿಜಸತ್ತಮಾಃ ।
ವ್ಯಾಧಿಗ್ರಸ್ತೇ ಜಗತ್ಯಸ್ಮಿನ್ ಸೃಷ್ಟಿರೋಧೋ ವ್ಯಜಾಯತ ॥ ೫೩ ॥
ಕೇವಲಂ ಕ್ಷೀಯತೇ ಲೋಕೋ ನೈವ ವೃದ್ಧಿಂ ಪ್ರಗಚ್ಛತಿ ।
ಸ್ವೇದಜಾ ಯೇಽಪಿ ಜೀವಾಃ ಸ್ಯುಸ್ತೇಽಪಿ ಯಾತಾಃ ಪರಿಕ್ಷಯಂ ॥ ೫೪ ॥
ಏತಸ್ಮಿನ್ನಂತರೇ ದೇವಾಃ ಸರ್ವೇ ಚಿಂತಾಸಮಾಕುಲಾಃ ।
ಕಿಮಿದಂ ಕ್ಷೀಯತೇ ಲೋಕೋ ಜಲಸ್ಥೈಃ ಸ್ಥಲಜೈಃ ಸಹ ॥ ೫೫ ॥
ನ ದೃಶ್ಯತೇ ಕ್ವಚಿದ್ಬಾಲಃ ಕೋಽಪಿ ಕಶ್ಚಿತ್ಕಥಂಚನ ।
ನ ಚ ಗರ್ಭವತೀ ನಾರೀ ಕಚ್ಚಿತ್ಕ್ಷೇಮಂ ಸ್ಮರಸ್ಯ ಚ ॥ ೫೬ ॥
ತತಸ್ತಂ ವ್ಯಾಧಿನಾ ಗ್ರಸ್ತಂ ಜ್ಞಾತ್ವಾತ್ರ ಕ್ಷೇತ್ರಸಂಶ್ರಯಂ ।
ಆಜಗ್ಮುಸ್ತ್ವರಿತಾಃ ಸರ್ವೇ ವ್ಯಾಕುಲೇನಾಂತರಾತ್ಮನಾ ॥ ೫೭ ॥

---

೫೧. ಸೂತನು ಹೇಳುತ್ತಾನೆ:—ಮುನಿವರ್ಯನಾದ ಹಾರೀತನು ಹೀಗೆ ಹೇಳಿ ತನ್ನ ಆಶ್ರಮಕ್ಕೆ ಹೋದನು. ಆ ಪೂರ್ಣಕಲೆಯೂ ಕೂಡಲೆ ಶಿಲೆಯಾದಳು.

೫೨. ದ್ವಿಜರೆ! ಕಾಮದೇವನೂ ಭಯಂಕರ ಕುಷ್ಠರೋಗದಿಂದ ಪೀಡಿತನಾಗಿ ಕೊಳೆತ ಮೂಗು, ಕಾಲು, ಕೈಗಳುಳ್ಳವನಾಗಿ ನೋಡಲಸಹ್ಯನಾದನು.

೫೩. ತರುವಾಯ ವ್ಯಾಧಿಪೀಡಿತನಾದ ಕಾಮದೇವನು ನಿರುತ್ಸಾಹನಾಗಲು ಈ ಪ್ರಪಂಚದಲ್ಲಿ ಸೃಷ್ಟಿಯು ನಿಂತಿತು.

೫೪. ಪ್ರಪಂಚವು ನಾಶವಾಗುತ್ತಿದ್ದಿತೇ ಹೊರತು ವೃದ್ಧಿಯಾಗಲಿಲ್ಲ. ಸ್ವೇದಜ ಜೀವಗಳೂ ನಾಶವಾದುವು.

೫೫–೫೬. ಈ ಸಮಯದಲ್ಲಿ ಸಕಲ ದೇವತೆಗಳೂ, "ಇದೇನು? ಜಲಚರ, ಸ್ಥಳಚರ ಪ್ರಾಣಿಗಳೊಡನೆ ಲೋಕವು ನಾಶವಾಗುತ್ತಿದೆ. ಎಲ್ಲಿಯೂ ಒಬ್ಬ ಬಾಲಕನೂ ಕಾಣುವುದಿಲ್ಲ. ಗರ್ಭಿಣಿಯಾದ ಹೆಂಗಸೂ ಕಾಣಿಸುವುದಿಲ್ಲ. ಮನ್ಮಥನು ಕ್ಷೇಮವಾಗಿರುವನೊ?" ಎಂದು ಚಿಂತಾಕ್ರಾಂತರಾದರು.

೫೭. ಅನಂತರ ಅವರು ಮನ್ಮಥನು ವ್ಯಾಧಿಗ್ರಸ್ತನಾಗಿ ಈ ಕ್ಷೇತ್ರದಲ್ಲಿ ನೆಲೆಸಿರುವುದನ್ನರಿತು ವ್ಯಾಕುಲಗೊಂಡ ಮನಸ್ಸಿನಿಂದ ಕೂಡಲೆ ಅಲ್ಲಿಗೆ ಬಂದರು.

ಕಾಮೇಶ್ವರಪುರಸ್ಥಂ ಚ ತಂ ದೃಷ್ಟ್ವಾ ಕುಸುಮಾಯುಧಂ ।
ಅತ್ಯಂತ ವಿಕೃತಾಕಾರಂ ಚಿಂತಯಾನಂ ಮಹೇಶ್ವರಂ ॥ ೫೮ ॥
ತತಃ ಪ್ರೋಚುಃ ಸುದುಃಖಾರ್ತಾಃ ಕಿಮಿದಂ ಕುಸುಮಾಯುಧ ।
ನಿರುತ್ಸಾಹಃ ಸಮುತ್ಪನ್ನಃ ಕುಷ್ಠವ್ಯಾಧಿ ಸಮಾಕುಲಃ ॥ ೫೯ ॥
ತತಶ್ಚಾಽಧೋ ಮುಖೋ ಜಾತೋ ಲಜ್ಜಯಾ ಪರಯಾ ವೃತಃ ।
ಪ್ರೋವಾಚ ಶಾಪಜಂ ಸರ್ವಂ ಹಾರೀತಸ್ಯ ವಿಚೇಷ್ಟಿತಂ ॥ ೬೦ ॥
ತತಸ್ತೇ ವಿಬುಧಾಃ ಪ್ರೋಚುಃ ಪಾತಕಂ ಯದ್ಗಿರಾ ಕೃತಂ ।
ತತ್ತಸ್ಯಾರಾಧನಾತ್ಸರ್ವಂ ಸಂಕ್ಷಯಂ ಯಾತ್ಯಸಂಶಯಂ ॥ ೬೧ ॥
ತಸ್ಮಾದೇತಾಂ ಶಿಲಾರೂಪಾಂ ತ್ವಮಾರಾಧಯ ಚಿತ್ತಜ ।
ಯೇನ ಕುಷ್ಠಃ ಕ್ಷಯಂ ಯಾತಿ ತತಸ್ತೇಜೋಽಭಿವರ್ಧತೇ ॥ ೬೨ ॥
ಜಗತಿ ಸ್ಯಾನ್ಮಹಾಸೃಷ್ಟಿರ್ದೇವಕೃತ್ಯಂ ಕೃತಂ ಭವೇತ್ ।
ನ ತೇಽಸ್ತಿ ಕಾಯಜಂ ಪಾಪಂ ಯತೋ ಮುಕ್ತ್ವಾ ಪ್ರವಾಚಿಕಂ ॥ ೬೩ ॥
ಅತ್ರಕುಂಡೇ ತ್ವದೀಯೇಽನ್ಯೋ ಯಃ ಸ್ನಾತ್ವಾ ಶ್ರದ್ಧಯಾನ್ವಿತಃ ।
ಏನಾಂ ಪಾಪವಿನಿರ್ಮುಕ್ತಾಂ ಶಿಲಾಂ ವೈ ಮಾನವಃ ಸ್ಪೃಶೇತ್ ॥ ೬೪ ॥
ಕುಷ್ಠವ್ಯಾಧಿಸಮೋಪೇತಃ ಕಾಯೋತ್ಥೇನಾಽಪಿ ಕರ್ಮಣಾ ।
ಸೋಽಪಿ ವ್ಯಾಧಿವಿನಿರ್ಮುಕ್ತೋ ಭವಿಷ್ಯತಿ ಗತಜ್ವರಃ ॥ ೬೫ ॥

---

೫೮–೫೯. ಆ ದೇವತೆಗಳು ಕಾಮೇಶ್ವರಪುರದಲ್ಲಿ ಅತ್ಯಂತ ವಿಕಾರವಾದ ಆಕಾರವುಳ್ಳವನೂ, ಮಹೇಶ್ವರನನ್ನು ಚಿಂತಿಸುತ್ತಿರುವವನೂ ಆಗಿ ವಾಸಮಾಡುತ್ತಿರುವ ಕಾಮದೇವನನ್ನು ಕಂಡು ದುಃಖದಿಂದ, "ಮನ್ಮಥ! ನೀನು ನಿರುತ್ಸಾಹನೂ, ಕುಷ್ಠವ್ಯಾಧಿಗ್ರಸ್ತನೂ ಹೇಗೆ ಆದೆ?" ಎಂದು ಕೇಳಿದರು.

೬೦–೬೧. ಮನ್ಮಥನು ಅತಿ ಲಜ್ಜೆಯಿಂದ ತಲೆತಗ್ಗಿಸಿಕೊಂಡು ಹಾರೀತನ ಶಾಪಕಾರ್ಯವನ್ನೆಲ್ಲ ಹೇಳಿದನು. ಅನಂತರ ದೇವತೆಗಳು ಇಂತೆಂದರು, "ಯಾರ ಮಾತಿನಿಂದ ಈ ಪಾಪವು ಆಚರಿಸಲ್ಪಟ್ಟಿರುವುದೋ ಅವರನ್ನು ಆರಾಧಿಸುವುದರಿಂದ ಇದು ನಿಶ್ಚಯವಾಗಿಯೂ ನಾಶವಾಗುವುದು.

೬೨. ಆದುದರಿಂದ ಮನ್ಮಥ! ನೀನು ಶಿಲೆಯ ರೂಪದಿಂದಿರುವ ಇವಳನ್ನು ಆರಾಧಿಸು. ಅದರಿಂದ ಕುಷ್ಠವು ನಾಶವಾಗಿ ತೇಜಸ್ಸು ಹೆಚ್ಚುವುದು.

೬೩. ಪ್ರಪಂಚದಲ್ಲಿ ಪ್ರಜಾಸೃಷ್ಟಿಯೂ, ದೇವತೆಗಳ ಕಾರ್ಯವೂ ಆಗುವುದು. ವಾಕ್ಕೃತ ಪಾಪದ ಹೊರತು ಬೇರೆ ಕಾಯಜ ಪಾಪವು ನಿನ್ನಲ್ಲಿಲ್ಲ.

೬೪–೬೫. ಈ ಕುಂಡದಲ್ಲಿ ಕುಷ್ಠವ್ಯಾಧಿಯಿಂದಲೂ, ಕಾಯಿಕ ಪಾಪದಿಂದಲೂ ಕೂಡಿದ ಬೇರಾವ ಮನುಷ್ಯನಾದರೂ ಶ್ರದ್ಧೆಯಿಂದ ಮಿಂದು ಪಾಪಮುಕ್ತವಾದ ಈ ಶಿಲೆಯನ್ನು ಮುಟ್ಟಿದರೆ ವ್ಯಾಧಿರಹಿತನಾಗಿ ವ್ಯಥೆಯಿಲ್ಲದವನಾಗುವನು.

ಏತತ್ಸೌಭಾಗ್ಯಕೂಪಂ ಚ ಲೋಕೇ ಖ್ಯಾತಂ ಜಲಾಶಯಂ ।
ಭವಿಷ್ಯತಿ ನ ಸಂದೇಹಃ ಸರ್ವರೋಗಕ್ಷಯಾವಹಂ ॥ ೬೬ ॥
ದದ್ರೂಣಿ ದುರ್ವಿಭೂತಾನಿ ತಥಾಽನ್ಯಾಶ್ಚ ವಿಚರ್ಚಿಕಾಃ ।
ಅತ್ರ ಸ್ನಾತಸ್ಯ ಯಾಸ್ಯಂತಿ ದೃಷ್ಟ್ವೈತಾಂ ಸದ್ಯ ಏವ ಹಿ ॥ ೬೭ ॥
ಏವಮುಕ್ತ್ವಾಽಥ ತೇ ದೇವಾಃ ಪ್ರಜಗ್ಮುಸ್ತ್ರಿದಶಾಲಯಂ ।
ಕಾಮದೇವೋಽಪಿ ತತ್ರಸ್ಥಸ್ತಸ್ಯಾಃ ಪೂಜಾಮಥ ವ್ಯಧಾತ್ ॥ ೬೮ ॥
ತತಶ್ಚ ಸಮತಿಕ್ರಾಂತೇ ಮಾಸಮಾತ್ರೇ ದ್ವಿಜೋತ್ತಮಾಃ ।
ತಾದೃಗ್ರೂಪಃ ಸ ಸಂಜಾತೋ ಯಾದೃಗಾಸೀತ್ಪುರಾ ಸ್ಮರಃ ॥ ೬೯ ॥
ತತಶ್ಚಾಯತನಂ ತಸ್ಯಾಃ ಕೃತ್ವಾ ಶ್ರದ್ಧಾಸಮನ್ವಿತಃ ।
ಜಗಾಮ ವಾಂಛಿತಂ ದೇಶಂ ಸೃಷ್ಟ್ಯರ್ಥಂ ಯತ್ನಮಾಸ್ಥಿತಃ ॥ ೭೦ ॥
ಸಾಽಪಿ ನಮ್ರಮುಖೀ ತಾದೃಕ್ತೇನ ಶಪ್ತಾ ತಥೈವ ಚ ।
ಸಂಜಾತಾ ಖಂಡಕಾಕಾರಾ ತೇನ ಖಂಡಶಿಲಾ ಸ್ಮೃತಾ ॥ ೭೧ ॥
ಯಸ್ತಾಂ ಪೂಜಯತೇ ಭಕ್ತ್ಯಾ ತ್ರಯೋದಶ್ಯಾಂ ತಥೈವ ಚ ।
ನಾಽಪವಾದೋ ಭವೇತ್ತಸ್ಯ ಪರಧಾರಸಮುದ್ಭವಃ ॥ ೭೨ ॥
ಕಾಮಿನ್ಯಾಶ್ಚ ವಿಶೇಷೇಣ ಪ್ರಾಹೈತಚ್ಛಂಕರಾತ್ಮಜಃ ।
ಕಾರ್ತಿಕೇಯೋ ದ್ವಿಜಶ್ರೇಷ್ಠಾಃ ಸತ್ಯಮೇತನ್ಮಯೋದಿತಂ ॥ ೭೩ ॥

---

೬೬. ಸಕಲ ಪಾಪಗಳನ್ನು ನೀಗಿಸುವ ಈ ಕೂಪವು ಸೌಭಾಗ್ಯಕೂಪವೆಂದು ಪ್ರಪಂಚದಲ್ಲಿ ಪ್ರಸಿದ್ಧವಾಗುವುದು.

೬೭. ಇಲ್ಲಿ ಮಿಂದು ಈ ಶಿಲೆಯನ್ನು ನೋಡಿದವನ ಕಜ್ಜಿ, ಕುಷ್ಠ ಮೊದಲಾದ ರೋಗಗಳು ಪರಿಹಾರವಾಗುವುವು."

೬೮. ಆ ದೇವತೆಗಳು ಹೀಗೆ ಹೇಳಿ ಅಮರಾವತಿಗೆ ತೆರಳಿದರು. ಕಾಮದೇವನು ಅಲ್ಲಿದ್ದು ಅವಳನ್ನು ಪೂಜಿಸಿದನು.

೬೯. ದ್ವಿಜವರ್ಯರೆ! ಅನಂತರ ಒಂದು ತಿಂಗಳು ಕಳೆಯಲು ಮನ್ಮಥನು ಮೊದಲಿನಂತೆಯೇ ಸುಂದರನಾದನು.

೭೦. ಅವನು ಅವಳಿಗೆ ಶ್ರದ್ಧೆಯಿಂದ ಆಲಯವನ್ನು ಕಟ್ಟಿಸಿ ಸೃಷ್ಟಿಗಾಗಿ ಇಷ್ಟಬಂದ ಸ್ಥಳಕ್ಕೆ ತೆರಳಿದನು.

೭೧. ಹಾರೀತನಿಂದ ಶಪ್ತಳಾಗಿ ತಲೆ ತಗ್ಗಿಸಿಕೊಂಡಿರುವ ಅವಳು ಖಂಡಾಕಾರಳಾಗಿ ಪರಿಣಮಿಸಿ ಖಂಡಶಿಲೆಯೆಂದು ಪ್ರಸಿದ್ಧಳಾದಳು.

೭೨. ತ್ರಯೋದಶಿಯ ದಿನ ಅವಳನ್ನು ಪೂಜಿಸಿದ ಮನುಷ್ಯನಿಗೆ ಪರಪತ್ನೀ ಸಂಬಂಧವಾದ ಅಪವಾದವು ಉಂಟಾಗುವುದಿಲ್ಲ.

೭೩. ಹೆಂಗಸಿಗೆ ವಿಶೇಷವಾಗಿ ಅಪವಾದವು ಸಂಭವಿಸುವುದಿಲ್ಲ. ಹೀಗೆಂದು ಶಂಕರನ ತನಯನಾದ ಸ್ಕಂದನು ಹೇಳಿರುವನು. ನಾನು ಹೇಳಿದ ಈ ಮಾತು ನಿಜ.

ತಥಾ ಕಾಮೇಶ್ವರಂ ದೇವಂ ಕಾಮದೇವಪ್ರತಿಷ್ಠಿತಂ ।
ತ್ರಯೋದಶ್ಯಾಂ ಸಮಾರಾಧ್ಯ ಸರ್ವಾನ್ ಕಾಮಾನವಾಪ್ನುಯಾತ್ ॥೭೪॥
ರತಿಪ್ರೀತಿ ಸಮಾಯುಕ್ತಃ ಸ್ಥಿತಸ್ತತ್ರ ಸ್ಮರಸ್ತಥಾ ।
ಮೂರ್ತೋ ಬ್ರಾಹ್ಮಣಶಾರ್ದೂಲಾಃ ಶ್ರೇಷ್ಠ ಪ್ರಾಸಾದಮಾಶ್ರಿತಃ ॥ ೭೫ ॥
ವಿರೂಪೋ ದುರ್ಭಗೋ ಯೋ ವಾ ತ್ರಯೋದಶ್ಯಾಂ ಸಮಾಹಿತಃ ।
ಯಸ್ತಂ ಕುಂಕುಮಜೈಃ ಪುಷ್ಪೈಃ ಸಂಪೂಜಯತಿ ಮಾನವಃ ॥ ೭೬ ॥
ಸ ಸೌಭಾಗ್ಯ ಸಮಾಯುಕ್ತೋ ರೂಪವಾಂಶ್ಚ ಪ್ರಜಾಯತೇ ।
ಯಾ ನಾರೀ ಪತಿನಾ ತ್ಯಕ್ತಾ ಸಪತ್ನೀಜನಸಂವೃತಾ ॥ ೭೭ ॥
ತಂ ದೇವಂ ಸುಕಲತ್ರಾಢ್ಯಂ ತಥೈವ ಪರಿಪೂಜಯೇತ್ ।
ತ್ರಯೋದಶ್ಯಾಂ ದ್ವಿಜಶ್ರೇಷ್ಠಾಃ ಕೇಸರೈಃ ಕುಂಕುಮೋದ್ಭವೈಃ ॥ ೭೮ ॥
ಸಾ ಸೌಭಾಗ್ಯವತೀ ವಿಪ್ರಾ ಜಾಯತೇ ಚ ಪ್ರಜಾವತೀ ।
ಧನಧಾನ್ಯಸಮೃದ್ಧಾ ಚ ದುಃಖಶೋಕವಿವರ್ಜಿತಾ ।
ದೋಷೈಃ ಸರ್ವೈರ್ವಿನಿರ್ಮುಕ್ತಾ ಶಂಸಿತಾ ಧರಣೀತಲೇ ॥ ೭೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಖಂಡಶಿಲಾಸೌಭಾಗ್ಯಕೂಪಿಕೋತ್ಪತ್ತಿಮಾಹಾತ್ಮ್ಯವರ್ಣನಂ"
ನಾಮ ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

---

೭೪. ತ್ರಯೋದಶಿಯ ದಿನ ಹಾಗೆಯೇ ಕಾಮದೇವನು ಪ್ರತಿಷ್ಠೆ ಮಾಡಿರುವ ಕಾಮೇಶ್ವರನನ್ನು ಪೂಜಿಸಿದವನೂ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

೭೫. ಬ್ರಾಹ್ಮಣೋತ್ತಮರೆ! ಮನ್ಮಥನು ಅಲ್ಲಿ ರತಿ, ಪ್ರೀತಿಯರೆಂಬ ಇಬ್ಬರು ಸತಿಯರೊಡನೆ ಉತ್ತಮವಾದ ಪ್ರಾಸಾದದಲ್ಲಿ ನೆಲೆಸಿರುವನು.

೭೬–೭೯. ತ್ರಯೋದಶಿಯ ದಿನ ಆ ಕಾಮೇಶ್ವರನನ್ನು ಕುರೂಪಿಯಾಗಲಿ, ದುರ್ಭಗನಾಗಲಿ ಕುಂಕುಮಕೇಸರದಿಂದ ಪೂಜಿಸಿದರೆ ಅವನು ರೂಪಸೌಭಾಗ್ಯವುಳ್ಳವನಾಗುವನು. ಪತಿಯಿಂದ ತ್ಯಕ್ತಳೂ, ಸವತಿಯರುಳ್ಳವಳೂ ಆದ ನಾರಿಯು ಕುಂಕುಮಕೇಸರದಿಂದ ಪತ್ನಿಯರೊಡನೆ ಇರುವ ಕಾಮೇಶ್ವರನನ್ನು ಪೂಜಿಸಿದರೆ ಅವಳು ಭೂಮಿಯಲ್ಲಿ ಸೌಭಾಗ್ಯವತಿಯೂ, ಸಂತತಿಯುಳ್ಳವಳೂ, ಧನಧಾನ್ಯಸಮೃದ್ಧಳೂ, ದುಃಖವಿಲ್ಲದವಳೂ, ದೋಷರಹಿತಳೂ, ಶ್ಲಾಘ್ಯಳೂ ಆಗುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಖಂಡಶಿಲಾಸೌಭಾಗ್ಯಕೂಪಿಕೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚತ್ರಿಂಶದುತ್ತರಶತತಮೋಽಧ್ಯಾಯಃ

## ಪತಿವ್ರತಾ ವರಲಾಭವರ್ಣನಂ

ಸೂತ ಉವಾಚ :—

ತಥಾಽನ್ಯಾಽಪಿ ಚ ತತ್ರಾಽಸ್ತಿ ದೀರ್ಘಿಕಾಖ್ಯಾ ಸುಶೋಭನಾ ।
ಸರಸೀ ಲೋಕವಿಖ್ಯಾತಾ ಸರ್ವಪಾತಕನಾಶಿನೀ ॥ ೧ ॥
ಯಸ್ಯಾಂ ಸ್ನಾತೋ ನರಃ ಸಮ್ಯಗ್ಭಾಸ್ಕರಸ್ಯೋದಯಂ ಪ್ರತಿ ।
ಜ್ಯೇಷ್ಠಶುಕ್ಲಚತುರ್ದಶ್ಯಾಂ ಮುಚ್ಯತೇ ಸರ್ವಪಾತಕೈಃ ॥ ೨ ॥
ಆಸೀತ್ಪೂರ್ವಂ ದ್ವಿಜೋ ವೀರಶರ್ಮನಾಮಾಽತಿವಿಶ್ರುತಃ ।
ವೇದವಿದ್ಯಾವ್ರತಸ್ನಾತೋ ವರ್ಧಮಾನೇ ಪುರೋತ್ತಮೇ ॥ ೩ ॥
ತಸ್ಯ ಕನ್ಯಾ ಸಮುತ್ಪನ್ನಾ ಕದಾಚಿಲ್ಲಕ್ಷಣಾಚ್ಚ್ಯುತಾ ।
ಅತಿದೀರ್ಘಾ ಪ್ರಮಾಣೇನ ಜನಹಾಸ್ಯ ವಿವರ್ಧಿನೀ ॥ ೪ ॥
ತತಃ ಸಾ ಯೌವನಂ ಪ್ರಾಪ್ತಾ ತದ್ರೂಪಾಽಪಿ ಕುಮಾರಿಕಾ ।
ನಕಶ್ಚಿದ್ವರಯಾಮಾಸ ಶಾಸ್ತ್ರವಾಕ್ಯಮನುಸ್ಮರನ್ ॥ ೫ ॥

---

### ಕನ್ನಡದ ಅನುವಾದ

#### ಪತಿವ್ರತಾವರಲಾಭವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ಅಲ್ಲಿ ಮಂಗಳಕರವೂ, ಲೋಕಪ್ರಸಿದ್ಧವೂ, ಸಕಲಪಾಪವನ್ನು ಪರಿಹರಿಸುವುದೂ ಆದ ಮತ್ತೊಂದು ದೀರ್ಘಿಕೆಯೆಂಬ ಸರೋವರವಿದೆ.

೨. ಅಲ್ಲಿ ಜ್ಯೇಷ್ಠ ಶುಕ್ಲ ತ್ರಯೋದಶಿಯ ದಿನ ಸೂರ್ಯೋದಯ ಕಾಲದಲ್ಲಿ ಮಿಂದ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೩. ಹಿಂದೆ ವರ್ಧಮಾನಪುರದಲ್ಲಿ ವೇದವಿದ್ಯಾಪಾರಂಗತನಾದ ವೀರಶರ್ಮನೆಂಬ ಬ್ರಾಹ್ಮಣನಿದ್ದನು.

೪. ಒಂದಾನೊಂದು ಸಮಯದಲ್ಲಿ ಅವನಿಗೆ ಲಕ್ಷಣರಹಿತಳೂ, ಅತ್ಯಂತ ಉದ್ದದವಳೂ, ಜನರ ಹಾಸ್ಯಕ್ಕೆ ಪಾತ್ರಳೂ ಆದ ಓರ್ವ ಕನ್ಯೆಯು ಜನಿಸಿದಳು.

೫. ಅನಂತರ ಅವಳು ಯುವತಿಯಾಗಲು ಆ ರೂಪದಿಂದಿರುವ ಅವಳನ್ನು ಶಾಸ್ತ್ರವಾಕ್ಯವನ್ನು ಸ್ಮರಿಸುತ್ತ ಒಬ್ಬನೂ ವಿವಾಹಮಾಡಿಕೊಳ್ಳಲಿಲ್ಲ.

ಅತಿಸಂಕ್ಷಿಪ್ತಕೇಶಾ ಯಾ ಅತಿದೀರ್ಘಾಽತಿವಾಮನಾ ।
ಉದ್ವಾಹಯತಿ ಯಃ ಕಸ್ಯಾಂ ಪುರುಷಃ ಕಾಮಮೋಹಿತಃ ॥ ೬ ॥
ಷಣ್ಮಾಸಾಭ್ಯಂತರೇ ಮೃತ್ಯುಂ ಸ ಪ್ರಾಪ್ನೋತಿ ನರೋ ಧ್ರುವಂ ।
ಏತಸ್ಮಾತ್ಕಾರಣಾತ್ಸರ್ವೇ ತಾಂ ತ್ಯಜಂತಿ ಕುಮಾರಿಕಾಂ ॥ ೭ ॥
ಪುರುಷಾ ಅತಿದೀರ್ಘತ್ವಯುಕ್ತಾಂ ವೀಕ್ಷ್ಯ ಸಮಂತತಃ ।
ತತೋ ವೈರಾಗ್ಯಮಾಪನ್ನಾ ತಪಸ್ತೇಪೇಽತಿದಾರುಣಂ ॥ ೮ ॥
ಚಾಂದ್ರಾಯಣಾನಿ ಕೃಚ್ಛ್ರಾಣಿ ತಯಾ ಚೀರ್ಣಾನ್ಯನೇಕಶಃ ।
ಪಾರಾಕಾಣಿ ಯಥೋಕ್ತಾನಿ ತಥಾ ಸಾಂತಪನಾನಿ ಚ ॥ ೯ ॥
ವ್ರತಂ ಯದ್ವಿದ್ಯತೇ ಕಿಂಚಿನ್ನಿಯಮಃ ಸಂಯಮಸ್ತಥಾ ।
ಅನ್ಯಚ್ಚಾಽಪಿ ಶುಭಂ ಕೃತ್ಯಂ ತತ್ಸರ್ವಂ ಚ ತಯಾ ಕೃತಂ ॥ ೧೦ ॥
ಏವಂ ತಸ್ಯಾ ವ್ರತಸ್ಥಾಯಾ ಜರಾಸಮ್ಯಗುಪಸ್ಥಿತಾ ।
ತಥಾಽಪಿ ತೇಜಸೋ ವೃದ್ಧಿರ್ವವೃಧೇ ತಪಸಾಕೃತಾ ॥ ೧೧ ॥
ಸಾ ಚ ನಿತ್ಯಂ ಮಹೇಂದ್ರಸ್ಯ ಸಭಾಂ ಯಾತ್ಯತಿಕೌತುಕಾತ್ ।
ದೇವರ್ಷೀಣಾಂ ಮತಂ ಶ್ರೋತುಂ ದೇವತಾನಾಂ ವಿಶೇಷತಃ ॥ ೧೨ ॥
ಯದಾ ಸಾ ಸ್ವಾಸನಂ ತ್ಯಕ್ತ್ವಾ ಪ್ರಯಾತಿ ಸ್ವಗೃಹೋನ್ಮುಖೀ ।
ತದೈವಾಭ್ಯುಕ್ಷಣಂ ಚಕ್ರುಸ್ತತ್ರ ಶಕ್ರಸ್ಯ ಕಿಂಕರಾಃ ॥ ೧೩ ॥

---

೬–೮. ಸಣ್ಣ ಕೂದಲುಳ್ಳವಳೂ, ಅತ್ಯಂತ ಉದ್ದದವಳೂ, ಅತ್ಯಂತ ಕುಳ್ಳಳೂ ಆದ ಕನ್ಯೆಯನ್ನು ಕಾಮಮೋಹಿತನಾಗಿ ಮದುವೆಮಾಡಿಕೊಂಡವನು ಆರು ತಿಂಗಳಲ್ಲಿ ಮಡಿಯುವನು. ಅತಿ ಉದ್ದದವಳಾದ ಕಾರಣದಿಂದ ಅವಳನ್ನು ನೋಡಿ ಯಾರೂ ಮದುವೆಮಾಡಿಕೊಳ್ಳಲಿಲ್ಲ. ಅನಂತರ ಆ ಕನ್ಯೆಯು ವೈರಾಗ್ಯಗೊಂಡು ದಾರುಣವಾದ ತಪಸ್ಸನ್ನಾಚರಿಸಿದಳು.

೯–೧೦. ಅವಳು ಚಾಂದ್ರಾಯಣ, ಕೃಚ್ಛ್ರ, ಪಾರಾಕ, ಸಾಂತಪನ ಮೊದಲಾದ ವ್ರತಗಳನ್ನೂ, ನಿಯಮ ಸಂಯಮಗಳನ್ನೂ, ಇನ್ನೂ ಇತರ ಶುಭ ಕಾರ್ಯಗಳನ್ನೂ ಮಾಡಿದಳು.

೧೧. ಹೀಗೆ ವ್ರತವನ್ನಾಚರಿಸುತ್ತಿರುವ ಅವಳು ಮುದುಕಿಯಾದಳು. ಆದರೂ ತಪಸ್ಸಿನಿಂದ ಅವಳ ತೇಜಸ್ಸು ವೃದ್ಧಿಯಾಯಿತು.

೧೨. ಅವಳು ನಿತ್ಯವೂ ಅತಿ ಕುತೂಹಲದಿಂದ ದೇವತೆಗಳು, ದೇವರ್ಷಿಗಳು ಇವರ ಅಭಿಪ್ರಾಯವನ್ನು ಕೇಳುವುದಕ್ಕಾಗಿ ಮಹೇಂದ್ರನ ಸಭೆಗೆ ಹೋಗುತ್ತಿದ್ದಳು.

೧೩. ಅವಳು ಅಲ್ಲಿಂದ ತನ್ನ ಆಸನವನ್ನು ಬಿಟ್ಟು ಮನೆಗೆ ಹೊರಡಲು ಆಗಲೇ ಇಂದ್ರನ ಭೃತ್ಯರು ಅವಳು ಕುಳಿತಿದ್ದ ಆಸನವನ್ನು ನೀರಿನಿಂದ ಪ್ರೋಕ್ಷಿಸಿದರು.

ತಥಾಽನ್ಯದಿವಸೇ ದೃಷ್ಟಂ ಕ್ರಿಯಮಾಣಂ ತಯಾ ಹಿ ತತ್ ।
ಅಭ್ಯುಕ್ಷಣಂ ಸ್ವಕೀಯೇ ಚ ಆಸನೇ ದ್ವಿಜಸತ್ತಮಾಃ ॥ ೧೪ ॥
ತತಃ ಕೋಪಪರೀತಾಂಗೀ ದೀರ್ಘಿಕಾ ಸಾ ಕುಮಾರಿಕಾ ।
ತ್ರಿಶಾಖಾಂ ಭ್ರುಕುಟೀಂ ಕೃತ್ವಾ ತತಃ ಪ್ರಾಹ ಪುರಂದರಂ ॥ ೧೫ ॥
ಕಿಂ ದೋಷಂ ವೀಕ್ಷ್ಯ ಮೇ ಶಕ್ರ ಪ್ರೋಕ್ಷಿತಂ ಚಾಸನಂ ತ್ವಯಾ ।
ಪರದ್ವಾರಕೃತಂ ದೋಷಂ ಕಿಂ ಮಯ್ಯೈತತ್ಕೃತಂ ಕ್ವಚಿತ್ ॥ ೧೬ ॥
ತಸ್ಮಾನ್ಮೇ ಪಾತಕಂ ಬ್ರೂಹಿ ನೋಚೇಚ್ಛಾಪಂ ಸುದಾರುಣಂ ।
ತ್ವಯಿ ದಾಸ್ಯಾಮ್ಯಸಂದಿಗ್ಧಂ ಸತ್ಯೇನಾತ್ಮಾನಮಾಲಭೇ ॥ ೧೭ ॥

ಇಂದ್ರ ಉವಾಚ :—

ನ ತೇ ದೀರ್ಘೇಽಸ್ತಿ ದೋಷೋಽತ್ರ ಕಶ್ಚಿದೇಕಂ ವಿನಾ ಶುಭೇ ।
ತೇನಾಽಥ ಕ್ರಿಯತೇ ಚೈತದಾಸನಸ್ಯಾಭಿಷೇಚನಂ ॥ ೧೮ ॥
ತ್ವಂ ಕುಮಾರ್ಯಪಿ ಸಂಪ್ರಾಪ್ತಾ ಋತುಕಾಲಂ ವಿಗರ್ಹಿತಾ ।
ತೇನ ದೋಷಂ ತ್ವಮಾಪನ್ನಾ ನಾಽನ್ಯದಸ್ತೀಹ ಕಾರಣಂ ॥ ೧೯ ॥
ತಸ್ಮಾದದ್ಯಾಪಿ ತ್ವಾಂ ಕಶ್ಚಿದುದ್ವಾಹಯತಿ ತಾಪಸಃ ।
ತ್ವಂ ತಂ ವರಯ ಭರ್ತಾರಂ ಯೇನ ಗಚ್ಛಸಿ ಮೇಧ್ಯತಾಂ ॥ ೨೦ ॥

---

೧೪. ದ್ವಿಜವರ್ಯರೆ! ಅವಳು ಇನ್ನೊಂದು ದಿನ ತನ್ನ ಆಸನವನ್ನು ಹಾಗೆ ಪ್ರೋಕ್ಷಿಸುತ್ತಿರುವುದನ್ನು ಕಂಡಳು.

೧೫. ಅನಂತರ ಆ ದೀರ್ಘಿಕಾ ಕುಮಾರಿಯು ಕುಪಿತಳಾಗಿ ಹುಬ್ಬನ್ನು ಗಂಟುಹಾಕಿಕೊಂಡು ಇಂದ್ರನನ್ನು ಕುರಿತು ಇಂತೆಂದಳು.

೧೬. "ಎಲೈ ಇಂದ್ರನೆ! ನೀನು ನನ್ನ ಯಾವ ದೋಷವನ್ನು ಕಂಡು ಆಸನವನ್ನು ಪ್ರೋಕ್ಷಣೆಮಾಡಿಸಿದೆ? ನಾನೇ ಸ್ವಂತವಾಗಿಯಾಗಲಿ, ಇನ್ನೊಬ್ಬರ ಮೂಲಕವಾಗಿಯಾಗಲಿ ಪಾಪವನ್ನು ಮಾಡಿರುವೆನೇ?

೧೭. ನನ್ನ ಪಾಪವನ್ನು ಹೇಳು. ಇಲ್ಲದಿದ್ದರೆ ನಿನಗೆ ಭಯಂಕರ ಶಾಪವನ್ನು ಕೊಡುವೆನು. ನಿಜವಾಗಿಯೂ ಹೇಳುತ್ತೇನೆ."

೧೮. ಇಂದ್ರನು ಹೇಳುತ್ತಾನೆ:—ಮಂಗಳಕರಳೆ! ನಿನ್ನಲ್ಲಿ ಒಂದು ದೋಷವನ್ನು ಬಿಟ್ಟು ಬೇರೆ ಯಾವ ದೋಷವೂ ಇಲ್ಲ. ಆದುದರಿಂದಲೇ ನಿನ್ನ ಆಸನವನ್ನು ತೊಳೆಯಿಸುತ್ತೇನೆ.

೧೯. ನೀನು ಕುಮಾರಿಯಾಗಿರುವಾಗಲೇ ಋತುಮತಿಯಾಗಿರುವುದರಿಂದ ದುಷ್ಟಳಾಗಿರುವೆ. ಬೇರೆ ಏನೂ ಕಾರಣವಿಲ್ಲ.

೨೦. ಆದುದರಿಂದ ನಿನ್ನನ್ನು ಈಗಲೂ ಯಾವ ಮುನಿಯಾದರೂ ಮದುವೆ ಮಾಡಿಕೊಂಡಾನು. ನೀನು ಅವನನ್ನು ವರಿಸು. ಅದರಿಂದ ಪವಿತ್ರಳಾಗುವೆ.

ತತಶ್ಚ ಲಜ್ಜಯಾ ಯುಕ್ತಾ ಸಾ ತದಾ ದೀರ್ಘಕನ್ಯಕಾ ।
ಗತ್ವಾ ಭೂಮಿತಲೇ ತೂರ್ಣಂ ವರ್ಧಮಾನೇ ಪುರೋತ್ತಮೇ ॥ ೨೧ ॥
ತತಃ ಪೂತ್ಕರ್ತುಮಾರಬ್ಧಾ ಚತ್ವರೇಷು ತ್ರಿಕೇಷು ಚ ।
ಉಚ್ಛ್ರಿತ್ಯ ದಕ್ಷಿಣಂ ಪಾಣಿಂ ಭ್ರಮಮಾಣಾ ಇತಸ್ತತಃ ॥ ೨೨ ॥
ಯದಿ ಕಶ್ಚಿದ್ದ್ವಿಜೋ ಜಾತ್ಯಾ ಕರೋತಿ ಮಮ ಸಾಂಪ್ರತಂ ।
ಪಾಣಿಗ್ರಾಹಂ ತಪೋಽರ್ಧಸ್ಯ ಶ್ರೇಯೋ ಯಚ್ಛಾಮಿ ತಸ್ಯ ಚ ॥ ೨೩ ॥
ಏವಂ ತಾಂ ಪ್ರವಿಜಲ್ಪಂತೀಂ ಶ್ರುತ್ವಾ ಲೋಕಾ ದಿವಾನಿಶಂ ।
ಉನ್ಮತ್ತಾಮಿತಿ ಮನ್ವಾನಾ ಹಾಸ್ಯಂ ಚಕ್ರುಃ ಪರಸ್ಪರಂ ॥ ೨೪ ॥
ತತಃ ಕತಿಪಯಾಽಹಸ್ಯ ಪ್ರಕುರ್ವಂತೀ ಚ ದೀರ್ಘಿಕಾ ।
ಕುಷ್ಠವ್ಯಾಧಿಗೃಹೀತೇನ ಬ್ರಾಹ್ಮಣೇನ ಪರಿಶ್ರುತಾ ॥ ೨೫ ॥
ತತಃ ಪ್ರೋವಾಚ ಮಂದಂ ಸ ಸಮಾಹೂಯ ಸುದುಃಖಿತಾಂ ॥ ೨೬ ॥
ಅಹಂ ತ್ವಾಮುದ್ವಹಾಮ್ಯದ್ಯ ಕೃತ್ವಾ ಪಾಣಿಗ್ರಹಂ ತವ ।
ಯದಿ ಮದ್ವಚನಂ ಸರ್ವಂ ಸರ್ವದೈವಾಽನುತಿಷ್ಠಸಿ ॥ ೨೭ ॥

ಕುಮಾರಿಕೋವಾಚ :—

ಕರಿಷ್ಯಾಮಿ ನ ಸಂದೇಹಸ್ತವ ವಾಕ್ಯಂ ದ್ವಿಜಾಧಿಪ ।
ಕುರು ಪಾಣಿಗ್ರಹಂ ಮೇಽದ್ಯ ವಿಧಿದೃಷ್ಟೇನ ಕರ್ಮಣಾ ॥ ೨೮ ॥

---

೨೧–೨೩. ಅನಂತರ ಅವಳು ಲಜ್ಜಿತಳಾಗಿ ಶೀಘ್ರವಾಗಿ ಭೂಲೋಕಕ್ಕೆ ಹೋಗಿ ವರ್ಧಮಾನಪುರದಲ್ಲಿ ಚೌಕಗಳು ಮತ್ತು ಮೂರು ದಾರಿಗಳಲ್ಲಿ ಬಲಗೈಯನ್ನು ಎತ್ತಿಕೊಂಡು ಇಲ್ಲಿ ಅಲ್ಲಿ ಸಂಚರಿಸುತ್ತ, "ನನ್ನನ್ನು ಒಬ್ಬ ಬ್ರಾಹ್ಮಣನು ವಿವಾಹಮಾಡಿಕೊಂಡರೆ ಅವನಿಗೆ ತಪಸ್ಸಿನ ಅರ್ಧ ಫಲವನ್ನು ಕೊಡುವೆನು" ಎಂದು ಕೂಗಲು ಆರಂಭಿಸಿದಳು.

೨೪. ಹೀಗೆ ಹಗಲು ರಾತ್ರಿ ಕೂಗುತ್ತಿರುವ ಅವಳನ್ನು ನೋಡಿ ಇವಳು ಹುಚ್ಚಳೆಂದು ತಿಳಿದು ಜನರೆಲ್ಲ ಪರಸ್ಪರ ಹಾಸ್ಯಮಾಡಿದರು.

೨೫. ಹೀಗೆ ಅವಳು ಕೆಲವು ದಿನಗಳು ಕೂಗುತ್ತಿರಲು ಒಬ್ಬ ಕುಷ್ಠವ್ಯಾಧಿಗ್ರಸ್ತನಾದ ಬ್ರಾಹ್ಮಣನು ಅದನ್ನು ಕೇಳಿದನು.

೨೬–೨೭. ಅನಂತರ ಆ ಬ್ರಾಹ್ಮಣನು ದುಃಖಗೊಂಡಿರುವ ಅವಳನ್ನು ಮೆಲ್ಲನೆ ಕರೆದು, "ನೀನು ನನ್ನ ಮಾತನ್ನೆಲ್ಲ ಯಾವಾಗಲೂ ನಡೆಯಿಸುವುದಾದರೆ ನಾನು ನಿನ್ನನ್ನು ವರಿಸುತ್ತೇನೆ" ಎಂದನು.

೨೮. ಕುಮಾರಿಕೆಯು ಹೇಳುತ್ತಾಳೆ:—ಎಲೈ ದ್ವಿಜನೆ! ನಿನ್ನ ಮಾತನ್ನು ನಿಶ್ಚಯವಾಗಿಯೂ ನಡೆಸುವೆನು. ಈ ದಿನ ವಿಧಿಯಂತೆ ನನ್ನನ್ನು ವಿವಾಹ ಮಾಡಿಕೊ.

ಸೂತ ಉವಾಚ :—

ತತಸ್ತಸ್ಯಾಃ ಕುಮಾರ್ಯಾಃ ಸ ಪಾಣಿಂ ಜಗ್ರಾಹ ದಕ್ಷಿಣಾಂ ।
ಗೃಹ್ಯೋಕ್ತೇನ ವಿಧಾನೇನ ದೇವಾಗ್ನಿಗುರುಸನ್ನಿಧೌ ॥ ೨೯ ॥
ಅಥ ಸಾ ಪ್ರಾಹ ಭೂಯೋಽಪಿ ವಿವಾಹಕೃತಮಂಗಲಾ ।
ಆದೇಶಂ ದೇಹಿ ಮೇ ನಾಥ ಯಂ ಕರೋಮಿ ತವಾಽಧುನಾ ॥ ೩೦ ॥

ಪತಿರುವಾಚ :—

ಅಷ್ಟಷಷ್ಟಿಷು ತೀರ್ಥೇಷು ಸ್ನಾತುಮಿಚ್ಛಾಮಿ ಸುಂದರಿ ।
ಸಾಹಾಯ್ಯೇನ ತ್ವದೀಯೇನ ಯದಿ ಶಕ್ನೋಷಿ ತತ್ಕುರು ॥ ೩೧ ॥
ಬಾಢಮಿತ್ಯೇವ ಸಾ ಪ್ರೋಚ್ಯ ತತಸ್ತೂರ್ಣಂ ಪತಿವ್ರತಾ ।
ತತ್ಪ್ರಮಾಣಂ ದೃಢಂ ಕೃತ್ವಾ ರಮ್ಯಂ ವಂಶಕುಟೀರಕಂ ॥ ೩೨ ॥
ಮೃದುತೂಲಸಮಾಯುಕ್ತಂ ತತಃ ಪ್ರಾಹ ನಿಜಂ ಪತಿಂ ।
ಕೃತಾಂಜಲಿಪುಟಾ ಭೂತ್ವಾ ಪ್ರಹೃಷ್ಟೇನಾಂತರಾತ್ಮನಾ ॥ ೩೩ ॥
ಏತತ್ತವ ಕೃತೇ ರಮ್ಯಂ ಕೃತಂ ವಂಶಕುಟೀರಕಂ ।
ಮಮ ನಾಥಾರುಹಾಽಽಶು ತ್ವಂ ಯೇನ ಕೃತ್ವಾಽಥ ಮೂರ್ಧನಿ ।
ನಯಾಮಿ ಸರ್ವತೀರ್ಥೇಷು ಕ್ಷೇತ್ರೇಷು ಸುಶುಭೇಷು ಚ ॥ ೩೪ ॥

---

೨೯. ಸೂತನು ಹೇಳುತ್ತಾನೆ:—ಅನಂತರ ಆ ಬ್ರಾಹ್ಮಣನು ಗೃಹ್ಯೋಕ್ತ ವಿಧಿಯಿಂದ ದೇವತೆ, ಅಗ್ನಿ, ಗುರು ಇವರ ಸನ್ನಿಧಿಯಲ್ಲಿ ಆ ಕುಮಾರಿಯ ಬಲಗೈಯನ್ನು ಹಿಡಿದು ಮದುವೆಮಾಡಿಕೊಂಡನು.

೩೦. ಬಳಿಕ ಅವಳು ವಿವಾಹದ ಅಲಂಕಾರವುಳ್ಳವಳಾಗಿ, "ಸ್ವಾಮಿ! ನನಗೆ ಅಪ್ಪಣೆಯನ್ನು ಮಾಡು. ಈಗ ನಾನು ನಿನಗೆ ಯಾವ ಸೇವೆಯನ್ನು ಮಾಡಲಿ" ಎಂದಳು.

೩೧. ಪತಿಯು ಹೇಳುತ್ತಾನೆ:—ಸುಂದರಿ! ನಾನು ಅರುವತ್ತೆಂಟು ತೀರ್ಥಗಳಲ್ಲಿ ನಿನ್ನ ಸಹಾಯದಿಂದ ಸ್ನಾನಮಾಡಲಿಚ್ಛಿಸುವೆನು. ಸಾಧ್ಯವಾದರೆ ಅದನ್ನು ಮಾಡು.

೩೨–೩೩. ಪತಿವ್ರತೆಯಾದ ಅವಳು ಹಾಗೆಯೇ ಆಗಲೆಂದು ಶೀಘ್ರವಾಗಿ ಅವನಷ್ಟು ದೊಡ್ಡದೂ, ರಮ್ಯವೂ ಆದ ಬಿದಿರಿನ ಗೂಡೆಯನ್ನು ಮಾಡಿ ಅದರಲ್ಲಿ ಹತ್ತಿಯನ್ನು ಹಾಸಿ ಕೈಮುಗಿದುಕೊಂಡು ಸಂತೋಷಗೊಂಡ ಮನಸ್ಸಿನಿಂದ ತನ್ನ ಪತಿಯನ್ನು ಕುರಿತು ಇಂತೆಂದಳು.

೩೪. "ನಾಥ! ನಾನು ನಿನಗಾಗಿ ಮನೋಹರವಾದ ಈ ಬಿದಿರಿನ ಗೂಡೆಯನ್ನು ನಿರ್ಮಿಸಿರುವೆನು. ನೀನು ತ್ವರೆಯಾಗಿ ಇದನ್ನು ಏರು. ನಾನು ಅದನ್ನು ತಲೆಯ ಮೇಲಿಟ್ಟುಕೊಂಡು ಸಮಸ್ತ ತೀರ್ಥಕ್ಷೇತ್ರಗಳಿಗೂ ತೆಗೆದುಕೊಂಡ ಹೋಗುವೆನು."

ತತಃ ಕುಷ್ಠೀ ಪ್ರಹೃಷ್ಟಾತ್ಮಾ ಶನೈರುತ್ಥಾಯ ಭೂತಲಾತ್ ।
ತಯಾಚೋದ್ಧೃತದೇಹಃ ಸನ್ ಸುಪ್ತೋ ವಂಶಕುಟೀರಕೇ ॥ ೩೫ ॥
ತತಸ್ತಂ ಮಸ್ತಕೇ ಕೃತ್ವಾ ಸರ್ವತೀರ್ಥೇ ಯಥಾ ಸುಖಂ ।
ಸರ್ವಕ್ಷೇತ್ರೇಷು ಬಭ್ರಾಮ ಸ್ನಾಪಯಂತೀ ನಿಜಂ ಪತಿಂ ॥ ೩೬ ॥
ಯಥಾ ಯಥಾ ಸ ಚಕ್ರೇಽಥ ಸ್ನಾನಂ ತೀರ್ಥೇಷು ಕುಷ್ಠಭಾಕ್ ।
ತಥಾ ತಥಾಽಸ್ಯ ಗಾತ್ರೇಷು ತೇಜೋವೃದ್ಧಿಂ ಪ್ರಗಚ್ಛತಿ ॥ ೩೭ ॥
ತತಃ ಕ್ರಮೇಣ ಸಾ ಸಾಧ್ವೀ ಭ್ರಮಮಾಣಾ ಮಹೀತಲೇ ।
ಹಾಟಕೇಶ್ವರಜೇ ಕ್ಷೇತ್ರೇ ಸಂಪ್ರಾಪ್ತಾ ರಜನೀಮುಖೇ ॥ ೩೮ ॥
ಕ್ಲಾಂತಾ ವೈಕ್ಲವ್ಯಮಾಪನ್ನಾ ಭಾರಾಕ್ರಾಂತಾ ಪತಿವ್ರತಾ ।
ನಿದ್ರಾಂಧಾ ನಿಃಶ್ವಸಂತೀ ಚ ಪ್ರಸ್ಖಲಂತೀ ಪದೇ ಪದೇ ॥ ೩೯ ॥
ಅಥ ತತ್ರ ಪ್ರದೇಶೇತು ಮಾಂಡವ್ಯೋ ಮುನಿಪುಂಗವಃ ।
ಶೂಲಾರೋಪಿತ ಗಾತ್ರಸ್ತು ಸಂತಿಷ್ಠತಿ ಸುದುಃಖಿತಃ ॥ ೪೦ ॥
ಅಥ ಸಾ ತಂ ಸಮಾಸಾದ್ಯ ಶೂಲಂ ರಾತ್ರೌ ಪತಿವ್ರತಾ ।
ನಿಜಗಾತ್ರೇಣ ಭಾರಾರ್ತಾ ಗಚ್ಛಮಾನಾ ಮಹಾಸತೀ ॥ ೪೧ ॥
ತಯಾ ಸಂಚಾಲಿತಃ ಸೋಽಥ ಮಾಂಡವ್ಯೋ ಮುನಿಪುಂಗವಃ ।
ಪರಾಂ ಪೀಡಾಂ ಸಮಾಸಾದ್ಯ ತತಃ ಪ್ರಾಹ ಸುದುಃಖಿತಃ ॥ ೪೨ ॥

---

೩೫. ಅನಂತರ ಕುಷ್ಠಿಯಾದ ಆ ಬ್ರಾಹ್ಮಣನು ಸಂತೋಷಗೊಂಡು ಮೆಲ್ಲನೆ ಭೂಮಿಯಿಂದ ಎದ್ದು ಅವಳಿಂದ ಎತ್ತಲ್ಪಟ್ಟ ಶರೀರವುಳ್ಳವನಾಗಿ ಬಿದಿರಿನ ಗೂಡೆಯಲ್ಲಿ ಮಲಗಿದನು.

೩೬. ಅನಂತರ ಅವಳು ಅವನನ್ನು ತಲೆಯಮೇಲೆ ಹೊತ್ತುಕೊಂಡು ಸುಖವಾಗಿ ಸಮಸ್ತ ತೀರ್ಥಕ್ಷೇತ್ರಗಳಲ್ಲಿಯೂ ಸ್ನಾನ ಮಾಡಿಸುತ್ತ ಸಂಚರಿಸಿದಳು.

೩೭. ತೀರ್ಥಗಳಲ್ಲಿ ಸ್ನಾನ ಮಾಡಿದಹಾಗೆಲ್ಲ ಆ ಕುಷ್ಠಿಯ ಶರೀರದಲ್ಲಿ ತೇಜಸ್ಸು ಹೆಚ್ಚಿತು.

೩೮–೩೯. ತರುವಾಯ ಆ ಕುಮಾರಿಯು ಭೂಮಿಯಲ್ಲಿ ಕ್ರಮವಾಗಿ ಸಂಚರಿಸುತ್ತ ಬಳಲಿದವಳೂ, ವ್ಯಥೆಗೊಂಡವಳೂ, ಭಾರವುಳ್ಳವಳೂ, ನಿದ್ರಾಮೂಢಳೂ, ನಿಟ್ಟುಸಿರುಬಿಡುವವಳೂ, ಪ್ರತಿಹೆಜ್ಜೆಯಲ್ಲಿಯೂ ಜಾರುತ್ತಿರುವವಳೂ ಆಗಿ ಸಂಧ್ಯಾಕಾಲದಲ್ಲಿ ಹಾಟಕೇಶ್ವರಕ್ಷೇತ್ರಕ್ಕೆ ಬಂದಳು.

೪೦. ಆಗ ಅಲ್ಲಿ ಮಾಂಡವ್ಯನೆಂಬ ಮುನಿಯು ಶೂಲಕ್ಕೇರಿಸಿದ ಶರೀರವುಳ್ಳವನಾಗಿ ದುಃಖಪಡುತ್ತಿದ್ದನು.

೪೧–೪೨. ಭಾರದಿಂದ ವ್ಯಥೆಗೊಂಡ ಪತಿವ್ರತೆಯಾದ ಅವಳು ರಾತ್ರಿಯ ವೇಳೆಯಲ್ಲಿ ಕಾಣದೆ ತನ್ನ ಶರೀರದಿಂದ ಆ ಶೂಲವನ್ನು ಮುಟ್ಟಿದ್ದರಿಂದ ಅಲ್ಲಾಡಿದ ಮಾಂಡವ್ಯನು ಅತ್ಯಂತ ವೇದನೆಯುನ್ನು ಹೊಂದಿ ದುಃಖದಿಂದ ಇಂತೆಂದನು.

ಕೇನೇದಂ ಪಾಪ್ಮನಾ ಶಲ್ಯಂ ಮಮಾಂತಃ ಪರಿಚಾಲಿತಂ ।
ಯೇನಾಽಹಂ ದುಃಖಯುಕ್ತೋಽಪಿ ಭೂಯೋ ದುಃಖಾಸ್ಪದೀಕೃತಃ॥೪೩॥
ದೀರ್ಘಿಕೋವಾಚ :—
ನ ಮಯಾ ತ್ವಂ ಮಹಾಭಾಗ ನಿದ್ರೋಪಹತಯಾ ದೃಶಾ ।
ದೃಷ್ಟಸ್ತೇನ ಪರಿಸ್ಪೃಷ್ಟೋ ಹ್ಯಸ್ಪೃಶ್ಯಃ ಪಾಪಕೃತ್ತಮಃ ॥ ೪೪ ॥
ನ ತ್ವಯಾ ಸದೃಶಶ್ಚಾಽನ್ಯಃ ಪಾಪಾತ್ಮಾಽಸ್ತಿ ಧರಾತಲೇ ।
ಶಿರಸ್ಯುದ್ಭೂತಶೂಲೋಽಪಿ ಯೋ ಮೃತ್ಯುಂ ನಾಽಧಿಗಚ್ಛತಿ ॥ ೪೫ ॥
ಅಹಂ ಪತಿವ್ರತಾ ಮೂಢ ವಹಾಮಿ ಶಿರಸಾ ಧೃತಂ ।
ತೀರ್ಥಯಾತ್ರಾಕೃತೇ ಕಾಂತಂ ವಿಕಲಾಂಗಂ ಸುವಲ್ಲಭಂ ॥ ೪೬ ॥
ಕಸ್ಮಾತ್ತಸ್ಯಾಸ್ತಿರಸ್ಕಾರಂ ಮಮ ಯಚ್ಛಸಿ ನಿಷ್ಠುರಂ ।
ಅಜ್ಞಾತಾಂ ಮೂಢಬುದ್ಧಿಃ ಸನ್ ವಿಶೇಷಾನ್ಮಾನುಷೋದ್ಭವಾಂ ॥ ೪೭ ॥
ಮಾಂಡವ್ಯ ಉವಾಚ :—
ಅಹಂ ಯಾದೃಕ್ತ್ವಯಾ ಪ್ರೋಕ್ತಸ್ತಾದೃಗೇವ ನ ಸಂಶಯಃ ।
ಪಾಪಾತ್ಮಾ ಮೂಢಬುದ್ಧಿಶ್ಚ ಅಸ್ಪೃಶ್ಯಃ ಸರ್ವದೇಹಿನಾಂ ॥ ೪೮ ॥
ಯದಿ ಪ್ರಾತಸ್ತವಾಽಯಂ ಚ ಭರ್ತಾ ಜೀವತಿ ನಿಷ್ಠುರೇ ।
ಯೇ ಮೇದ್ಯ ಜನಿತಾ ಪೀಡಾ ಪ್ರಾಣಾಂತಕರಣೀದೃಥಾ ॥ ೪೯ ॥

---

೪೩. "ನನ್ನನ್ನು ಚುಚ್ಚಿಕೊಂಡಿರುವ ಈ ಶೂಲವನ್ನು ಯಾವ ಪಾಪಿಯು ಅಲ್ಲಾಡಿಸಿದನು? ಇದರಿಂದ ಮೊದಲೇ ಕಷ್ಟಪಡುತ್ತಿದ್ದ ನಾನು ಅತ್ಯಂತ ವ್ಯಥೆಗೊಂಡೆನು."

೪೪. ದೀರ್ಘಿಕೆಯು ಹೇಳುತ್ತಾಳೆ:—ಮಹಾತ್ಮನೆ! ನಿದ್ರಾಂಧಳಾದ ನಾನು ಕಾಣದೆ ಪಾಪಿಯಾದ ನಿನ್ನನ್ನು ಮುಟ್ಟಿದೆನು.

೪೫. ತಲೆಯಲ್ಲಿ ಶೂಲವು ನೆಟ್ಟಿದ್ದರೂ ಮಡಿಯದಿರುವ ನಿನ್ನಂತಹ ಪಾಪಿಯು ಭೂಮಿಯಲ್ಲಿ ಮತ್ತೊಬ್ಬನಿಲ್ಲ.

೪೬. ಮೂಢ! ಪತಿವ್ರತೆಯಾದ ನಾನು ತೀರ್ಥಯಾತ್ರೆಗಾಗಿ ಪ್ರಿಯನಾದ ಅಂಗವೈಕಲ್ಯವನ್ನು ಹೊಂದಿದ ಪತಿಯನ್ನು ತಲೆಯಮೇಲೆ ಹೊತ್ತುಕೊಂಡಿರುವೆನು.

೪೭. ತಿಳಿಯದ ಮನುಷ್ಯಳಾದ ನನ್ನನ್ನು ಮೂಢನಾದ ನೀನು ಏತಕ್ಕೆ ಕಠಿನವಾಗಿ ತಿರಸ್ಕರಿಸುತ್ತಿರುವೆ?

೪೮. ಮಾಂಡವ್ಯನು ಹೇಳುತ್ತಾನೆ:—ನಾನು ನೀನು ಹೇಳಿದಂತೆಯೇ ಪಾಪಿಯೂ, ಮೂಢಬುದ್ಧಿಯೂ, ಸಮಸ್ತ ಪ್ರಾಣಿಗಳಿಗೆ ಅಸ್ಪೃಶ್ಯನೂ ಆಗಿರುವೆನು, ನಿಜ.

೪೯. ಕಠಿನಳೆ! ನನಗೆ ಪ್ರಾಣವನ್ನು ನೀಗಿಸುವಷ್ಟು ಪೀಡೆಯನ್ನುಂಟುಮಾಡಿದ್ದರಿಂದ ನಿನ್ನೀ ಪತಿಯು ಬೆಳಗ್ಗೆ ಜೀವಿಸುವನೇ?

ತಸ್ಮಾದೇಷ ರವಾಽಭೀಷ್ಟಃ ಸ್ಪೃಷ್ಟಃ ಸೂರ್ಯಸ್ಯ ರಶ್ಮಿಭಿಃ ।
ಮಯಾ ಶಪ್ತಃ ಪರಿತ್ಯಾಗಂ ಜೀವಿತಸ್ಯ ಕರಿಷ್ಯತಿ ॥ ೩೦ ॥

ದೀರ್ಘಿಕೋವಾಚ :—

ಯದ್ಯೇವಂ ಮರಣಂ ಪತ್ಯುಃ ಪ್ರಭಾತೇ ಸಂಭವಿಷ್ಯತಿ ।
ಮದೀಯಸ್ಯ ತತಃ ಪ್ರಾತರ್ನೋದ್ಗಮಿಷ್ಯತಿ ಭಾಸ್ಕರಃ ॥ ೩೧ ॥
ಏವಮುಕ್ತ್ವಾ ತತಃ ಸಾಽಥ ನಿಷಸಾದ ಧರಾತಲೇ ।
ಭೂಮೌ ತದ್ಭರ್ತೃಸಂಯುಕ್ತಂ ಮುಕ್ತ್ವಾ ವಂಶಕುಟೀರಕಂ ॥ ೩೨ ॥
ಅಥ ತಾಂ ಪ್ರಾಹ ಕುಷ್ಠೀ ಸ ಪಿಪಾಸಾ ಸಂಪ್ರವರ್ತತೇ ।
ತಸ್ಮಾತ್ತ್ವಮಿಯಂ ಸಮಾನೇಹಿ ಪಾನಾರ್ಥಮತಿಶೀತಲಂ ॥ ೩೩ ॥
ತಥೈವ ಸಾ ಸಮಾಕರ್ಣ್ಯ ಭರ್ತುರಾದೇಶಮುತ್ಸುಕಾ ।
ಇತಸ್ತತಶ್ಚ ಬಭ್ರಾಮ ಜಲಾರ್ಥಂ ನ ಪ್ರಪಶ್ಯತಿ ।
ನ ಚ ನಿರ್ಯಾತಿ ದೂರಂ ಸಾ ತ್ಯಕ್ತ್ವಾಽರಣ್ಯೇ ತಥಾ ವಿಧಂ ॥ ೩೪ ॥
ಭರ್ತಾರಂ ಶ್ವಾಪದೋತ್ಥಂ ಚ ಭಯಂ ಹೃದಿ ವಿತನ್ವತೀ ।
ಉಪವಿಶ್ಯ ತತೋ ಭೂಮೌ ಸ್ಪೃಷ್ಟ್ವಾ ಪಾದೌ ಪತೇಸ್ತದಾ ।
ಪ್ರೋವಾಚ ದೀರ್ಘಿಕಾ ವಾಕ್ಯಂ ತಾರವಾಕ್ಯೇನ ದುಃಖಿತಾ ॥ ೩೫ ॥

---

೩೦. ಇವನು ಬೆಳಗ್ಗೆ ಸೂರ್ಯನ ಕಾಂತಿಯು ಸ್ಪರ್ಶವಾದ ಕೂಡಲೆ ನನ್ನ ಶಾಪದಿಂದ ಪ್ರಾಣವನ್ನು ತ್ಯಜಿಸುವನು.

೩೧. ದೀರ್ಘಿಕೆಯು ಹೇಳುತ್ತಾಳೆ:—ನನ್ನ ಪತಿಯು ಬೆಳಗ್ಗೆ ಸಾಯುವುದಾದರೆ ಸೂರ್ಯನು ಬೆಳಗ್ಗೆ ಉದಯಿಸುವುದಿಲ್ಲ.

೩೨. ಅವಳು ಹೀಗೆ ಹೇಳಿ ಗಂಡನ ಬಿದಿರಿನ ಗೂಡೆಯನ್ನು ನೆಲದಲ್ಲಿರಿಸಿ ಕುಳಿತಳು.

೩೩. ತರುವಾಯ ಆ ಕುಷ್ಠರೋಗಿಯು, "ನನಗೆ ಬಾಯಾರಿಕೆಯುಂಟಾಗಿದೆ. ಆದುದರಿಂದ ಕುಡಿಯುವುದಕ್ಕೆ ತಣ್ಣಗಾದ ನೀರನ್ನು ತೆಗೆದುಕೊಂಡು ಬಾ" ಎಂದು ಪತ್ನಿಯನ್ನು ಕುರಿತು ಹೇಳಿದನು.

೩೪–೩೫. ಅವಳು ಗಂಡನ ಅಪ್ಪಣೆಯನ್ನು ಕೇಳಿ ಉತ್ಸುಕಳಾಗಿ ನೀರಿಗಾಗಿ ಇಲ್ಲಿ ಅಲ್ಲಿ ಸಂಚರಿಸಿ ನೀರನ್ನು ಕಾಣಲಿಲ್ಲ. ಮನಸ್ಸಿನಲ್ಲಿ ಕಾಡಿನ ಘಾತುಕ ಮೃಗಗಳಿಂದ ಭಯಪಡುತ್ತ ಪತಿಯನ್ನು ತ್ಯಜಿಸಿ ದೂರ ಹೋಗಲಿಲ್ಲ. ತರುವಾಯ ನೆಲದಮೇಲೆ ಕುಳಿತು ಗಂಡನ ಪಾದಗಳನ್ನು ಮುಟ್ಟಿ ಗಟ್ಟಿಯಾಗಿ ದುಃಖದಿಂದ ಇಂತೆಂದಳು.

ಪತಿವ್ರತಾ ತ್ವಮಾಚೀರ್ಣಂ ಯದಿ ಸಮ್ಯಙ್ಮಯಾ ಸ್ಫುಟಂ ।
ತೇನ ಸತ್ಯೇನ ಭೂಪೃಷ್ಠಾನ್ನಿರ್ಗಚ್ಛತು ಜಲಂ ಶುಭಂ ॥ ೫೬ ॥
ಏವಮುಕ್ತ್ವಾ ಜಘಾನಾಽಥ ಪಾದಾಘಾತೇನ ಮೇದಿನೀಂ ।
ಕಾಂತಭಕ್ತಿಂ ಪುರಸ್ಕೃತ್ಯ ತಸ್ಯ ಜೀವಿತವಾಂಛಯಾ ॥ ೫೭ ॥
ಏತಸ್ಮಿನ್ನಂತರೇ ತೋಯಂ ಪಾದಾಘಾತಾದನಂತರಂ ।
ನಿಷ್ಕ್ರಾಂತಂ ನಿರ್ಮಲಂ ಸ್ವಾದು ಮಾಂಡವ್ಯಸ್ಯ ಚ ಪಶ್ಯತಃ ॥ ೫೮ ॥
ತತಸ್ತಂ ಸ್ನಾಪಯಾಮಾಸ ತಸ್ಮಿಂಸ್ತೋಯೇ ಶ್ರಮಾತುರಂ ।
ಅಪಾಯಯತ್ತತಃ ಪಶ್ಚಾತ್ಸ್ವಯಂ ಸ್ನಾತ್ವಾ ಪಪೌ ಜಲಂ ॥ ೫೯ ॥
ಏತಸ್ಮಿನ್ನಂತರೇ ಸೂರ್ಯಃ ಪತಿವ್ರತಕೃತಾದ್ಭಯಾತ್ ।
ನಾಽಭ್ಯುದೇತಿ ಸಮುತ್ಪನ್ನಸ್ತತಃ ಕಾಲಾತ್ಯಯೋ ಮಹಾನ್ ॥ ೬೦ ॥
ಅಥ ರಾತ್ರಿಂ ಸಮಾಲೋಕ್ಯ ದೀರ್ಘಾಂ ಯೇ ಕಾಮುಕಾ ಜನಾಃ ।
ತೇ ಸರ್ವೇ ತುಷ್ಟಿಮಾಪನ್ನಾಸ್ತಥಾ ಚ ಕುಲಟಾಃ ಸ್ತ್ರಿಯಃ ॥ ೬೧ ॥
ಕೌಶಿಕಾ ರಾಕ್ಷಸಾಶ್ಚಾಽಪಿ ಚೋರಾ ಜಾರಾಶ್ಚ ಯೇ ನರಾಃ ।
ತೇ ಸರ್ವೇ ಪ್ರೋಚುಃ ಸಂಹೃಷ್ಟಾಃ ಸಮಾಲಿಂಗ್ಯ ಪರಸ್ಪರಂ ॥ ೬೨ ॥
ಅದ್ಯಾಽಸ್ಮಾಕಂ ವಿಧಿಸ್ತುಷ್ಟೋ ಭಗವಾನ್ ಮನ್ಮಥಸ್ತಥಾ ।
ಯೇನ ದೀರ್ಘಾ ಕೃತಾ ರಾತ್ರಿರ್ನಾಶಂ ನೀತಶ್ಚ ಭಾಸ್ಕರಃ ॥ ೬೩ ॥

---

೫೬. "ನಾನು ಚೆನ್ನಾಗಿ ಪಾತಿವ್ರತ್ಯವನ್ನು ಕಾಪಾಡಿದ್ದರೆ ಅದರ ಸತ್ಯದಿಂದ ಭೂಮಿಯಿಂದ ನೀರು ಮೇಲಕ್ಕೆ ಬರಲಿ."

೫೭. ಅವಳು ಹೀಗೆ ಹೇಳಿ ಪತಿಯು ಜೀವಿಸಬೇಕೆಂಬ ಇಚ್ಛೆಯಿಂದ ಅವನಲ್ಲಿ ಭಕ್ತಿ ಪುರಸ್ಕರವಾಗಿ ಭೂಮಿಯನ್ನು ಕಾಲಿನಿಂದ ಒದೆದಳು.

೫೮. ಕಾಲಿನಿಂದ ಒದೆದ ಕೂಡಲೆ ಮಾಂಡವ್ಯನು ನೋಡುತ್ತಿರುವಾಗಲೇ ನಿರ್ಮಲವೂ, ರುಚಿಕರವೂ ಆಗಿರುವ ನೀರು ಭೂಮಿಯಿಂದ ಹೊರಟಿತು.

೫೯. ಅನಂತರ ಆ ದೀರ್ಘಿಕೆಯು ಆ ನೀರಿನಲ್ಲಿ ಆಯಾಸಗೊಂಡ ಪತಿಯನ್ನು ಸ್ನಾನಮಾಡಿಸಿ ನೀರನ್ನು ಕುಡಿಸಿ ಅನಂತರ ತಾನೂ ಮಿಂದು ನೀರನ್ನು ಕುಡಿದಳು.

೬೦. ಈ ಸಮಯದಲ್ಲಿ ಸೂರ್ಯನು ಪತಿವ್ರತೆಯ ಭಯದಿಂದ ಉದಯಿಸಲಿಲ್ಲ. ಅನಂತರ ಬಹಳ ಕಾಲವು ಕಳೆಯಿತು.

೬೧–೬೨. ಹೀಗೆ ಹೆಚ್ಚಾದ ರಾತ್ರಿಯನ್ನು ಕಂಡು ಕಾಮುಕರೂ, ವ್ಯಭಿಚಾರಿಣಿಯರೂ, ಗೂಬೆಗಳೂ, ರಾಕ್ಷಸರೂ, ಕಳ್ಳರೂ, ಜಾರರೂ ಸಂತೋಷದಿಂದ ಪರಸ್ಪರವಾಗಿ ಆಲಿಂಗಿಸಿಕೊಂಡು ಇಂತೆಂದರು.

೬೩. "ಈಗ ನಮ್ಮಲ್ಲಿ ಬ್ರಹ್ಮನೂ, ಮನ್ಮಥನೂ ಸಂತುಷ್ಟರಾಗಿದ್ದಾರೆ. ಆದುದರಿಂದ ಅವರು ರಾತ್ರಿಯನ್ನು ಹೆಚ್ಚಿಸಿ ಸೂರ್ಯನನ್ನು ನಾಶಗೊಳಿಸಿದ್ದಾರೆ."

ಯೇ ಪುನರ್ಬ್ರಾಹ್ಮಣಾಃ ಶಾಂತಾ ಯಜ್ಞಕರ್ಮಸಮುದ್ಯತಾಃ ।
ತೇ ಸರ್ವೇ ದುಃಖಮಾಪನ್ನಾಃ ಸೂರ್ಯೋದಯವಿನಾಕೃತಾಃ ॥ ೬೪ ॥
ನ ಕಶ್ಚಿದ್ಯಜನಂ ಚಕ್ರೇ ಯಾಜನಂ ನ ಚ ಸದ್ದ್ವಿಜಃ ।
ನ ಶ್ರಾದ್ಧಂ ನ ಚ ಸಂಕಲ್ಪಂ ನ ಸ್ವಾಧ್ಯಾಯಂ ಕಥಂಚನ ॥ ೬೫ ॥
ನ ಸ್ನಾನಂ ನ ಚ ದಾನಂ ಚ ಲೋಕಯಾತ್ರಾಂ ವಿಶೇಷತಃ ।
ವ್ಯವಹಾರಂ ನ ಕೃತ್ಯಂ ಚ ಕಿಂಚಿದ್ಧರ್ಮಸಮುದ್ಭವಂ ॥ ೬೬ ॥
ಏತಸ್ಮಿನ್ನಂತರೇ ದೇವಾಃ ಸರ್ವೇ ಶಕ್ರಪುರೋಗಮಾಃ ।
ಪರಂ ದೌಃಸ್ಥ್ಯಂ ಸಮಾಪನ್ನಾ ಯಜ್ಞಭಾಗವಿವರ್ಜಿತಾಃ ॥ ೬೭ ॥
ತತೋ ಭಾಸ್ಕರಮಾಸಾದ್ಯ ಊಚುರ್ದುಃಖಸಮನ್ವಿತಾಃ ।
ಕಸ್ಮಾನ್ನೋದ್ಗಮನಂ ದೇವ ಪ್ರಕರೋಷಿ ದಿವಾಕರ ॥ ೬೮ ॥
ಏತತ್ತ್ವಯಾ ವಿನಾ ಸರ್ವಂ ಜಗದ್ವ್ಯಾಕುಲತಾಂ ಗತಂ ॥ ೬೯ ॥
ತಸ್ಮಾಲ್ಲೋಕಹಿತಾರ್ಥಾಯ ತ್ವಮುದ್ಗಚ್ಛ ಯಥಾ ಪುರಾ ।
ಅಗ್ನಿಷ್ಟೋಮಾದಿಕಾ ಯಜ್ಞಾ ವರ್ತಂತೇ ಯೇನ ಭೂತಲೇ ॥ ೭೦ ॥

ಸೂರ್ಯ ಉವಾಚ :—

ಪತಿವ್ರತಾ ಸಮಾದೇಶಾತ್ತ್ಯಕ್ತಶ್ಚಾಭ್ಯುದಯೋ ಮಯಾ ।
ತಸ್ಮಾದ್ಗತ್ವಾ ಸುರಾಃ ಸರ್ವೇ ತಾಂ ವದಂತು ಕೃತೇ ಮಮ ॥ ೭೧ ॥

---

೬೪. ಶಾಂತರೂ, ಯಜ್ಞ ಕರ್ಮದಲ್ಲಿ ಉದ್ಯುಕ್ತರೂ ಆದ ಬ್ರಾಹ್ಮಣರು ಸೂರ್ಯನು ಉದಯಿಸದಿರುವುದರಿಂದ ದುಃಖಗೊಂಡರು.

೬೫—೬೬. ಒಬ್ಬನೂ ಯಜನ, ಯಾಜನ, ಶ್ರಾದ್ಧ, ಸಂಕಲ್ಪ, ವೇದಾಧ್ಯಯನ, ಸ್ನಾನ, ದಾನ ಮೊದಲಾದ ಧಾರ್ಮಿಕ ಕಾರ್ಯಗಳಲ್ಲೊಂದನ್ನೂ ಆಚರಿಸಲಿಲ್ಲ.

೬೭—೬೮. ಇಷ್ಟರಲ್ಲಿ ಇಂದ್ರನೇ ಮೊದಲಾದ ಸಮಸ್ತ ದೇವತೆಗಳೂ ಯಜ್ಞಭಾಗವಿಲ್ಲದಿರುವುದರಿಂದ ಅತ್ಯಂತ ದುರವಸ್ಥೆಯನ್ನು ಹೊಂದಿ ಸೂರ್ಯನನ್ನು ಸಮೀಪಿಸಿ ದುಃಖದಿಂದ ಇಂತೆಂದರು, "ಎಲೈ ಭಾಸ್ಕರನೇ! ನೀನು ಏತಕ್ಕೆ ಉದಯಿಸುವುದಿಲ್ಲ?

೬೯. ನೀನಿಲ್ಲದೆ ಈ ಪ್ರಪಂಚವೆಲ್ಲ ವ್ಯಾಕುಲಗೊಂಡಿದೆ.

೭೦. ಆದುದರಿಂದ ನೀನು ಲೋಕದ ಹಿತಕ್ಕಾಗಿ ಮೊದಲಿನಂತೆಯೇ ಉದಯಿಸು. ಆದರಿಂದ ಅಗ್ನಿಷ್ಟೋಮ ಮೊದಲಾದ ಯಜ್ಞಗಳು ಆರಂಭವಾಗುವುವು."

೭೧. ಸೂರ್ಯನು ಹೇಳುತ್ತಾನೆ:—ನಾನು ಪತಿವ್ರತೆಯ ಆದೇಶದಿಂದ ಉದಯಿಸಲಿಲ್ಲ. ಆದುದರಿಂದೆಲೈ ದೇವತೆಗಳೇ! ನೀವು ನನಗಾಗಿ ಅವಳನ್ನು ಪ್ರಾರ್ಥಿಸಿ.

ಯೇನ ತದ್ವಾಕ್ಯಮಾಸಾದ್ಯ ಪ್ರವರ್ತಾಮಿ ಯಥಾಸುಖಂ ।
ಅನ್ಯಥಾ ಮಾಂ ಶಪೇತ್ಕ್ರುದ್ಧಾ ನೂನಂ ಸಾ ಹಿ ಪತಿವ್ರತಾ ॥ ೭೨ ॥
ಏವಂ ಸಾ ತಪಸಾ ಯುಕ್ತಾ ಪ್ರೋತ್ಕೃಷ್ಟಂ ಹಿ ಸುರೋತ್ತಮಾಃ ।
ಪತಿವ್ರತಾತ್ತ್ವಮಾಧತ್ತೇ ತಥಾಽನ್ಯದಪರಂ ಮಹತ್ ॥ ೭೩ ॥
ಕಸ್ತಸ್ಯಾ ವಚನಂ ಶಕ್ತಃ ಕರ್ತುಮೇವ ಮತೋಽನ್ಯಥಾ ।
ಏತಸ್ಮಾತ್ಕಾರಣಾದ್ಭೀತೋ ನೋದ್ಗಚ್ಛಾಮಿ ಕಥಂಚನ ॥ ೭೪ ॥
ನ ತತ್ಕ್ರತುಸಹಸ್ರೇಣ ಯಜಂತಃ ಪ್ರಾಪ್ನುಯುಃ ಫಲಂ ।
ಪತಿವ್ರತಾತ್ವಮಾಪನ್ನಾ ಯತ್ಸ್ತ್ರೀ ವಿಂದತಿ ಕೇವಲಂ ॥ ೭೫ ॥
ತತಸ್ತೇ ವಿಬುಧಾಃ ಸರ್ವೇ ಗತ್ವಾ ತತ್ಕ್ಷೇತ್ರಮುತ್ತಮಂ ।
ಪ್ರೋಚುಸ್ತಾಂ ದೀರ್ಘಿಕಾಂ ವಾಕ್ಯೈರ್ಮೃದುಭಿಃ ಪುರತಃ ಸ್ಥಿತಾಃ ॥ ೭೬ ॥
ತ್ವಯಾ ಪತಿವ್ರತೇ ಸೂರ್ಯೋ ಯನ್ನಿಷಿದ್ಧೋ ನ ತತ್ಕೃತಂ ।
ಶುಭಂ ಯತೋ ಹತಾಃ ಸರ್ವಾ ಭೂತಲೇ ಶೋಭನಾಃ ಕ್ರಿಯಾಃ ॥ ೭೭ ॥
ತಸ್ಮಾದುದ್ಗಚ್ಛತು ಪ್ರಾಜ್ಞೇ ತ್ವದ್ವಾಕ್ಯಾತ್ತೀಕ್ಷ್ಣದೀಧಿತಿಃ ।
ಯಜ್ಞಕ್ರಿಯಾ ವಿಶೇಷೇಣ ಯೇನ ವರ್ತಂತಿ ಭೂತಲೇ ॥ ೭೮ ॥

---

೭೨. ಅದರಿಂದ ನಾನು ಅವಳ ಮಾತಿನಿಂದ ಸುಖವಾಗಿ ಉದಯಿಸುವೆನು. ಹಾಗಿಲ್ಲದಿದ್ದರೆ ಪತಿವ್ರತೆಯಾದ ಅವಳು ನನ್ನನ್ನು ಶಪಿಸಿಯಾಳು.

೭೩. ಸುರವರ್ಯರೆ! ಅವಳು ಹೀಗೆ ತಪಸ್ಸನ್ನು ಮಾಡಿ ಉತ್ಕೃಷ್ಟ ಪಾತಿವ್ರತ್ಯವನ್ನು ಸಂಪಾದಿಸಿರುವಳು.

೭೪. ಅವಳ ಮಾತನ್ನು ವ್ಯತ್ಯಾಸಗೊಳಿಸಲು ಯಾರು ಶಕ್ತರು? ಈ ಕಾರಣದಿಂದ ಭಯಗೊಂಡ ನಾನು ಉದಯಿಸಲಿಲ್ಲ.

೭೫. ಪತಿವ್ರತಾ ಸ್ತ್ರೀಯು ಪಡೆಯುವ ಫಲವನ್ನು ಸಾವಿರಾರು ಯಾಗಗಳನ್ನು ಮಾಡಿದವರೂ ಹೊಂದಲಾಗುವುದಿಲ್ಲ.

೭೬. ಅನಂತರ ಆ ದೇವತೆಗಳೆಲ್ಲ ಆ ಉತ್ತಮವಾದ ಹಾಟಕಕ್ಷೇತ್ರವನ್ನು ಸೇರಿ ದೀರ್ಘಿಕೆಯ ಮುಂದೆ ನಿಂತು ಮೃದುನುಡಿಯಿಂದ ಹೀಗೆಂದರು.

೭೭. "ಪತಿವ್ರತೆಯೆ! ನೀನು ಸೂರ್ಯನನ್ನು ಉದಯಿಸದಂತೆ ಮಾಡಿ ಅಶುಭವನ್ನುಂಟುಮಾಡಿರುವೆ. ಅದರಿಂದ ಭೂಮಿಯಲ್ಲಿ ಸತ್ಕರ್ಮಗಳೆಲ್ಲ ಹಾಳಾದುವು.

೭೮. ಆದುದರಿಂದೆಲೌ ಪ್ರಾಜ್ಞಳೆ! ನಿನ್ನ ಮಾತಿನಿಂದ ಸೂರ್ಯನು ಉದಯಿಸಲಿ. ಅದರಿಂದ ಭೂಮಿಯಲ್ಲಿ ಯಜ್ಞಕಾರ್ಯಗಳು ವಿಶೇಷವಾಗಿ ನಡೆಯುವುವು."

ಪತಿವ್ರತೋವಾಚ:—

ಅಯಂ ಚ ಮೇ ಪತಿಃ ಸದ್ಯಃ ಪ್ರಾಣೇಭ್ಯೋಽಪಿ ಚ ಯಃ ಪ್ರಿಯಃ ।
ಸೋಽಭ್ಯೇತಿ ನಿಧನಂ ದೇವಾಃ ಪ್ರೋದ್ಗತೇ ರವಿಮಂಡಲೇ ॥ ೭೯ ॥
ಶಪ್ತಶ್ಚಾಽನೇನ ದುಷ್ಟೇನ ಮಾಂಡವ್ಯೇನ ಸುಪಾಪ್ಮನಾ ।
ಕಾರ್ಯಂ ವಿನಾಽಪಿ ನಿರ್ದಿಷ್ಟಸ್ತದ್ಬ್ರೂಯಾಂ ಭಾಸ್ಕರಂ ಕಥಂ ॥ ೮೦ ॥
ಉದಯಾರ್ಥಂ ನ ಮೇ ಯಜ್ಞೈಃ ಕಾರ್ಯಂ ಕಿಂಚಿನ್ನಚಾಽಪರೈಃ ।
ಶ್ರಾದ್ಧದಾನಾದಿಕೈಃ ಕೃತ್ಯೈಃ ಸಂಜಾತೈರ್ದಯಿತಂ ವಿನಾ ॥ ೮೧ ॥

ಸೂತ ಉವಾಚ:—

ತತಸ್ತೇ ವಿಬುಧಾಃ ಸರ್ವೇ ಸಮಾಲೋಕ್ಯ ಪರಸ್ಪರಂ ।
ಚಿರಕಾಲಂ ಸುದುಃಖಾರ್ತಾಸ್ತಾಮೂಚುರ್ವಿನಯಾನ್ವಿತಾಃ ॥ ೮೨ ॥
ಉದ್ಗಚ್ಛತು ರವಿರ್ಭದ್ರೇ ತವಾಽಯಂ ದಯಿತಃ ಪತಿಃ ।
ಪ್ರಯಾತು ನಿಧನಂ ಸದ್ಯೋ ಭೂಯಾದೇಷ ಮುನೀಶ್ವರಃ ॥ ೮೩ ॥
ಪುನರ್ಜೀವಾಪಯಿಷ್ಯಾಮೋ ವಯಮೇನಮಪಿ ದ್ರುತಂ ।
ಮೃತ್ಯುಮಾರ್ಗಮನುಪ್ರಾಪ್ತಂ ತ್ವತ್ಕೃತೇ ಪತಿವತ್ಸಲೇ ॥ ೮೪ ॥
ಪಂಚವಿಂಶತಿವರ್ಷೀಯಂ ಕಾಮದೇವಮಿವಾಽಪರಂ ।
ತ್ವಂ ದ್ರಕ್ಷ್ಯಸಿ ಸುದೀಪ್ತಾಂಗಂ ಸರ್ವಲಕ್ಷಣಲಕ್ಷಿತಂ ॥ ೮೫ ॥

---

೭೯. ಪತಿವ್ರತೆಯು ಹೇಳುತ್ತಾಳೆ:—ದೇವತೆಗಳೆ! ಸೂರ್ಯನು ಉದಯಿಸಿದ ಕೂಡಲೆ ಈ ನನ್ನ ಪ್ರಾಣಗಳಿಗಿಂತ ಪ್ರಿಯನಾದ ಪತಿಯು ಮಡಿಯುವನು.

೮೦–೮೧. ಪಾಪಿಯಾದ ಈ ದುಷ್ಟ ಮಾಂಡವ್ಯನು ಕಾರಣವಿಲ್ಲದೆ ಶಪಿಸಿರುವನು. ಆದುದರಿಂದ ಸೂರ್ಯನನ್ನು ಉದಯಿಸುವಂತೆ ಹೇಗೆ ಹೇಳಲಿ. ನನಗೆ ಪ್ರಿಯನಿಲ್ಲದೆ ಉಂಟಾದ ಯಜ್ಞ, ಶ್ರಾದ್ಧ, ದಾನಾದಿ ಕಾರ್ಯಗಳಿಂದೇನೂ ಪ್ರಯೋಜನವಿಲ್ಲ.

೮೨. ಸೂತನು ಹೇಳುತ್ತಾನೆ:—ಅನಂತರ ಸಮಸ್ತ ದೇವತೆಗಳು ಪರಸ್ಪರವಾಗಿ ಬಹಳಹೊತ್ತು ನೋಡಿ ದುಃಖಪೀಡಿತರಾಗಿ ವಿನಯದಿಂದ ಅವಳನ್ನು ಕುರಿತು ಹೀಗೆಂದರು.

೮೩. ಮಂಗಳಕರಳೆ! ಸೂರ್ಯನು ಉದಯಿಸಲಿ. ನಿನ್ನೀ ಪ್ರಿಯನಾದ ಪತಿಯು ಕೂಡಲೆ ಮೃತನಾಗಿ ಮುನೀಶ್ವರನಾಗಲಿ.

೮೪. ಪತಿವ್ರತೆಯೆ! ಮೃತನಾದ ನಿನ್ನ ಪತಿಯನ್ನು ನಿನಗೋಸ್ಕರ ಮರಳಿ ಬದುಕಿಸುವೆವು.

೮೫. ಇಪ್ಪತ್ತೈದು ವರ್ಷ ವಯಸ್ಸಿನವನೂ, ಮತ್ತೊಬ್ಬ ಮನ್ಮಥನಂತಿರುವವನೂ, ಪ್ರಕಾಶಗೊಂಡ ಅವಯವವುಳ್ಳವನೂ, ಸಮಸ್ತ ಲಕ್ಷಣ ಲಕ್ಷಿತನೂ ಆದ ಪತಿಯನ್ನು ನೀನು ನೋಡುವೆ.

ಭೂತ್ವಾ ಪಂಚದಶಾಬ್ದೀಯಾ ಪದ್ಮಪತ್ರಾಯತೇಕ್ಷಣಾ ।
ಮರ್ತ್ಯಲೋಕೇ ಸುಖಂ ಸರ್ವ್ವಂ ಸ್ವೇಚ್ಛಯಾ ಸಾಧಯಿಷ್ಯಸಿ ॥ ೮೬ ॥
ಏಷೋಽಪಿ ಮುನಿಶಾರ್ದೂಲೋ ವಿಪಾಪ್ಮಾ ಸಾಂಪ್ರತಂ ಶುಭೇ ।
ಶೂಲವೇಧೇನ ನಿರ್ಮುಕ್ತಃ ಸುಖಭಾಗೀ ಭವತ್ವಲಂ ॥ ೮೭ ॥
ಸೂತ ಉವಾಚ :—
ಬಾಢಮಿತ್ಯೇವ ಚ ಪ್ರೋಕ್ತೇ ತಯಾ ಸ ದ್ವಿಜಸತ್ತಮಾಃ ।
ಉದ್ಗತೋ ಭಗವಾನ್ ಸೂರ್ಯಸ್ತತ್ಕ್ಷಣಾದೇವ ವೇಗತಃ ॥ ೮೮ ॥
ತತಃ ಸೂರ್ಯಾಂಶುಸಂಸ್ಪೃಷ್ಟಃ ಸ ಮೃತಶ್ಚ ಸುಕುಷ್ಠಭಾಕ್ ।
ವಿಬುಧಾನಾಂ ಕರೈಃ ಸ್ಪೃಷ್ಟಃ ಪುನರೇವ ಸಮುತ್ಥಿತಃ ॥ ೮೯ ॥
ಪಂಚವಿಂಶತಿವರ್ಷೀಯಃ ಕಾಮದೇವ ಇವಾಽಪರಃ ।
ಸಂಸ್ಮರನ್ ಪೂರ್ವಿಕಾಂ ಜಾತಿಂ ಸರ್ವಾಂ ಹರ್ಷಸಮನ್ವಿತಃ ॥ ೯೦ ॥
ದೀರ್ಘಿಕಾಽಪಿ ಪರಿಸ್ಪೃಷ್ಟಾ ಸ್ವಯಂ ದೇವೇನ ಶಂಭುನಾ ।
ಸಂಜಾತಾ ಯೌವನೋಪೇತಾ ದಿವ್ಯಲಕ್ಷಣಲಕ್ಷಿತಾ ॥ ೯೧ ॥
ಪದ್ಮಪತ್ರೇಕ್ಷಣಾ ರಮ್ಯಾ ಚಂದ್ರಬಿಂಬಸಮಾನನಾ ।
ಮಧ್ಯೇ ಕ್ಷಾಮಾ ಸುಗೌರಾಂಗೀ ಪೀನೋನ್ನತ ಪಯೋಧರಾ ॥ ೯೨ ॥

---

೮೬. ನೀನು ಹದಿನೈದು ವರ್ಷ ವಯಸ್ಸಿನವಳೂ, ಕಮಲದಂತೆ ಕಣ್ಣುಗಳುಳ್ಳವಳೂ ಆಗಿ ಭೂಮಿಯಲ್ಲಿ ಸ್ವೇಚ್ಛೆಯಿಂದ ಸುಖವನ್ನನುಭವಿಸುವೆ.

೮೭. ಈ ಮುನಿವರ್ಯನಾದ ಮಾಂಡವ್ಯನೂ ಈಗ ಪಾಪರಹಿತನಾಗಿ ಶೂಲವೇಧೆಯಿಲ್ಲದೆ ಸುಖಿಯಾಗಲಿ.

೮೮. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಅವಳು ಹಾಗೆಯೇ ಆಗಲೆನ್ನಲು ಪೂಜ್ಯನಾದ ಸೂರ್ಯನು ಕೂಡಲೆ ವೇಗವಾಗಿ ಉದಯಿಸಿದನು.

೮೯. ಅನಂತರ ಸೂರ್ಯಕಿರಣಗಳ ಸಂಬಂಧದಿಂದ ಆ ಕುಷ್ಠಿಯು ಮಡಿದು ದೇವತೆಗಳ ಹಸ್ತ ಸ್ಪರ್ಶದಿಂದ ಮರಳಿ ಮೇಲಕ್ಕೆದ್ದನು.

೯೦. ಇಪ್ಪತ್ತೈದು ವರ್ಷ ವಯಸ್ಸಿನ ಅವನು ಮತ್ತೊಬ್ಬ ಮನ್ಮಥನಂತಾಗಿ ತನ್ನ ಹಿಂದಿನ ಜಾತಿಯನ್ನು ಸ್ಮರಿಸಿ ಸಂತೋಷಗೊಂಡನು.

೯೧—೯೨. ದೀರ್ಘಿಕೆಯೂ ಶಂಕರನ ಸ್ಪರ್ಶದಿಂದ ಯುವತಿಯೂ, ದಿವ್ಯಲಕ್ಷಣಗಳುಳ್ಳವಳೂ, ಕಮಲದಂತೆ ಕಣ್ಣುಗಳುಳ್ಳವಳೂ, ಸುಂದರಿಯೂ, ಚಂದ್ರನಂತೆ ಮುಖವುಳ್ಳವಳೂ, ಕೃಶವಾದ ನಡುವುಳ್ಳವಳೂ, ಗೌರವರ್ಣದ ಅಂಗಗಳುಳ್ಳವಳೂ, ಉನ್ನತವಾದ ಕುಚಗಳುಳ್ಳವಳೂ ಆದಳು.

ತತಸ್ತಂ ಮುನಿಶಾರ್ದೂಲಂ ಶೂಲಾಗ್ರಾದವತಾರ್ಯ ಚ ।
ಪ್ರೋಚುಶ್ಚ ವಿಬುಧಶ್ರೇಷ್ಠಾಃ ಸಾದರಂ ಹರ್ಷಸಂಯುತಾಃ ॥ ೯೩ ॥
ಏತತ್ಸತ್ಯಂ ಕೃತಂ ವಾಕ್ಯಂ ಮುನೇ ತವ ಯಥೋದಿತಂ ।
ಮೃತೋಽಪಿ ಬ್ರಾಹ್ಮಣಃ ಕುಷ್ಠೀ ಸಂಸ್ಪೃಷ್ಟೋ ರವಿರಶ್ಮಿಭಿಃ ॥ ೯೪ ॥
ಪುನರುತ್ಥಾಪಿತೋಽಸ್ಮಾಭಿಃ ಕೃತಶ್ಚ ತರುಣಃ ಪುನಃ ।
ಅನಯಾ ಭಾರ್ಯಯಾ ಸಾರ್ಧಂ ತಸ್ಮಾತ್ತ್ವಂ ಸ್ವಾಶ್ರಮಂ ವ್ರಜ ॥ ೯೫ ॥
ನಾಽಸ್ಮಾಕಂ ದರ್ಶನಂ ವ್ಯರ್ಥಂ ಕಥಂಚಿದಪಿ ಜಾಯತೇ ।
ತಸ್ಮಾತ್ಪ್ರಾರ್ಥಯ ಯಚ್ಚಿತ್ತೇ ತವ ನಿತ್ಯಂ ಸಮಾಶ್ರಿತಂ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪತಿವ್ರತಾ ವರಲಾಭವರ್ಣನಂ" ನಾಮ
ಪಂಚತ್ರಿಂಶದುತ್ತರಶತತಮೋಽಧ್ಯಾಯಃ

---

೯೩. ಅನಂತರ ದೇವತೆಗಳು ಮಾಂಡವ್ಯ ಮುನಿವರ್ಯನನ್ನು ಶೂಲದಿಂದಿಳಿಸಿ, ಸಂತೋಷಗೊಂಡು ಪ್ರೀತಿಯಿಂದ ಹೀಗೆಂದರು.

೯೪–೯೫. ಮುನಿಯೆ! ನಿನ್ನ ಮಾತು ಸತ್ಯಗೊಳಿಸಲ್ಪಟ್ಟಿತು. ಕುಷ್ಠಿಯಾದ ಬ್ರಾಹ್ಮಣನು ಸೂರ್ಯಕಿರಣಗಳ ಸ್ಪರ್ಶದಿಂದ ಮೃತನಾಗಿ ಮರಳಿ ನಮ್ಮಿಂದ ಬದುಕಿಸಲ್ಪಟ್ಟು ತರುಣನಾಗಿ ಈ ಪತ್ನಿಯೊಡನೆ ಸೇರಿದನು. ನೀನು ನಿನ್ನ ಆಶ್ರಮಕ್ಕೆ ತೆರಳು.

೯೬. ನಮ್ಮ ದರ್ಶನವು ಹೇಗೂ ವ್ಯರ್ಥವಾಗುವುದಿಲ್ಲ. ಆದುದರಿಂದ ನಿನ್ನ ಮನಸ್ಸಿನಲ್ಲಿರುವುದನ್ನು ಬೇಡಿಕೊ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪತಿವ್ರತಾ ವರಲಾಭವರ್ಣನ" ವೆಂಬ
ನೂರಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಷಟ್ತ್ರಿಂಶದುತ್ತರಶತತಮೋಽಧ್ಯಾಯಃ

### ದೀರ್ಘಿಕೋತ್ಪತ್ತಿಮಾಹಾತ್ಮ್ಯವರ್ಣನಂ

ಮಾಂಡವ್ಯ ಉವಾಚ :—

ಪ್ರತೀಕ್ಷ್ಯಾಮಿ ಸುರಶ್ರೇಷ್ಠಾ ವರಂ ಯುಷ್ಮತ್ಸಮುದ್ಭವಂ ।
ಪರಂ ಮೇ ನಿರ್ಣಯಂ ಚೈಕಂ ಧರ್ಮರಾಜಃ ಪ್ರಚಕ್ಷತು ॥ ೧ ॥
ಸರ್ವೇಷಾಂ ಪ್ರಾಣಿನಾಂ ಲೋಕೇ ಕೃತಂ ಕರ್ಮ ಶುಭಾಶುಭಂ ।
ಉಪತಿಷ್ಠತಿ ನಾಽನ್ಯತ್ರ ಸತ್ಯಮೇತತ್ಸುರೋತ್ತಮಾಃ ॥ ೨ ॥
ಮಯಾಽಪ್ಯತ್ರ ಪರೇ ಚಾಽಪಿ ಕಿಂ ಕೃತಂ ಪಾತಕಂ ಚ ಯತ್ ।
ಈದೃಶೀಂ ವೇದನಾಂ ಪ್ರಾಪ್ತೋ ನ ಚ ಮೃತ್ಯುಂ ಕಥಂಚನ ॥ ೩ ॥

ಧರ್ಮರಾಜ ಉವಾಚ :—

ಅನ್ಯದೇಹೇ ತ್ವಯಾ ವಿಪ್ರ ಬಾಲಭಾವೇನ ವರ್ತತಾ ।
ಶೂಲಾಗ್ರೇಣ ಸುತೀಕ್ಷ್ಣೇನ ಕಾಯೇ ವಿದ್ಧೋ ಬಕಃ ಕ್ಷಿತೌ ॥ ೪ ॥
ನಾಽನ್ಯತ್ಕೃತಮಪಿ ಸ್ವಲ್ಪಂ ಪಾತಕಂ ಕಿಂಚಿದೇವ ಹಿ ।
ತೇನಾಸ್ಮಾತ್ಕಾರಣಾದೇಷಾ ವ್ಯಥಾ ಸಂಸೇವಿತಾ ದ್ವಿಜ ॥ ೫ ॥

---

## ಕನ್ನಡದ ಅನುವಾದ

### ದೀರ್ಘಿಕೋತ್ಪತ್ತಿಮಾಹಾತ್ಮ್ಯವರ್ಣನ

೧. ಮಾಂಡವ್ಯನು ಹೇಳುತ್ತಾನೆ:—ದೇವೋತ್ತಮರೆ! ನಾನು ನಿಮ್ಮಿಂದ ವರವನ್ನು ಸ್ವೀಕರಿಸುವೆನು. ಆದರೆ ನನ್ನ ವಿಷಯದಲ್ಲಿ ಧರ್ಮರಾಜನು ಒಂದು ನಿರ್ಣಯವನ್ನು ಹೇಳಲಿ.

೨. ಲೋಕದಲ್ಲಿ ಸಮಸ್ತ ಪ್ರಾಣಿಗಳು ಮಾಡಿದ ಶುಭಾಶುಭ ಕರ್ಮಗಳು ಯಮನ ಹೊರತು ಬೇರೆಯವರನ್ನು ಸೇರುವುದಿಲ್ಲ. ಇದು ನಿಜ.

೩. ನಾನು ಇಹಪರಗಳಲ್ಲಿ ಏನು ಪಾಪವನ್ನು ಮಾಡಿದ್ದೇನೆ? ಇಂತಹ ಶೂಲವೇದನೆಯನ್ನು ಹೊಂದಿದರೂ ಮೃತನಾಗಲಿಲ್ಲವಲ್ಲ.

೪. ಧರ್ಮರಾಜನು ಹೇಳುತ್ತಾನೆ:—ದ್ವಿಜ! ನೀನು ಹಿಂದಿನ ಜನ್ಮದಲ್ಲಿ ಬಾಲಕನಾಗಿರುವಾಗ ಒಂದು ಕೊಕ್ಕರೆಯನ್ನು ಹರಿತವಾದ ಶೂಲದಿಂದ ಚುಚ್ಚಿರುವೆ.

೫. ಬೇರೆ ಯಾವ ಸ್ವಲ್ಪ ಪಾಪವನ್ನೂ ಮಾಡಲಿಲ್ಲ. ಇದರಿಂದಲೇ ನೀನು ಇಂಥ ವ್ಯಥೆಯನ್ನನುಭವಿಸಿದೆ.

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಭೃಶಂ ಕ್ರೋಧಸಮನ್ವಿತಃ ।
ತತಸ್ತಂ ಪ್ರಾಹ ಮಾಂಡವ್ಯೋ ಧರ್ಮರಾಜಂ ಪುರಃ ಸ್ಥಿತಂ ॥ ೬ ॥
ಅಸ್ಯ ಸ್ವಲ್ಪಾಪರಾಧಸ್ಯ ಯಸ್ಮಾದ್ಭೂಯಾನ್ವಿನಿಗ್ರಹಃ ।
ಕೃತಸ್ತ್ವಯಾ ಸುದುರ್ಬುದ್ಧೇ ತಸ್ಮಾಚ್ಛಾಪಂ ಗೃಹಾಣ ಮೇ ॥ ೭ ॥
ತ್ವಂ ಪ್ರಾಪ್ಯ ಮಾನುಷಂ ದೇಹಂ ಶೂದ್ರಯೋನೌ ವ್ಯವಸ್ಥಿತಃ ।
ಜಾತಿಕ್ಷಯಕೃತಂ ದುಃಖಂ ಪ್ರಭೂತಂ ಸೇವಯಿಷ್ಯಸಿ ॥ ೮ ॥
ತಥಾ ಕೃತಾ ಮಯೈಷಾಽದ್ಯ ವ್ಯವಸ್ಥಾ ಸರ್ವದೇಹಿನಾಂ ।
ಅಷ್ಟಮಾದ್ವತ್ಸರಾದೂರ್ಧ್ವಂ ಕರ್ಮಣಾ ಗರ್ಹಿತೇನ ಚ ।
ಪ್ರಗ್ರಹೀಷ್ಯತಿ ವೈ ಜಂತುಃ ಪುರುಷೋ ಯೋಷಿದೇವ ವಾ ॥ ೯ ॥
ಏವಮುಕ್ತ್ವಾ ಸ ಮಾಂಡವ್ಯೋ ಧರ್ಮರಾಜಂ ತತಃ ಪರಂ ।
ಪ್ರಸ್ಥಿತೋ ರೋಷನಿರ್ಮುಕ್ತೋ ವಾಂಛಿತಾಶಾಂ ಪ್ರತಿ ದ್ವಿಜಾಃ ॥ ೧೦ ॥
ಅಥ ತಂ ಪ್ರಸ್ಥಿತಂ ದೃಷ್ಟ್ವಾ ಪ್ರೋಚುಃ ಸರ್ವೇ ದಿವೌಕಸಃ ।
ಧರ್ಮರಾಜಕೃತೇ ವ್ಯಗ್ರಾಃ ಶ್ರುತ್ವಾ ಶಾಪಂ ತಥಾವಿಧಂ ॥ ೧೧ ॥

ದೇವಾ ಊಚುಃ :—

ಭಗವನ್ ಪಾಪಸಕ್ತಸ್ಯ ಧರ್ಮರಾಜಸ್ಯ ಕೇವಲಂ ।
ನ ತ್ವಮರ್ಹಸಿ ಶಾಪೇನ ಶೂದ್ರಂ ಕರ್ತುಂ ಕಥಂಚನ ॥ ೧೨ ॥

---

೬. ಸೂತನು ಹೇಳುತ್ತಾನೆ :—ಮಾಂಡವ್ಯನು ಧರ್ಮರಾಜನ ಆ ಮಾತನ್ನು ಕೇಳಿ ಅತ್ಯಂತ ಕ್ರುದ್ಧನಾಗಿ ಮುಂದಿರುವ ಅವನನ್ನು ಕುರಿತು ಇಂತೆಂದನು.

೭. ದುಷ್ಟ! ನೀನು ಅಲ್ಪವಾದ ಈ ತಪ್ಪಿಗಾಗಿ ಬಹುವಾಗಿ ನನ್ನನ್ನು ಶಿಕ್ಷಿಸಿರುವುದರಿಂದ ನನ್ನೀ ಶಾಪವನ್ನು ಸ್ವೀಕರಿಸು.

೮. ನೀನು ಶೂದ್ರಜಾತಿಯಲ್ಲಿ ಮನುಷ್ಯನಾಗಿ ಅವತರಿಸಿ ನೀಚಜಾತಿಯಿಂದುಂಟಾದ ಅತಿಶಯ ದುಃಖವನ್ನು ಅನುಭವಿಸು.

೯. ಹಾಗೆಯೇ ನಾನು ಈಗ ಸಮಸ್ತ ಪ್ರಾಣಿಗಳಿಗೆ ಒಂದು ವ್ಯವಸ್ಥೆಯನ್ನು ಮಾಡಿರುವೆನು. ಹೆಣ್ಣಾಗಲಿ, ಗಂಡಾಗಲಿ ಜಂತುವು ಎಂಟು ವರ್ಷದ ತರುವಾಯ ತಾನು ಮಾಡಿದ ಕರ್ಮಫಲವನ್ನು ಹೊಂದಲಿ.

೧೦. ದ್ವಿಜರೆ! ಆ ಮಾಂಡವ್ಯನು ಧರ್ಮರಾಜನನ್ನು ಕುರಿತು ಹೀಗೆ ಹೇಳಿ ಕೋಪರಹಿತನಾಗಿ ತನಗಿಷ್ಟವಾದ ದಿಕ್ಕಿಗೆ ಹೊರಟನು.

೧೧. ಅನಂತರ ದೇವತೆಗಳು ಮಾಂಡವ್ಯನು ಧರ್ಮರಾಜನಿಗಿತ್ತ ಶಾಪದಿಂದ ವ್ಯಾಕುಲಗೊಂಡು ಅವನನ್ನು ಕುರಿತು ಹೀಗೆಂದರು.

೧೨. ದೇವತೆಗಳು ಹೇಳುತ್ತಾರೆ :—ಪೂಜ್ಯನೆ! ಪಾಪವನ್ನೆಸಗಿದ ಧರ್ಮರಾಜನನ್ನು ನೀನು ಶಾಪದಿಂದ ಶೂದ್ರನನ್ನಾಗಿ ಮಾಡಲರ್ಹನಲ್ಲ.

ಪ್ರಸಾದಂ ಕುರು ತಸ್ಮಾತ್ತ್ವಮಸ್ಯ ಧರ್ಮಪತೇರ್ದ್ವಿಜ ।
ಅಸ್ಮಾಕಂ ವಚನಾತ್ಸದ್ಯಃ ಪ್ರಾರ್ಥಯಸ್ವ ತಥಾ ವರಂ ॥ ೧೩ ॥

ಮಾಂಡವ್ಯ ಉವಾಚ :—

ನಾಽನ್ಯಥಾ ಜಾಯತೇ ವಾಣೀ ಯಾ ಮಯೋಕ್ತಾ ಸುರೋತ್ತಮಾಃ ।
ಅವಶ್ಯಂ ಧರ್ಮರಾಜೋಽಯಂ ಶೂದ್ರಯೋನೌ ಪ್ರಯಾಸ್ಯತಿ ॥ ೧೪ ॥
ಪರಂ ನೈವಾಽಸ್ಯ ಸಂತಾನಂ ತಸ್ಯಾಂ ಯೋನೌ ಭವಿಷ್ಯತಿ ।
ಸಂಪ್ರಾಪ್ಸ್ಯತಿ ಚ ಭೂಯೋಽಪಿ ಧರ್ಮರಾಜತ್ವಮುತ್ತಮಂ ॥ ೧೫ ॥
ಆರಾಧಯತು ಚಾಽವ್ಯಗ್ರಃ ಕ್ಷೇತ್ರೇಽತ್ರೈವ ತ್ರಿಲೋಚನಂ ।
ಪ್ರಸಾದಾತ್ತಸ್ಯ ದೇವಸ್ಯ ಶೀಘ್ರಂ ಮೃತ್ಯುಮವಾಪ್ಸ್ಯತಿ ॥ ೧೬ ॥
ತಥಾ ದೇಯೋ ವರೋ ಮಹ್ಯಂ ಭವದ್ಭಿರ್ಯದಿ ಸ್ವರ್ಗಪಾಃ ।
ತದೇಷಾ ಶೂಲಿಕಾಽಸ್ಮಾಕಂ ಸ್ಪರ್ಶಾದ್ಭೂಯಾತ್ಸುಧರ್ಮದಾ ॥ ೧೭ ॥

ದೇವಾ ಊಚುಃ :—

ಏನಾಂ ಯಃ ಪ್ರಾತರುತ್ಥಾಯ ಸ್ಪರ್ಶಯಿಷ್ಯತಿ ಶೂಲಿಕಾಂ ।
ಪಾತಕಾತ್ಸವಿಮುಕ್ತೋ ವಾ ಇಹಲೋಕೇ ಭವಿಷ್ಯತಿ ॥ ೧೮ ॥
ಏವಮುಕ್ತ್ವಾ ಮುನಿಂ ತಂ ತೇ ದೇವಾಃ ಶಕ್ರ ಪುರೋಗಮಾಃ ।
ತತಸ್ತಾಂ ಸಾದರಂ ಪ್ರಾಹುಃ ಸಹ ಭರ್ತ್ರಾ ಪತಿವ್ರತಾಂ ॥ ೧೯ ॥

---

೧೩. ದ್ವಿಜನೆ! ಆದುದರಿಂದ ನೀನು ನಮ್ಮ ಮಾತಿನಿಂದ ಈ ಧರ್ಮರಾಜನಲ್ಲಿ ಪ್ರಸನ್ನನಾಗು. ನಮ್ಮಿಂದ ವರವನ್ನು ಕೇಳಿಕೊ.

೧೪. ಮಾಂಡವ್ಯನು ಹೇಳುತ್ತಾನೆ:—ಸುರೋತ್ತಮರೆ! ನನ್ನ ಮಾತು ವ್ಯತ್ಯಾಸವಾಗುವುದಿಲ್ಲ. ನಿಶ್ಚಯವಾಗಿಯೂ ಈ ಧರ್ಮರಾಜನು ಶೂದ್ರ ಜಾತಿಯಲ್ಲಿ ಜನಿಸುವನು.

೧೫. ಆದರೆ ಇವನಿಗೆ ಆ ಶೂದ್ರ ಜಾತಿಯಲ್ಲಿ ಸಂತತಿಯಾಗುವುದಿಲ್ಲ. ಇವನು ಮರಳಿ ಉತ್ತಮನಾದ ಧರ್ಮರಾಜತ್ವವನ್ನು ಹೊಂದುವನು.

೧೬. ಈ ಕ್ಷೇತ್ರದಲ್ಲಿಯೇ ಮಹೇಶ್ವರನನ್ನು ಸ್ಥಿರಚಿತ್ತನಾಗಿ ಆರಾಧಿಸಲಿ. ಅವನ ಅನುಗ್ರಹದಿಂದ ಶೀಘ್ರವಾಗಿ ಮಡಿಯುವನು.

೧೭. ದೇವತೆಗಳೆ! ನೀವು ನನಗೆ ವರವನ್ನು ಕೊಡುವುದಾದರೆ ಈ ಶೂಲವು ಸ್ಪರ್ಶಮಾತ್ರದಿಂದಲೇ ಧರ್ಮವನ್ನುಂಟುಮಾಡಲಿ.

೧೮. ದೇವತೆಗಳು ಹೇಳುತ್ತಾರೆ:—ಈ ಲೋಕದಲ್ಲಿ ಬೆಳಗ್ಗೆ ಎದ್ದು ಈ ಶೂಲವನ್ನು ಮುಟ್ಟಿದವನು ಪಾಪರಹಿತನಾಗುವನು.

೧೯. ಆ ಇಂದ್ರಾದಿ ದೇವತೆಗಳು ಆ ಮಾಂಡವ್ಯನನ್ನು ಕುರಿತು ಹೀಗೆ ಹೇಳಿ ಗಂಡನೊಡನೆ ಇರುವ ಆ ಪತಿವ್ರತೆಯನ್ನು ಕುರಿತು ಇಂತೆಂದರು.

ತ್ವಮಪಿ ಪ್ರಾರ್ಥಯಾಽಭೀಷ್ಟಮಸ್ಮತ್ತೋ ವರವರ್ಣಿನಿ ।
ಯತ್ತೇ ಚಿತ್ತೇ ಸ್ಥಿತಂ ನಿತ್ಯಂ ನಾಽದೇಯಂ ವಿದ್ಯತೇಽತ್ರ ನಃ ॥ ೨೦ ॥

ಪತಿವ್ರತೋವಾಚ :—

ಯೇಯಂ ಮಯಾ ಕೃತಾ ಗರ್ತಾ ಸ್ಥಾನೇಽತ್ರ ತ್ರಿದಶೇಶ್ವರಾಃ ।
ಮನ್ನಾಮ್ನಾ ಖ್ಯಾತಿಮಾಯಾತು ದೀರ್ಘಿಕೇತಿ ಜಗತ್ತ್ರಯೇ ॥ ೨೧ ॥

ದೇವಾ ಊಚುಃ :—

ಅದ್ಯ ಪ್ರಭೃತಿ ಲೋಕೇಽತ್ರ ಗರ್ತೇಯಂ ತವ ಶೋಭನೇ ।
ದೀರ್ಘಿಕೇತಿ ಸುವಿಖ್ಯಾತಾ ಭವಿಷ್ಯತಿ ಜಗತ್ತ್ರಯೇ ॥ ೨೨ ॥
ಯೇಽಸ್ಯಾಂ ಸ್ನಾನಂ ಕರಿಷ್ಯಂತಿ ಪ್ರಾತರುತ್ಥಾಯ ಮಾನವಾಃ ।
ಸರ್ವಪಾಪವಿನಿರ್ಮುಕ್ತಾಸ್ತೇ ಭವಿಷ್ಯಂತಿ ತತ್ಕ್ಷಣಾತ್ ॥ ೨೩ ॥
ಕನ್ಯಾರಾಶಿಗತೇ ಸೂರ್ಯೇ ಸಂಪ್ರಾಪ್ತೇ ಪಂಚಮೀ ದಿನೇ ।
ಯೇಽತ್ರ ಸ್ನಾನಂ ಕರಿಷ್ಯಂತಿ ಶ್ರದ್ಧಯಾ ಸಹಿತಾ ನರಾಃ ॥ ೨೪ ॥
ಅಪುತ್ರಾಸ್ತೇ ಭವಿಷ್ಯಂತಿ ಸಪುತ್ರಾ ವಂಶವರ್ಧನಾಃ ।
ಏವಮುಕ್ತ್ವಾಽಥ ತಾಂ ದೇವಾ ಜಗ್ಮುಃ ಸ್ವರ್ಗಂ ದ್ವಿಜೋತ್ತಮಾಃ ॥ ೨೫ ॥
ಪತಿವ್ರತಾಽಪಿ ತೇನೈವ ಸಹಕಾಂತೇನ ಸುಂದರೀ ।
ಸೇವಯಾಮಾಸ ಕಲ್ಯಾಣೀ ಸ್ಮರಸೌಖ್ಯಮನುತ್ತಮಂ ॥ ೨೬ ॥

---

೨೦. ಸುಂದರಿ! ನೀನು ನಿನ್ನ ಮನಸ್ಸಿನಲ್ಲಿರುವ ಅಭೀಷ್ಟವನ್ನು ಕೇಳಿಕೊ. ನಿನಗೆ ಕೊಡದಿರುವುದು ಯಾವುದೂ ಇಲ್ಲ.

೨೧. ಪತಿವ್ರತೆಯು ಹೇಳುತ್ತಾಳೆ:—ಸುರರೆ! ನಾನು ಈ ಸ್ಥಳದಲ್ಲಿ ಮಾಡಿದ ಗರ್ತವು ಮೂರು ಲೋಕಗಳಲ್ಲಿಯೂ ದೀರ್ಘಿಕೆಯೆಂಬ ನನ್ನ ಹೆಸರಿನಿಂದ ಪ್ರಸಿದ್ಧವಾಗಲಿ.

೨೨. ದೇವತೆಗಳು ಹೇಳುತ್ತಾರೆ:—ಮಂಗಳಕರಳೆ! ಈ ಗರ್ತವು ಇದು ಮೊದಲ್ಗೊಂಡು ಮೂರು ಲೋಕಗಳಲ್ಲಿಯೂ ದೀರ್ಘಿಕೆಯೆಂದು ಪ್ರಸಿದ್ಧವಾಗುವುದು.

೨೩. ಪ್ರಾತಃಕಾಲ ಎದ್ದು ಇಲ್ಲಿ ಸ್ನಾನ ಮಾಡುವ ಮನುಷ್ಯರು ಕೂಡಲೆ ಸಮಸ್ತ ಪಾಪಗಳಿಂದ ಮುಕ್ತರಾಗುವರು.

೨೪—೨೫. ಸೂರ್ಯನು ಕನ್ಯಾರಾಶಿಯನ್ನು ಹೊಂದಿರಲು ಪಂಚಮಿಯ ದಿನ ಶ್ರದ್ಧೆಯಿಂದ ಇಲ್ಲಿ ಸ್ನಾನ ಮಾಡುವ ಪುತ್ರರಿಲ್ಲದ ಮಾನವರು ಪುತ್ರರನ್ನು ಪಡೆದು ವಂಶವನ್ನು ವೃದ್ಧಿಗೊಳಿಸುವರು. ದೇವತೆಗಳು ಅವಳನ್ನು ಕುರಿತು ಹೀಗೆಂದು ಸ್ವರ್ಗಕ್ಕೆ ತೆರಳಿದರು.

೨೬—೨೭. ಸುಂದರಿಯೂ, ಪತಿವ್ರತೆಯೂ ಆದ ಆ ದೀರ್ಘಿಕೆಯು

ಪರ್ವತೇಷು ಸುರಮ್ಯೇಷು ನದೀನಾಂ ಪುಲಿನೇಷು ಚ ।
ಉದ್ಯಾನೇಷು ವಿಚಿತ್ರೇಷು ವನೇಷೂಪವನೇಷು ಚ ॥ ೨೭ ॥
ತತೋ ವಯಸಿ ಸಂಪ್ರಾಪ್ತೇ ಪಶ್ಚಿಮೇ ಕಾಲಪರ್ಯಯಾತ್ ।
ತದೇವಾತ್ಮೀಯಸತ್ತೀರ್ಥಂ ಸೇವಯಾಮಾಸ ಸಾದರಂ ॥ ೨೮ ॥
ತತೋ ದೇಹಂ ಪರಿತ್ಯಕ್ತ್ವಾ ಸ್ವಕಾಂತಂ ವೀಕ್ಷ್ಯ ತಂ ಮೃತಂ ।
ತತ್ರ ತೋಯೇ ಜಗಾಮಾಥ ಬ್ರಹ್ಮಲೋಕಂ ಪತಿವ್ರತಾ ॥ ೨೯ ॥
ಏತದ್ವಃ ಸರ್ವಮಾಖ್ಯಾತಂ ದೀರ್ಘಿಕಾಖ್ಯಾನಮುತ್ತಮಂ ।
ಯಸ್ಯ ಸಂಶ್ರವಣಾದೇವ ನರಃ ಪಾಪಾತ್ಪ್ರಮುಚ್ಯತೇ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದೀರ್ಘಿಕೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ಷಟ್‌ತ್ರಿಂಶದುತ್ತರಶತತಮೋಽಧ್ಯಾಯಃ

---

ಆ ಪ್ರಿಯನೊಡನೆ ರಮ್ಯವಾದ ಪರ್ವತ, ನದಿಯ ಮರಳು ದಿಣ್ಣೆ, ಬಗೆಬಗೆಯ ಕಾಡು, ಉದ್ಯಾನ ಇವುಗಳಲ್ಲಿ ಮನ್ಮಥ ಸೌಖ್ಯವನ್ನು ಅನುಭವಿಸಿದಳು.

೨೮. ಅನಂತರ ಅವಳು ಕಾಲಕ್ರಮದಿಂದ ಮುದುಕಿಯಾಗಲು ಪ್ರೀತಿಯಿಂದ ಅದೇ ತನ್ನ ತೀರ್ಥವನ್ನು ಸೇವಿಸಿದಳು.

೨೯. ತರುವಾಯ ಅವಳು ಮೃತನಾದ ಪತಿಯನ್ನು ನೋಡಿ ಆ ತೀರ್ಥ ಜಲದಲ್ಲಿ ತನ್ನ ಶರೀರವನ್ನು ತ್ಯಜಿಸಿ ಬ್ರಹ್ಮಲೋಕಕ್ಕೆ ಹೋದಳು.

೩೦. ನಿಮಗೆ ಉತ್ತಮವಾದ ಈ ದೀರ್ಘಿಕಾಖ್ಯಾನವನ್ನು ಹೇಳಿರುವೆನು ಇದನ್ನು ಕೇಳಿದ ಕೂಡಲೆ ಮನುಷ್ಯನು ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದೀರ್ಘಿಕೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

## ಮಾಂಡವ್ಯಶೂಲೀಪ್ರಾಪ್ತಿವೃತ್ತಾಂತವರ್ಣನಂ

ಋಷಯ ಊಚುಃ :—

ಕೇನಾಽಸೌ ಮುನಿಶಾರ್ದೂಲೋ ಮಾಂಡವ್ಯಃ ಸುಮಹಾತಪಾಃ ।
ಶೂಲಾಯಾಂ ಸ್ಥಾಪಿತಃ ಕೇನ ಕಾರಣೇನ ಚ ನೋ ವದ ॥ ೧ ॥

ಸೂತ ಉವಾಚ :—

ಸ ಮಾಂಡವ್ಯೋ ಮುನಿಃ ಪೂರ್ವಂ ತೀರ್ಥಯಾತ್ರಾಂ ಸಮಾಚರನ್ ।
ಅಸ್ಮಿನ್ ಕ್ಷೇತ್ರೇ ಸಮಾಯಾತಃ ಶ್ರದ್ಧಯಾ ಪರಯಾ ಯುತಃ ॥ ೨ ॥
ವಿಶ್ವಾಮಿತ್ರೀಯಮಾಸಾದ್ಯ ಸತ್ತೀರ್ಥಂ ಪಾವನಂ ಮಹತ್ ।
ಪಿತೄಣಾಂ ತರ್ಪಣಂ ಚಕ್ರೇ ಭಾಸ್ಕರಂ ಪ್ರತಿ ಸ ವ್ರತೀ ॥ ೩ ॥
ಜಪನ್ ವಿಭ್ರಾಡಿತಿ ಶ್ರೇಷ್ಠಂ ಸೂಕ್ತಂ ಭಾಸ್ಕರವಲ್ಲಭಂ ।
ಏತಸ್ಮಿನ್ನಂತರೇ ಚೌರೋ ಲೋಪ್ತ್ರಮಾದಾಯ ಕಸ್ಯಚಿತ್ ॥ ೪ ॥
ಕೋಽಪಿ ತತ್ರ ಸಮಾಯಾತಃ ಪೃಷ್ಠೇ ಲಗ್ನೈರ್ಜನೈರ್ದ್ವಿಜಾಃ ।
ತತಶ್ಚೌರೋಽಪಿ ತಂ ದೃಷ್ಟ್ವಾ ಮೌನಸ್ಥಂ ಮುನಿಸತ್ತಮಂ ॥ ೫ ॥
ಲೋಪ್ತ್ರಂ ಮುಕ್ತ್ವಾ ತದಗ್ರೇಽಥ ಪ್ರವಿವೇಶ ಗುಹಾಂತರೇ ।
ಏತಸ್ಮಿನ್ನಂತರೇ ಪ್ರಾಪ್ತಾಸ್ತೇ ಜನಾ ಲೋಪ್ತ್ರಹೇತವೇ ॥ ೬ ॥

---

## ಕನ್ನಡದ ಅನುವಾದ

### ಮಾಂಡವ್ಯಶೂಲೀಪ್ರಾಪ್ತಿವೃತ್ತಾಂತವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ! ಮಹಾ ತಪಸ್ವಿಯಾದ ಮಾಂಡವ್ಯ ಮುನಿವರ್ಯನನ್ನು ಯಾರು ಏತಕ್ಕೆ ಶೂಲಕ್ಕೇರಿಸಿದರು ? ಅದನ್ನು ನಮಗೆ ಹೇಳು.

೨. ಸೂತನು ಹೇಳುತ್ತಾನೆ:—ಹಿಂದೆ ಆ ಮಾಂಡವ್ಯ ಮುನಿಯು ತೀರ್ಥ ಯಾತ್ರೆಗೈಯುತ್ತ ಅತಿಶ್ರದ್ಧೆಯಿಂದ ಈ ಕ್ಷೇತ್ರಕ್ಕೆ ಬಂದನು.

೩–೬. ಆ ಮುನಿವರ್ಯನು ಪವಿತ್ರವಾದ ವಿಶ್ವಾಮಿತ್ರ ತೀರ್ಥವನ್ನು ಹೊಂದಿ ಪಿತೃಗಳಿಗೆ ತರ್ಪಣಮಾಡಿ ಸೂರ್ಯನನ್ನುದ್ದೇಶಿಸಿ ಅವನಿಗೆ ಪ್ರಿಯವಾದ ವಿಭ್ರಾಡೆಂಬ ಶ್ರೇಷ್ಠ ಸೂಕ್ತವನ್ನು ಜಪಿಸುತ್ತಿದ್ದನು. ಈ ಮಧ್ಯದಲ್ಲಿ ಒಬ್ಬ ಕಳ್ಳನು ಓರ್ವನ ಸ್ವತ್ತನ್ನು ತೆಗೆದುಕೊಂಡು ಹಿಂಬಾಲಿಸುತ್ತಿದ್ದ ಕೆಲವು ಜನರೊಡನೆ ಅಲ್ಲಿಗೆ ಬಂದನು. ಅವನು ಮೌನದಿಂದ ಕುಳಿತಿರುವ ಮಾಂಡವ್ಯನನ್ನು ನೋಡಿ ಅವನ ಮುಂದೆ ಆ ಸ್ವತ್ತನ್ನು ಇರಿಸಿ ಗುಹೆಯನ್ನು ಹೊಕ್ಕನು. ಇಷ್ಟರಲ್ಲಿ ಆ ಹಿಂಬಾಲಿಸುತ್ತಿದ್ದ ಜನರು ಆ ಸ್ವತ್ತನ್ನು ಕಸಿದುಕೊಳ್ಳಲು ಅಲ್ಲಿಗೆ ಬಂದು ಮುನಿಯ

ದೃಷ್ಟ್ವಾ ಲೋಪ್ತ್ರಂ ತದಗ್ರಸ್ಥಂ ತಮೂಚುರ್ಮುನಿಪುಂಗವಂ ।
ಮಾರ್ಗೇಣಾನೇನ ಚಾಯಾತೋ ಲೋಪ್ತ್ರಹಸ್ತೋ ಮಲಿಮ್ಲುಚಃ ।
ಬ್ರೂಹಿ ಶೀಘ್ರಂ ಮಹಾಭಾಗ ಕೇನ ಮಾರ್ಗೇಣ ನಿರ್ಗತಃ ॥ ೭ ॥
ಸ ಚ ಜಾನನ್ನಪಿ ಪ್ರಾಜ್ಞೋ ಗುಹಾಸಂಸ್ಥಂ ಮಲಿಮ್ಲುಚಂ ।
ನ ಕಿಂಚಿದಪಿ ಚೋವಾಚ ಮೌನವ್ರತಪರಾಯಣಃ ॥ ೮ ॥
ಅಸಕೃತ್ಪ್ರೋಚ್ಯಮಾನೋಽಪಿ ಪರಚಿಂತಾಸಮನ್ವಿತಃ ।
ಯದಾ ಪ್ರೋವಾಚ ನೋ ಕಿಂಚಿತ್ಸರಕ್ಷಂಶ್ಚೌರಜೀವಿತಂ ॥ ೯ ॥
ತತಸ್ತೈರ್ಮಂತ್ರಿತಂ ಸರ್ವೈರೇಷ ನೂನಂ ಮಲಿಮ್ಲುಚಃ ।
ಸಂಪ್ರಾಪ್ತಃ ಪೃಷ್ಠತೋಽಸ್ಮಾಭಿರ್ಮುನಿರೂಪೋ ಬಭೂವ ಹ ॥ ೧೦ ॥
ಅವಿಚಾರ್ಯ ತತಃ ಸರ್ವೈರಾಭೀರೈಸ್ತೈರ್ದುರಾತ್ಮಭಿಃ ।
ಶೂಲೀಮಾರೋಪಿತಃ ಸದ್ಯೋ ನೀತ್ವಾ ಕಿಂಚಿದ್ವನಾಂತರಂ ॥ ೧೧ ॥
ಏವಂ ಪ್ರಾಪ್ತಾ ತದಾ ಶೂಲೀ ಮುನಿನಾ ತೇನ ದಾರುಣಾ ।
ಪೂರ್ವಕರ್ಮವಿಪಾಕೇನ ದೋಷಹೀನೇನ ಧೀಮತಾ ॥ ೧೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮಾಂಡವ್ಯಶೂಲೀಪ್ರಾಪ್ತಿವೃತ್ತಾಂತವರ್ಣನಂ" ನಾಮ
ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

---

ಮುಂದಿರುವ ಸ್ವತ್ತನ್ನು ನೋಡಿ ಮುನಿಯನ್ನು ಕುರಿತು ಕದ್ದಿರುವ ಸ್ವತ್ತಿನೊಡನೆ ಬಂದ ಕಳ್ಳನು ಯಾವ ದಾರಿಯಿಂದ ಹೋದನು? ಹೇಳು, ಎಂದರು.

೮. ಅವನು ಕಳ್ಳನು ಗುಹೆಯಲ್ಲಿರುವುದನ್ನರಿತಿದ್ದರೂ ಮೌನವ್ರತವುಳ್ಳವನಾದ್ದರಿಂದ ಏನನ್ನೂ ಹೇಳಲಿಲ್ಲ.

೯–೧೦. ಪರಮಾತ್ಮನನ್ನು ಧ್ಯಾನಿಸುತ್ತಿರುವ ಅವನು ಅನೇಕ ಸಾರಿ ಕೇಳಿದರೂ ಕಳ್ಳನ ಜೀವವನ್ನುಳಿಸಲೋಸುಗ ಏನನ್ನೂ ಹೇಳದಿರಲು ಆ ಜನರು ಇವನೇ ಕಳ್ಳನು, ನಾವು ಅಟ್ಟಿಸಿಕೊಂಡು ಬಂದಕೂಡಲೆ ಮುನಿರೂಪನಾದನೆಂದು ಮಾತಾಡಿಕೊಂಡರು.

೧೧. ತರುವಾಯ ದುರಾತ್ಮರಾದ ಆ ಶೂದ್ರರೆಲ್ಲ ವಿಚಾರಮಾಡದೆ ಕೂಡಲೆ ಅವನನ್ನು ಕಾಡಿನ ನಡುವೆ ತೆಗೆದುಕೊಂಡು ಹೋಗಿ ಶೂಲಕ್ಕೇರಿಸಿದರು.

೧೨. ಹೀಗೆ ನಿರ್ದುಷ್ಟ ಜ್ಞಾನಿಯಾದ ಆ ಮುನಿಯು ಹಿಂದಿನ ಜನ್ಮದ ಕರ್ಮ ಪರಿಣಾಮದಿಂದ ಭಯಂಕರ ಶೂಲವೇಧನೆಗೀಡಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮಾಂಡವ್ಯಶೂಲೀಪ್ರಾಪ್ತಿವೃತ್ತಾಂತವರ್ಣನ" ವೆಂಬ
ನೂರಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾತ್ರಿಂಶದುತ್ತರಶತತಮೋಽಧ್ಯಾಯಃ

## ಧರ್ಮರಾಜೇಶ್ವರೋತ್ಪತ್ತಿವರ್ಣನಂ

ಋಷಯ ಊಚುಃ:—

ಕಿಂ ಕೃತಂ ಧರ್ಮರಾಜೇನ ತಪೋಧ್ಯಾನಾದಿಕಂ ಚ ಯತ್ ।
ಮಾಂಡವ್ಯಶಾಪನಾಶಾಯ ತದಸ್ಮಾಕಂ ಪ್ರಕೀರ್ತಯ ॥ ೧ ॥

ಸೂತ ಉವಾಚ:—

ಮಾಂಡವ್ಯಶಾಪಮಾಸಾದ್ಯ ಧರ್ಮರಾಜಃ ಸುದುಃಖಿತಃ ।
ತಪಸ್ತೇಪೇ ದ್ವಿಜಶ್ರೇಷ್ಠಾಸ್ತಸ್ಮಿನ್ ಕ್ಷೇತ್ರೇ ವ್ಯವಸ್ಥಿತಃ ॥ ೨ ॥
ಪ್ರಾಸಾದಂ ದೇವದೇವಸ್ಯ ಸಂವಿಧಾಯ ಕಪರ್ದಿನಃ ।
ಅವ್ಯಗ್ರಂ ಪೂಜಯಾಮಾಸ ಪುಷ್ಪಧೂಪಾನುಲೇಪನೈಃ ॥ ೩ ॥
ತತಃ ಕಾಲೇನ ಮಹತಾ ತುಷ್ಟಸ್ತಸ್ಯ ಮಹೇಶ್ವರಃ ।
ಪ್ರೋವಾಚ ವರದೋಽಸ್ಮೀತಿ ಪ್ರಾರ್ಥಯಸ್ವ ಯದೀಪ್ಸಿತಂ ॥ ೪ ॥

ಧರ್ಮರಾಜ ಉವಾಚ:—

ಅಹಂ ದೇವ ಪುರಾ ಶಪ್ತೋ ಮಾಂಡವ್ಯೇನ ಮಹಾತ್ಮನಾ ।
ಸ್ವಧರ್ಮೇ ವರ್ತಮಾನೋಽಪಿ ಸರ್ವದೋಷವಿವರ್ಜಿತಃ ॥ ೫ ॥

---

## ಕನ್ನಡದ ಅನುವಾದ

### ಧರ್ಮರಾಜೇಶ್ವರೋತ್ಪತ್ತಿವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಧರ್ಮರಾಜನು ಮಾಂಡವ್ಯನ ಶಾಪ ಪರಿಹಾರಕ್ಕಾಗಿ ಎಂಥ ತಪೋಧ್ಯಾನಾದಿಗಳನ್ನು ಮಾಡಿದನು? ಅದನ್ನು ನಮಗೆ ಹೇಳು.

೨. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಧರ್ಮರಾಜನು ಮಾಂಡವ್ಯನ ಶಾಪವನ್ನು ಹೊಂದಿ ಆ ಕ್ಷೇತ್ರದಲ್ಲಿ ನೆಲೆಸಿ ದುಃಖದಿಂದ ತಪಸ್ಸನ್ನು ಮಾಡಿದನು.

೩. ಅವನು ಮಹೇಶ್ವರನ ದೇವಾಲಯವನ್ನು ನಿರ್ಮಿಸಿ ಪುಷ್ಪ, ಧೂಪ, ಅನುಲೇಪನಗಳಿಂದ ನಿಶ್ಚಲಮನಸ್ಸಿನಿಂದ ಪೂಜಿಸಿದನು.

೪. ಅನಂತರ ಬಹುಕಾಲದ ಮೇಲೆ ಮಹೇಶ್ವರನು ಅವನಲ್ಲಿ ಸಂತುಷ್ಟನಾಗಿ ವರವನ್ನು ಕೊಡುವೆನು, ಅಭೀಷ್ಟವನ್ನು ಕೇಳಿಕೊ ಎಂದನು.

೫. ಧರ್ಮರಾಜನು ಹೇಳುತ್ತಾನೆ:—ಸ್ವಾಮಿ! ಹಿಂದೆ ಮಹಾತ್ಮನಾದ ಮಾಂಡವ್ಯನು ಸ್ವಧರ್ಮನಿರತನೂ, ಸಮಸ್ತ ದೋಷರಹಿತನೂ ಆದ ನನ್ನನ್ನು ಶಪಿಸಿದನು.

ಕುಪಿತೇನ ಚ ತೇನೋಕ್ತಂ ಶೂದ್ರಯೋನೌ ಭವಿಷ್ಯಸಿ ॥ ೬ ॥
ತತ್ರಾಽಪಿ ಚ ಮಹದ್ದುಃಖಂ ಜ್ಞಾತಿನಾಶಸಮುದ್ಭವಂ ।
ಮಚ್ಛಾಪಜನಿತಂ ಸದ್ಯೋ ಜಾತಿಜಂ ಸಮವಾಪ್ಸ್ಯಸಿ ॥ ೭ ॥
ತಸ್ಮಾತ್ತ್ರಾಹಿ ಸುರಶ್ರೇಷ್ಠ ತಸ್ಯಾ ಯೋನೇಃ ಸಕಾಶತಃ ।
ಕಥಂ ಚೈತದ್ವಿಧೋ ಭೂತ್ವಾ ತಸ್ಯಾಂ ಜನ್ಮ ಕರೋಮ್ಯಹಂ ॥ ೮ ॥
ತತ್ರಾಽಪಿ ಚ ಮಹದ್ದುಃಖಂ ಜ್ಞಾತಿನಾಶಸಮುದ್ಭವಂ ।
ಏತದರ್ಥೇ ಸುರಶ್ರೇಷ್ಠ ಮಯಾ ಚಾರಾಧಿತೋ ಭವಾನ್ ॥ ೯ ॥

ಶ್ರೀ ಭಗವಾನುವಾಚ :—

ನ ತಸ್ಯ ಸನ್ಮುನೇರ್ವಾಕ್ಯಂ ಶಕ್ಯತೇ ಕರ್ತುಮನ್ಯಥಾ ।
ತಸ್ಮಾಚ್ಛೂದ್ರೋಽಪಿ ಭೂತ್ವಾ ತ್ವಂ ನ ಸಂತಾನಮವಾಪ್ಸ್ಯಸಿ ॥ ೧೦ ॥
ಜ್ಞಾತಿಕ್ಷಯಂ ಪ್ರದೃಷ್ಟ್ವಾಽಪಿ ನೈವ ದುಃಖಮವಾಪ್ಸ್ಯಸಿ ।
ಯತೋ ನಿಷಿಧ್ಯಮಾನಾಽಪಿ ನ ಕರಿಷ್ಯಂತಿ ತೇ ವಚಃ ॥ ೧೧ ॥
ಏತಸ್ಮಾತ್ಕಾರಣಾಚ್ಚಿತ್ತೇ ನ ತೇ ದುಃಖಂ ಭವಿಷ್ಯತಿ ।
ಜ್ಞಾತಿಜಂ ಧರ್ಮರಾಜೈತತ್ಸತ್ಯಮೇವ ಮಯೋದಿತಂ ॥ ೧೨ ॥
ಸ್ಥಿತ್ವಾ ವರ್ಷಶತಂ ಪ್ರಾಜ್ಞ ತ್ವಂ ಶೂದ್ರೋ ಧರ್ಮವತ್ಸಲಃ ।
ಉಪದೇಶಾನ್ ಬಹೂನ್ ದತ್ವಾ ಜ್ಞಾತಿಭ್ಯೋ ಹಿತಕಾಮ್ಯಯಾ ।
ಅಪಿ ಶ್ರದ್ಧಾವಿಹೀನೇಷು ಪಾಪಾತ್ಮಸು ಸದೈವ ಹಿ ॥ ೧೩ ॥

---

೬—೭. ಕುಪಿತನಾದ ಅವನು ನೀನು ಶೂದ್ರಜಾತಿಯಲ್ಲಿ ಜನಿಸಿ ಬಂಧುನಾಶದಿಂದುಂಟಾದ ಮಹಾ ದುಃಖವನ್ನು ಅನುಭವಿಸಿ ಕೂಡಲೆ ಪೂರ್ವ ಜಾತಿಯ ಸ್ಮರಣೆಯನ್ನು ಪಡೆಯುವೆ. ಎಂದಿರುವನು.

೮—೯. ಆದುದರಿಂದ ಸುರವರ್ಯನೆ! ನೀನು ಆ ಶೂದ್ರ ಜಾತಿಯಿಂದ ನನ್ನನ್ನು ಕಾಪಾಡು. ನಾನು ಹೇಗೆ ಆ ಶೂದ್ರ ಜಾತಿಯಲ್ಲಿ ಹುಟ್ಟಲಿ. ಅಲ್ಲಿಯೂ ಜ್ಞಾತಿನಾಶದಿಂದುಂಟಾದ ಮಹಾ ದುಃಖವನ್ನು ಹೇಗೆ ಅನುಭವಿಸಲಿ. ಇದಕ್ಕಾಗಿ ನಾನು ನಿನ್ನನ್ನು ಆರಾಧಿಸಿರುವೆನು.

೧೦. ಶ್ರೀ ಭಗವಂತನು ಹೇಳುತ್ತಾನೆ:—ಧರ್ಮರಾಜ! ಆ ಮಹಾ ಮುನಿಯ ಮಾತನ್ನು ವ್ಯತ್ಯಾಸಗೊಳಿಸಲು ಸಾಧ್ಯವಿಲ್ಲ. ಆದುದರಿಂದ ನೀನು ಶೂದ್ರ ಜಾತಿಯಲ್ಲಿ ಹುಟ್ಟಿದರೂ ಅಲ್ಲಿ ಸಂತತಿಯನ್ನು ಪಡೆಯುವುದಿಲ್ಲ.

೧೧—೧೨. ಜ್ಞಾತಿಗಳನ್ನು ನೀನು ತಡೆದರೂ ನಿನ್ನ ಮಾತನ್ನು ಕೇಳದಿರುವುದರಿಂದ ಅವರ ನಾಶವನ್ನು ನೋಡಿದರೂ ನಿನಗೆ ದುಃಖವುಂಟಾಗುವುದಿಲ್ಲ. ಧರ್ಮರಾಜ! ನಾನು ಹೇಳಿರುವುದು ನಿಜ.

೧೩—೧೪. ಧರ್ಮರಾಜ! ನೀನು ನೂರು ವರ್ಷಗಳಕಾಲ ಶೂದ್ರನಾಗಿದ್ದು ಶ್ರದ್ಧೆಯಿಲ್ಲದ ಪಾಪಿಗಳಾದ ಜ್ಞಾತಿಗಳಿಗೆ ಹಿತವನ್ನುಂಟುಮಾಡಲಿಚ್ಛೆಯಿಂದ

ತತೋ ವರ್ಷಶತೇ ಪೂರ್ಣೇ ಬ್ರಹ್ಮದ್ವಾರೇಣ ಕೇವಲಂ ।
ಆತ್ಮಾನಂ ಸಮ್ಯಗುತ್ಸೃಜ್ಯ ಮೋಕ್ಷಮೇವ ಪ್ರಯಾಸ್ಯಸಿ ॥ ೧೪ ॥
ಏವಮುಕ್ತ್ವಾ ಸ ಭಗವಾನ್ ಗತಶ್ಚಾಽದರ್ಶನಂ ತತಃ ।
ಧರ್ಮರಾಜೋಽಪಿ ತಂ ಶಾಪಂ ಭೇಜೇ ಮಾಂಡವ್ಯ ಸಂಭವಂ ॥ ೧೫ ॥
ತದಾ ವಿದುರರೂಪೇಣ ಹ್ಯವತೀರ್ಯ ಧರಾತಲೇ ।
ಮಾಂಡವ್ಯಸ್ಯ ವಚಃ ಸತ್ಯಂ ಸ ಚಕಾರ ಮಹೀಪತಿಃ ॥ ೧೬ ॥
ಜಾತೋ ಭಗವತಾ ಸಾಕ್ಷಾದ್ವ್ಯಾಸೇನಾಽಮಿತ ತೇಜಸಾ ।
ಪಾರಾಶರ್ಯೇಣ ವಿಪ್ರೇಣ ದಾಸೀಗರ್ಭಸಮುದ್ಭವಃ ॥ ೧೭ ॥
ಏತದ್ವಃ ಸರ್ವಮಾಖ್ಯಾತಂ ಧರ್ಮರಾಜಸಮುದ್ಭವಂ ।
ಆಖ್ಯಾನಂ ಯದಹಂ ಪೃಷ್ಟಃ ಸರ್ವಪಾತಕನಾಶನಂ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಧರ್ಮರಾಜೇಶ್ವರೋತ್ಪತ್ತಿವರ್ಣನಂ"
ನಾಮಾಷ್ಟಾತ್ರಿಂಶದುತ್ತರಶತತಮೋಽಧ್ಯಾಯಃ

---

ಬಹಳವಾಗಿ ಉಪದೇಶವಾಡಿ ಅನಂತರ ಬ್ರಹ್ಮರಂಧ್ರದಿಂದ ಪ್ರಾಣವನ್ನು ತ್ಯಜಿಸಿ ಮೋಕ್ಷವನ್ನು ಹೊಂದುವಿ.

೧೫. ಪೂಜ್ಯನಾದ ಮಹೇಶ್ವರನು ಹೀಗೆಂದು ಹೇಳಿ ಅದೃಶ್ಯನಾಗಲು ಧರ್ಮರಾಜನು ಮಾಂಡವ್ಯನ ಶಾಪವನ್ನನುಭವಿಸಿದನು.

೧೬-೧೭. ಅವನು ಭೂಮಿಯಲ್ಲಿ ಅತಿ ತೇಜಸ್ವಿಯಾದ ಪರಾಶರರ ತನಯನಾದ ವ್ಯಾಸಮಹರ್ಷಿಯಿಂದ ದಾಸಿಯಲ್ಲಿ ವಿದುರನಾಗಿ ಅವತರಿಸಿ ಮಾಂಡವ್ಯನ ಮಾತನ್ನು ಸತ್ಯಗೊಳಿಸಿದನು.

೧೮. ದ್ವಿಜವರ್ಯರೆ! ನೀವು ಕೇಳಿದ ಸಮಸ್ತ ಪಾಪಗಳನ್ನು ನಾಶಗೊಳಿಸುವ ಈ ಧರ್ಮರಾಜನ ಉಪಾಖ್ಯಾನವನ್ನು ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧರ್ಮರಾಜೇಶ್ವರೋತ್ಪತ್ತಿವರ್ಣನ"ವೆಂಬ
ನೂರಮೂವತ್ತೆಂಟನೆಯ ಅಧ್ಯಾಯವು ಮುಗಿದುದು



1005—52. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.